# ಇತಿಹಾಸ ದರ್ಶನ

ಸಂಪುಟ ೮/೧೯೯೩

೧೯೯೨ರಲ್ಲಿ ರಾಯಚೂರಿನಲ್ಲಿ ಸಮಾವೇಶಗೊಂಡ ಅಕಾದೆಮಿಯ
೬ನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳ ಸಂಪುಟ




ಸಂಪಾದಕರು
**ಡಾ॥ ಸೂರ್ಯನಾಥ ಕಾಮತ್**
**ಡಾ॥ ದೇವರ ಕೊಂಡಾರೆಡ್ಡಿ**




ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು

ITIHASA DARSHANA
Proceedings of the Sixth Annual
Conference of the Karnataka Itihasa
Academy (Regd.) held at Raichur
on 11, 12 and 13th July 1992

Volume 8, July 1993

Edited by Dr. Suryanath Kamath
& Dr. DevaraKonda Reddy

Published by Karnataka Ithihasa Academy (Regd.)
Gokhale Institute of Public Affairs Compound,
Basavanagudi Road, Narashimharaja Colony
Bangalore-560 019



ಬೆಲೆ : ರೂ. ೧೦೦-೦೦

ಲಕ್ಷ್ಮಿ ಮುದ್ರಣಾಲಯ
೧೧೭/೩, ೫ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು-೫೬೦ ೦೧೮
ದೂರವಾಣಿ : ೬೨೭೬೪೫

# ಸಂಪಾದಕೀಯ

ರಾಯಚೂರಿನಲ್ಲಿ ನಡೆದ ಇತಿಹಾಸ ಅಕಾಡೆಮಿಯ ಆರನೇಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಲಾದ ಪ್ರಬಂಧಗಳ ಸಂಕಲನವಾದ 'ಇತಿಹಾಸ ದರ್ಶನ'ದ ಎಂಟನೇಯ ಸಂಪುಟವನ್ನು ನಿಮ್ಮ ಕೈಯಲ್ಲಿ ಇಡುತ್ತಿದ್ದೇವೆ. ಸಮ್ಮೇಳನವು ಯಶಸ್ವಿಯಾಗಿ ನಡೆಸಲು ಕಾರಣಕರ್ತರು ಪಂಡಿತ ತಾರಾನಾಥ ಶಿಕ್ಷಣ ಸಂಸ್ಥೆಯವರು-ಆದರ ಅಧ್ಯಕ್ಷರಾದ ಶ್ರೀ ಪಾರಸಮಲ್ ಸುಖಾನಿ ಮತ್ತು ಇತರ ಪದಾಧಿಕಾರಿಗಳು ಸಂಸ್ಥೆಯ ಪ್ರಧಾನ ಕಾರ್ಯದರ್ಶಿಯವರಾದ ವಕೀಲರಾದ ಶ್ರೀ ಎಂ ನಾಗಪ್ಪನವರು ಆಗ ಅನಾರೋಗ್ಯದಿಂದ ಹೈದರಾಬಾದಿನಲ್ಲಿ ಇದ್ದರೂ ಅವರ ಜೊತೆಗಾರರಾದ ವಕೀಲರಾದ ಶ್ರೀ ಬಸವರಾಜ್, ಶ್ರೀ ಮಲ್ಲಿಕಾರ್ಜುನ ಮತ್ತು ಶ್ರೀ ಪಾಟೀಲ ಮತ್ತು ಇತರ ಮಿತ್ರರು ಸಮ್ಮೇಳನದ ಪ್ರತಿಯೊಂದು ಕಾರ್ಯಕ್ರಮವೂ ಸುಸೂತ್ರವಾಗಿ ಅಚ್ಚುಕಟ್ಟಾಗಿ ನಡೆಯಲು ನಮಗೆ ನೀಡಿದ ಸಹಕಾರ ಸದಾ ನೆನಪಿನಲ್ಲಿ ಉಳಿಯುವಂತಹದ್ದು. ಸಮ್ಮೇಳನದಲ್ಲಿ ವಿದ್ವಾಂಸರು ಮಂಡಿಸಿದ್ದ ಎಲ್ಲಾ ಪ್ರಬಂಧಗಳೂ ಈ ಸಂಪುಟದಲ್ಲಿ ಸೇರ್ಪಡೆಯಾಗಿಲ್ಲ. ಇದಕ್ಕೆ ಕಾರಣ ಆ ಲೇಖನಗಳು ಸಕಾಲದಲ್ಲಿ ನಮ್ಮ ಕೈ ಸೇರದಿದ್ದುದೇ ಆಗಿದೆ. ಅನೇಕ ತರುಣ ಸಂಶೋಧಕರು ಮೊದಲ ಬಾರಿಗೆ ಈ ಸಂಪುಟದ ಮೂಲಕ ಬೆಳಕು ಕಾಣುತ್ತಿರುವುದು ನಮಗೆ ಹೆಮ್ಮೆಯ ವಿಷಯ.

ಈ ಸಂಪುಟವನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟ ಶ್ರೀ ಲಕ್ಷ್ಮಿ ಮುದ್ರಣಾಲಯದ ಮಾಲಿಕರಾದ ಶ್ರೀ ಅಶೋಕ್ ಕುಮಾರ್ ಹಾಗೂ ಅವರ ಸಿಬ್ಬಂದಿಯವರಿಗೆ ನಮ್ಮ ಕೃತಜ್ಞತೆಗಳು. ರಾಯಚೂರು ಸಮ್ಮೇಳನದ ಭಾವಚಿತ್ರಗಳನ್ನು ಸಕಾಲದಲ್ಲಿ ಒದಗಿಸಿದ ವಕೀಲರಾದ ಶ್ರೀ ಬಸವರಾಜ್ ಅವರಿಗೂ ನಾವು ಋಣಿಗಳು. ಕಲಾವಿದರಾದ ಶ್ರೀ. ಆ.ಲ. ನರಸಿಂಹನ್ ಅವರು ಭಾವ ಚಿತ್ರಗಳನ್ನು ವಿನ್ಯಾಸಗೊಳಿಸಿ ಕೊಟ್ಟಿರುತ್ತಾರೆ. ಶ್ರೀ ಪಿ.ವಿ. ಕೃಷ್ಣಮೂರ್ತಿಯವರು ನಕಾಶೆಗಳನ್ನು ಅಚ್ಚಿಗೆ ಅನುಕೂಲವಾಗುವಂತೆ ತಿದ್ದಿಕೊಟ್ಟಿರುತ್ತಾರೆ ಇವರಿಗೆಲ್ಲ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

**ಸೂರ್ಯನಾಥ ಕಾಮತ್**
**ದೇವರಕೊಂಡಾರೆಡ್ಡಿ**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ)

ಬೆಂಗಳೂರು

## ಕಾರ್ಯಕಾರಿ ಸಮಿತಿ

(ದಿನಾಂಕ ೨೩ ಜುಲೈ ೧೯೯೩ರಲ್ಲಿ ಇದ್ದಂತೆ)

ಡಾ|| ಜಿ.ಎಸ್. ದೀಕ್ಷಿತ್, ಬೆಂಗಳೂರು

ಅಧ್ಯಕ್ಷರು

ಡಾ|| ಡಿ.ವಿ. ದೇವರಾಜ್, ಮೈಸೂರು

ಶ್ರೀ ಎಂ.ಜಿ. ನಾಗರಾಜ್, ಬೆಂಗಳೂರು

ಉಪಾಧ್ಯಕ್ಷರು

ಡಾ|| ಎಚ್.ಎಸ್. ಗೋಪಾಲರಾವ್, ಬೆಂಗಳೂರು

ಪ್ರಧಾನ ಕಾರ್ಯದರ್ಶಿ

ಡಾ|| ಎಚ್.ಆರ್. ರಘುನಾಥ ಭಟ್ಟ, ಧಾರವಾಡ

ಡಾ|| ದೇವರ ಕೊಂಡಾರೆಡ್ಡಿ, ಬೆಂಗಳೂರು

ಕಾರ್ಯದರ್ಶಿಗಳು

ಶ್ರೀ ಎಂ.ಬಿ. ಪಾಟೀಲ, ಬೆಂಗಳೂರು

ಕೋಶಾಧಿಕಾರಿ

ಸದಸ್ಯರು

ಡಾ|| ಸೂರ್ಯನಾಥ ಕಾಮತ್, ಬೆಂಗಳೂರು

ಡಾ|| ಎ.ವಿ. ನರಸಿಂಹಮೂರ್ತಿ, ಮೈಸೂರು

ಡಾ|| ರು.ಮ. ಷಡಕ್ಷರಯ್ಯ, ಧಾರವಾಡ

ಶ್ರೀ ವಿ.ಸಿ. ಮಾಲಗತ್ತಿ, ಬೆಳಗಾವಿ

ಶ್ರೀ ಎಸ್. ರಾಜೇಂದ್ರಪ್ಪ, ಧಾರವಾಡ

ಶ್ರೀ ಎಸ್.ಎಂ. ನಾಗಭೂಷಣ, ಕೊಟ್ಟೂರು

ಶ್ರೀ ಕೆ.ಬಿ. ಶಿವತಾರಕ್, ಬ್ರಹ್ಮಾವರ

ಡಾ|| ಚೂಡಾಮಣಿ ನಂದಗೋಪಾಲ್, ಬೆಂಗಳೂರು

ಡಾ|| ಬಸವಲಿಂಗ ಸೊಪ್ಪಿಮಠ, ರಾಯಚೂರು

ಶ್ರೀಮತಿ ಉಷಾ ದೇಸಾಯಿ, ರಾಯಚೂರು

ಪ್ರೊ|| ವಸಂತ ಕುಷ್ಟಗಿ, ಗುಲ್ಬರ್ಗ

ಶ್ರೀ ಬಿ. ರಾಜಶೇಖರಪ್ಪ, ಚಿತ್ರದುರ್ಗ

ಡಾ|| ಬಿ. ನಂಜುಂಡಸ್ವಾಮಿ, ತುಮಕೂರು

ಡಾ|| ಶ್ರೀನಿವಾಸ ಕೆ. ಹಾವನೂರು, ಪುಣೆ

ಡಾ|| ಎಸ್.ಕೆ. ಕೊಪ್ಪಾ, ಇಂಡಿ

ಡಾ|| ಜ್ಯೋತಿಬಾಯಿ, ಶಿವಮೊಗ್ಗ




## ಡಾ|| ಕೆ. ವಿ. ರಮೇಶ್

**ಸಮ್ಮೇಳನಾಧ್ಯಕ್ಷರು**

ಚಿತ್ರ : ಕೆ. ಎಲ್. ರಾಜಶೇಖರ್




# ಪರಿವಿಡಿ

## ಕರ್ನಾಟಕ ಇತಿಹಾಸ ಅಕಾದೆಮಿ

# ಇತಿಹಾಸ ಪ್ರೇಮಿಗಳಿಗೆ ಕರೆ

# 'ಐತಿಹಾಸಿಕ ಪರಂಪರೆ ಉಳಿಸಿ'

ಕರ್ನಾಟಕದಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಎಂಬ ಜನಜಾಗೃತಿ ಚಳವಳಿ ನಡೆಸಲು ಕರ್ನಾಟಕ ಇತಿಹಾಸ ಅಕಾದೆಮಿ ಯತ್ನಿಸುತ್ತಿದೆ. ಪ್ರಾಚೀನ ಕೋಟೆಗಳು, ಕಟ್ಟಡಗಳು, ದೇವಾಲಯಗಳು, ಮಸೀದಿಗಳು, ಇಗರ್ಜಿ(ಚರ್ಚು)ಗಳು, ಶಾಸನಗಳು, ವೀರಗಲ್ಲು ಮುಂತಾದ ಸ್ಮಾರಕಶಿಲೆಗಳು, ತಾಮ್ರಪಟಗಳು, ತಾಳೆಗರಿಯ ಹೊತ್ತಿಗೆಗಳು, ಐತಿಹಾಸಿಕ ದಾಖಲೆಗಳಾಗಬಲ್ಲ ಕಾಗದಪತ್ರಗಳು, ನಾಣ್ಯಗಳು, ಕಲಾಕೃತಿಗಳು (ಶಿಲ್ಪ, ಕರ-ಕುಶಲ ಕಲೆಯ ವಸ್ತುಗಳು, ವರ್ಣಚಿತ್ರಗಳು,) ಆಯುಧಗಳು ಮುಂತಾದ ಪ್ರಾಚೀನ ವಸ್ತುಗಳು ರಕ್ಷಣೆಗಾಗಿ ಪ್ರಚಾರ ಮಾಡುವುದು ಈ ಚಳವಳಿಯ ಉದ್ದೇಶ.

### ಚಟುವಟಿಕೆಯ ಸ್ವರೂಪ

- ಪ್ರಾಚೀನ ವಸ್ತು ಮತ್ತು ಕಲಾಕೃತಿಗಳ (ಆ್ಯಂಟಿಕ್ವಿಟೀಸ್) ನೋಂದಾವಣೆಗೆ ಪ್ರೇರಣೆ ನೀಡುವುದು.
- ಪ್ರಾಚೀನ ಶಾಸನ, ಪ್ರತಿಮೆ, ಸ್ಮಾರಕಶಿಲೆಗಳ ರಕ್ಷಣೆಯ ಅವಶ್ಯಕತೆಯ ಬಗೆಗೆ ಅವುಗಳ ಪರಿಸರದ ಜನರಿಗೆ ತಿಳುವಳಿಕೆ ನೀಡುವುದು.
- ಪ್ರಾಚೀನ ಕಟ್ಟಡಗಳ ನಾಶ, ದುರುಪಯೋಗ, ಅವುಗಳ ಪರಿಸರದ ಮೇಲೆ ಒತ್ತುವರಿ ನಡೆಸುವುದರ ವಿರುದ್ಧ ಧ್ವನಿಯೆತ್ತುವುದು (ಪ್ರಚಾರ, ಸರಕಾರಕ್ಕೆ ಬರೆಯುವುದು, ಪತ್ರಿಕೆಗಳಿಗೆ ಬರೆಯುವುದು).
- ಓಲೆಗರಿಗಳ ಅಸ್ತಿತ್ವದ ಬಗೆಗೆ ಅಧಿಕೃತ ಸಂಗ್ರಾಹಕರಿಗೆ (ಸಾಹಿತ್ಯ ಪರಿಷತ್ತು, ವಿಶ್ವವಿದ್ಯಾಲಯಗಳ ಸಂಬಂಧಿಸಿದ ಶಾಖೆಗಳು) ಮಾಹಿತಿ ನೀಡುವುದು. ಐತಿಹಾಸಿಕ ಮಹತ್ವದ ಕಾಗದ ಪತ್ರಗಳ ಬಗೆಗೆ ರಾಜ್ಯ ಪತ್ರಾಗಾರಕ್ಕೆ ಮಾಹಿತಿ ನೀಡುವುದು.

ಅಧ್ಯಾಪಕರು, ವಿದ್ಯಾರ್ಥಿಗಳು, ಬುದ್ಧಿಜೀವಿಗಳು ಈ ಚಟುವಟಿಕೆಯಲ್ಲಿ ವಿಶೇಷವಾಗಿ ಪಾಲುಗೊಳ್ಳಲು ಅಕಾದೆಮಿ ಕರೆ ನೀಡುತ್ತದೆ.

ಬನ್ನೇರಘಟ್ಟದ ಬೆಟ್ಟದ ಮೇಲೆ ಕಾಣಬರುವ ಕಲ್ಲಗುಪ್ಪೆಗಳು

'ಏಳು ಸುತ್ತಿನ ಕೋಟೆ'



ಶಿಲಾಸಮಾಧಿ (ಸಂಪಿಗೆಹಳ್ಳಿ)



ಸುವರ್ಣಮುಖಿ ತೀರ್ಥ

ಹೊಳಕಲ್ ಬೆಟ್ಟದಲ್ಲಿ ದೊರೆತ ಮಣ್ಣಿನ ಪಾತ್ರೆಗಳ ಚೂರುಗಳು



ಚಲುವನಹಳ್ಳಿ ಶಾಸನ



ಹೊನ್ನುಡುಕೆ ಕೆಂಪಸೋಮ ಒಡೆಯರ ಶಾಸನ



ಮೂಲೆಶಂಕರದೇವಾಲಯ ತುರುವೇಕೆರೆ

ಸದಾಶಿವ ದೇವಾಲಯ – ನುಗ್ಗೇಹಳ್ಳಿ



ಜಾಲಂದ್ರ – ಮಣ್ಡೆ



ತೋರಣ – ಕುಕನೂರು



ಗುಲಿಕ ಜಾಲಕ – ಮಹಾಕೂಟ



ಭಿತ್ತಿ – ವಿರೂಪಾಕ್ಷ, ಪಟ್ಟದಕಲ್ಲು



ವಿತಾನ – ಮಲ್ಲಿಕಾರ್ಜುನ ದೇವಾಲಯ, ಪುಷ್ಪಗಿರಿ



ವಿತಾನ – ಇಂದ್ರ, ಪುಷ್ಪಗಿರಿ



ಕ್ಷುದ್ರವಿಮಾನ – ಪುಷ್ಪಗಿರಿ



ತೋರಣ ಫಲಕ – ನಾರಾಯಣಪುರ, ಬೀದರ್ ಜಿಲ್ಲೆ



ಸಾಲಭಂಜಿಕಾ ಶಿಲ್ಪಗಳು – ನಾರಾಯಣಪುರ



ಪಂಚಾಯತನ ಶಿಲ್ಪ – ನಾರಾಯಣಪುರ



ವಾರಾಹಿ – ಮೊರಖಂಡಿ



ಚಾಮುಂಡಿ – ಬಸವಕಲ್ಯಾಣ



ಚಾಮುಂಡಿ – ಜಲಸಂಗಿ



ಮಹಾಲಕ್ಷ್ಮಿ – ನೀಲಕಂಠ



ಸರಸ್ವತಿ – ಜಲಸಂಗಿ



ಮಹಿಷಮರ್ದಿನಿ – ಮೊರಖಂಡಿ



ಅಂಬಿಕ – ಶಿವಪುರ



ಅಂಬಿಕ – ಬಸವ ಕಲ್ಯಾಣ



ದೇವೀರಮ್ಮ – ಯಮಸಂಧಿ
(ಚಿತ್ರ ಅ. ಲ. ನರಸಿಂಹನ್)



ಬಸಮ್ಮ – ಯಮಸಂಧಿ



ಪಂಚಮುಖಿ ವೀರಭದ್ರ – ಕುರುಗೋಡು



ಸಿಂಹಾಸನ ಕಟ್ಟೆ – ಹೊಳಲು ಗ್ರಾಮ



ಸಿಂಹಾಸನಕಟ್ಟೆ – ಹೀರೇಕುರವತ್ತಿ



ಚಿತ್ರಕಲ್ ಬೋಟಿ ಹಾಗೂ ಬಟ್ಟಲು ಕಲ್ಲುಗಳು



ಎತ್ತು ಪೊರಟ – ಅರಮೇರಿ



ಕಲ್‌ಬೋಟಿ ಕಳತ್‌ಮಾಡು

ಎತ್ತು ಕಲ್‌ಬೋಟಿ ಗರ್ವಾಲೆ

ಎತ್ತುಕಲ್‌ಬೋಟಿ ಅರಮೇರಿ





ಚಿತ್ರ (ಮೇಲೆ) ಪನ್ನಂಗಾಲತಮ್ಮೆ ದೇವಾಲಯ, ಯವಕಪಾಡಿ
(ಕೆಳ) ಪನ್ನಗಾಲತಮ್ಮೆ ಕಾಡು





ಚಿತ್ರ (ಮೇಲೆ) ರಾಮೇಶ್ವರ ದೇವರ ಕಾಡು – ಇರ್ಪು
(ಕೆಳ) ಜಮ್ಮಾಮಾಪಿಳ್ಳೆಗಳ ಪಳ್ಳಿಕಾಡು – ಮೈತಾಡಿ




1. ಹೊರಾಂಗಣಕ್ಕಾಗಿ ಹಗುರಾದ ಮಂಚ.
2. ಗುಜ್ಜರಿ ಮಂಚ.
3. ಪಟ್ಟಿಯುಳ್ಳ ಮಂಚ.
4. ನವ ವಿವಾಹಿತರಿಗಾಗಿ 'ವರಮಂಚ'.
5. ಚರ್ಮದ ಹೊದಿಕೆ ಹೊಂದಿರುವ 'ವರ' ಮಂಚ.
6. ಮೆತ್ತಗಿನ ಹಾಸಿಗೆ, ತಲೆದಿಂಬುಗಳು ಜೊತೆಯಲ್ಲಿ ಇವೆ.
7. ನೀರು ತುಂಬಿದ ಚರ್ಮದ ಹಾಸಿಗೆ.
8. ಹೂವು, ಕೇಸರಿಗಳಿಂದ ನಿರ್ಮಿತ ದಪ್ಪ ಹಾಸಿಗೆ.

ಲೇಖನ : ಸಾಹಿತ್ಯ, ಶಿಲ್ಪ, ಚಿತ್ರಗಳಲ್ಲಿ ಮಂಚ













9. ದಕ್ಖಣಿ ಶೈಲಿಯಲ್ಲಿ ಮಂಚ.

10. ಶ್ರವಣಬೆಳಗೊಳದ ಭಿತ್ತಿಚಿತ್ರದಲ್ಲಿದ್ದ ಮಂಚ.

11. 'ಸೌಂಗಧಿಕಾಪರಿಣಯ'ದಲ್ಲಿಯ ಚಪ್ಪರ ಮಂಚ.

12. ಇತ್ತೀಚಿನ ದಿನಗಳಲ್ಲೂ ಬಳಸುವ ಮಂಚ.

13. 'ಶ್ರೀತತ್ವನಿಧಿ'ಯಲ್ಲಿಯ ಸಾಲಂಕೃತ ಮಂಚ.

14. ಸಿಗಿರಿಯ ಭಿತ್ತಿಚಿತ್ರದಲ್ಲಿ ಕಾಣುವ ತೂಗು ಮಂಚ.




ಲೇಖನ : ಕಳೆದ ಶತಮಾನದಲ್ಲಿ ಬ್ರಿಟಿಷರಿಂದ ಕರ್ನಾಟಕಕ್ಕೆ ಆದ ಅನ್ಯಾಯ

# ಕರ್ನಾಟಕ ಇತಿಹಾಸ ಅಕಾದೆಮಿಯ ಆರನೆಯ ಸಮ್ಮೇಳನದಲ್ಲಿ ಡಾ. ಕೆ.ವಿ. ರಮೇಶ್ ಅವರು ಮಾಡಿದ ಅಧ್ಯಕ್ಷ ಭಾಷಣ

ಈ ಸಭೆಯು ಕನ್ನಡ ನಾಡಿನ ಇತಿಹಾಸದ ಬಗೆಗೆ ಆಸಕ್ತರಿರುವ ಕನ್ನಡಿಗ ಮತ್ತು ಕನ್ನಡೇತರ ಇತಿಹಾಸ ಕಾರರ ಒಕ್ಕೂಟವಷ್ಟೆ. ಅಂದಮೇಲೆ ನಮ್ಮೆಲ್ಲರದೂ ಗುರಿ ಒಂದೇ. ಅದೆಂದರೆ, ಭಾರತದ ಭೌಗೋಳಿಕ ಹಾಗೂ ಮಾನವಿಕ ಇತಿಹಾಸ ಹಿನ್ನೆಲೆಯಲ್ಲಿ ಕನ್ನಡ ನಾಡಿನ ಇತಿಹಾಸವನ್ನು ಲಭ್ಯವಿರುವ ಐತಿಹಾಸಿಕ ಸಾಮಗ್ರಿಗಳ ಆಧಾರದ ಮೇಲೆ ಸಾಧ್ಯವಿದ್ದಷ್ಟು ಯಥಾ ವತ್ತಾಗಿ ಪುನಾರಚಿಸುವುದು. ನಮಗೆ ದೊರೆಯುವ ಐತಿಹಾಸಿಕ ಸಾಮಗ್ರಿಗಳಲ್ಲಿ ಅತ್ಯಂತ ಸ್ವವಿವರಣಾತ್ಮಕ ವೆನಿಸಿರುವ ಶಾಸನ ಸಂಪತ್ತಿನ ನಿಕಟ ಪರಿಚಯವನ್ನು ಸುದೀರ್ಘಕಾಲ ಬೆಳೆಸಿ ಬಂದಿರುವ ನನ್ನ ಮನದಲ್ಲಿ ಮೂಡಿ ಬಂದಿರುವ ಒಂದು ನಿಶ್ಚಿತ ಅಭಿಪ್ರಾಯವೆಂದರೆ, ಭಾರತದ ಹಾಗೂ ಕನ್ನಡ ನಾಡಿನ ವಾಸ್ತವ ಮತ್ತು ನಿಷ್ಪಕ್ಷಪಾತ ಇತಿಹಾಸದ ಪುನಾರಚನೆಯು ತೀರಾ ಕಷ್ಟ ಸಾಧ್ಯ. ನಾನು ಹೀಗನ್ನಲು ಕಾರಣಗಳು ಎರಡಿವೆ. ಮೊದಲನೆಯದಾಗಿ, ಶಾಸನಗಳನ್ನು ಬರೆಸಿಟ್ಟು ಹೋಗಿ ರುವ ನಮ್ಮ ಪೂರ್ವಜರು ಅವು ಮುಂಬರಲಿರುವ ಪೀಳಿಗೆ ಗಳಿಗೆ ಐತಿಹಾಸಿಕ ಸಾಮಗ್ರಿಗಳಾಗಲಿ ಎಂಬ ಉದ್ದೇಶ ವನ್ನು ಹೊಂದಿದವರಿರಲಿಲ್ಲ. ಎರಡನೆಯದಾಗಿ, ಮೇಲೆ ಹೇಳಿದ ಕಾರಣದಿಂದಲೇ ಇರಬೇಕು, ನಮ್ಮ ನಾಡಿನ ಶಾಸನಗಳಲ್ಲಿ ಐತಿಹಾಸಿಕ ವಾಸ್ತವಾಂಶಗಳು ಔಪಚಾರಿಕ ಚರ್ವಿತ ಚರ್ವಣಗಳ ಬಲೆಯಲ್ಲಿ ಸಿಲುಕಿ ಬಿಡಿಸಲಾರದ ಒಗಟುಗಳಾಗಿ ಹೋಗಿವೆ. ನನಗನಿಸು ವಂತೆ ಕನ್ನಡಿಗರೂ ಸೇರಿದಂತೆ ಭಾರತೀಯರೆಲ್ಲರೂ ನಿಂತಲ್ಲೆ ನಿಲ್ಲಿಸುವ, ಪ್ರಗತಿಪರವಲ್ಲದ ವಂಶ ಪರಂಪರೆಯ ಚೈತನ್ಯವನ್ನು ಬೆಳೆಸಿಕೊಂಡು ಬಂದಿರುವುದೇ ಇದಕ್ಕೆ ಮುಖ್ಯ ಕಾರಣ. 'ಆದಿಕಾಲ ರಾಜರ್ಷಿ ಚರಿತಃ', 'ಪಿತೃ ಪಿತಾಮಹ ಪ್ರಪಿತಾಮಹ ಗುಣಯುಕ್ತಃ', 'ವಿಹಸಿತ ನಲನಹುಷನಾಭಾಗ ಧುಂಧುಮಾರ ಮಾಂಧಾತೃ ಭರತ ಭಗೀರಥ ದಶರಥ ರಾಮಾದಿಚರಿತಃ' ಮುಂತಾದ ಅಸಂಖ್ಯಾತ ವೈಯಕ್ತಿಕ ಗುಣವಾಚಕಗಳು ಅಂತಹ ಪಾರಂಪರ್ಯ ಪಕ್ಷಪಾತದ ಕೆಲವೇ ಸೂಚಕಗಳು.

ನಾವೂ ಕೂಡ ನನ್ನಂತಹ ಮತ್ತು ನಿಮ್ಮಂತಹ ಇತಿಹಾಸಕಾರರೂ ಕೂಡ, ಗತಕಾಲದ ಪರಂಪರೆಯ ಸುಂಟರ ಗಾಳಿಗೆ ಸಿಕ್ಕಿ, ನಿಂತಲ್ಲೆ ಸುತ್ತುತ್ತಿರುವವರೇ ಇದ್ದು, ಈ ವರ್ತುಲದಿಂದ ನಮ್ಮನ್ನು ಹೊರತರುವ ನೈತಿಕ ಮತ್ತು ಬೌದ್ಧಿಕ ವಾತಾವರಣವು ಇನ್ನೂ ಮೂಡಿ ಬಂದಿಲ್ಲವಾದ ಕಾರಣ, ಶಾಸನ ಸಾಮಗ್ರಿಯ ಬಳಸುವಿಕೆಯ ಮಟ್ಟಿಗೆ ನಮ್ಮ ನಿಲುವು ಕೂಡ ಒಂದಲ್ಲ ಒಂದು ಸಂಪ್ರದಾಯದ ಚೌಕಟ್ಟಿನೊಳಗೆ ಬಂಧಿತ ವಾಗಿದೆ. ಈ ದೃಷ್ಟಿಯಿಂದ ಪರಿಶೀಲಿಸಿದಾಗ, ಇಂದಿನ ವರೆಗಿನ ನಮ್ಮ ಇತಿಹಾಸ ರಚನೆಗಳೆಲ್ಲವೂ ಮುಂದಿನ ಪೀಳಿಗೆಯವರನ್ನು ಪರಂಪರೆಯ ವರ್ತುಲದೊಳಗೇ ಇರಿಸುವಂತಹ ಮನೋವೃತ್ತಿಯ ಬರಹಗಳೇ ಆಗಿವೆ.

ನಿಜ ಸಂಗತಿ ಎಂದರೆ, ತಾನು ದುಡಿಯುತ್ತಿರುವ ಕ್ಷೇತ್ರದಲ್ಲಿ ಯಶಸ್ವಿಯಾಗಲು ಬಯಸುವ ಇತಿಹಾಸ ಕಾರನು ಇಂದಿನ ವಿದ್ಯಮಾನಗಳು ನಾಡಿನ ಪರಂಪರಾ ಗತ ಮಹಾಲ್ಯಾಪಮಹಾಲ್ಯಗಳ ಬಗೆಗೆ ಅವನಲ್ಲಿ ಕೆರಳಿಸಿರ ಬಹುದಾದ ಸಹ್ಯಾಸಹ್ಯ ಭಾವನೆಗಳನ್ನು ತನ್ನ

ಐತಿಹಾಸಿಕ ಸತ್ಯಾನ್ವೇಷಣೆಗೆ, ಪ್ರೇರಕಗಳನ್ನಾಗಿ ಮಾತ್ರ ಉಪಯೋಗಿಸಿಕೊಳ್ಳ ಬೇಕೇ ವಿನಾ, ಗತಕಾಲದತ್ತಣ ಆವನ ಸಂಶೋಧನಾತ್ಮಕ ಪಯಣದಲ್ಲಿ ಸಹಚಾರಿಗಳನ್ನಾಗಿ ಅಲ್ಲ. ಇಂದಿನ ಪರಂಪರಾಧಾರಿಂತ ಒಳಿತು ಕೆಡುಕುಗಳನ್ನು, ಒಪ್ಪು ತಪ್ಪುಗಳನ್ನು ಮೂಲತಃ ಎಂದೆಂದಿಗೂ ಇಂದಿನವಂತಹವೇ ಎಂದು ಪರಿಗಣಿಸಬಾರದು. ಅಷ್ಟೇ ಅಲ್ಲದೆ, ಇತಿಹಾಸಕಾರನು ಮನಸಾ ಆಯಾ ಐತಿಹಾಸಿಕಕಲ್ಪದೊಂದಿಗೆ ಪೂರ್ಣವಾಗಿ ವಿಲಿನಗೊಳ್ಳುವ ಮೂಲಕಮಾತ್ರ, ಆಯಾ ಐತಿಹಾಸಿಕ ಕಲ್ಪದ ಪುರಾವೆಗಳನ್ನೂ ಪರಿಶೀಲಿಸುವಾಗ ತತ್ತತ್ಕಾಲೋಚಿತ ಮನೋವೃತ್ತಿಯ ತಿಳಿವಳಿಕೆಯನ್ನು ಬೆಳೆಸಿಕೊಂಡಾಗ ಮಾತ್ರ, ಅವನು ನಿಜವಾದ 'ಇತಿ ಹ ಆಸ' ಕಾರನಾಗ ಬಲ್ಲನು. ಹಾಗಲ್ಲದೆ ಇಂದಿನ ಅನುಭವಗಳನ್ನೂ ಹಿಂದಿನ ವಿದ್ಯಮಾನಗಳಿಗೆ ಅನ್ವಯಿಸುವನೇ ಆದರೆ ಆವನು ಕೇವಲ ಇತಿಹಾಸದ ಒಬ್ಬ ಅಸಂಗತ ಟೀಕಾಕಾರನಷ್ಟೇ ಆಗ ಬಲ್ಲ. ಕ್ಷಮಿಸಬೇಕು, ನನ್ನ ಎಣಿಕೆಯಲ್ಲಿ ನಾನೂ ನೀವೂ ಆಗಿರುವುದು ಅಷ್ಟೆ.

ಇಷ್ಟೊಂದು ಕಟುವಾದ ಆತ್ಮ ವಿಮರ್ಶೆಯ ಪೀಠಿಕೆಯನ್ನು ಕೇಳಿದ ನಿಮಗೆ ನನ್ನ ಈ ಭಾಷಣದ ಉಳಿದ ಭಾಗವೂ ಅಷ್ಟೇ ಕಟುವಾದ ನಿಲುವಿನದ್ದಿರಬಹುದೆಂಬ ಅಸಮಾಧಾನ ಉಂಟಾಗಿರಬೇಕಷ್ಟೆ. ಆದ ಕಾರಣ ನಾನು ಇಲ್ಲಿ ನನ್ನ ಮತ್ತು ನಿಮ್ಮ ಸಮಾಧಾನಕ್ಕಾಗಿ ವೈಯಕ್ತಿಕ ಸ್ಪಷ್ಟೀಕರಣವನ್ನು ನೀಡಲೇ ಬೇಕು. ನಾನು ಪ್ರತಿಪಾದಿಸಲಿರುವ ವಿವಾದಾಸ್ಪದ ವಿಷಯಗಳನ್ನು ಕುರಿತು ನಾನು ಮೇಲಿಂದ ಮೇಲೆ ನನ್ನ ಆತ್ಮೀಯ ಸಹ ಇತಿಹಾಸಕಾರರೊಡನೆ ಚರ್ಚಿಸಿದ್ದುಂಟು ಆವರೆಲ್ಲರೂ–ಪಾಪ, ಇವನೊಬ್ಬ ವಿಚಾರಶೀಲನಾಗುವ ವೃಥಾ ಪ್ರಯಾಸದಲ್ಲಿ ತೊಡಗಿದ್ದಾನೆ ಎಂಬ ಅನುಕಂಪ ತೋರಿ ನನ್ನ ಮಾತುಗಳನ್ನು, ಅವು ಎಷ್ಟೇ ಬುಡಮೇಲು ಮಾಡುವಂತಹವೇ ಇರಲಿ, ತಾಳ್ಮೆಯಿಂದ ಕೇಳಿರುವರು. ನೀವೂ ಅದೇರೀತಿ ತಾಳ್ಮೆ ತೋರುವಿರೆಂಬ ನಿರೀಕ್ಷೆ ನನ್ನದು. ನಿಮ್ಮ ಸಹಾನುಭೂತಿಯನ್ನು ಪಡೆಯಲೋಸುಗ ನನ್ನ ಗುಟ್ಟೊಂದನ್ನು ರಟ್ಟು ಮಾಡುತ್ತೇನೆ. ನಾನಿಂದು ಇತಿಹಾಸಕಾರನಾಗಿ ಇಲ್ಲಿಗೆ ಬಂದಿಲ್ಲ; ಅದು ಸಾಧ್ಯವಾಗಲಿಲ್ಲ. ಬದಲು, ವಂಶಪಾರಂಪರ್ಯದ ಟೀಕಾಕಾರನ ಪಾತ್ರ ವಹಿಸಿ ಬಂದಿದ್ದೇನೆ. ನಮ್ಮ ನಾಡಿನ ಪರಂಪರೆಯ ಪ್ರಭಾವ ಅಷ್ಟು ಬಲಿಷ್ಠವಾದದ್ದು. ನಮಗೆಲ್ಲರಿಗೂ ಸ್ವಭಾವ ಸಿದ್ಧವಾದದ್ದು; ರಕ್ತಗತವಾದದ್ದು.

ಮೇಲಿನ ನನ್ನ ಎಲ್ಲ ಹೇಳಿಕೆಗಳನ್ನು ಪುಷ್ಟೀರಿಸುವ ಸಲುವಾಗಿ ನಾನು ಈಗ ಕರ್ನಾಟಕದಲ್ಲಿನ ಜಾತಿಗಳ, ಜಾತೀಯತೆಯ ಇತಿಹಾಸವನ್ನು ಉದಾಹರಣೆಯಾಗಿ ಮುಂದಿಡುವ ಸಾಹಸ ಮಾಡುವೆನು. ಇಂದು ನಮ್ಮ ಸಾಮಾಜಿಕ ಜೀವನದ ಎಲ್ಲ ಹಂತಗಳನ್ನೂ, ಎಲ್ಲ ಅಂಶಗಳನ್ನೂ ಕಲುಷಿತಗೊಳಿಸಿರುವ ಜಾತಿಪದ್ಧತಿಯು ಮೂಲತಃ ಕನ್ನಡಿಗನ ಸೃಷ್ಟಿ ಅಲ್ಲ. ಶತಮಾನಗಳ ಹಿಂದೆ ಆರ್ಯಾವರ್ತದಿಂದ ವಿಂಧ್ಯಪರ್ವತವನ್ನು ಹತ್ತಿ ಇಳಿದು ಬಂದದ್ದು. ಆರ್ಯಾವರ್ತದಲ್ಲೂ ಕೂಡ ಈ ಪದ್ಧತಿಯ ಅವನತಿಯು ಪ್ರಾರಂಭವಾದದ್ದು ಸುಮಾರು ಸಾವಿರದ ಐದುನೂರು ವರ್ಷಗಳ ಹಿಂದಷ್ಟೆ. ಮಾನವೀಯ ಧರ್ಮಶಾಸ್ತ್ರದಿಂದೀಚೆಗಿನ ಕಲ್ಪದಲ್ಲಿ, ಈ ಸಾಮಾಜಿಕ ವರ್ಗೀಕರಣವನ್ನು ವಂಶಪಾರಂಪರ್ಯ ಸೂಚಕವಾಗಿ 'ಜಾತಿ' ಎಂದು ಕರೆಯಲಾರಂಭಿಸಿದಾಗಿನಿಂದ ಅದಕ್ಕೂ ಹಿಂದೆ, ಆರ್ಯಾವರ್ತದಲ್ಲೂ ಕೂಡ ಇದನ್ನು 'ವರ್ಣ' ವೆಂದೇ ಕರೆಯುತ್ತಿದ್ದರು. ವರ್ಣಕ್ಕೂ ಜಾತಿಗೂ ಅಜಗಜಾಂತರ ವೆಂಬುದಕ್ಕೆ ಸಾಕಷ್ಟು ವೈದಿಕ, ಪೌರಾಣಿಕ, ಐತಿಹ್ಯಗಳ ಪುರಾವೆಗಳಿವೆ. ನಿಜ ಸಂಗತಿ ಎಂದರೆ, ಮೂಲತಃ 'ಆಯ್ಕೆ'ಯ ಅರ್ಥದ 'ವೃ' 'ವರ್' ಎಂಬ ಧಾತುವಿನಿಂದ ಹುಟ್ಟಿಕೊಂಡ 'ವರ್ಣ'ವು ಯಾವುದೇ ವಂಶ ಪಾರಂಪರ್ಯದ ಸಾಮೂಹಿಕ ಕೋಮಿನ ಸೂಚಕ ವಿರಲಿಲ್ಲ; ಬದಲಾಗಿ ವ್ಯಕ್ತಿಯನ್ನೂ ವೈಯಕ್ತಿಕ ಸಾಮರ್ಥ್ಯಗಳನ್ನು ಅವಲಂಬಿಸಿತ್ತು. ಅದರ ಪ್ರಕಾರ ವೈದಿಕ ಸಮಾಜದಲ್ಲಿ ಜನ್ಮ ತಾಳಿದವರೆಲ್ಲರೂ ಹುಟ್ಟಿನಿಂದ ಶೂದ್ರರೇ ಆಗಿದ್ದು, ಕಾಲಕ್ರಮದಲ್ಲಿ ಬೆಳೆಸಿಕೊಂಡ ವೈಯಕ್ತಿಕ ಶಕ್ತಿ ಸಾಮರ್ಥ್ಯಗಳಿಗೆ ಅನುಗುಣವಾಗಿ ನಾಲ್ಕು ವರ್ಣಗಳಲ್ಲೊಂದನ್ನು ಆರಿಸಿಕೊಳ್ಳುವ ಸಾಧ್ಯತೆ ಇತ್ತು. ಪಾಶ್ಚಾತ್ಯರ ದುರನುವಾದದ ಪ್ರಭಾವದಿಂದಾಗಿ ನಮ್ಮವರು ದಶಕಗಳ ಕಾಲ ಹೀಗಳೆಯುತ್ತ ಬಂದಿರುವ ಋಕ್ಸಂಹಿತಾಂಗರ್ಗತ

ಪುರುಷಸೂಕ್ತವೂ ಇದನ್ನೇ ಸಾರಿ ಹೇಳುತ್ತದೆ. ಮನುಷ್ಯರು ಬ್ರಹ್ಮನ ಬಾಯಿಂದ ಬ್ರಾಹ್ಮಣರಾಗಿ,ಭುಜ ಗಳಿಂದ ಕ್ಷತ್ರಿಯರಾಗಿ ತೊಡೆಗಳಿಂದ ವೈಶ್ಯರಾಗಿ, ಪಾದ ಗಳಿಂದ ಶೂದ್ರರಾಗಿ ಹುಟ್ಟಿ ಬಂದವರೆಂಬ ಹಾಸ್ಯಾಸ್ಪದ ಪ್ರತಿಪಾದನೆಯು ಈ ಸೂಕ್ತದ ತಿರುಳಲ್ಲ. ಅಂದಿನ ಸಮಾಜದ ಮಟ್ಟಿಗೆ ವೇದ ಪಾರಗನಾದ, ವೈದಿಕ ಕರ್ಮ ನಿರತನಾದ ಶೂದ್ರನು ಬ್ರಾಹ್ಮಣನಾಗಿ ಸಮಾಜದ ಅಧಿಕೃತ ವಕ್ತಾರನೆನಿಸಿಕೊಳ್ಳುವನು (ಬ್ರಾಹ್ಮಣೋಽಸ್ಯ ಮುಖ ಮಾಸೀತ್); ಇರಿಯಲ್ಬಲ್ಲೊಡೆ ಶೂದ್ರನು ಕ್ಷತ್ರಿಯನಾಗಿ ಸಮಾಜವನ್ನು ತನ್ನ ಭುಜ ಬಲದಿಂದ ರಕ್ಷಿಸುವನು (ಬಾಹೂ ರಾಜನ್ಯಃ ಕೃತಃ) ; ವ್ಯಾಪಾರ ವ್ಯವಹಾರಗಳ ಮನೋವೃತ್ತಿಯನ್ನು ಬೆಳೆಸಿಕೊಂಡ ಶೂದ್ರನು ವೈಶ್ಯನಾಗಿ, ದಕ್ಷ ದ್ರವ್ಯ ನಿರ್ವಹಣೆಯ ಮೂಲಕ, ಶರೀರದ ಭಾರವನ್ನೂ ತೊಡೆಗಳು ಹೊತ್ತು ನಡೆಸುವಂತೆ, ಸಮಾಜವನ್ನು ಮುನ್ನಡೆಸಿಕೊಂಡು ಹೋಗುವನು (ಊರೂ ತುದಸ್ಯ ಯದ್ವೈಶ್ಯಃ) ; ಈ ಯಾವ ಸಾಮರ್ಥ್ಯಗಳನ್ನೂ ಗಳಿಸಲಾರದೆ ಹೋದ ಶೂದ್ರನು ಶೂದ್ರನಾಗಿ ಸಮಾಜದಲ್ಲಿ ಕಾರ್ಮಿಕನಾಗಿ ಸೇವೆ ಸಲ್ಲಿಸುವನು (ಪದ್ಭ್ಯಾಂ ಶೂದ್ರೋ ಅಜಾಯತ). ಹೀಗನ್ನುವ ಪುರುಷ ಸೂಕ್ತವು ಹೊಸತಾದ ಸಾಮಾಜಿಕ ರೂಪ ರೇಖೆಗಳನ್ನು ಅಂದಿನ ವೈದಿಕ ಸಮಾಜದ ಮೇಲೆ ಹೇರುವಂತದ್ದಲ್ಲ. ಆ ಸಮಾಜವನ್ನು ವಂಶ ಪಾರಂಪರ್ಯದ ಇತಿಮಿತಿಗಳಿಗೆ ಒಳಪಡಿಸುವಂತಹದ್ದಲ್ಲ. ಕಾಲ ಕ್ರಮೇಣ ವೈದಿಕ ಸಮಾಜವು ಸಾಮಾಜಿಕ ಅವಶ್ಯಕತೆಗಳಿಗನುಗುಣವಾಗಿ ಸಹಜವಾಗಿ ತಾಳಿದ ಸ್ವರೂಪವನ್ನು ಒಂದು ಸೂಕ್ತದ ರೂಪದಲ್ಲಿ ಅಳವಡಿಸುತ್ತದಷ್ಟೆ. ತಲೆಮಾರಿಂದ ತಲೆಮಾರಿಗೆ ನಿಶ್ಚಯವಾಗುತ್ತಿದ್ದ ವ್ಯಕ್ತಿಯ ವರ್ಣ ಧರ್ಮವನ್ನು ಬಣ್ಣಿಸುತ್ತದಷ್ಟೆ. ನನಗನಿಸುವ ಮಟ್ಟಿಗೆ, ಈ ಪುರುಷ ಸೂಕ್ತದ ದ್ರಷ್ಟಾರನು ಮಾನವ ಇತಿಹಾಸದ ಪ್ರಪ್ರಥಮ ಸಾಮಾಜಿಕ ಇತಿಹಾಸಕಾರನಿದ್ದನು.

ಈ ರೀತಿಯ ಬೌದ್ಧಿಕ, ರಾಜಸ, ಆರ್ಥಿಕ ಮತ್ತು ಕಾರ್ಮಿಕ ಮೌಲ್ಯಗಳ ಆಧಾರದ ಮೇಲೆ ನಿರೂಪಿತವಾದ ಸಾಮಾಜಿಕ ಸ್ವರೂಪವು ವಿಶ್ವ ವ್ಯಾಪಿಯಾದದ್ದು ; ಚಿರಂತನವಾದದ್ದು. ಆದರೆ ನಮ್ಮ ಈ ಉಪಖಂಡದಲ್ಲಿ ಕಾಲಕ್ರಮದಲ್ಲಿ ರೂಢಿಗೆ ಬಂದಂತೆ ಬೇರೆಡೆಗಳಲ್ಲಿ ಅದಕ್ಕೆ ಜಾತಿಯ, ವಂಶಪಾರಂಪರ್ಯದ, ಪುತ್ರ ಪೌತ್ರಾನು ಗಮ್ಯದ ಸೋಂಕು ತಟ್ಟಿಲ್ಲ.

ಈಗ ಕನ್ನಡ ನಾಡಿನ ಮಟ್ಟಿಗೆ ಈ ಸಾಮಾಜಿಕ ರೂಪ ರೇಖೆಯು ಅವನತಿಯತ್ತ ಸಾಗಿ ಬಂದ ದಾರಿ ಎಂತಹುದೆಂದು ನೋಡೋಣ. ವೈದಿಕ ಸಂಸ್ಕೃತಿ ಮತ್ತು ಸಮಾಜ ಆರಂಭಾವಸ್ಥೆಯಲ್ಲಿ ಶತಮಾನಗಳ ಕಾಲ ಉತ್ತರ ಭಾರತದ ಕೆಲವೆಡೆಗಳಿಗೆ ಮಾತ್ರ ಸೀಮಿತ ವಾಗಿದ್ದು, ಮಗಧ ಸಾಮ್ರಾಜ್ಯವು ಹರಡಿದಂತೆ ದಕ್ಷಿಣ ಭಾರತದಲ್ಲಿ ಕಾಣಿಸಿಕೊಂಡಿತು. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ವರ್ಣ ಧರ್ಮವನ್ನು ಇಲ್ಲಿ ನೆಲೆ ಗೊಳಿಸುವ ಸಲುವಾಗಿ ಆರ್ಯಾವರ್ತದಿಂದ ಸಾಕಷ್ಟು ಸಂಖ್ಯೆಯಲ್ಲಿ ವರ್ಣಧರ್ಮಾನುಯಾಯಿಗಳ ಕುಟುಂಬ ಗಳನ್ನೆ ಬರಮಾಡಿಕೊಳ್ಳಲಾಗಿತ್ತೆಂಬುದಕ್ಕೆ ಐತಿಹಾಸಿಕ ಪುರಾವೆಗಳೂ ನಂಬಲರ್ಹವಾದ ಐತಿಹ್ಯಗಳೂ ಇವೆ. ಹೀಗೆ ಕ್ರಿಸ್ತ ಪೂರ್ವದ ಶತಮಾನಗಳಲ್ಲಿ ಕರ್ನಾಟಕದಲ್ಲಿ ಕಾಣಿಸಿಕೊಂಡ ವರ್ಣ ಧರ್ಮವು ಬನವಾಸಿಯ ಕದಂಬರ ಆರಂಭಕಾಲದವರೆಗೂ, ಅಂದರೆ ಕ್ರಿ. ಶ. ೪ನೆಯ ಶತಮಾನದಲ್ಲೂ, ಕೂಡ ವಂಶಪಾರಂಪರ್ಯದ 'ಜಾತಿ' ಯಾಗಿ ಪರಿಣಮಿಸಿದಂತಿಲ್ಲ. ಇಲ್ಲದಿದ್ದಲ್ಲಿ ವೈದಿಕ ಬ್ರಾಹ್ಮಣ ಮನೆತನದವನಾದ ಮಯೂರಶರ್ಮನು ಕುಶ ದರ್ಭೆಗಳನ್ನು ಬಿಸುಟು ಬ್ರಾಹ್ಮಣ್ಯವನ್ನು ತ್ಯಜಿಸಿ ಕ್ಷತ್ರಿಯನಾಗುವುದು ಸಾಧ್ಯವಿತ್ತೆ ? ಸುಮಾರು ಅದೇ ವೇಳೆಗೆ, ಬಹುಶಃ ವೈಶ್ಯ ವೃತ್ತಿಯವನಾದ ಶ್ರೀಗುಪ್ತನು ಕ್ಷಾತ್ರವೃತ್ತಿಯನ್ನಾರಿಸಿ ಮಗಧ ರಾಜ್ಯದ ಒಡೆಯ ನಾಗುವ ಸಾಧ್ಯತೆ ಇತ್ತೆ ? ಅದೇ ಕಾಲದ ಮಧ್ಯ ಪ್ರದೇಶದ ಬಾಘ್ ಪ್ರಾಂತದ ಭುಲುಂಡನೇ ಮೊದಲಾದ ಆಟವಿಕ ಬುಡಕಟ್ಟಿನವರು ಕ್ಷತ್ರಿಯ ಮಹಾರಾಜರಾಗಿ ಮೆರೆಯುವ ಸಾಧ್ಯತೆ ಇತ್ತೆ ?

ಆದರೆ ಕ್ರಿ. ಶ ೫-೬ನೆಯ ಶತಮಾನಗಳಲ್ಲಿ ರಚಿತವಾದ 'ಜನ್ಮನಾ ಜಾಯತೇ ಶೂದ್ರ : ಸಂಸ್ಕಾರೈ ರ್ದ್ವಿಜ ಉಚ್ಯತೇ' ಅಂದರೆ 'ಹುಟ್ಟಿನಿಂದ ಪ್ರತಿ ಯೊಬ್ಬನೂ ಶೂದ್ರನೇ ಇದ್ದು ಬೆಳೆಸಿಕೊಂಡ ಸಂಸ್ಕಾರಗಳಿಗನುಗುಣವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ನಾಗುವನು' ಎಂಬ ಸಾಲು ಅಲ್ಲಿಯವರೆಗೂ ಅಯ್ಕೆಯ

ಸ್ವಾತಂತ್ರ್ಯವನ್ನೂ ಉಳಿಸಿಕೊಂಡು ಬಂದಿದ್ದ ವರ್ಣ ಧರ್ಮದ ಚರಮ ಶ್ಲೋಕವಾಯಿತು. ಆ ನಂತರದ ಶತಮಾನಗಳಲ್ಲಿ ವರ್ಣವು ಜಾತಿಯಾಗಿ ಪರಿಣಮಿಸಿ, ವ್ಯಕ್ತಿ ಮತ್ತು ಅವನ ಸಾಧನೆಗಳ ಬದಲು ಅವನ ಹುಟ್ಟೇ ಸಾಮಾಜಿಕ ಸ್ತರ ರಚನೆಯ ಏಕೈಕ ಕಾರಣ ವಾಯಿತು. ಆಯ್ಕೆಯ ಸ್ವಾತಂತ್ರ್ಯವು ಮಾಯವಾಗಿ, ಬ್ರಾಹ್ಮಣನಿಗೆ ಹುಟ್ಟಿದ ಅನರ್ಹನೂ ಬ್ರಾಹ್ಮಣನೇ, ಶೂದ್ರನಿಗೆ ಹುಟ್ಟಿದ ಬುದ್ಧಿವಂತನೂ ಶೂದ್ರನೇ ಎಂಬ ನೀರಸ ವ್ಯವಸ್ಥೆಯು ಅಚಲವಾಯಿತು. ಹೀಗಾದುದಕ್ಕೆ ಸಮಾಜದಲ್ಲಿ ವಿಶೇಷ ಸೌಲಭ್ಯಗಳನ್ನು ಅನುಭವಿಸಿ ಬಂದಿದ್ದ ದ್ವಿಜರೇ, ಅಂದರೆ ಮೊದಲ ಮೂರು ವರ್ಣ ಗಳಿಗೆ ಸೇರಿದವರೆ, ಮುಖ್ಯ ಕಾರಣರಿದ್ದರೆಂದು ವಾದಿಸಲು ಸಾಕಷ್ಟು ಸಾಂದರ್ಭಿಕ ಆಧಾರಗಳಿವೆ. ಇದರಿಂದಾಗಿ ವೈದಿಕ ಯುಗದ ತರುವಾಯದ ಭಾರತೀಯ ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಜಾತಿಯ ಪಟ್ಟವನ್ನು ಹೊತ್ತೇ ಹುಟ್ಟಿದನಾಗಿ, ಮನುಷ್ಯ ಪ್ರಯತ್ನ, ಧೈರ್ಯ, ಸಾಹಸ, ಸಾಮರ್ಥ್ಯ ಗಳಿಗೆ, ಅದರಲ್ಲೂ ಮುಖ್ಯವಾಗಿ ಪ್ರಗತಿಪರ ಸಾಮಾಜಿಕ ಸ್ಪರ್ಧೆಗೆ ಅವಕಾಶ ತೀರಾ ಕಡಿಮೆ ಆಯಿತು. ಇದರಿಂದಲೇ ಇರಬೇಕು ವಿಶ್ವದ ಇತರ ಸಮಾಜಗಳಲ್ಲಿ ಮಧ್ಯಯುಗದಲ್ಲಷ್ಟೇ ಕಾಣಿಸಿಕೊಂಡ ಸಾಮಾಜಿಕ ಜಾಡ್ಯವು ನಮ್ಮ ಈ ಉಪಖಂಡದಲ್ಲಿ ಮಾತ್ರ ಪ್ರಾಚೀನ ಯುಗದಲ್ಲೇ ತಲೆಯೆತ್ತಿದ್ದು.

ಅದು ಹೇಗೇ ಇರಲಿ, ಪರಂಪರೆಯನ್ನು ಉಳಿಸಿ ಕೊಂಡು ಬರುವ ನೆಪದಲ್ಲಿ, ಪರಂಪರೆಯ ಹೆಸರಿನಲ್ಲಿ ಲಾಭ ಪಡೆಯುತ್ತ ಬಂದಿದ್ದ ಆಳರಸರೂ ಇತರ ಆಡಳಿತ ವರ್ಗದವರೂ, ಈ ಸಾಮಾಜಿಕ ಅವನತಿಗೆ ಇನ್ನಷ್ಟು ತೀವ್ರತೆಯನ್ನು ಕೂಡಿಸಿದ್ದರೆನ್ನಲು ಕ್ರಿ.ಶ. ೬–೭ನೆಯ ಶತಮಾನಗಳಿಂದೀಚೆಗಿನ ಕರ್ನಾಟಕದ ದಾನ ಶಾಸನ ಗಳಲ್ಲಿ ಸಾಕೆನಿಸುವಷ್ಟು ಮಾಹಿತಿಗಳು ದೊರೆಯುತ್ತವೆ. ಈ ಮಾತನ್ನು ದೃಢೀಕರಿಸುವ ಸಲುವಾಗಿ ನಾನು ಇಲ್ಲಿ ಬ್ರಾಹ್ಮಣರನ್ನು ಉದಾಹರಣೆಗೆ ತೆಗೆದುಕೊಳ್ಳುವೆನು. ಆದರೆ ಉದಾಹರಣೆಗೆ ಮಾತ್ರವಷ್ಟೇ ವಿನಹ ಖಂಡಿತ ವಾಗಿಯೂ ಅವರನ್ನು ಹೀಗಳೆಯುವ ದೃಷ್ಟಿಯಿಂದಲ್ಲ. ಏಕೆಂದರೆ ನಾನೂ ಕೂಡ ಪಿತೃಪಿತಾಮಹ ಪ್ರಪಿತಾಮಹ ಗುಣ ಸಂಯುಕ್ತನಲ್ಲವಾದರೂ, ಪುತ್ರ ಪೌತ್ರಾನು ಭೋಗ್ಯದ ಯಾವ ಬ್ರಹ್ಮಸ್ವವೂ ಇಲ್ಲದವನಾದರೂ, ಸಂಸ್ಕಾರದಿಂದಲ್ಲವಾದರೂ, ಹುಟ್ಟಿನಿಂದ, ಜನ್ಮನಾ, ಒಬ್ಬ ಬಡ ಬ್ರಾಹ್ಮಣ.

ವೇದ ವೇದಾಂಗ ಪಾರಗರಾದ, ಷಟ್ಕರ್ಮ ನಿರತರಾದ, ತೋರಿಕೆಗಾದರೂ ಸಮಾಜದ ಒಳಿತಿಗಾಗಿ ವೈದಿಕ ಯಜ್ಞ ಯಾಗಾದಿಗಳನ್ನೂ ಕರ್ಮ ಕ್ರಿಯೆ ಗಳನ್ನೂ ನಡೆಸುತ್ತ ಬಂದಿದ್ದ ಬಡ ಬ್ರಾಹ್ಮಣರನ್ನು ಆರಿಸಿ ಉದಕಧಾರಪೂರ್ವಕವಾಗಿ ಅವರಿಗೆ ಭೂಮಿ ದಾನ ಮಾಡುವ ಪದ್ಧತಿಯನ್ನು ಹಿಂದಿನಿಂದಲೂ ಆಳರಸರೂ, ಅಧಿಕಾರಿಗಳೂ, ಸಿರಿವಂತರೂ ಮುಂದಿಟ್ಟು ಕೊಂಡಿದ್ದರು. ಅಂದಿನ ಸಾಮಾಜಿಕ ವ್ಯವಸ್ಥೆ, ಮತ ಶ್ರದ್ಧೆ, ನಂಬಿಕೆಗಳ ದೃಷ್ಟಿಯಿಂದ ದಾನ ಪಡೆದ ಬ್ರಾಹ್ಮರು ಬಹುಶಃ ಅರ್ಹರಿದ್ದರೆಂದೇ ಅಂದು ಕೊಳ್ಳೋಣ. ಆದರೆ ಅಂತಹ ದಾನಗಳನ್ನು ನೀಡು ವಾಗ, ಜೊತೆಗೇ, ಹೆಚ್ಚು ಕಡಿಮೆ ಎಲ್ಲ ದಾನ ಶಾಸನ ಗಳಲ್ಲೂ ಆ ದಾನಗಳನ್ನು ಪಡೆದ ಬ್ರಾಹ್ಮಣರು ಅವನ್ನು 'ಆ ಚಂದ್ರಾರ್ಕಕ್ಷಿತಿಸ್ಥಿತಿ ಸಮಕಾಲೀನ' 'ಪುತ್ರ ಪೌತ್ರಾನು ಭೋಗ್ಯ'ವಾಗಿ ಅನುಭವಿಸಿಕೊಂಡು ಬರುವ ರೆಂದೂ ನಮೂದಿಸಲಾಯಿತು. ಇಷ್ಟೊಂದು ಔದಾರ್ಯ ವನ್ನು ತೋರಿದ ಅಂದಿನ ದಾನಿಗಳು ಅದೇ ವೇಳೆಗೆ ದಾನ ಪಡೆದ ಸತ್ಪಾತ್ರಿಗಳು ಪುತ್ರಪೌತ್ರಪ್ರಪೌತ್ರಾದಿ ಗಳೂ ಸಹ ಅವರಷ್ಟೇ ವೇದ ವೇದಾಂಗವಿದರಾಗಿ, ಷಟ್ಕರ್ಮನಿರತರಾಗಿ, ಲೋಕ ಕಲ್ಯಾಣಕ್ಕಾಗಿ ಯಜ್ಞ ಯಾಗಾದಿಗಳನ್ನೂ ವೈದಿಕ ಕರ್ಮ ಕ್ರಿಯೆಗಳನ್ನು ಮುಂದುವರಿಸಿಕೊಂಡು ಹೋಗಬೇಕೆಂಬ ಷರತ್ತನ್ನೂ ವಿಧಿಸುವ ಜಾಗರೂಕತೆ ವಹಿಸದೇ ಹೋದರು. ಇದರಿಂದಾಗಿ ಬಿಟ್ಟಿಗೆ ಬಂದ ಭೂ ಸ್ವಾಸ್ಥೆಯನ್ನು ಅನುಭವಿಸುತ್ತ, ಆ ಸತ್ಪಾತ್ರಿಗಳ ವಂಶಜರು ತಮ್ಮ ವರ್ಣದ ಧರ್ಮಗಳನ್ನೂ ಕೈ ಬಿಟ್ಟು, ಹೆಚ್ಚಿನ ಆದಾಯ ಕ್ಕಾಗಿ ಇತರ ವರ್ಣಗಳ ವೃತ್ತಿಗಳಿಗೂ ಕೈ ಹಾಕಲಾರಂಭಿಸಿದರು ಎಂಬುದು ಹಿಂದಿನ ಕಾಲದ ಶಾಸನಗಳಿಂದ ತಿಳಿದು ಬರುವ ನಿಜ ಸಂಗತಿ. ಇದರಿಂದಲೇ ಇರಬೇಕು ಕ್ರಿ.ಶ ೬–೭ನೆಯ ಶತಮಾನಗಳಲ್ಲಿ ನಿರ್ದಿಷ್ಟ ರೂಪ ತಾಳಿದ ಪೌರಾಣಿಕ ಕೃತಿಗಳಲ್ಲಿ 'ಬ್ರಹ್ಮಸೂತ್ರಂ

ಕೇವಲಂ ವಿಪ್ರತ್ವ ಹೇತುಃ' ಅಂದರೆ 'ಯಜ್ಞೋಪವೀತವು ಕೇವಲ ಬ್ರಾಹ್ಮಣ್ಯದ ಚಿಹ್ನೆಯಾಗಿ ಮಾತ್ರ ಉಳಿದಿದೆ' ಎಂದು ಮುಂತಾದ ಖಂಡನೆಗಳು ಕಂಡು ಬರುವುದು.

ಈ ವಿಷಮ ಪರಿಸ್ಥಿತಿಯು ಸಾಕಷ್ಟು ಸಾಮಾಜಿಕ ಅಸಮಾಧಾನ, ಅಶಾಂತಿಗಳಿಗೆ ಎಡೆಮಾಡಿ ಕೊಟ್ಟಿತ್ತೆಂಬುದಕ್ಕೆ ಒಂದಿಷ್ಟು ನೇರ ಹಾಗೂ ಹೇರಳವಾದ ಸಾಂದರ್ಭಿಕ ಸೂಚಕಗಳು ನಮಗೆ ದೊರೆಯುತ್ತವೆ. ಇಂತಹ ಪರಂಪರಾಧಾರಿತ ಪದ್ಧತಿಯಿಂದ ವಂಚಿತರಾದ, ಅತೃಪ್ತರಾದ ಜನರು, ಶಾಸನಗಳ ಪರಿಭಾಷೆಯಲ್ಲಿ ದುರ್ಜನರು, ಬ್ರಹ್ಮಸ್ವಗಳನ್ನು ಸಂದರ್ಭಾವಕಾಶಗಳು ಒದಗಿ ಬಂದಾಗಲೆಲ್ಲ ಸ್ವಾಧೀನ ಪಡಿಸಿಕೊಳ್ಳುತ್ತಿದ್ದಿರಬೇಕು. ಆದುದರಿಂದಲೇ ೨ನೆಯ ಪೊಲೆಕೇಶಿಯ ಪತನದನಂತರ ಚಲುಕ್ಯ ಸಾಮ್ರಾಜ್ಯದಲ್ಲಿ ತಲೆದೋರಿದ ೧೩ ವರ್ಷಗಳ ಅರಾಜಕತೆಯನ್ನು ಕೊನೆಗೊಳಿಸಿ ಪುನಃ ಚಲುಕ್ಯರ ಆಧಿಪತ್ಯವನ್ನು ಸ್ಥಾಪಿಸಿದ ೧ನೆಯ ವಿಕ್ರಮಾದಿತ್ಯನು ತನ್ನ ಶಾಸನಗಳಲ್ಲಿ 'ತಸ್ಮಿನ್ ರಾಜ್ಯತ್ರಯೇ ವಿನಷ್ಟಾನಿ ದೇವಸ್ವ ಬ್ರಹ್ಮದೇಯಾನಿ ಧರ್ಮಯಶೋಭಿವೃದ್ಧಯೇ ಸ್ವ ಮುಖೇನ ಸ್ಥಾಪಿತವಾನ್' ಎಂದು ಹೇಳಿಕೊಂಡಿರುವುದು. ಹೀಗೆ ದೇವಸ್ವಗಳು ವಿನಷ್ಟವಾಗುತ್ತಿದ್ದುದು ಧಾರಾವಾಹಿಯಾದೊಂದು ಪ್ರತಿಕ್ರಿಯೆ. ಏಕೆಂದರೆ, ವಿಜಯನಗರ ಯುಗದಲ್ಲೂ ಕೂಡ, ರಾಜಕೀಯ ಅಸ್ತವ್ಯಸ್ತತೆ ತಲೆದೋರಿದಾಗಲೆಲ್ಲ 'ಬ್ರಹ್ಮದಾಯಕೆ ಸಲುವ ಮಾನ್ಯಗಳು,ಗದ್ದೆಗಳು ಮಧ್ಯೆ ಮಧ್ಯೆ ಅವಾಂತರವಾಗಿ' ಅವುಗಳನ್ನು ಪುನಃ 'ಪೂರ್ವಮರಿಯಾದೆಯಲ್ಲೆ' 'ಸರ್ವಮಾನ್ಯವಾಗಿ ಹಿಂದಕ್ಕೆ ತಾಮ್ರ ಶಾಸನ ಪಾಲಿಸಿ ನಡೆದ ಮರಿಯಾದೆಯಲ್ಲೆ' ಮುಂದಕ್ಕೂ 'ನಡೆವ ಹಾಗೆ ಕಟ್ಟಳೆಯು' ಹೊರಡಿಸಿದ್ದ ಪ್ರಸಂಗಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಹೀಗೆ ಪುತ್ರ ಪೌತ್ರಾನು ಭೋಗ್ಯವಾದ ಮಾನ್ಯಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬ್ರಾಹ್ಮಣೇತರರಿಗೂ ಆಚಂದ್ರಾರ್ಕ ಸ್ಥಾಯಿಯಾಗಿ ನೀಡಲಾಗಿತ್ತೆಂಬುದನ್ನು ನಾವು ಇಲ್ಲಿ ನಮ್ಮ ಗಮನಕ್ಕೆ ತಂದುಕೊಳ್ಳುವುದು ಅತ್ಯಗತ್ಯ.

ಈ ಭಾಷಣದಲ್ಲಿ ನಾನು ನಮ್ಮ ಸಾಮಾಜಿಕ ಇತಿಹಾಸವನ್ನು ಕುರಿತು ಆಧಾರ ಸಹಿತವಾಗಿ ಆಡಬಹುದಾಗಿದ್ದ ಹೊಗಳಿಕೆಯ ಮಾತುಗಳನ್ನು ಕಡೆಗಣಿಸಿ, ನಮ್ಮ ಸಾಮಾಜಿಕ ಅವನತಿಗೆ ಕಾರಣವಾದ ದೋಷ ದೌರ್ಬಲ್ಯಗಳನ್ನೆ, ಅವುಗಳನ್ನು ತಂದೊಡ್ಡಿದ ಪರಂಪರೆಯ ಇತಿಮಿತಿಗಳನ್ನೆ ಎತ್ತಿ ತೋರಿಸಿರುವೆನು. ಆದರೆ ನಾನು ನಿರಾಶಾವಾದಿಯೇನೂ ಅಲ್ಲ. ಇತಿಹಾಸಕಾರನ ರೂಪ ತಾಳಿದಾಗ ಸುಖ ದುಃಖಗಳನ್ನು ಸಮದೃಷ್ಟಿಯಿಂದ ಕಾಣುವ ಶಕ್ತಿ ನನಗಿದೆ. ಆದರೆ ನನ್ನ ಮನದಟ್ಟದ ಅಚ್ಚರಿಯ ಸಂಗತಿ ಒಂದಿದೆ. ಅದೆಂದರೆ, ಭಾರತದ ಇನ್ನಾವ ಪ್ರಾಂತಗಳಿಗಿಂತಲೂ ಹೆಚ್ಚಾಗಿ ಮಧ್ಯಯುಗದ ಮತ್ತು ಅನಂತರದ ಶತಮಾನಗಳಲ್ಲಿ ಕರ್ನಾಟಕದ ಜ್ಞಾನಿಗಳನೇಕರು ಈ ಪರಂಪರೆಯ ಗೀಳಿನಿಂದ ಕನ್ನಡ ನಾಡಿನ ಸಮಾಜದಲ್ಲಿ ಆಗುತ್ತಿದ್ದ ಏರುಪೇರುಗಳನ್ನೂ, ಕಷ್ಟ ನಷ್ಟಗಳನ್ನು ಗುರುತಿಸಿ ಹಾಡಿ ಹೀಗಳೆದಿದ್ದರು. ಬಸವಣ್ಣನವರೇ ಮೊದಲಾದ ವಚನಕಾರರೂ, ಪುರಂದರ ದಾಸ, ಕನಕದಾಸಾದಿ ಹರಿದಾಸರುಗಳೂ ನಮ್ಮ ಕುರುಡ ಗೌರವಾದರಗಳಿಗೆ ಮಾತ್ರ ಪಾತ್ರರಾಗಿದ್ದಾರೆ. ಅವರುಗಳು ನಮಗೆ ನೀಡಿರುವ ಎಚ್ಚರಿಕೆಯ ಮಾತುಗಳು ಹಾಡುಗಾರರ ಇಂಪು ದನಿಗೆ ತಲೆಯಾಡಿಸುತ್ತಿದ್ದ ನಮ್ಮ ಪೂರ್ವಜರ, ಇಂದಿಗೂ ತಲೆಯಾಡಿಸುತ್ತಿರುವ ನಮ್ಮಗಳ ಅಂತಃಕರಣವನ್ನೂ ಮುಟ್ಟಿಲ್ಲ ; ಚಿಂತನೆಯನ್ನೂ ಕೆರಳಿಸಿಲ್ಲ. ಈ ದೃಷ್ಟಿಯಿಂದ ನಾವು ದುರ್ದೈವಿಗಳೇ ಹೌದು.

ಆದ ಕಾರಣ ನನಗನಿಸಿತು. ನಾನೇಕೆ ಇಂದಿನ ಈ ಸಂದರ್ಭವನ್ನು ಬಳಸಿ, ನಮ್ಮ ಐತಿಹಾಸಿಕ ಪುರಾವೆಗಳ ಒಳ ಅರ್ಥವು ನೀಡುವ ಎಚ್ಚರಿಕೆಯನ್ನು ಒತ್ತಿ ಹೇಳಬಾರದು ಎಂದು ವಚನಕಾರರ ದಾಸ ಸಾಹಿತಿಗಳ ಎದುರು ನಾನೊಬ್ಬ ಅಲ್ಪ ಜ್ಞಾನಿ. ಆದರೂ ನಮ್ಮ ಪೂರ್ವಜರು ಹೇಳಿರುವಂತೆ–'ಇತ್ಯುಕ್ತಂ ವಚೋಗ್ರಾಹ್ಯಂ ಬಾಲಾದಪಿ ಶುಕಾದಪಿ'–

ಮನುಷ್ಯ ಪ್ರಯತ್ನದಿಂದ ಅಸ್ತಿತ್ವಕ್ಕೆ ಬರುವ ಎಲ್ಲ ವಸ್ತು ವಿಷಯಗಳೂ, ಕಟ್ಟು ಕಟ್ಟಳೆಗಳೂ ಕಾಲಕ್ರಮದಲ್ಲಿ ತಮ್ಮ ಅಂತಃಸತ್ವವನ್ನು ಕಳೆದುಕೊಂಡು ನಶಿಸಿ ಹೋಗುವುದೂ, ಇಲ್ಲ ಗುರುತಿಸಲಾರದಷ್ಟರ ಮಟ್ಟಿಗೆ ಪರಿವರ್ತನೆಗೊಳ್ಳುವುದೂ ಲೋಕ ಸಹಜವಾದ

ಚಿರಂತನ ಅನುಭವ. ಅಂತಹ ಒಂದು ಮಾನವ ಸೃಷ್ಟಿ ಆದ ಮಾನ್ಯಖೇಟದ ರಾಷ್ಟ್ರಕೂಟ ವಂಶವು ಎರಡು ಶತಕಗಳಿಗೂ ಹೆಚ್ಚು ಕಾಲ ರಾಜ್ಯವಾಳಿದ ನಂತರ ಪತನ ವಾದಾಗ, ಅಂದಿನ ಶಾಸನಗಳಲ್ಲಿ ಆ ಮನೆತನವನ್ನು 'ಕಾಲಾತ್ ಖಂಡಿತ ರಾಷ್ಟ್ರಕೂಟರ್ ಕುಲ' ಎಂದು ಪ್ರಸ್ತಾಪಿಸಲಾಗಿದೆ. ಆಯ್ಕೆಯ ವರ್ಣವು ಹುಟ್ಟಿನ ಜಾತಿಯಾದಾಗಿನಿಂದ ನಮ್ಮ ಉಪಖಂಡದ ಸಾಮಾಜಿಕ ಆರೋಗ್ಯವು ದಿನ ದಿನಕ್ಕೂ ಹದಗೆಡುತ್ತ ಬಂದಿದ್ದು, ಇಂದು ಈ ಜಾತಿ ಪದ್ಧತಿಯು ಕಾಲಾತ್ ಖಂಡಿತವಾಗಿ ಹೋಗಿದೆ. ಐತಿಹಾಸಿ ಕಲ್ಪಗಳು ಮರುಕಳಿಸುವುದು ಆಕಸ್ಮಿಕವೇ ಆದರೂ, ಸಂಭವನೀಯವೂ ಹೌದು. ಅಂದ ಮೇಲೆ ಕಾಲಾತ್ಖಂಡಿತ ಜಾತಿ ಪದ್ಧತಿಯ ವಂಶಪಾರಂಪರ್ಯ ಹುಟ್ಟಿಸಿರುವ ವಿಷವು ಹರಡಿ ನಮ್ಮ ಇಡಿಯ ಸಮಾಜವೂ ಕಾಲಾತ್ ಖಂಡಿತ-ವಾಗುವ ಮುನ್ನ-ನಾವೇಕೆ ಇತಿಹಾಸಕಾರರು ದನಿಯೆಬ್ಬಿಸಿ ಆ ಹಳೇ ಕಾಲದ ಪ್ರಾಗ್ ಜಾತಿ ಯುಗದ ಆಯ್ಕೆಯ ಸ್ವಾತಂತ್ರ್ಯವನ್ನು ಪುನಃ ಕಲ್ಪಿಸಬಾರದು ? ಇದು ಸಾಧ್ಯವಾದರೆ ನಾವು ಬರಿಯ ಇತಿಹಾಸದ ಸಂಶೋಧಕರಾಗಿ ಮಾತ್ರ ಉಳಿಯದೆ, ಇತಿಹಾಸದ ಸ್ರಷ್ಟಾರರೂ ಆದೇವು. ನಮ್ಮ ಪರಂಪರೆಯಲ್ಲಿ ಒಳ್ಳೆಯದನ್ನು ಶತ ಶತಮಾನಗಳ ಅಲಕ್ಷ್ಯದ ನಂತರ ಪುನಃ ಪ್ರಚಲಿತಗೊಳಿಸಿದ ಕೀರ್ತಿ ನಮ್ಮದಾದೀತು.

ಒಟ್ಟನಲ್ಲಿ ನಾನು ಇಂದು ಐತಿಹಾಸಿಕ ಯಾಥಾರ್ಥ್ಯ, ಸಂಶೋಧಕನ ಪರಿಶ್ರಮ, ಮನಸ್ಸಿನ ಅಂತರಾಳದ ಕೊರಗು, ಸಮೂಜ ಜೀವಿಯ ಆಸೆ ಆಕಾಂಕ್ಷೆಗಳು, ಭಯ ಭೀತಿಗಳು-ಇವೆಲ್ಲವನ್ನೂ ಕಲಸು ಮೇಲೋಗರ ಮಾಡಿ, ಇತಿಹಾಸವೆಂದರೆ ಏನು ಎಂಬ ಪ್ರಶ್ನೆಯನ್ನು ಇನ್ನಷ್ಟು ಜಟಿಲಗೊಳಿಸಿ ಬಿಟ್ಟಿರುವೆನು. ಈ ಅಪರಾಧಕ್ಕಾಗಿ ನಿಮ್ಮ ಕ್ಷಮೆ ಕೋರುವೆನು.

ದೇವರ ಕೊಂಡಾರೆಡ್ಡಿ*

# ಬನ್ನೇರುಘಟ್ಟ-ಪ್ರಾಗೈತಿಹಾಸಿಕಕಾಲದಿಂದ ಇಂದಿನವರೆಗೆ

ಬನ್ನೇರುಘಟ್ಟವು ಬೆಂಗಳೂರಿನ ದಕ್ಷಿಣಕ್ಕೆ೧೬ಕಿಮೀ ದೂರದಲ್ಲಿದೆ. ಇದಕ್ಕೆ ಹೊಂದಿಕೊಂಡಂತೆ ಸಣ್ಣ ಬೆಟ್ಟವೊಂದಿದ್ದು ಇದರ ತಪ್ಪಲಿನಲ್ಲಿ ವಿಜಯನಗರದ ಆರಂಭ ಕಾಲದಲ್ಲಿ ರಚಿತವಾದ ಚಂಪಕಧಾಮ ಅಥವಾ ಶಾಸನಗಳಲ್ಲಿ ಕರೆದಿರುವಂತೆ ದಾಮೋದರ ಪೆರುಮಾಳ್ ದೇವಾಲಯವಿದೆ. ಈಗ ಈ ಗ್ರಾಮದ ಮುಖ್ಯ ಆಕರ್ಷಣೆಯೆಂದರೆ ಈ ದೇವಾಲಯ, ಬೆಟ್ಟದ ಮೇಲಿರುವ ಸುವರ್ಣಮುಖಿ ತೀರ್ಥ ಮತ್ತು ರಾಷ್ಟ್ರೀಯ ಉದ್ಯಾನವನ.

ಬನ್ನೇರುಘಟ್ಟ ಪ್ರದೇಶವನ್ನು ಇವೆರಡೂ ಅಲ್ಲದೆ ಇನ್ನೊಂದು ದೃಷ್ಟಿಯಿಂದಲೂ ಗಮನಿಸಬಹುದಾಗಿದೆ. ಬಹುತೇಕ ಜನರ ಗಮನಕ್ಕೆ ಇವು ಬಂದಿರುವುದಿಲ್ಲ. ಇಲ್ಲಿನ ಚಂಪಕಧಾಮ ದೇವಾಲಯಲವು ಹೊಯ್ಸಳರ ಅಂತ್ಯಕಾಲ ಇಲ್ಲವೆ ವಿಜಯನಗರದ ಆರಂಭಕಾಲಕ್ಕೆ ಸೇರಿದ ಕಟ್ಟಡವಾಗಿದೆ. ಮುಂಬದಿಯ ಅಪೂರ್ಣವಾದ ಪ್ರವೇಶ ಗೋಪುರ, ಮತ್ತು ಎತ್ತರವಾದ ವೇದಿಕೆ ಮೇಲೆ ರಚಿತವಾಗಿರುವ ದೇವಾಲಯ ಮತ್ತು ದೇವಾಲಯಕ್ಕೆ ಹತ್ತುವ ಮೆಟ್ಟಲುಗಳು ಹುಟ್ಟುಗಲ್ಲುಗಳಿಂದ ರಚಿತವಾಗಿದ್ದು ಆಕರ್ಷಣೀಯವಾಗಿದೆ. ಈ ದೇವಾಲಯದ ಮುಂಬದಿಯ ನೇರಕ್ಕೆ ಬಿಸಿಲು ಮಾರಮ್ಮ ಮತ್ತು ಅವುಗಳ ಹಿಂಬದಿಯಲ್ಲಿ ಆತ್ಮಾಹುತಿ ಕಲ್ಲುಗಳಿವೆ. ಇವುಗಳ ಹಿಂದೆ ಹನುಮಂತರಾಯನ ದೇವಾಲಯವಿದೆ. ರಸ್ತೆಯ ಬಲಬದಿಗೆ ಸು. ೧೧ನೆಯ ಶತಮಾನಕ್ಕೆ ಸೇರಬಹುದಾದ ಎರಡು ವೀರಗಲ್ಲುಗಳಿವೆ. ಇಲ್ಲಿಂದ ಸಂಪಿಗೆ ಹಳ್ಳಿಗೆ ಹೋಗುವ ದಾರಿಯಲ್ಲಿ ಕಲ್ಲಿನಿಂದ ರಚಿತವಾದ ಮೂರು ಕೊಳಗಳಿವೆ. ಸಂಪಿಗೆ ಹಳ್ಳಿಯ ಊರ ಒಳಗೆ ಬೃಹತ್ ಶಿಲಾಯುಗದ ಸಮಾಧಿಯ ರಚನೆಯೊಂದು ಉಳಿದಿದೆ. ಅದಕ್ಕೆ ನೇರವಾಗಿ ಮನೆಯ ಹಿತ್ತಿಲೊಂದರಲ್ಲಿ ಹಾಳಾದ ಶಿಲಾ ಸಮಾದಿಯ ಎರಡು ತಲೆಕಲ್ಲುಗಳು ಕಾಣಬರುತ್ತವೆ.

ದೇವಾಲಯದ ಹಿಂಬದಿಗೆ ಬೆಟ್ಟವಿದ್ದು ಬೆಟ್ಟದ ವಾಯುವ್ಯಕ್ಕೆ ಶಾನುಬೋಗನ ಹಳ್ಳಿಗೆ ಹೋಗುವ ದಾರಿಯಲ್ಲಿ ಷರೀಫ್‌ಗಾರ್ಡನ್‌ನಲ್ಲಿ ಮತ್ತು ಅದರ ಪಕ್ಕದಲ್ಲಿ ನಿವೇಶನಗಳಾಗಿ ವಿಂಗಡಿಸಿರುವ ಸ್ಥಳದಲ್ಲಿ ಶಿಲಾಯುಗದ ಅನೇಕ ಸಮಾಧಿಗಳಿದ್ದು ಅವುಗಳಲ್ಲಿ ಬಹಳಷ್ಟು ಹಾಳಾಗಿವೆ. ಕೆಲವನ್ನು ಅದರಲ್ಲಿ ನಿಧಿಯಿದೆಯೆಂಬ ತಪ್ಪುಕಲ್ಪನೆಯಿಂದ ಸ್ಫೋಟಿಸಿರುತ್ತಾರೆ. ಒಂದೆರಡು ನಿಲವು ಕಲ್ಲುಗಳೂ ಇಲ್ಲಿ ಕಂಡುಬರುತ್ತವೆ. ಕೆಲವು ಸಮಾಧಿಗಳು ಸುಸ್ಥಿತಿಯಲ್ಲವೆ.

ಚಂಪಕಧಾಮ ಸ್ವಾಮಿ ದೇವಾಲಯದ ಹಿಂಬದಿಗೆ ಸುವರ್ಣಮುಖಿ ತೀರ್ಥದ ಮಾರ್ಗವಾಗಿ ಬೂತೇನ ಹಳ್ಳಿಗೆ ಕಾಲು ದಾರಿಯೊಂದು ಸಾಗುತ್ತದೆ. ಬೆಟ್ಟದ ಮೇಲೆ ದೀಪದ ಕಂಬ, ನರಸಿಂಹಸ್ವಾಮಿ ದೇವಾಲಯ ಮತ್ತು ಅಪೂರ್ಣ ದೇವಾಲಯವೊಂದು ಕಾಣಬರುತ್ತದೆ. ದೀಪದ ಕಂಬದ ದಕ್ಷಿಣಕ್ಕೆ ಶಿಲಾಯುಗದ ಕಾಲದ ಒಂದು

* ನಂ. ೬೩, ೧ನೆಯ ಅಡ್ಡರಸ್ತೆ, ಲಕ್ಕಸಂದ್ರ, ಬೆಂಗಳೂರು-೫೬೦೦೩೦

ಮಂಟಪದ ರಚನೆ ಇದೆ. ಬೆಟ್ಟವಿಳಿದು ಸುವರ್ಣ ಮುಖಿಯ ಕಡೆಗೆ ಹೆಜ್ಜೆ ಹಾಕಿದ ಕೂಡಲೇ ಸಾವಿರಾರು ಸಣ್ಣ ಪುಟ್ಟ ಕಲ್ಲಿನ ಗುಡ್ಡೆಗಳು ಕಾಣಬರುತ್ತವೆ. ಇವು ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದಿಂದಲೂ ರಚಿತವಾಗಿರುವ ಅವಶೇಷಗಳು. ಅನೇಕ ರಚನೆಗಳು ಬಿದ್ದಿರುತ್ತವೆ. ಆ ಅವಶೇಷಗಳನ್ನೇ ಎತ್ತಿತಂದು ಬೇರೊಂದು ಕಲ್ಲಗುಡ್ಡೆ ನಿರ್ಮಿತವಾಗುತ್ತದೆ. ಇವುಗಳ ಗಾತ್ರವೂ ನಾನಾ ರೀತಿ ಅಂಗೈ ಅಗಲದಿಂದ ಹಿಡಿದು, ಇಬ್ಬರು ಅಥವಾ ಮೂವರು ಮಲಗಿಕೊಳ್ಳ ಬಹುದಾದಷ್ಟು ವಿಸ್ತಾರವಾಗಿರುತ್ತವೆ. ಈ ಕಲ್ಲ ಗುಡ್ಡೆಗಳನ್ನು ಗಮನಿಸುತ್ತಾ ಮುಂದೆ ಸಾಗಿದರೆ ಏಳು ಸುತ್ತಿನ ಕೋಟೆಯೆಂಬ ರಚನೆ ಕಂಡುಬರುತ್ತದೆ. ಇದರ ಬಳಿಯೂ ಸಾವಿರಾರು ಕಲ್ಲಗುಡ್ಡೆಗಳು ಕಾಣ ಬರುತ್ತವೆ. ಏಳುಸುತ್ತಿನ ಕೋಟೆಯೆಂಬುದು ಸಣ್ಣ ಕಲ್ಲುಗಳನ್ನು ಸಾಲಾಗಿ ಜೋಡಿಸಿ ಏಳುಸುತ್ತುಗಳನ್ನು ರಚಿಸಿದೆ. ಈ ಸುತ್ತುಗಳಲ್ಲಿ ಯಾವುದಾದರೂ ಒಂದು ಕಡೆಗೆ ಪ್ರವೇಶಿಸಿ ಏಳು ಪ್ರದಕ್ಷಣೆಗಳನ್ನು ಮಾಡಿ ಇನ್ನೊಂದು ಕಡೆಯಿಂದ ಹೊರಗೆ ಬರಬಹುದು. ಇದರ ಮುಂದೆ ಇರುವ ಮಂಟಪ ನೂತನದ್ದಾದರೂ ಅದಕ್ಕೆ ಬಳಸಿರುವ ತಲೆಕಲ್ಲು (ಮುಚ್ಚಿಗೆ ಕಲ್ಲು) ಒಂದೇ ಆಗಿದ್ದು ಅದು ಶಿಲಾಯುಗದ ಕಾಲದ್ದಾಗಿದೆ. ಇಲ್ಲಿಂದ ಮುಂದೆ ಸಾಗಿದರೆ ಸುವರ್ಣಮುಖಿತೀರ್ಥ/ಸ್ನಾನ ಘಟ್ಟ ಕಾಣ ಬರುತ್ತದೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಹಿಂದೆ ಇದ್ದಿರಬಹುದಾದ ರಚನೆಯನ್ನು ಕಿತ್ತು ಹೊಸದಾಗಿ ಸೋಪಾನ ರಚನೆಯನ್ನು ಮಾಡಿರುತ್ತಾರೆ. ಮಳೆಗಾಲದಲ್ಲಿ ಹರಿದು ಬೇಸಿಗೆಯಲ್ಲಿ ನಿಂತ ನೀರಾಗುವ ಈ ಕೊಳ ಬಹುಕಾಲದಿಂದಲೂ ಈ ಪ್ರದೇಶದ ಕೇಂದ್ರ ಸ್ಥಾನವಾಗಿದ್ದಿರಬೇಕು. ಇಲ್ಲಿಂದ ಮುಂದಕ್ಕೆ ದಾರಿಯು ಬೆಟ್ಟದ ತಪ್ಪಲಲ್ಲಿರುವ ಬೂತೇನ ಹಳ್ಳಿಗೆ ಹೋಗುತ್ತದೆ.

ಬನ್ನೇರುಘಟ್ಟದ ಸುತ್ತುಮುತ್ತ ಇರುವ ಶಿಲಾ ಯುಗದ ಸಮಾದಿಗಳನ್ನು ಪರಿಶೀಲಿಸಿದಾಗ ಇವೆಲ್ಲವೂ ಬೃಹತ್ ಶಿಲಾಯುಗದ ಕಾಲಕ್ಕೆ ಸೇರಿದ್ದವೆಂಬುದನ್ನು ದೃಢಪಡಿಸುತ್ತವೆ. ಸಂಪಿಗೆ ಹಳ್ಳಿಯಲ್ಲಿನ ಸಮಾಧಿಯು ಕಲ್ಲುಗಳಿಂದ ಮಾಡಿದ ಕಲ್ಲು ತೊಟ್ಟಿಯಂತಿದ್ದು ಇದರ ಮೇಲಿನ ಮುಚ್ಚಳದ ಕಲ್ಲು ಸು. ೫೦ ಸೆಂ ಮೀ. ದಪ್ಪ ೪. ಮೀಟರ್ ಅಗಲ ಮತ್ತು ೫.೫ ಮೀಟರ್ ಉದ್ದವಾಗಿದೆ. ಸುತ್ತಲೂ ಮಣ್ಣಿನ ಕೊರೆತದಿಂದ ಸ್ವಲ್ಪ ಶಿಥಿಲವಾಗಿದೆ. ಮುಚ್ಚಳದ ಕಲ್ಲು ದಕ್ಷಿಣದಿಕ್ಕಿಗೆ ಉದ್ದಕ್ಕೆ ಮುರಿದಿದೆ. ಇದರ ಸುತ್ತಲೂ ಬಯಲಿದೆ. ಇದೇ ತರಹದ ಸಮಾದಿಗಳು ಇಲ್ಲಿ ಸಾಕಷ್ಟು ಇದ್ದಿರ ಬೇಕು. ಆದರೆ ಮೇಲೆ ಹೇಳಿದುದು ಬಿಟ್ಟರೆ ಉಳಿದಂತೆ ರಚನೆಗಳು ಹಾಳಾಗಿವೆ. ಇದರ ಸಮೀಪದ ಮನೆ ಯೊಂದರ ಹಿತ್ತಲಿನಲ್ಲಿ ಮುಚ್ಚಳದ ಕಲ್ಲುಗಳು ಎರಡು ಕಾಣಬರುತ್ತವೆ. ಇವುಗಳು ಭಾಗಶಃ ಹಾಳಾಗಿವೆ. ಈ ನ್ಯಾಷನಲ್ ಪಾರ್ಕ್‌ನೊಳಗೆ ಬೂತೋನಹಳ್ಳಿಗೆ ಹೋಗುವ ದಾರಿಯಲ್ಲಿನ ಕೊಳದಲ್ಲಿ ಕೆಲವು ಆಕಾರ ರಹಿತ ಬೃಹತ್ ಚಪ್ಪಡಿಗಳು ಕಾಣಬರುತ್ತದೆ. ಇವು ಯಾವುದೊ ಪ್ರಾಗೈತಿಹಾಸಿಕ ಸಮಾಧಿಯೊಂದರ ಚಪ್ಪಡಿಗಳಾಗಿದ್ದವು. ಇವನ್ನು ಬಿಟ್ಟರೆ ಉಳಿದಂತೆ ಅವಶೇಷಗಳು ಇಲ್ಲಿ ಕಾಣಬರುವುದಿಲ್ಲ.

ಶ್ಯಾನುಬೋಗನ ಹಳ್ಳಿಗೆ ಹೋಗುವ ದಾರಿಯಲ್ಲಿ ಷರೀಫ್ ಗಾರ್ಡನ್ ಬಳಿ ಇರುವ ಪ್ರಾಗೈತಿಹಾಸಿಕ ಗೋರಿಗಳು ಬೃಹತ್ ಶಿಲಾಯುಗದ ಕಾಲಕ್ಕೆ ಸೇರಿದ್ದರೂ ಈ ಪ್ರದೇಶದ ಇತರೆಡೆಗಳಲ್ಲಿ ಕಾಣುವಂತೆ ವೃತ್ತಾಕಾರವಾದ ಕಪ್ಪು ಉರುಟುಗಲ್ಲುಗಳನ್ನು ಹೊಂದಿರುವುದಿಲ್ಲ. ಅಲ್ಲಿಯೇ ದೊರೆಯುವ ಚಪ್ಪಡಿಗಲ್ಲು ಗಳನ್ನೇ ವೃತ್ತಾಕಾರವಾಗಿ ಬಳಸಿದೆ. ಅನೇಕ ಸಮಾಧಿ ಗಳು ತೆರೆದಿರುವುದರಿಂದ ಅವುಗಳ ಒಳರಚನೆಯನ್ನು ಕೂಲಂಕಷವಾಗಿ ಗಮನಿಸಬಹುದಾಗಿದೆ. ಈ ಸಮಾಧಿ ಗಳು ಒಳರಚನೆಯಲ್ಲಿ ಆಯತಾಕಾರವಾಗಿದ್ದು, ನಾಲ್ಕೂ ಕಡೆ ಚಪ್ಪಡಿಗಲ್ಲುಗಳನ್ನು ಜೋಡಿಸಿ ತೊಟ್ಟಿಯಂತೆ ರಚಿತವಾಗಿವೆ. ಪೂರ್ವಭಾಗದ ಕಲ್ಲಿನಲ್ಲಿ ಸ್ವಲ್ಪ ಭಾಗವನ್ನು ಅರ್ಧ ಚಂದ್ರಾಕಾರವಾಗಿ ಕೊರೆದಿದೆ. ಬಳಸಿರುವ ಚಪ್ಪಡಿಗಳು ತೆಳುವಾಗಿವೆ. ಮತ್ತು ಆಳತೆಗೆ ಕತ್ತರಿಸಿದಂತೆ ಭಾಸವಾಗುತ್ತದೆ. ಮೇಲಿನ ಮುಚ್ಚಳದ ಕಲ್ಲು ಸಹ ಸ್ಥಳೀಯವಾಗಿ ದೊರೆಯುವ ಕಲ್ಲಾಗಿದ್ದು ಸುತ್ತಲೂ ತೆಳುವಾಗಿ ಮಧ್ಯೆ ಮಂದ ವಾಗಿರುವುದು ಕಂಡುಬರುತ್ತದೆ. ಇಲ್ಲಿನ ಅನೇಕ ಸಮಾಧಿಗಳು ಹಾಳಾಗಿದ್ದು ಹಾಳಾಗದೆ ಉಳಿದಿರುವ ಸಮಾದಿಗಳ ಮೇಲೆ ಸಣ್ಣ ಸಣ್ಣ ಕಲ್ಲುಗಳ ರಾಶಿ ಕಂಡು ಬರುತ್ತದೆ. ಈ ಸಮಾಧಿಗಳ ರಚನೆಗಳ ಮಧ್ಯೆ ಮತ್ತು ಆಕಡೆ ಈಕಡೆಗಳಲ್ಲಿ ಕೆಲವು ಕೋಡುಗಲ್ಲುಗಳಿವೆ.

ಇವುಗಳಲ್ಲಿ ದಾರಿಕಡೆ ಇರುವ ಕಲ್ಲು ಹಾವಿನಂತೆ ಬಾಗಿರುವುದರಿಂದ ಇದಕ್ಕೆ ಇಂದಿಗೂ ಪೂಜೆ ಮಾಡುತ್ತಿದ್ದಾರೆ. ಮಧ್ಯದಲ್ಲಿ ಮತ್ತು ಅಂತ್ಯದಲ್ಲಿರುವ ಕಲ್ಲುಗಳ ಬಳಿ ಅನೇಕ ಕುಳಿಗಳನ್ನು ಬಿಡಿಸಿರುತ್ತಾರೆ. ಅಂತ್ಯದ ಕಲ್ಲು ೮ ಎತ್ತರವಾಗಿದ್ದು ಅದರ ಪಕ್ಕದಲ್ಲೂ ಅನೇಕ ಕುಳಿಗಳನ್ನು ಕೆತ್ತಿರುತ್ತಾರೆ. ಹೀಗಾಗಿ ಈ ಸ್ಥಳವು ಪ್ರಾಗೈತಿಹಾಸಿಕ ಸಮಾಧಿಗಳ ಸ್ಥಳ ವಾಗಿತ್ತೆಂಬುದನ್ನು ಇಲ್ಲಿನ ಅವಶೇಷಗಳು ಸಾಬೀತು ಪಡಿಸುತ್ತವೆ.

ಚಂಪಕದಾಮಸ್ವಾಮಿ ದೇವಾಲಯದಿಂದ ಸುವರ್ಣಮುಖಿ ತೀರ್ಥಕ್ಕೆ ಹೋಗುವ ದಾರಿಯಲ್ಲಿ ದೊಡ್ಡ ಮತ್ತು ಚಿಕ್ಕದಾದ ಶಿಲಾ ಮಂಟಪಗಳು ಇರುವ ಬಗ್ಗೆ ಹಿಂದೆ ಹೇಳಿದೆ. ಈ ಶಿಲಾ ಮಂಟಪಗಳು ಬನ್ನೇರುಘಟ್ಟದ ಬೆಟ್ಟದ ಮೇಲಿನಿಂದ ಪ್ರಾರಂಭವಾಗಿ ಬೂತೇನಹಳ್ಳಿ ಕಡೆಗೆ ಬೆಟ್ಟದ ಇಳಿಜಾರು ಪ್ರಾರಂಭ ವಾಗುವ ವರೆಗೆ ಕಂಡು ಬರುತ್ತವೆ. ಅಂದರೆ ಸು. ೩ ಕಿಮಿ. ಹರವಿನಲ್ಲಿ ಕಾಣಬರುತ್ತವೆ. ಈ ರಚನೆಗಳು ಚಂಪಕಧಾಮಸ್ವಾಮಿ ದೇವಾಲಯದ ಬಳಿಯಲ್ಲಾಗಲಿ ಬೂತೇನಹಳ್ಳಿಯ ಬಳಿಯಲ್ಲಾಗಲಿ ಕಾಣಬರುವುದಿಲ್ಲ. ಬೆಟ್ಟದ ಮೇಲಿನ ಬಯಲಿನಲ್ಲಿ ಮಾತ್ರ ಕಾಣಬರುತ್ತವೆ. ಇಲ್ಲಿನ ಕಲ್ಲು ಗುಪ್ಪೆಗಳ ಸ್ಥೂಲ ರಚನೆಯೆಂದರೆ ಮೂರು ಕಲ್ಲುಗಳನ್ನು ಇಟ್ಟು ಅದರ ಮೇಲೆ ಮತ್ತೊಂದು ಕಲ್ಲನ್ನು ಇಟ್ಟಿರುವುದು. ಇವು ಎಷ್ಟೇ ದೊಡ್ಡ ರಚನೆಗಳಾಗಿದ್ದರೂ ಬಹುತೇಕ ಇದೇ ನಿಯಮವನ್ನು ಪಾಲಿಸಿರುತ್ತಾರೆ. ಬನ್ನೇರುಘಟ್ಟದ ಬೆಟ್ಟದ ಮೇಲಿನ ದೀಪದ ಕಂಬದ ದಕ್ಷಿಣಕ್ಕಿರುವ ಶಿಲಾ ಮಂಟಪದ ರಚನೆ ಹೀಗೆಯೇ ಇದೆ. ಉದ್ದಾವಾದ ಚಪ್ಪಡಿಗೆ ಮೂರು ಕಡೆ ಒಂದರ ಮೇಲೊಂದರಂತೆ ಕಲ್ಲುಗಳನ್ನು ಜೋಡಿಸಿ ಮೂರು ಕಂಬಗಳನ್ನು ರಚಿಸಿ ಅದರ ಮೇಲೆ ಅಗಲವಾದ ಆದರೆ ತ್ರಿಕೋಣಾಕಾರದ ರಚನೆಯನ್ನು ಹೋಲುವ ಚಪ್ಪಡಿಯನ್ನು ಇಟ್ಟಿರುತ್ತಾರೆ. ಕಲ್ಲಿನ ತೋಕೆ (ಬಾಲ) ಬರುವ ಕಡೆ ಒಂದು ಕಾಲನ್ನೂ ತಲೆಯ ಕಡೆ (ಅಗಲವಾಗಿರುವ) ಎರಡು ಕಾಲುಗಳನ್ನು ಇಟ್ಟಿರುತ್ತಾರೆ. ಈ ಬೆಟ್ಟದ ಮೇಲೆ ಕಾಣುವ ಎಲ್ಲಾ ದೊಡ್ಡ ರಚನೆಗಳಲ್ಲಿ ಈ ಬಗೆಯ ಅಂತರ್ ರಚನೆಗಳನ್ನು ಕಾಣಬಹುದಾಗಿದೆ. ಇಲ್ಲಿನ ದೊಡ್ಡ ರಚನೆಗಳು ಬನ್ನೇರುಘಟ್ಟದ ಬೆಟ್ಟದ ಸಾಲಿನ ಮೂರು ಗುಡ್ಡಗಳಲ್ಲಿ ಕಾಣಬರುತ್ತದೆ. ಕಾಲದ ರಚನೆಯ ದೃಷ್ಟಿಯಿಂದ ಬೃಹತ್ ರಚನೆಗಳು ಪ್ರಾಚೀನವಾದವುಗಳಾಗಿದ್ದು ತೀರಾ ಸಣ್ಣವು ಇತ್ತೀಚಿನವು. ಪ್ರಾಚೀನ ರಚನೆಗಳ ಅನುಕರಣೆಗಳು ಈ ಸಣ್ಣ ರಚನೆಗಳಾಗಿವೆ. ಇವೆರಡೂ ಮಧ್ಯದ ರಚನೆಗಳು ವಿವಿಧಗಾತ್ರದಲ್ಲಿ ಕಾಣಬರುತ್ತವೆ.

ಮೇಲಿನ ರಚನೆಗಳ ಮಧ್ಯದಲ್ಲಿ ಏಳುಸುತ್ತಿನ ಕೋಟೆಯೆಂಬ ರಚನೆಯಿದೆ. ಪಶ್ಚಿಮಕ್ಕೆ ಮುಖ ಮಾಡಿರುವ ಈ ರಚನೆ ಮೊದಲು ಅಲ್ಲಲ್ಲಿ ಕಲ್ಲುಗಳನ್ನು ನೆಟ್ಟು ನಡೆಯುವ ದಾರಿಯನ್ನು ಸೂಚಿಸಿತ್ತು. ಮುಂದೆ ನೆಟ್ಟ ಕಲ್ಲುಗಳ ಮಧ್ಯೆ ಕಲ್ಲುಗಳನ್ನಿಟ್ಟು ಗೆರೆಗಳನ್ನು ಸ್ಪಷ್ಟವಾಗಿಸಿರುತ್ತಾರೆ. ಈ ಬಗೆಯ ರಚನೆಗಳು ಶಿಲಾಯುಗದ ಸಂಸ್ಕೃತಿಯಿದ್ದ ಸ್ಥಳಗಳ ಬಳಿಯಲ್ಲಿ ಬೆಟ್ಟದ ಇಳಿಜಾರುಗಳಲ್ಲಿ ಕಂಡು ಬರುತ್ತದೆ. ಹಂಪೆ ಯಲ್ಲಿಯೂ ಈ ರಚನೆ ಕಾಣ ಬರುತ್ತದೆ. ಇಂತಹ ಕೋಟೆಗಳು ಇದೊಂದೇ ಕಡೆ ಅಲ್ಲದೆ ಚಿತ್ರದುರ್ಗದ ಬಳಿ ದೊಡ್ಡ ಸಿದ್ದವ್ವನಹಳ್ಳಿ ಬಳಿ ಕೊಳೆಗಳ ಬಳಿ, ದೇವಾಲಯಗಳ ಬಳಿ ಕಾಣಬರುತ್ತವೆ. ಬೇರೆಡೆ ಕಾಣಬರುವ ರಚನೆಗಳಿಗೂ ಇದಕ್ಕೂ ಸ್ವಲ್ಪ ವ್ಯತ್ಯಾಸ ವಿದ್ದು ಬೇರೆಯವುಗಳಲ್ಲಿ ಒಳಗೆ ಪ್ರವೇಶಿಸಿದರೆ ಹೊರಗೆ ಬರಲು ಆಗುವುದಿಲ್ಲ. ಆದರೆ ಇದರಲ್ಲಿ ಹೊರಗೆ ಬರಲು ಸಾಧ್ಯವುಂಟು. ಹೀಗಾಗಿ ಒಂದೆರಡು ಗೆರೆಗಳು ಹಾಳಾಗಿವೆ. ಕೆಲವರು ಇದನ್ನು ಮಹಾಭಾರತದ ಅಭಿಮನ್ಯುವಿನ ಪದ್ಮವ್ಯೂಹದ ಪ್ರವೇಶಕ್ಕೆ ನಂಟು ಹಾಕುವುದುಂಟು. ಮೇಲು ನೋಟದಲ್ಲಿ ಇದನ್ನು ಸತ್ಯವೆಂದು ನಂಬಿದರೂ ಇದು ಅಲ್ಲವೆಂದೆನಿಸುತ್ತದೆ.

ಈ ಬೆಟ್ಟದಲ್ಲಿ ಕಾಣಬರುವ ಶಿಲಾಮಂಟಪಗಳು ಶಿಲಾಯುಗದ ಜನರು ತಮ್ಮ ಹಿರಿಯರ ನೆನಪಿನಲ್ಲಿ ರಚಿಸಿದವುಗಳಾಗಿರಬೇಕು. ಇಲ್ಲಿ ಬಹು ಹಿಂದೆಯೇ ನಾಗರೀಕತೆಯ ವಸತಿಯೊಂದಿದ್ದು ಸತ್ತವರ ನೆನಪಿನಲ್ಲಿ ಇಲ್ಲಿನ ಬೆಟ್ಟಗಳ ಮೇಲೆ ಸಮಾಧಿಗಳನ್ನು ನೆನಪಿಸು ವಂತಹ ರಚನೆಗಳನ್ನು ರಚಿಸಿರುವರೆಂದು ಊಹಿಸ ಬಹುದಾಗಿದೆ. ಸದಾ ನೀರಿನ ಆಸರೆಯಿದ್ದ

ಈ ಪ್ರದೇಶವು ಪ್ರಾಚೀನನಾಗರೀಕತೆಯ ನೆಲೆಯಾಗಿದ್ದು ದರಲ್ಲಿ ಸಂಶಯವಿಲ್ಲ. ಹೀಗಾಗಿ ಮೂರು ಬಿಡಿ ಬಿಡಿ ಕಲ್ಲುಗಳನ್ನು ಜೋಡಿಸಿ ಮೂರು ಕಂಬಗಳನ್ನು ಸುಮಾರು ಎರಡು ಅಡಿಯಷ್ಟು ಎತ್ತರ ಮಾಡಿ ಅದರ ಮೇಲೆ ತ್ರಿಕೋನಾಕಾರವನ್ನು ಹೋಲುವ ಚಪ್ಪಡಿ ಯನ್ನು ಇಡುತ್ತಿದ್ದರು. ಮುಂದೆ ಅದರ ಸುತ್ತಲೂ ಕಲ್ಲುಗಳನ್ನು ಜೋಡಿಸಿ ಮುಚ್ಚಿ ಸಣ್ಣ ಕಲ್ಲುಗಳ ರಾಶಿಯನ್ನು ಅದರ ಸುತ್ತಲೂ ಹಾಕುತ್ತಿದ್ದರು. ಈಗ ಅನೇಕ ಶಿಲಾ ಮಂಟಪಗಳು ಹಾಳಾಗಿ ಮುಚ್ಚಿಗೆಯ ಕಲ್ಲುಗಳು ಮಾತ್ರ ನಿಂತಿವೆ. ಕಾರಣಾಂತರಗಳಿಂದ ಈ ನೆಲೆಯನ್ನು ಬಿಟ್ಟ ಜನ ತಮಗೆ ಕಷ್ಟ ಬಂದಾಗ ಅಥವಾ ಇತರೆ ಸಂದರ್ಭಗಳಲ್ಲಿ ತಮ್ಮ ಹಿರಿಯರು ನೆಲೆಸಿದ್ದ ಈ ಸ್ಥಳಕ್ಕೆ ಬಂದು ಸುವರ್ಣಮುಖಿ ತೀರ್ಥ ದಲ್ಲಿ ಸ್ನಾನ ಮಾಡಿ ತಮ್ಮ ಹಿರಿಯರ ? ನೆನಪಿನಲ್ಲಿ ಮೂರು ಕಲ್ಲುಗಳನ್ನಿಟ್ಟು ಅದರ ಮೇಲೆ ಒಂದು ಕಲ್ಲನ್ನಿರಿಸಿ ಮಂಟಪದಂತಹ ರಚನೆಯನ್ನು ನಿರ್ಮಿಸಿ ಅದರಲ್ಲಿ ಒಂದೆರಡು ಸಣ್ಣ ಕಲ್ಲುಗಳನ್ನಿರಿಸಿ ಪೂಜಿಸಿ ಅಲ್ಲಿನ ಏಳು ಸುತ್ತಿನ ಕೋಟೆಯನ್ನು ಪ್ರದಕ್ಷಿಸಿ ಅಲ್ಲಿನ ಮರ ಅಥವಾ ಗಿಡವೊಂದಕ್ಕೆ ತೊಟ್ಟಿಲನ್ನು ಕಟ್ಟಿ ಇಷ್ಟಾರ್ಥ ಸಿದ್ಧಿ ಅಥವಾ ಮಕ್ಕಳಿಗಾಗಿ ಪ್ರಾರ್ಥಿಸುತ್ತಾರೆ. ಇಂತಹ ರಚನೆಗಳು ನೀರಿನ ಆಸರೆ ಇರುವ ಬಳಿ ಬೆಟ್ಟಗಳ ಇಳಿಜಾರಿನಲ್ಲಿ ಕಾಣಬರುತ್ತವೆ. ಹಂಪೆ ಯಲ್ಲಿಯೂ ಇಂತಹರ ಚನೆಗಳನ್ನು ರಚಿಸುವುದನ್ನು ಇಂದಿಗೂ ಗಮನಿಸಬಹುದು. ಈ ಏಳುಸುತ್ತಿನ ಕೋಟೆಯೆಂಬುದು ಕೋಟೆ ಎಂಬ ಅರ್ಥ ಮಾಡುವುದಕ್ಕಿಂತ ಯಾವುದೇ ಗೂಢ ರಚನೆಯೆಂದು ಪರಿಗಣಿಸಿದಲ್ಲಿ ಇದನ್ನು ಇಷ್ಟಾರ್ಥಸಿದ್ಧಿಯ/ಕಷ್ಟಗಳ ಪರಿಹಾರ ಮಾಡುವ ಯಂತ್ರವೊಂದಾಗಿರಬೇಕು. ಇಂತಹ ಯಂತ್ರಗಳು ಕೊಳಗಳ ಬಳಿ ದೇವಾಲಯಗಳ ಬಳಿ ಕಾಣಬರುವುದೂ ಇದೇ ಕಾರಣಕ್ಕೆ ಇರಬೇಕು. ಚಿತ್ರದುರ್ಗಜಿಲ್ಲೆಯಲ್ಲಿ ಈ ಬಗೆಯರ ಚನೆಗಳು ಕಾಣ ಬರುತ್ತವೆ. ಬಿಜಾಪುರ ಪ್ರದೇಶದಲ್ಲಿ ಹೆಂಗೆ ಕಷ್ಟನಾದಾಗ ವೀಳೆಯದೆಲೆಯ ಮೇಲೆ ಇಂತಹ ಚಕ್ರಬಿಂಬವನ್ನು ಬರೆದು ಅದನ್ನು ತೋರಿಸಿದಲ್ಲಿ ಹೆಂಗೆ ಸುಲಭ ವಾಗುವುದೆಂಬ ನಂಬಿಕೆ ಇದೆ. (ಕರ್ನಾಟಕ ಜಾನಪದ ಚಿತ್ರಕಲೆ ಪು. ೩೬೭ ಎಸ್.ಸಿ. ಪಾಟೀಲ ಅಪ್ರಿಕಟಿತ ಪಿ.ಎಚ್.ಡಿ. ಕ.ವಿ.ವಿ. ೧೯೯೦.) ಹೀಗಾಗಿ ಇದನ್ನು ಕಷ್ಟ ಪರಿಹಾರ ಯಂತ್ರವೆಂದು ಭಾವಿಸಬಹುದು. ಪ್ರಾಚೀನ ನೆಲೆಯಾದ ಬನ್ನೇರುಘಟ್ಟ ದಲ್ಲಿ ಹಿರಿಯರ ಪೂಜೆ ಇಂದಿಗೂ ಈ ರೀತಿ ಉಳಿದು ಬಂದಿರುವುದನ್ನು ಕಾಣಬಹುದಾಗಿದೆ.

ಬನ್ನೇರುಘಟ್ಟದಲ್ಲಿನ ಸಂಸ್ಕೃತಿಗೆ ಕಾರಣರಾದ ಜನವಸತಿ ಯಾವುದಾಗಿದ್ದಿರಬಹುದು. ಇಲ್ಲಿನ ಜನರ ಮುಖ್ಯ ಕಸಬೇನಾಗಿದ್ದಿರಬಹುದು ಎಂಬುದನ್ನು ಗಮನಿಸುವುದು ಸೂಕ್ತ. ಇಲ್ಲಿನ ಸುವರ್ಣ ಮುಖಿ ತೀರ್ಥವನ್ನು ಕೇಂದ್ರವಾಗಿಟ್ಟುಕೊಂಡಲ್ಲಿ ಇದರ ಪಶ್ಚಿಮಕ್ಕೆ ಬೂತೇನ ಹಳ್ಳಿಯೂ, ಉತ್ತರಕ್ಕೆ ಕ್ಯಾಸರ ಗುಪ್ಪೆಯೂ, ವಾಯುವ್ಯಕ್ಕೆ ಶಾನುಬೋಗರ ಹಳ್ಳಿ, ಕುಲುಮೆ ಪಾಳ್ಯಗಳೂ, ಆಗ್ನೇಯಕ್ಕೆ ಕಸವರಹಳ್ಳಿಯೂ ನೈರುತ್ಯಕ್ಕೆ ವಾಜರ ಹಳ್ಳಿ, ಇದರ ದಕ್ಷಿಣಕ್ಕೆ ಕಾಳೇಶ್ವರಿ ಎಂಬ ಸ್ಥಳ, ದಕ್ಷಿಣಕ್ಕೆ ರಾಗಿಹಳ್ಳಿ ಬೆಟ್ಟ ಮುಂತಾದ ಊರುಗಳು ಕಾಣಬರುತ್ತವೆ. ಈ ಊರುಗಳ ಸ್ಥಳ ನಾಮಗಳು ಒಂದಲ್ಲ ಒಂದು ಲೋಹದ ಸಂಬಂಧವನ್ನು ಹೊಂದಿರುವುದು ಗಮನಾರ್ಹ. ಬೂತೇನ ಹಳ್ಳಿಯು ಹಳೆಯ, ಮಧ್ಯಕಾಲದ, ಹಾಗೂ ಈಗಿನ ನಿವೇಶನದ ಮೂರು ಸ್ಥಳಗಳನ್ನು ಹೊಂದಿದ್ದು ಮೂರು ಸ್ಥಳ ಗಳಲ್ಲಿಯೂ ಲೋಹವನ್ನು ಕರಗಿಸಿದ ಕಿಟ್ಟದ ಕಲ್ಲುಗಳು ದೊರೆಯುತ್ತವೆ (ಈಗ ಇಲ್ಲಿ ಯಾರೂ ಲೋಹಗಾರರಿಲ್ಲ ವೆಂಬುದು ಗಮನಾರ್ಹ) ಕಾಸರಗುಪ್ಪೆ ಕಂಚಿನ ಸಂಬಂಧ ವನ್ನೂ, ಕುಲುಮೆ ಪಾಳ್ಯ ಲೋಹವನ್ನು ಕರಗಿಸುವ ಸಂಬಂಧವನ್ನೂ, ಕಸವರ ಹಳ್ಳಿ ಚಿನ್ನದ ಸಂಬಂಧ ವನ್ನೂ, ವಾಜರ ಹಳ್ಳಿ ಲೋಹಗಾರರ ನೆಲೆಯನ್ನೂ, ಕಾಳೇಶ್ವರಿ ಲೋಹಗಾರರ ದೈವದ ನೆಲೆಯನ್ನೂ, ರಾಗಿ ಹಳ್ಳಿ ತಾಮ್ರದ ಸಂಬಂಧವನ್ನೂ ಹೊಂದಿವೆ. ಇವೆಲ್ಲದರ ಕೇಂದ್ರವಾಗಿ ಈ ಬನ್ನೇರುಘಟ್ಟವಿತ್ತು. ಹೀಗಾಗಿ ಗಣಿಗಾರರು ಇಲಿ ನೆಲೆಸಿದ್ದು ಮುಂದೆ ಬೇರೆ ಬೇರೆ ಕಡೆ ಚದುರಿರಬಹುದು. ಇದು ಮುಖ್ಯವಾಗಿ ಚಿನ್ನದ ಗಣಿಗಾರಿಕೆಯ ಕೇಂದ್ರವಾಗಿತ್ತು.

ಬನ್ನೇರುಘಟ್ಟದ ಹೆಸರಿನ ಮೂಲವೂ ಇದನ್ನು ಸಮರ್ಥಿಸುತ್ತದೆ. ಈಗ ಬಳಕೆಯಲ್ಲಿ ಇದನ್ನು ಬನ್ನೇರುಘಟ್ಟವೆಂದರೂ ಶಾಸನಗಳಲ್ಲಿ ಇದನ್ನು

ಬನ್ನೂರುಘಟ್ಟವೆಂದು ಕರೆದಿರುತ್ತಾರೆ. ಸಂಸ್ಕೃತೀಕರಣ ಮಾಡಿದಾಗ ಇದನ್ನು ಸುವರ್ಣಮುಖಿ ತೀರ್ಥವೆಂದು ಕರೆದಿರುತ್ತಾರೆ. ಕ.ವೆಂ. ರಾಜಗೋಪಾಲರು ಇದರ ನಿಷ್ಪತ್ತಿಯನ್ನು ವಹ್ನಿಯೂರು ಘಟ್ಟವೆಂದು ಇದರಿಂದಲೇ ಬನೂರು-ಬನ್ನೇರು ಆಯಿತೆಂದು ಹೇಳಿ ಈ ಕ್ಷೇತ್ರವನ್ನು ತಿಗಳರಿಗೆ ಅಥವಾ ವಹ್ನಿಕುಲ ಕ್ಷತ್ರಿಯರ ಕ್ಷೇತ್ರವೆಂಬುದಾಗಿ ತಿಳಿಸಿರುತ್ತಾರೆ. ಆದರೆ ಕೂಲಂಕಷವಾಗಿ ಪರಿಶೀಲಿಸಿದಾಗ ಸ್ಥಳೀಯರು ಈ ಹೆಸರನ್ನು ಸಂಸ್ಕೃತೀಕರಣಗೊಳಿಸುವಾಗ ಸರಿಯಾದಅರ್ಥವನ್ನು ಗ್ರಹಿಸಿರುತ್ತಾರೆಂದು ಭಾವಿಸಬಹುದು ಅಂದರೆ ಬನ್ನೇರು-ಬನ್ನೂರು-ಪೊನ್ನೂರು ಸುವರ್ಣಾವತಿ ಎಂಬುದಾಗಿರಬೇಕು. ಪೊನ್ನೂರು ಎಂಬುದು ಸ್ಪಷ್ಟವಾಗಿ ಚಿನ್ನವನ್ನು ನಿರ್ದೇಶಿಸುತ್ತದೆ. ಈ ಪೊನ್ನೂರಿನ ಕೊಳವೇ ಪೊನ್ನೂರುಘಟ್ಟವಾಗಿದ್ದು ಈಗಿನ ಬನ್ನೇರುಘಟ್ಟವಾಗಿದೆ. ಚಿನ್ನದ ಅದಿರು ಅಥವಾ ಚಿನ್ನದ ಕೆಲಸ ಮಾಡುತ್ತಿದ್ದ ಸ್ಥಳವಿದೆಂಬುದು ಸ್ಪಷ್ಟ.

ಒಟ್ಟಿನಲ್ಲಿ ಬನ್ನೇರುಘಟ್ಟವು ಪ್ರಾಚೀನ ಸಂಸ್ಕೃತಿಯ ಆಚರಣೆಯನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದು, ಶಿಲಾಯುಗದ ಸಂಸ್ಕೃತಿಯೊಂದರ ಕೇಂದ್ರವಾಗಿತ್ತು. ಲೋಹಗಾರರ ಪ್ರಮುಖ ಕೇಂದ್ರವಾಗಿದ್ದುದಲ್ಲದೆ ವಿಶೇಷವಾಗಿ ಚಿನ್ನದ ಆದಿರು ದೊರೆಯುತ್ತಿದ್ದ ಸ್ಥಳವಾಗಿದ್ದು ಆದರಿಂದ ಆ ಸ್ಥಳಕ್ಕೆ ಪೊನ್ನೂರುಘಟ್ಟವೆಂಬ ಹೆಸರು ಬಂದು ಅದೇ ಈಗಿನ ಬನ್ನೇರುಘಟ್ಟವೆಂಬ ಹೆಸರಿನ ಮೂಲವಾಗಿದೆ.

ಕೆ.ಬಿ. ಶಿವತಾರಕ್

# ಹೊಳಕಲ್ ಬೆಟ್ಟದಲ್ಲಿ ಇತಿಹಾಸ ಆರಂಭಕಾಲದ ಅವಶೇಷ

ಒಂದು ಕಾಲದ ಜನಜೀವನದ ಬಗ್ಗೆ ತಿಳಿಯಲು, ಸಂಸ್ಕೃತಿಯ ಸ್ವರೂಪ ಮತ್ತು ಬೆಳವಣಿಗೆಯ ಘಟ್ಟಗಳನ್ನು ಅರಿಯಲು ಅಂದು ಉಪಯೋಗದಲ್ಲಿದ್ದು ಇಂದಿಗೂ ಉಳಿದುಬಂದಿರುವ ವಸ್ತು ಅವಶೇಷಗಳು ಮುಖ್ಯ ಆಧಾರಗಳು. ಅವುಗಳಲ್ಲಿ ಮುಖ್ಯವಾದುದು – ಮಡಕೆ. "ಮಡಕೆಯನ್ನು ಸಂಸ್ಕೃತಿಯ ಮಾರ್ಗದರ್ಶಕ" ಎನ್ನುತ್ತಾರೆ. ಮಡಕೆ ಮಾಡುವುದು ಮಾನವನ ಒಂದು ಪ್ರಮುಖ ಅನ್ವೇಷಣೆ. ಇಂತಹ ಮಡಕೆಗಳನ್ನು ತನ್ನ ದಿನನಿತ್ಯದ ಉಪಯೋಗಕ್ಕೆ ಬಳಸಲಾಯಿತು.

ಪ್ರಸ್ತುತ ಹೊಳಕಲ್ಲು ಬೆಟ್ಟದಲ್ಲಿ ದೊರೆತಿರುವ ಮಡಕೆಗಳನ್ನು ಈ ಕಾಲದಲ್ಲಿದ್ದಂತಹ ಹಲವಾರು ಮಾದರಿಯ ಮಡಕೆಗಳೊಂದಿಗೆ ಹೋಲಿಸಿ ಅವುಗಳ ಪ್ರಾಮುಖ್ಯತೆಯನ್ನು ತಿಳಿಯಬಹುದಾಗಿದೆ. ಹೊಳಕಲ್ ಬೆಟ್ಟವು ತುಮಕೂರಿನ ವಾಯುವ್ಯಕ್ಕೆ ಶಿರಾ ತಾಲ್ಲೂಕಿನಲ್ಲಿದ್ದು, ತುಮಕೂರಿನಿಂದ 43 ಕಿ.ಮೀ. ದೂರದಲ್ಲಿದೆ. ಈ ಸ್ಥಳವು ಈಗ ಮೃದುವಾದ ಗ್ರಾನೈಟ್ ಕಲ್ಲಿಗೆ ಪ್ರಸಿದ್ಧವಾಗಿದೆ. ರಾಬರ್ಟ್ ಬ್ರೂಸ್ ಫೂಟ್ ಅವರು ಅಲ್ಲಿ ದೊರೆತ ಮಣ್ಣಿನ ಹೂಜಿಯ ಕೊಳವೆ, ಮಣ್ಣಿನ ಚಪ್ಪಟೆಯ ಮಣಿ, ಮಣ್ಣಿನ ಪಾತ್ರೆಯ ಭಾಗ ಮತ್ತು ವರ್ತುಲಾಕೃತಿಯ ಮಣಿಗಳ ಬಗ್ಗೆ ಮಾತ್ರ ತಿಳಿಸಿರುವರಾದರೂ, ಇಲ್ಲಿನ ಇನ್ನಾವುದೇ ಚಾರಿತ್ರಿಕ ಯುಗದ ಆರಂಭದ ಅವಶೇಷಗಳ ಬಗ್ಗೆ ತಿಳಿಸಿಲ್ಲ. ಡಾ|| ಎಂ. ಶೇಷಾದ್ರಿಯವರು ತಮ್ಮ ಸಂಪ್ರಬಂಧದಲ್ಲಿ ಈ ಸ್ಥಳವನ್ನು ಭೂಪಟದಲ್ಲಿ ಗುರುತಿಸಿರುವರಾದರೂ ಇದರ ಬಗ್ಗೆ ವಿವರಗಳನ್ನು ನೀಡಿರುವುದಿಲ್ಲ[1].

ಈ ಮೇಲಿನ ಮಾಹಿತಿಗಳ ಮೇರೆಗೆ ಇತ್ತೀಚಿಗೆ ಸರ್ವೇಕ್ಷಣೆ ಕೈಗೊಂಡಾಗ ಇತಿಹಾಸ ಆರಂಭ ಕಾಲದ ಮಡಕೆ ಚೂರುಗಳು ದೊರೆತಿವೆ. ಈ ಮಡಕೆಯ ಚೂರುಗಳ ಮಾದರಿ, ಬಣ್ಣ ಮತ್ತು ಅವುಗಳ ಮೇಲಿರಿಪ ಚಿತ್ರಗಳ ಆಧಾರದ ಮೇಲೆ ಅವುಗಳನ್ನು ಈ ಕೆಳಕಂಡಂತೆ ವಿವರಿಸಬಹುದು.

## ಮಾದರಿ I ಬಣ್ಣದ ಮಡಕೆಗಳು

೧) ಬಣ್ಣವನ್ನು ಹೊಂದಿರುವ ಕಪ್ಪುಬಣ್ಣದ ಮಡಕೆ

೨) ಬಣ್ಣವನ್ನು ಹೊಂದಿರುವ ಕಪ್ಪು – ಕೆಂಪು ಬಣ್ಣದ ಮಡಕೆ

೩) ಬಣ್ಣವನ್ನು ಹೊಂದಿರುವ ಕೆಂಪು ಬಣ್ಣದ ಮಡಕೆ

೪) ಬಣ್ಣವನ್ನು ಹೊಂದಿರುವ ಕಂದು ಬಣ್ಣದ ಮಡಕೆ

ಹೀಗೆ ಇತಿಹಾಸ ಆರಂಭಕಾಲದ ಮಡಕೆಗಳನ್ನು ಮುಖ್ಯವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಿದರೂ

* ಇತಿಹಾಸ ಉಪನ್ಯಾಸಕರು, ಸೇಂಟ್ ಮೇರಿ ಸಿರಿಯನ್ ಕಾಲೇಜು, ಬ್ರಹ್ಮಾವರ, ದಕ್ಷಿಣ ಕನ್ನಡ ಜಿಲ್ಲೆ

1. ಎಕ್ಸ್‌ಪ್ಲೊರೇಶನ್ ಅಫ್ ಸೈಟ್ಸ್ ಆಫ್ ರೆಸ್ಸೆಟ್-ಕೋಟೆಡ್ ವೇರ್ ವಿತ್ ಕೆವೊಲಿನ್ ಡಿಸೈನ್ ಇನ್ ಮೈಸೂರ್ ಪು. ೧-೬

ಇವುಗಳಿಗಿರುವ ಬಣ್ಣಗಳನ್ನು ಆಧರಿಸಿ ಇನ್ನಷ್ಟು ಮಾದರಿಗಳನ್ನು ಹೇಳಬಹುದಾಗಿದೆ.

**ಮಾದರಿ II ವಿವಿಧ ಆಕೃತಿಯ ಚಿತ್ರಗಳು**

೧) ಸಮಾನಾಂತರ ಬಿಳಿಗೆರೆಗಳ ಮೇಲೆ ಕಂದು ಬಣ್ಣವನ್ನು ಲೇಪಿಸಿರುವ ಚಿತ್ರ.

೨) ಸಮಾನಾಂತರ ಬಿಳಿ ಚುಕ್ಕೆಗಳ ಮೇಲೆ ಕೆಂಪು ಬಣ್ಣವನ್ನು ಲೇಪನ ಮಾಡಿರುವ ಚಿತ್ರ.

೩) ಕೇಂದ್ರ ಬಿಂದುವಿನಿಂದ ನಾನಾ ಭಾಗಗಳಿಗೆ ಹರಿದಿರುವ ಗೆರೆಗಳಿರುವ ಚಿತ್ರ.

೪) ನೇರ ಗೆರೆಗಳನ್ನು ಹಾಕದೆ ಇರುವ ಚಿತ್ರ.

೫) ಓರೆಯಾದ ಗೆರೆಗಳ ಸಾಲನ್ನು ಮೂಡಿಸಿರುವ ಚಿತ್ರ.

೬) ಚುಕ್ಕೆ ಸಾಲಿರುವಂತೆ ಮಾಡಿರುವ ಚಿತ್ರ.

೭) ಲಂಬವಾಗಿ ಎಳೆದಿರುವ ಗೆರೆಗಳಿರುವ ಚಿತ್ರ.

ಹೀಗೆ ಹಲವಾರು ಮಾದರಿಯ ಆಕೃತಿಯ ಚಿತ್ರಗಳಿದ್ದು ಇವುಗಳು ಅತ್ಯಪೂರ್ವವಾದವುಗಳಾಗಿವೆ.

ಈ ಜಿಲ್ಲೆಯಲ್ಲಿ ಇದುವರೆಗೂ ನಡೆಸಿರುವ ಸರ್ವೇಕ್ಷಣೆಯ ಫಲವಾಗಿ ಇತಿಹಾಸ ಆರಂಭ ಕಾಲದ ಅವಶೇಷಗಳು ರಾಚಮಾರನಹಳ್ಳಿ, ಯಲ್ಲಪ್ಪನಾಯಕನ ಹೊಸಕೋಟೆ, ಯಲ್ಲಪ್ಪನಾಯಕನ ಹಳ್ಳಿ, ನಿಡುಗಲ್ಲು, ಪಾವಗಡ, ಮರಿದಾಸನಹಳ್ಳಿ (ಪಾವಗಡ ತಾಲ್ಲೂಕು), ಬುಕ್ಕಾಪಟ್ಣ (ಶಿರಾ ತಾಲ್ಲೂಕು), ಮೂಗನ ಹುಣಸೆ (ಗುಬ್ಬಿ ತಾಲ್ಲೂಕು), ಕೈದಾಳ, ಜಲಗಾರದಿಬ್ಬ (ತುಮಕೂರು ತಾಲ್ಲೂಕು) ಮತ್ತಿತರ ಕಡೆಗಳಲ್ಲಿ ದೊರೆತಿವೆ. ಇದೇ ರೀತಿ ಈ ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ನೆಲೆಗಳೂ ಹಲವಾರು ದೊರೆತಿವೆ.

## ಗ್ರಂಥ ಋಣ


ನಾಗರಾಜರಾವ್ ಎಂ. ಎಸ್ ಮತ್ತು ಮಲ್ಹೋತ್ರ ಕೆ.ಸಿ. 1965. ದಿ.ಸ್ಟೋನ್ ಏಜ್ ಹಿಲ್ ಡ್ವೆಲ್ಲರ್ಸ್ ಅಫ್ ತೆಕ್ಕಲಕೋಟೆ (ಪೂನ)

ಪೂಟ್. ಆರ್. ಬಿ. 1916. ಪ್ರಿ ಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಅಂಟಿಕ್ವಿಟಿಸ್ ಆಫ್ ಇಂಡಿಯ (ಮದ್ರಾಸ್)

ಸುಂದರ. ಎ. 1971. "ಚಾಲ್ಕೊಲಿಥಿಕ್ ಫೇಸ್ ಆಫ್ ದಿ ಅಪ್ಪರ್ ಕೃಷ್ಣಾವ್ಯಾಲಿ" ಸ್ಟಡೀಸ್ ಇನ್ ಇಂಡಿಯನ್ ಹಿಸ್ಟ್ರಿ ಅಂಡ್ ಕಲ್ಚರ್ ಸಂ :ರಿತ್ತಿ ಎಸ್. ಹೆಚ್. ಮತ್ತು ಗೋಪಾಲ್ ಬಿ. ಆರ್. (ಧಾರವಾಡ)

ವೀಲ್ಹರ್ ಆರ್. ಇ. ಎಮ್. 1948. ಎನ್ಶ್ಯಂಟ್ ಇಂಡಿಯಾ ಸಂ.4 (ನ್ಯೂಡೆಲ್ಲಿ)

ಶಿವತಾರಕ್. ಕೆ. ಬಿ. 1992. "ತುಮಕೂರು ಜಿಲ್ಲೆಯಲ್ಲಿ ಇತ್ತೀಚೆಗೆ ದೊರೆತ ಕೆಲವು ಪ್ರಾಗೈತಿಹಾಸಿಕ ನೆಲೆಗಳು" ಇತಿಹಾಸ ದರ್ಶನ ಸಂ : 7 (ಬೆಂಗಳೂರು)

ಶೇಷಾದ್ರಿ. ಎಂ. 1961. "ಎಕ್ಸ್‌ಪ್ಲೋರೇಶನ್ ಆಫ್ ಸೈಟ್ಸ್ ಆಫ್ ರಸ್ಸಟ್-ಕೋಟೆಡ್ ವೇರ್ ವಿತ್ ಕೆವೊಲಿನ್ ಡಿಸೈನ್ ಇನ್ ಮೈಸೂರ್" ಹಾಫ್ ಇಯರ್ಲಿ ಜರ್ನಲ್ ಅಫ್ ದಿ ಮೈಸೂರ್ ಯೂನಿವರ್ಸಿಟಿ ಸಂ : XX ನಂ.2 (ಮೈಸೂರು)

ಡಾ|| ಕೆ. ಪಿ. ಪೂಣಚ್ಚ ಮತ್ತು ಎಸ್. ವಿ. ವೆಂಕಟೇಶಯ್ಯ*

# ಹಂಪಿಯ ಇತ್ತೀಚಿನ ಉತ್ಖನನದಲ್ಲಿ ದೊರೆತ ಮುದ್ರೆಗಳು

---

ಮುದ್ರೆಗಳು ಸಿಂಧೂಕಂದರ ನಾಗರೀಕತೆಗಳ ಕಾಲದಷ್ಟು ಪ್ರಾಚೀನ. ಈ ಮುದ್ರೆಗಳ ಉಪಯೋಗ ಮತ್ತು ಅದರ ಮೇಲಿನ ಲಿಪಿಯ ಬಗ್ಗೆ ಅನೇಕ ವಾದ-ವಿವಾದಗಳಿದ್ದರೂ ಇವು ಆ ಕಾಲದ ಇತಿಹಾಸದ ಪುನರ್ರಚನೆಯಲ್ಲಿ ತಮ್ಮದೇ ಆದ ಕೀಲಕ ಪಾತ್ರವನ್ನು ನಿರ್ವಹಿಸಿದ್ದು, ಮುಖ್ಯ ಆಕರ ಸಾಮಗ್ರಿಗಳೆನ್ನುವ ಅಂಶ ಮಾತ್ರ ನಿರ್ವಿವಾದದ್ದು. ಉತ್ತರ ಭಾರತದಲ್ಲಿ ಇತಿಹಾಸ ಯುಗದ ಆರಂಭ ಕಾಲದಿಂದ ಸುಮಾರು ಹತ್ತನೆಯ ಶತಮಾನದವರೆಗೆ ವಿವಿಧ ಕಾರ್ಯಗಳಿಗಾಗಿ ಉಪಯೋಗವಾಗುತ್ತಿದ್ದ ಅನೇಕ ರೀತಿಯ ಮುದ್ರೆಗಳು ಬೆಳಕಿಗೆ ಬಂದಿದ್ದರೂ, ದಕ್ಷಿಣ ಭಾರತದಲ್ಲಿ ಇವು ತೀರ ಕಡಿಮೆ. ಪ್ರಾಮಾಣ್ಯದ ಖಾತರಿಗಾಗಿ ವಿವಿಧ ರೀತಿಯಲ್ಲಿ ಉಪಯೋಗಿಸಲಾಗಿರುವ ಮುದ್ರೆಗಳು ಬಹು ಮುಖ್ಯವಾಗಿದ್ದರೂ, ವಿಜಯನಗರದ ಕಾಲಕ್ಕೆ ಸಂಬಂಧಿಸಿದಂತೆ ಇವುಗಳ ಲಭ್ಯ ಬೆರಳೆಣಿಕೆಯಷ್ಟು.

ಹಂಪಿ ರಾಷ್ಟ್ರೀಯ ಯೋಜನೆಯ ಅಂಗವಾಗಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯು, ಹಂಪಿಯ 'ರಾಜಾಂಗಣ' ಪ್ರದೇಶದಲ್ಲಿ ನಡೆಸಲಾದ ಸುಮಾರು ಒಂದು ದಶಕಕ್ಕೂ ಹೆಚ್ಚಿನ ಕಾಲದ ಉತ್ಖನನದಲ್ಲಿ ಇದುವರೆವಿಗೂ 59,000 ಚ. ಮಿ. ಗಳ ಸ್ಥಳವನ್ನು ವೈಜ್ಞಾನಿಕ ರೀತ್ಯ ಪರಿಶೋಧಿಸಲಾಗಿದೆ. ಈ ಉತ್ಖನನದಿಂದಾಗಿ ಅನೇಕ ರೀತಿಯ ಕಟ್ಟಡಗಳ ತಲ ವಿನ್ಯಾಸವು ತಿಳಿಯುವಂತಿದ್ದು ನಿಖರವಾಗಿ ಗುರುತಿಸಬಹುದಾದ ಅರಮನೆಯ ಸಂಕೀರ್ಣ, ಕಾವಲುಗಾರರ ಮನೆ, ಉಗ್ರಾಣಗಳಲ್ಲದೇ ಜಲ ಪೂರೈಕೆ ಮತ್ತು ಒಳಚರಂಡಿ ವ್ಯವಸ್ಥೆ ಇತ್ಯಾದಿಗಳನ್ನು ಕುರಿತಂತೆ ಸೂಕ್ತ ಮಾಹಿತಿ ದೊರೆತಿದೆ. ಜೊತೆಗೆ ವಿವಿಧ ರೀತಿಯ ಶಿಲೆ, ಸುಟ್ಟ ಮಣ್ಣು, ಗಚ್ಚು-ಗಾರೆ ಮುಂತಾದ ಮಾಧ್ಯಮಗಳಲ್ಲಿ ರೂಪಿಸಲಾದ ನೂರಾರು ಪ್ರಾಚ್ಯ ಅವಶೇಷಗಳು ಬಗೆ ಬಗೆಯ ನಾಣ್ಯಗಳು, ಒಡವೆ ಮತ್ತು ವೈವಿಧ್ಯಮಯವಾದ ಮಣ್ಣಿನ ಪಾತ್ರೆಗಳೂ ದೊರೆತಿವೆ. ಇಂತಹ ಅನೇಕ ಪ್ರಾಚ್ಯ ವಸ್ತು ವಿಶೇಷಗಳಲ್ಲಿ ಸುಟ್ಟ ಮಣ್ಣಿನ ಹಾಗೂ ಕಲ್ಲಿನ ಮುದ್ರೆಗಳು ಮಹತ್ವದ್ದಾಗಿವೆ.

ಈಗಾಗಲೆ ನಮಗೆ ತಿಳಿದಿರುವಂತೆ ಮುದ್ರೆಯು ನಮ್ಮ ಇತಿಹಾಸ ಮತ್ತು ಸಂಸ್ಕೃತಿಯ ರಚನೆಗೆ ಪ್ರಾಥಮಿಕ ಆಕರಗಳಾಗಿ ಕಲೆ, ಪ್ರತಿಮಾ ಲಕ್ಷಣ, ವ್ಯಾಪಾರ ಮತ್ತು ವಾಣಿಜ್ಯ, ಅರಸರ ಕಾಲ ಹಾಗೂ ಆಡಳಿತಗಳ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲಿದೆ. 'ರಾಜಾಂಗಣ' ಮತ್ತು ರಾಜಾಂಗಣದ ಸುತ್ತಮುತ್ತಲಿನ ಪ್ರದೇಶಗಳಲ್ಲಿ

---

* 1. ಸೂಪರಿಂಡೆಂಟ್, ಭಾರತೀಯ ಪುರಾತತ್ವ ಸರ್ವೇಕ್ಷಣಾಲಯ, 364, 36ನೆಯ 'ಎ' ಅಡ್ಡರಸ್ತೆ, ನಾಲ್ಕನೆಯ 'ಟಿ' ಬ್ಲಾಕ್, ಜಯನಗರ ಬೆಂಗಳೂರು-560041.

2. ಡೆಪ್ಯೂಟಿ ಸೂಪರಿಂಡೆಂಟ್, ಭಾರತೀಯ ಪುರಾತತ್ವ ಸರ್ವೇಕ್ಷಣಾಲಯ, —,,—

ವಿಶೇಷವಾಗಿ ಉತ್ತರದ ಕಡೆ ನಡೆಸಿದ ಉತ್ಖನನದಲ್ಲಿ ಮೂರು ಮುದ್ರೆಗಳು ದೊರೆತಿವೆ. ಈ ಮುದ್ರೆಗಳು ಶಂಖುವಿನಾಕಾರದಲ್ಲಿದ್ದು, ಕಪ್ಪು ಮತ್ತು ಬೂದು ಬಣ್ಣಗಳ ಮಿಶ್ರಣದವಾಗಿದ್ದು, ಅಧಿಕ ಉಷ್ಣೋಗ್ರತೆಯಲ್ಲಿ ಸುಡಲಾಗಿದೆ. ಇವುಗಳು ೧೦ ಸೆಂ. ಮಿ. ನಿಂದ 1¼ ಮೀಟರಿನ ಆಳದಲ್ಲಿ ದೊರೆತಿದ್ದು ಮುದ್ರೆಗಳ ತಳ ಭಾಗದಲ್ಲಿ ೧ ಸೆಂ. ಮಿ ನಿಂದ ೪ ಸೆಂ. ಮಿ.ಗಳ ವ್ಯಾಸವನ್ನು ಹೊಂದಿವೆ. ಸಾಮಾನ್ಯವಾಗಿ ಮುದ್ರೆಗಳ ತಳಭಾಗವು ಸಮತಟ್ಟಾಗಿದ್ದು ಅದರ ಮೇಲೆ ಮೂರು ಭಾಗಗಳಲ್ಲಿ ಕೆತ್ತನೆಯನ್ನು ಕಾಣಬಹುದಾಗಿದೆ. ಮೊದಲ ಅಥವಾ ಮೇಲಿನ ಭಾಗವು ಕಠಾರಿಯ ಕೆತ್ತನೆಯನ್ನು ಹೊಂದಿದ್ದು, ಅದರ ಹಿಡಿಯು ಮೇಲ್ತುದಿಯಲ್ಲಿದೆ. ಈ ಕಠಾರಿಯ ಇಕ್ಕೆಲಗಳಲ್ಲಿ ಸೂರ್ಯ ಮತ್ತು ಚಂದ್ರರ ಕೆತ್ತನೆಯಿದ್ದು ವಿಜಯನಗರದ ಅರಸರ ರಾಜ ಲಾಂಛನವನ್ನು ಹೋಲುತ್ತದೆ. ಎರಡನೆಯ ಅಥವ ಮಧ್ಯ ಭಾಗವು 'ಶ್ರೀ ವಿರಬು' ಎಂಬ ಅಕ್ಷರಗಳನ್ನು ಹೊಂದಿದ್ದು ತಳಭಾಗವು ಅಥವಾ ಕೊನೆಯ 'ಕರಾಯ' ಎಂಬ ಅಕ್ಷರಗಳನ್ನು ಹೊಂದಿದ್ದು; ಕೂಡಿಸಿದಾಗ 'ಶ್ರೀವಿರಬುಕರಾಯ' ಎಂಬುದಾಗಿ ಓದಬಹುದಾಗಿದ್ದು ವಿಜಯನಗರದ ಅರಸರ ಕಾಲದ ನಾಣ್ಯಗಳ ಒಂದು ಮುಖವನ್ನು ಹೋಲುತ್ತವೆ. ಆದರೆ ವಿಜಯನಗರದ ಕಾಲದ ನಾಣ್ಯಗಳಂತೆ ಮುದ್ರೆಗಳು ಕಲಾತ್ಮಕ ಅಂಚನ್ನು ಹೊಂದಿರುವುದಿಲ್ಲ. ಅಕ್ಷರಗಳು ನಾಗರ ಲಿಪಿಯಲ್ಲಿದ್ದು ಶೈಲಿಯ ದೃಷ್ಟಿಯಿಂದ ಕ್ರಿ.ಶ. ೧೪ನೇ ಶತಮಾನದ ಲಿಪಿಯಂತಿದ್ದು ಒಂದನೇ ಬುಕ್ಕರಾಯನ ಕಾಲದ ಚಿನ್ನದ ಮತ್ತು ತಾಮ್ರದ ನಾಣ್ಯಗಳ ಮೇಲ್ಮುಖದಲ್ಲಿ ಕಾಣುವ ಆಖ್ಯಾಯಿಕೆಯನ್ನು ಹೋಲುತ್ತದೆ.

ಅಂದಿನ ದಿನಗಳಲ್ಲಿ ಅರಮನೆಯ ಪ್ರವೇಶ ಅಥವಾ ಕಾರ್ಯಸದನದ ಪ್ರವೇಶ ಬಹಳ ಪ್ರಯಾಸಕರವಾಗಿತ್ತೆಂದು ನಮ್ಮ ದೇಶದ ಮಹಾಕಾವ್ಯಗಳಲ್ಲೊಂದಾದ ಮಹಾಭಾರತದಲ್ಲಿಯೂ ಮತ್ತು ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ ಉಲ್ಲೇಖಿಸಲಾಗಿದೆ. ಅದರಲ್ಲೂ ದ್ವಿತೀಯ ಯಾಮದಲ್ಲಿ ಪ್ರವೇಶ ಬಯಸುವುದು ಇನ್ನೂ ಕಷ್ಟಕರವಾಗಿತ್ತು. ಆಡಳಿತಾತ್ಮಕ ದೃಷ್ಟಿಯಿಂದಲೂ ಮತ್ತು ರಕ್ಷಣಾತ್ಮಕ ದೃಷ್ಟಿಯಿಂದಲೂ ಅಂತಹ ಪ್ರವೇಶ ಬಯಸುವ ಯಾರನ್ನೇ ಆಗಲಿ ಕಟ್ಟುನಿಟ್ಟಿನ ತಪಾಸಣೆಗೆ ಒಳಪಡಿಸುತ್ತಿದ್ದರು. ತುರ್ತು ಪರಿಸ್ಥಿತಿಯಲ್ಲಂತೂ ಈ ತಪಾಸಣೆಯು ಮತ್ತಷ್ಟು ಬಿಗಿಯಿಂದ ಕೂಡಿರುತ್ತಿತ್ತು ಈ ಬಗ್ಗೆ ವಿದೇಶಿಯಾತ್ರಿಕರಾದ ನ್ಯೂನಿಜ್, ಅಬ್ದುಲ್ ರಜಾಕ್, ಡಾಮಿಂಗೊ ಪಾಯೆಶ್ ಮುಂತಾದವರ ಬರವಣಿಗೆಗಳಲ್ಲಿ ಉಲ್ಲೇಖವಿದ್ದು, (ತಡೆಗೋಡೆ) ಪರದೆ ಗೋಡೆಗಳ ವಂಕಿಯಾದ ಪ್ರವೇಶದ್ವಾರದಿಂದ ಈ ವಿಷಯಕ್ಕೆ ಮತ್ತಷ್ಟು ಪುಷ್ಟಿ ದೊರೆತಿದೆ.

ಅರಸನ ಕಾರ್ಯಕಾರಿ ಸದನದಲ್ಲಿ ರಾಜಾಜ್ಞೆಗಳನ್ನು ಅಥವಾ ಶಾಸನಗಳನ್ನು ಅಧಿಕೃತವಾಗಿ ವಿಧಿವತ್ತಾಗಿ ಹೊರಡಿಸಲು ಮುದ್ರೆಗಳನ್ನು ವಿಶೇಷವಾಗಿ ಬಳಸುತ್ತಿದ್ದರು. ಉತ್ಖನನದಲ್ಲಿ ದೊರೆತ ಅಪಾರ ಸಂಖ್ಯೆಯ ಬಳಪದ ಕಲ್ಲಿನ ಕಡ್ಡಿಗಳನ್ನು 'ಕಡಿತ'ಗಳನ್ನು ಬರೆಯಲು ಉಪಯೋಗಿಸುತ್ತಿದ್ದರು. ಸಹಜವಾಗಿಯೇ ಪ್ರತಿಯೊಂದು ಕಡಿತವು 'ದೊರೆ' ಅಥವಾ ಆತನ ಪ್ರತಿನಿಧಿ ಅಧಿಕಾರಿಗೂ ಪರಿಶೀಲನೆಗೊಳಪಟ್ಟಿದ್ದುದರ ಕುರುಹಾಗಿ ರಾಜಮುದ್ರೆಯನ್ನು ಹೊಂದಿರುತ್ತಿದ್ದುವು.

ಈ ಮುದ್ರೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಿಶೇಷವಾಗಿ ಶಂಖುವಿನಾಕಾರದ ಮುದ್ರೆಗಳ ಹಿಡಿಯು ಮರದ ಅಥವಾ ದಂತದ ಕೈಪಿಡಿಯನ್ನು ಹೊಂದಿತ್ತೆಂಬುದಾಗಿ ತಿಳಿಯಬಹುದಾಗಿದೆ. ಬಳೆಗಳು, ಮಣಿಗಳು, ಬೊಟ್ಟುಗಳು, ಮೂಗುತಿ ಇತ್ಯಾದಿಗಳು ಚಿನ್ನದ ಹಾಳೆಗಳ ಹೊದಿಕೆಯಿರುವ ಆಭರಣಗಳು ಸಾಕಷ್ಟು ಸಂಖ್ಯೆಯಲ್ಲಿ ದೊರೆತಿರುವುದರಿಂದ ಮುದ್ರೆಗಳ ಕೈಪಿಡಿಗೆ ತೆಳುವಾದ ಚಿನ್ನದ ಹೊದಿಕೆಯೊಂದಿಗೆ ಉಪಯೋಗಿಸುತ್ತಿದ್ದರೆಂಬ ಸಾಧ್ಯತೆಯನ್ನು ತಳ್ಳಿಹಾಕಲಾಗದು.

ಈ ರಾಜ ಮುದ್ರೆಗಳು ಮೇಲೆ ತಿಳಿಸಿದ ಸ್ಥಳದಲ್ಲಿ ದೊರೆತಿವೆಯಾದ್ದರಿಂದ ಅಲ್ಲಿದ್ದಂತಹ ಆಡಳಿತಾತ್ಮಕ ಹಾಗೂ ರಕ್ಷಣಾತ್ಮಕ ಕಟ್ಟಡಗಳ ಕಲ್ಪನೆಯನ್ನು ಸ್ಪಷ್ಟ ಪುರಾವೆಯೊಂದಿಗೆ ಪಡೆಯಬಹುದಾಗಿದೆ.

ಟಿ. ಶಂಭುಲಿಂಗಪ್ಪ*

# ಪ್ರಾಗೈತಿಹಾಸಿಕ ಸ್ಥಳ-ಗವಿ ಮಠ

ರಾಯಚೂರು ಜಿಲ್ಲೆಯ ಈಗಿನ ಕೊಪ್ಪಳನಗರ ಪ್ರಮುಖ ವ್ಯಾಪಾರ ಕೇಂದ್ರ. ಅದನ್ನು ಹಿಂದೆ "ವಿದಿತ ಮಹಾಕೊಪಣನಗರ"ವೆಂತಲೂ "ತಿರುಳ್ಗನ್ನಡ ನಾಡು" ಎಂತಲೂ ಕವಿರಾಜ ಮಾರ್ಗ ಕೃತಿಯು ಉಲ್ಲೇಖಿಸಿದೆ. ಪ್ರಸ್ತುತ ಅದು ಹುಬ್ಬಳ್ಳಿ-ಹೊಸಪೇಟೆ ರೈಲ್ವೇ ಮಾರ್ಗ ದಲ್ಲಿದೆ. ಒಂದು ಪ್ರಸಿದ್ಧ ಐತಿಹಾಸಿಕ ಸ್ಥಳ.

ಕೊಪ್ಪಳನಗರದ ಪಶ್ಚಿಮ ದಿಕ್ಕಿನತ್ತ ಎತ್ತರವಾದ ಗುಡ್ಡಗಳ ಶ್ರೇಣಿ ಹಬ್ಬಿದೆ. ಅದರಲ್ಲಿ "ಪಾಲ್ಕಿಗುಂಡು" ಅಥವಾ 'ಪಲ್ಲಕ್ಕಿ ಗುಂಡು' ಎಂಬುದು ಅಶೋಕನ ಶಾಸನದ ಸ್ಥಳ. ಇದರ ಪೂರ್ವ ದಿಸೆಯಲ್ಲಿ ಗವಿ ಮಠವೆಂಬುದು ಪ್ರಸಿದ್ಧ ವೀರಶೈವ ಮಠ. ಗವಿ ಮಠದ ಪಶ್ಚಿಮ ದಿಕ್ಕಿನತ್ತ ಒಂದು ಗವಿಯಿದೆ. ಅದರ ಕೆಳಬದಿಯಲ್ಲಿ ಕೆರೆಯೂ, ಕೆರೆಯ ನೈರುತ್ಯ ದಿಸೆಯ ಮೂಲೆಯಲ್ಲಿರುವ ಗವಿಯ ಮುಂಭಾಗದಲ್ಲಿ ಕೆಲ ಜೈನ ಸಮಾಧಿಗಳಿವೆ. ಕೆಲವು ನಿಷದಿಗಲ್ಲು ಮತ್ತು ವೀರಗಲ್ಲು ಗಳಿವೆ. ಈ ಮಠದ ಉತ್ತರ ದಿಕ್ಕಿನಲ್ಲಿ ಬಂಡೆಗಲ್ಲಿನ ಮೇಲೆ ಜೈನ ತೀರ್ಥಂಕರರ ಕೆಲವು ಚಿತ್ರಗಳನ್ನು ಬಿಡಿಸಲಾಗಿದೆ. ಇದೇ ದಿಕ್ಕಿನಲ್ಲಿ ಸುಮಾರು ಒಂದು ಫರ್ಲಾಂಗ್ ಮುಂದಕ್ಕೆ ಹೋದರೆ ಗವಿ ಮಠದ ಹಿಂಭಾಗದ ಗುಡ್ಡ ಪ್ರದೇಶ. ಅಲ್ಲೊಂದು ದೊಡ್ಡ ಬಂಡೆಯ ಮೇಲೆ ಮತ್ತೊಂದು ಬಂಡೆ ಕೊಡೆಯಾಕಾರ ದಂತಿದೆ. ಅದೊಂದು ವಿಶ್ರಾಂತಿಧಾಮ. ಇದರ ಕೆಳಗಡೆಯ ಬಂಡೆಗಲ್ಲಿನ ಮೇಲೆ ಅಶೋಕನ ಮತ್ತೊಂದು ಶಾಸನವಿದೆ. ಅದರ ಬುಡದಲ್ಲಿ ಒಂದು ಗವಿ. ಆ ಗವಿಯ ಎದುರು ಸುಮಾರು ½ಕಿ.ಮಿೂ. ದೂರದಲ್ಲಿ ಮತ್ತೆರಡು ಗವಿಗಳು. ಆ ಎರಡು ಗವಿಗಳಲ್ಲಿ ವರ್ಣ ಚಿತ್ರಗಳಿವೆ. ಉತ್ತರ ದಿಕ್ಕಿಗೆ ಅಭಿಮುಖವಾಗಿರುವ ಗವಿಯ ಮುಂಭಾಗದಲ್ಲೇ ಗವಿ ಸಿದ್ಧೇಶ್ವರ ಮಠ. ಹೀಗೆ ಗವಿ ಮಠದ ಗುಡ್ಡ ಪ್ರದೇಶದಲ್ಲಿ ಒಟ್ಟು ನಾಲ್ಕು ಗವಿಗಳಿವೆ.

ಗವಿ ಸಿದ್ದೇಶ್ವರ ಮಠವು ಒಂದು ಪ್ರಾಚೀನ ಮಠವೆನಿಸಿದ್ದರೂ ಮೂಲತಃ ಅದೊಂದು ಗುಹಾಂತರ ದೇವಾಲಯ ! ಸಿದ್ದೇಶ್ವರ ದೇವಾಲಯ !! ಇತ್ತೀಚಿಗೆ. ನಾನು ಪರಿಶೀಲಿಸಿದಂತೆ ಅದೊಂದು ಹೊಯ್ಸಳ ಕಾಲದ ದೇವಾಲಯವಾಗಿರಬೇಕು. ಕಾರಣ ಹೊಯ್ಸಳ ದೇವಾಲಯದ ಅನೇಕ ಲಕ್ಷಣಗಳು ಈ ಮಠದಲ್ಲಿ ಕಾಣಬರುತ್ತವೆ. ಮುಖ್ಯವಾಗಿ ಈ ಕಟ್ಟಡದ ರಚನೆಯಲ್ಲಿ ಬಳಸಿರುವ ಕಂಭಗಳೇ ಇದಕ್ಕೆ ಸಾಕ್ಷಿ.

ಈಗಾಗಲೇ ದೊರೆತಿರುವ ಗವಿ ಮಠದ ಅಶೋಕನ ಶಾಸನವಿರುವ ಸ್ಥಳದ ಸಮೀಪದಲ್ಲಿಯೇ ಪೂರ್ವಕ್ಕೆ ಅಭಿಮುಖವಾಗಿ ಮತ್ತೊಂದು ಕಿರು ಬೆಟ್ಟ ವಿದ್ದು, ಆ ಬೆಟ್ಟದ ಎರಡೂ ಗುಹೆಗಳಲ್ಲಿ ಶಿಲಾಯುಗದ ವರ್ಣ ಚಿತ್ರಗಳು ಕಾಣಬರುತ್ತವೆ. ಒಂದು ಗುಹೆಯ ಮೇಲ್ಭಾಗದಲ್ಲಿ ಹಳದಿ-ಮಿಶ್ರಿತ ಮಸುಕು ಬಿಳಿಯ ದ್ವಿವರ್ಣಗಳಲ್ಲಿ ಗಂಡು-ಹೆಣ್ಣಿನ ಚಿತ್ರವನ್ನು ಬಿಡಿಸ ಲಾಗಿದೆ. ಅನತಿ ದೂರದಲ್ಲಿಯೇ ಇರುವ ಮತ್ತೊಂದು ಗುಹೆಯಲ್ಲಿ ಕೆಂಪು ಬಣ್ಣದ ಸೂರ್ಯ, ಮನುಷ್ಯ,

---

* ರೀಡರ್ ; ಎಸ್.ಜೆ.ಎಂ. ಕಾಲೇಜು, ಚಿತ್ರದುರ್ಗ.

ಪ್ರಾಣಿ (?)–ನೃತ್ಯ ಸಮೂಹ ಇವುಗಳ ಚಿತ್ರಗಳನ್ನು ಬರೆಯಲಾಗಿದೆ. ಈ ಎರಡೂ ಗುಹೆಯ ವರ್ಣ ಚಿತ್ರಗಳು ಗವಿಯ ಒಳ ಮೇಲ್ಭಾಗದ ಕಲ್ಲಾಸರೆಯಲ್ಲಿ ಬಿಡಿಸಲಾಗಿದ್ದು, ಬೆಳಕಿನ ಸಹಾಯದಿಂದ ಸೂಕ್ಷ್ಮವಾಗಿ, ನಿಧಾನವಾಗಿ ಪರಿಶೀಲಿಸಿದರೆ ಮಾತ್ರ ಕಾಣುವವು. ಪ್ರಾಯಶಃ ಚಿತ್ರಗಾರನು ಈ ಚಿತ್ರಗಳನ್ನು ಅಂಗಾತವಾಗಿ ಮಲಗಿಯೇ ಚಿತ್ರಿಸಿರಲು ಸಾಧ್ಯ. ಈ ಚಿತ್ರಗಳು ಇದೇ ತಾಲ್ಲೂಕಿನ ಹಿರೆಬೆನಕಲ್ಲಿನ ಆರನೆಯ ಗವಿ ಹಾಗು ಕುರು ಗೋಡಿನ ನಾಲ್ಕನೆಯ ಗವಿಯ ಚಿತ್ರಗಳ ಸ್ಮರಣೆಯನ್ನು ತರುತ್ತಿವೆ.

ಈ ಚಿತ್ರಗಳ ಕಾಲವನ್ನು ತಿಳಿಯುವುದು ಕಷ್ಟವೇ "ಬಹಳಷ್ಟು ಚಿತ್ರಗಳ ಕಾಲ ಮಾನವನ್ನು ನಿರ್ಧರಿಸುವುದು ಈ ಚಿತ್ರಗಳ ಅಧ್ಯಯನಕ್ಕೆ ಸಂಬಂಧಿಸಿದ ಕ್ಲಿಷ್ಟ ಸಮಸ್ಯೆಗಳಲ್ಲಿ ಒಂದು" ಎಂದಿರುವ ಡಾ. ಅ. ಸುಂದರರವರ ಮಾತನ್ನು ಇಲ್ಲಿ ಸ್ಮರಿಸಬೇಕಾಗಿದೆ. ಆದರೂ ಕೆಲವು ಚಿತ್ರಗಳ ವೈಲಕ್ಷಣ್ಯಗಳ ಅಧ್ಯಯನದಿಂದ ಇವುಗಳು ಶಿಲಾಯುಗದ ಚಿತ್ರಗಳಾಗಿರಬೇಕು. ಇವುಗಳ ಬಗ್ಗೆ ಇನ್ನೂ ಸಂಶೋಧನೆ ನಡೆಯಬೇಕಾಗಿದೆ. ೬-೧೧-೧೯೮೮ರ ಪ್ರಜಾವಾಣಿಯಲ್ಲಿ ಇದರ ಬಗ್ಗೆ ಸುದ್ದಿ ಪ್ರಕಟವಾಗಿತ್ತು.

ರಾಯಚೂರು ಜಿಲ್ಲೆಯ ಕೊಪ್ಪಳದ ಗವಿ ಮಠದ ಗುಹಾ ವರ್ಣ ಚಿತ್ರಗಳೊಂದಿಗೆ ಗಂಗಾವತಿ ತಾಲ್ಲೂಕಿನ ಬಳೆಬಾವಿ, ಮಲ್ಲಾಪುರ, ಆನೆಗೊಂದಿ, ತಿಮ್ಮಲಾಪುರ, ನಾರಾಯಣಪುರ, ಬಂಡಿಹಲ್ಲಾಪುರ ಮಾನ್ವಿತಾಲ್ಲೂಕಿನ ಮಾನ್ವಿ ಬೈಲ್ ಮರ್ಚೆಡ್ ಈ ಮೊದಲಾದ ಕಡೆಯಲ್ಲಿನ ಗವಿಗಳಲ್ಲಿ ವರ್ಣ ಚಿತ್ರಗಳು ಕಂಡು ಬಂದಿವೆ. ಇಲ್ಲಿನ ವರ್ಣ ಚಿತ್ರಗಳು ಸಾಮಾನ್ಯವಾಗಿ ಗುಹೆ ಒಳಗಿನ ಬಂಡೆಗಳ ಮೇಲೆ ಇದ್ದು ಕಿರಿದಾದ ಗುಹೆಯ ದ್ವಾರವನ್ನು ತೆವಳಿಕೊಂಡು ಒಳ ಹೋಗಬೇಕು. ಇಲ್ಲಿನ ಗವಿಗಳಲ್ಲಿ ಮನುಷ್ಯರ, ಪ್ರಾಣಿಗಳ, ಸಾಮೂಹಿಕ ನೃತ್ಯ, ಮನುಷ್ಯರ ಜೋಡಿ, ಪ್ರಾಣಿಗಳ ಸಾಲು-ಈ ಚಿತ್ರಗಳನ್ನು ಕಾಣಬಹುದಾಗಿದೆ.

ಕೊಪ್ಪಳದ ಸುತ್ತು-ಮುತ್ತಲಿನ ಅಗೋಲಿ, ಬೆಣಕಲ್ ಗುಡ್ಡ, ಎಮ್ಮಿಗುಡ್ಡ, ಹಿರೆಬೆನಕಲ್–ಸ್ಥಳಗಳಲ್ಲಿ ಶಿಲಾ ಸಮಾಧಿಗಳೊಂದಿಗೆ ಇಂಥ ಗುಹಾ ಚಿತ್ರಗಳನ್ನು ಕಾಣುತ್ತೇವೆ. ಕೊಪ್ಪಳ ಪ್ರದೇಶವು ಬಹು ಪುರಾತ ಕಾಲದಿಂದಲೂ ಮಾನವನ ನಿವಾಸ ಸ್ಥಾನವಾಗಿತ್ತು ಎನ್ನಲು ಇಂಥ ಗುಹಾ ಚಿತ್ರಗಳೂ, ರೇಖಾ ಚಿತ್ರಗಳು ಸಕಾರಣವಾಗಿವೆ. ಪ್ರಾಗೈತಿಹಾಸಿಕ ಚಿತ್ರಗಳಲ್ಲಿ ಒಂದಾದ ಗವಿಯೊಳಗಿನ ವರ್ಣರಂಜಿತ ಚಿತ್ರಗಳು ಉತ್ತರ ಕರ್ನಾಟಕದಲ್ಲಿ ಈ ವರಿವಿಗೂ ೨೭ ಸ್ಥಳಗಳಲ್ಲಿ ಒಟ್ಟು ೧೨೩ ವರ್ಣಚಿತ್ರಗಳು ಲಭ್ಯವಾಗಿವೆ. ಇವುಗಳ ಜೊತೆಗೆ ಗವಿ ಸಿದ್ಧೇಶ್ವರ ಮಠದ ಗುಹಾ ಚಿತ್ರಗಳನ್ನು ಹೊಸದಾಗಿ ಸೇರಿಸಬೇಕಾಗಿದೆ. ಇಲ್ಲಿಯವರಿವಿಗೂ ಕೊಪ್ಪಳ, ಪಿಕ್ಕಿಹಾಳ, ಹಿರೆಬೆನಕಲ್, ಆನೆಗೊಂದಿ, ಹಂಪೆ, ಮಾನ್ವಿ, ಗಂಗಾವತಿ ತಾ|| ಗಳಲ್ಲಿ ಇಂಥ ಚಿತ್ರಗಳು ಲಭ್ಯವಾಗಿದ್ದು ಒಟ್ಟು ಕರ್ನಾಟಕದ ರಾಯಚೂರು ಜಿಲ್ಲೆ ಗುಹಾ ಚಿತ್ರಗಳ ಆಗರವಾಗಿದೆ, ಚಿತ್ರಕಲೆಯ ಕೇಂದ್ರಸ್ಥಾನ ಎರಡನೆಯ ಸ್ಥಾನ ಚಿತ್ರದುರ್ಗ ಜಿಲ್ಲೆಗೆ ಸಲ್ಲುತ್ತದೆ.

ಶಿಲಾಯುಗದ ನಿವೇಶನಗಳನ್ನು ಗುರುತಿಸಿ, ಪ್ರಾಚೀನ ಚಿತ್ರಗಳನ್ನು ಹುಡುಕುವ ಕೆಲಸ ನಮ್ಮಲ್ಲಿ ಇನ್ನು ಸಕ್ರಮವಾಗಿ ನಡೆದಿಲ್ಲವೆಂದೇ ಹೇಳಬೇಕು. ಅವುಗಳ ಬಗ್ಗೆ ಹೆಚ್ಚು ಸಂಖ್ಯೆಯ ಕೃತಿಗಳೂ ಅಲಭ್ಯ ; ಬಿಡಿ ಬಿಡಿ ಲೇಖನಗಳೇ ಹೆಚ್ಚು. ಈ ನಿಟ್ಟಿನಲ್ಲಿ ಹಿರೆಬೆನಕಲ್, ಬಾದಾಮಿ, ಬೈಲ್ ಮರ್ಚಡ್, ಚಿತ್ರದುರ್ಗ ಚಂದ್ರವಳ್ಳಿ ಮತ್ತು ಕೊಟ್ಟೂರು ತಾಲೂಕಿನ ಐಯ್ಯಪ ಹಳ್ಳಿ, ಕುಂದಾಪುರ ತಾಲ್ಲೂಕಿನ ಗವಳಿ ಮುಂತಾದ ಕಡೆಯ ಚಿತ್ರಗಳನ್ನು ವಿದ್ವಾಂಸರು ಗುರುತಿಸಿದ್ದರೂ ವಿವರವಾಗಿ ಅಧ್ಯಯನವಾಗಿಲ್ಲ.

ಶ್ರೀ ಹನುಮನಾಯಕ್*

# ಚಲುವನಹಳ್ಳಿಯ ಎರಡು ಅಪ್ರಕಟಿತ ಶಾಸನಗಳು

ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೋಕು, ಬಾಣಾವರ ಹೋಬಳಿ, ಚಲುವನಹಳ್ಳಿ ಗ್ರಾಮದ ಪ್ರಾಥಮಿಕ ಪಾಠಶಾಲೆಯ ಕಾಂಪೌಂಡಿಗೆ ಒಂದು ಶಾಸನದ ಕಲ್ಲನ್ನು ಬುಡಮೇಲಾಗಿ ನಿಲ್ಲಿಸಲಾಗಿದೆ.

ಈ ಶಿಲ್ಪರಹಿತ ವೀರಗಲ್ಲಿನಲ್ಲಿ ಒಟ್ಟು ೧೦ ಸಾಲುಗಳಿದ್ದು ಹತ್ತನೆಯ ಸಾಲಿನಲ್ಲಿ ಕೆಲವು ಅಕ್ಷರಗಳು ಅರೆಬರೆಯಾಗಿ ಕಾಣಿಸುತ್ತವೆ. ಶಾಸನ ಒಡೆದಿರುವುದರಿಂದ ಇದು ಅಪೂರ್ಣವಾಗಿದೆ.

ಶಾಸನವು ಸುಮಾರು ೨.೯' ಎತ್ತರ ೨.೬' ಅಗಲ ಮತ್ತು ೪ ಅಂಗುಲ ದಪ್ಪ ಇದ್ದು ಸ್ಥಳೀಯವಾಗಿ ದೊರೆಯುವ ಗಟ್ಟಿ ಗ್ರಾನೈಟ್ ಕಲ್ಲಿನ ಮೇಲೆ ಕೆತ್ತಲಾಗಿದೆ. ಇದರ ಭಾಷೆ ಕನ್ನಡವಾಗಿದ್ದು, ಲಿಪಿ ೯–೧೦ನೆಯ ಶತಮಾನಕ್ಕೆ ಸೇರಿದುದಾಗಿದೆ.

**ಶಾಸನದ ಪಾಠ**

೧ ಸ್ವತಿ[ಸ್ತಿ] ಶ್ರೀ ಪೆರ್ಮ್ಮನಡಿ ರ ಜ್ಯಂಗೆಯ್ಯೆ
೨ ಉಮ್ಮದರಸನದ ಆತಿರಥ ಮಂಗ
೩ ಲದಟಭೋರ ಗೋವರ್ಧನ ಕ್ರ
೪ ಮಯಿತಸು ಶ್ರೀಧರನ ಮಮ್ಮ
೫ ತಿಬ್ಬ ಮ್ಮಾಣಿಯನ್ನೊಬಮ್ಬನ
೬ ದಮರ
೭ ಗೋಗ್ರಹಣಮು ಕೇಶಗ್ರಹ
೮ ಣದುಳ್ ಬಿದ್ಧ ವಿಮೆನ
೯ ಲೆ ವಿಷ್ಣು ಲೋಕದೊಳ್ ಪೋ
೧೦ * * * *

**ಶಾಸನದ ಸಾರಾಂಶ**

ಈ ಶಾಸನದ ಲಿಪಿ ಮತ್ತು ಭಾಷೆ ಅಲ್ಲಲ್ಲಿ ಅಸ್ಪಷ್ಟವಿದ್ದು ಇದನ್ನು ಅರ್ಥೈಸುವುದು ಕಷ್ಟವಾಗಿದೆ. ಇದರ ತಾತ್ಪರ್ಯವನ್ನು ಹೀಗೆ ಗ್ರಹಿಸಬಹುದು.

"ಪೆರ್ಮಾನಡಿ ಎಂಬ ದೊರೆ ರಾಜ್ಯವಾಳುತ್ತಿರುವಾಗ ಆತಿರಥ ಮಂಗಲವೆಂಬ ಸ್ಥಳದ ಗೋವರ್ಧನ ಕ್ರಮಯಿತ ಎಂಬ ಬ್ರಾಹ್ಮಣನ ಸಂಬಂಧದ ತಿಬ್ಬಮ್ಮಾಣಿ ಎಂಬುವನು ನೊಳಂಬರ ಕಡೆಯವರು ಗೋವುಗಳನ್ನು ಹಿಡಿಯಲು ಮತ್ತು ಆ ಗ್ರಾಮದ ಸ್ತ್ರೀಯರ ಜಡೆಮುಡಿಗಳನ್ನು ಹಿಡಿಯಲು ಹೋದಾಗ, ಅದನ್ನು ನೋಡಿ ಕೆರಳಿ, ಆ ಗೋವುಗಳನ್ನು ಬಿಡಿಸುವಲ್ಲಿ ಮತ್ತು ಆ ಸ್ತ್ರೀಯರಿಗಾದ ಅವಮಾನವನ್ನು ತಡೆಯುವಲ್ಲಿ ಯಶಸ್ವಿಯಾಗಿ ಹೋರಾಡಿ ಸತ್ತನು. ಹೀಗೆ ಸತ್ತ ವೀರನು ಮಾನವೇರಿ ಶ್ರೀ ವಿಷ್ಣುಲೋಕಕ್ಕೆ ಹೋದನು."

* ನಂ. ೧೭೬/೩, ೧ನೆಯ ಮುಖ್ಯ ರಸ್ತೆ, ೨ನೆಯ ಅಡ್ಡ ರಸ್ತೆ, ಜೋವಿಪಾಳ್ಯ ಮಹಾಲಕ್ಷ್ಮೀಪುರಂ, ಬೆಂಗಳೂರು-೫೬೦ ೦೮೬.

ಸ್ವಸ್ತಿಶ್ರೀ ಪೆರ್ಮ್ಮಾನಡಿ ಎಂದು ಪ್ರಾರಂಭವಾಗುವ ಈ ಶಾಸನವು ಪೆರ್ಮ್ಮಾನಡಿ ಯಾರು ಎಂದು ತಿಳಿಸಿಲ್ಲ. ಈ ಶಾಸನ ದೊರೆತ ಸ್ಥಳದ ನೆರೆಹೊರೆಯ ಗ್ರಾಮಗಳಾದ ಅರಕೆರೆ, ಕಣಿಕಟ್ಟೆ ಮತ್ತು ನೇರಲಿಗೆ ಶಾಸನಗಳಲ್ಲಿಯೂ ಪೆರ್ಮ್ಮಾನಡಿಯ ಉಲ್ಲೇಖ ಬರುತ್ತದೆ. ಕ್ರಿ.ಶ. ೯೯೦ರ ಅರಕೆರೆಯ ಶಾಸನದಲ್ಲಿ ಸತ್ಯವಾಕ್ಯ ಪೆರ್ಮ್ಮಾನಡಿ ಎಂಬ ಬಿರುದು ಎರಡನೇ ರಾಚಮಲ್ಲನಿಗೆ ಇತ್ತೆಂದು ತಿಳಿಸುತ್ತದೆ. ಕ್ರಿ.ಶ. ೯೯೪ರ ನೇರಳಿಗೆ ಶಾಸನವು ಪೆರ್ಮ್ಮಾನಡಿಯು ಎರೆಯಪ್ಪರಸನೆಂದು ತಿಳಿಸುತ್ತದೆ. ೨ನೇ ರಾಚಮಲ್ಲ ಮತ್ತು ಎಲೆಯಪ್ಪರಸನು ಸು. ೩೦ ವರ್ಷಗಳ ಕಾಲ (೮೮೬-೯೧೯) ಒಟ್ಟೊಟ್ಟಿಗೆ ರಾಜ್ಯಭಾರ ಮಾಡಿದರು. ಆದ್ದರಿಂದ ಪ್ರಸ್ತುತ ಶಾಸನದ ಪೆರ್ಮ್ಮಾನಡಿಯನ್ನು ಎರಡನೆಯ ರಾಚಮಲ್ಲನೆಂದು ಗುರುತಿಸಬಹುದಾಗಿದೆ. ಇದರ ಕಾಲವನ್ನು ಸು. ಕ್ರಿ.ಶ. ೯೯೨ರ ಕಾಲಕ್ಕೆ ಸೇರಿದ್ದೆಂದು ಊಹಿಸಬಹುದು.

ಗೋಗ್ರಹಣ ಮತ್ತು ಕೇಶಗ್ರಹಣ ನಡೆದದ್ದು ಅತಿರಥ ಮಂಗಲದಲ್ಲಿ. ಆದರೆ ಈ ಹೆಸರಿನ ಗ್ರಾಮಗಳು ಶಾಸನವಿರುವ ಪ್ರದೇಶದಲ್ಲಿ ಎಲ್ಲಿಯೂ ಇಲ್ಲ. ಈ ಪ್ರದೇಶದಲ್ಲಿ ಗಂಗರಿಗೂ ಮತ್ತು ಅವರ ಶತ್ರುಗಳಾದ ನೊಳಂಬರಿಗೂ ಅನೇಕ ಸಲ ಯುದ್ಧ ನಡೆದ ಸಂಗತಿ ಶಾಸನಗಳಿಂದ ತಿಳಿದು ಬರುತ್ತದೆ. ಅದರಲ್ಲೂ ೨ನೇ ರಾಚಮಲ್ಲನ ಕಾಲದಲ್ಲಿ ಗಂಗರು ಸತತವಾಗಿ ನೊಳಂಬರೊಡನೆ, ಬಾಣರೊಡನೆ ಮತ್ತು ವೈದುಂಬರೊಡನೆ ಯುದ್ಧಗಳನ್ನು ಮಾಡಿದ್ದುಂಟು.

ಈ ಶಾಸನದಲ್ಲಿ 'ಗೋಗ್ರಹಣ'ದ ಜೊತೆಗೆ 'ಕೇಶಗ್ರಹಣ'ದ ಉಲ್ಲೇಖವಿದ್ದು ಇದೊಂದು ಅಪರೂಪದ ಪ್ರಯೋಗವಾಗಿದೆ. ಕೇಶಗ್ರಹಣವೆಂದರೆ ತಲೆಯ ಕೂದಲನ್ನು ಹಿಡಿದಿದ್ದು ಅಥವಾ ಕತ್ತರಿಸಿದ್ದು ಎಂಬರ್ಥ ನೀಡಬಹುದು. ಬಹುಶಃ ಪೆಣ್ಬುಯ್ಯಲ್ ಪದಕ್ಕೆ ಸಮಾನ ಅರ್ಥದಲ್ಲಿ ಇದನ್ನು ಬಳಸಿದ್ದಲ್ಲಿ ಸ್ತ್ರೀಯರ ಮುಡಿಯನ್ನು ಹಿಡಿದು ಕತ್ತರಿಸಿದ ಅರ್ಥವನ್ನು ನೀಡಬಹುದಾಗಿದೆ. ಶಾಸನ ರಚಕ ತುರುಗಾಳೆಗ, ಪೆಣ್ಣುಯ್ಯಲ್ ಪದಗಳಿಗೆ ಸಂಸ್ಕೃತ ಪದಗಳಾದ ಗ್ರೋಗ್ರಪಣ, ಕೇಶಗ್ರಹಣ ಎಂಬ ಪದಗಳನ್ನು ಬಳಸಿರುತ್ತಾನೆ.

ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿರುವ ಗೋವರ್ಧನ ಶ್ರೀಧರ, ಅತಿರಥಮಂಗಲ ಮತ್ತು ವಿಷ್ಣುಲೋಕ, ಮೊದಲಾದ ಶಬ್ದಗಳನ್ನು ಗಮನಿಸಿದಾಗ ವಿಷ್ಣು ಪಾರಮ್ಯವನ್ನು ಸೂಚಿಸುತ್ತದೆ. ಸಂಸ್ಕೃತ ಪದಗಳನ್ನು ಸಹ ಈ ಶಾಸನದಲ್ಲಿ ಹೆಚ್ಚಿಗೆ ಬಳಸಿರುತ್ತಾರೆ.

ಇನ್ನೊಂದು ಶಾಸನವು ಇದೇ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಈಶ್ವರ ದೇವಸ್ಥಾನದ ನವರಂಗದ ದಕ್ಷಿಣ ಭಾಗದಲ್ಲಿ ಶಿಲ್ಪವನ್ನೊಳಗೊಂಡಿದ್ದು, ಸುಮಾರು ೧.೩ ಅಡಿ ಎತ್ತರ ೧.೧ ಅಡಿ ಅಗಲ ಮತ್ತು ೩ ಇಂಚು ದಪ್ಪ ಸೈಜಿನ ಬಳಪದ ಕಲ್ಲಿನಲ್ಲಿ ಕೆತ್ತಲಾಗಿದೆ. ಇದರಲ್ಲಿ ಒಟ್ಟು ೫ ಸಾಲುಗಳಿವೆ.

ಶಾಸನದ ಮೇಲ್ಭಾಗದ ಶಿಲ್ಪದಲ್ಲಿ ಬಲಭಾಗದಲ್ಲಿ ಒಬ್ಬ ವ್ಯಕ್ತಿ ಮೊಣಕಾಲೂರಿ ಲಿಂಗಕ್ಕೆ ಕೈ ಮುಗಿಯುತ್ತಿರುವಂತೆಯೂ ಲಿಂಗದ ಇನ್ನೊಂದೆಡೆಯಲ್ಲಿ ಖಡ್ಗ ಮತ್ತು ಹಸುವಿನ ಚಿತ್ರಗಳನ್ನು ಬಿಡಿಸಲಾಗಿದೆ. ಈ ಶಿಲ್ಪಗಳ ಆಧಾರದಿಂದ ಇದೊಂದು ದಾನಶಾಸನವೆಂದು ಹೇಳಬಹುದು.

**ಶಾಸನದ ಪಾಠ**

೧ ಸುಭಾನು ಸಂವತ್ಸರದ ವೈಶಾಖ
೨ ಬಹುಳ ೩ ಬ್ರಹವಾರದಂದು ಚಂ
೩ ದೊರನ ಹಕಿಯ[೧] ಕೈಯಾಣ ೧ ಕಂ ಗಾ
೪ ಣದೆರೆ ವಸುಧೆ ೨ ಕಾಚೆಯನಾಯ
೫ ಕ ಬಿತ [ಟ್ಟ] ಧರ್ಮ.

ಈ ಶಾಸನವನ್ನು ಲಿಪಿಯ ಲಕ್ಷಣಗಳಿಂದ ಹೊಯ್ಸಳರ ಕಾಲಕ್ಕೆ ಸೇರಿಸಬಹುದು. ಶಾಸನದಲ್ಲಿ ಎಲ್ಲಿಯೂ ಕಾಲವನ್ನು ನಿಖರವಾಗಿ ತಿಳಿಸದೆ ಸುಭಾನು ಸಂವತ್ಸರದ ವೈಶಾಖ ಬಹುಳ ಎಂದು ಮಾತ್ರ ಉಲ್ಲೇಖಿಸಿದೆ. ಇದು ಸ್ವಾಮಿ ಕಣ್ಣು ಪಿಳ್ಳೆಯವರ ಇಂಡಿಯನ್ ಎಫಿಮರೀಸ್‌ನ ಪ್ರಕಾರ ೨೨ನೇ ಗುರುವಾರ ಏಪ್ರಿಲ್ ೧೨೮೩ಕ್ಕೆ ಸರಿಹೊಂದುತ್ತದೆ.

ಸುಭಾನು ಸಂವತ್ಸರದ ವೈಶಾಖ ಮಾಸದ ಗುರುವಾರದಂದು ಕಾಚೆಯನಾಯಕ ಎಂಬುವವನು ಒಂದು ಕೈಯ್ಯಾಗಣವನ್ನು ಮತ್ತು ಅದರಿಂದ ಬರುವ ತೆರಿಗೆ ಹಾಗೂ ೨ ಎಕರೆ ಭೂಮಿಯನ್ನು ಈ ದೇವ ಸ್ಥಾನಕ್ಕೆ ದತ್ತಿಯಾಗಿ ಬಿಟ್ಟನು.

ಇವೆರಡೂ ಶಾಸನಗಳಿಂದ ನಮಗೆ ತಿಳಿದು ಬರುವುದೇನೆಂದರೆ ಇಂದಿನ ಚಲುವನಹಳ್ಳಿ ಗ್ರಾಮವು ಅತಿ ಪುರಾತನ ಗ್ರಾಮವಾಗಿದ್ದು ರಾಜಕೀಯ ಮತ್ತು ಸಾಂಸ್ಕೃತಿಕ ಕೇಂದ್ರವಾಗಿತ್ತೆಂದು ಭಾವಿಸಬಹುದು.

## ಆಧಾರಿತ ಗ್ರಂಥಗಳು


೧ ಮೈಸೂರು ಆರ್ಕಿಯಾಲಾಜಿಕಲ್ ಸರ್ವೆ. ಎ.ಕ.ಸಂ. ೧೫. ಸಪ್ಲಿಮೆಂಟರಿ ಇನ್ಸ್‌ಕ್ರಿಪ್ಷನ್ಸ್. ಡಾ|| ಎಂ.ಎಚ್. ಕೃಷ್ಣ

೨ ಎಂ.ಎ. ಆರ್ : ೧೯೦೬-೧೯೨೨

೩ ಡಾ|| ಪಿ.ಬಿ. ದೇಸಾಯಿ : ಹಿಸ್ಟರಿ ಆಫ್ ಕರ್ನಾಟಕ : ಧಾರವಾಡ ಕನ್ನಡ ರೀಸರ್ಚ್ ಇನ್ಸ್‌ಟಿಟ್ಯೂಟ್, ಕರ್ನಾಟಕ ವಿಶ್ವವಿದ್ಯಾಲಯ ; ೧೯೭೦.



ಈ ಶಾಸನದ ಪಾಠ ಸಿದ್ಧಪಡಿಸುವಲ್ಲಿ ಮತ್ತು ಅರ್ಥೈಸುವಲ್ಲಿ ಮಾರ್ಗದರ್ಶನ ನೀಡಿದ ನನ್ನ ಗುರುಗಳಾದ ಶ್ರೀ. ಕೆ. ಆರ್. ಗಣೇಶ್, ಶ್ರೀ ದೇವರಕೊಂಡಾರೆಡ್ಡಿ ಮತ್ತು ಬಿ. ರಾಜಶೇಖರಪ್ಪ ಇವರುಗಳಿಗೆ ನಾನು ಋಣಿಯಾಗಿದ್ದೇನೆ.

ಗಣಪತಿಗೌಡ .ಎಸ್.*

# ಚಂದಾವರ ಕದಂಬ ವೀರ ಕಾವದೇವರಸನ ಕಬ್ರಗಿ ಶಾಸನ

ಕಬ್ರಗಿಯು ಕುಮಟಾ ತಾಲ್ಲೂಕಿನ ಕತಗಾಲ ಗ್ರಾಮಕ್ಕೆ ಸೇರಿದ ಉಪಗ್ರಾಮವಾಗಿದ್ದು ಕತಗಾಲದಿಂದ ಸುಮಾರು ೬ ಕಿ.ಮಿ. ದೂರದಲ್ಲಿದೆ. ಅಲ್ಲಿರುವ ವಿಷ್ಣು ದೇವಾಲಯದ ಬಲಪಾರ್ಶ್ವದಲ್ಲಿ ಈ ಶಾಸನವಿದೆ. ೨೫ ಸಾಲುಗಳಿರುವ ಈ ಶಾಸನವನ್ನು ಕ್ರಿ.ಶ. ೧೩ನೇ ಶತಮಾನದ ಕನ್ನಡ ಅಕ್ಷರಗಳಲ್ಲಿ ಕೊರೆದಿದ್ದು, ಮೇಲ್ಭಾಗದಲ್ಲಿ ಶಿವಲಿಂಗ ಮತ್ತು ಬಸವನ ಚಿತ್ರಗಳಿವೆ.

ಶಾಸನ ನೀಡುವ ಕಾಲವಿವರ ಇಂತಿದೆ : "ವೀರ ಕಾವದೇವ ವರುಷದ ೧೨ನೆಯ ವಿಶ್ವಾವಸು ಸಂವತ್ಸರದ ವಯಶಾಖ ಸುದ್ಧ ೩ ರವಿವಾರ". ಈ ವಿವರಗಳು ೧೩ನೆ ಶತಮಾನದಲ್ಲಿ ಕ್ರಿ.ಶ. ೧೨೪೫ ಎಪ್ರಿಲ್ ೨೯, ರವಿವಾರಕ್ಕೆ ಸರಿ ಹೊಂದುತ್ತದೆ.

**ಶಾಸನದ ಸಾರಾಂಶ ಹೀಗಿದೆ :**

ಶಿವಸ್ತುತಿಯಿಂದ ಪ್ರಾರಂಭಿಸಿ, ಚಂದ್ರಿಕಾಪುರ ನೆಲೆವೀಡನ್ನು ಪರಿಚಯಿಸುತ್ತದೆ. ಶ್ರೀ ವೀರಕಾವ ದೇವರಸರು ಮತ್ತು ಕೀರ್ತಿನಾರಾಯಣ ದಂಡನಾಯಕರು ಇಬ್ಬರೂ ಇದ್ದು ಕಬ್ಬರಗಿ ಗ್ರಾಮವನ್ನು ಶ್ರೀ ಮಹಾಬಳ ದೇವರಿಗೆ ಸರ್ವಬಾಧಾ ಪರಿಹಾರವಾಗಿ ಕೊಟ್ಟದ್ದನ್ನು ವಿವರಿಸುತ್ತದೆ. ಶಾಸನದಲ್ಲಿಯ ಮೊದಲ ೧೦ ಸಾಲುಗಳು ಆದಿಕದಂಬ ಮಯೂರವರ್ಮನ ವಂಶದ ಸ್ತುತಿ ನೀಡಿದರೆ ಉಳಿದ ೧೫ ಸಾಲುಗಳು ವೀರ ಕಾವದೇವನ ಸಹಿತ ಕೀರ್ತಿನಾರಾಯಣ ದಂಡನಾಯಕ ಹಾಗೂ ಗೋಕರ್ಣದ ತಳಾಧಿಕಾರಿ, ಧೂಳಿಖೇಡದ ಮಾದಯ್ಯ, ವೈದ್ಯರ ಹೆಬ್ಬಾರವ, ಬೆಣ್ಣೆಯ ಹೆಬ್ಬಾರವ, ಕೈದಾಡಿ ಹೆಬ್ಬಾರವ, ತೆಂಗಾಕ ಹೆಬ್ಬಾರವ, ಗಡಿಗಾರಿ ಹೆಬ್ಬಾರವ ಮೊದಲಾದವರ ಹೆಸರುಗಳನ್ನು ಹೇಳುತ್ತದೆ.

ಸುಮಾರು ೫ ದಶಕಗಳ ಹಿಂದೆಯೇ ಆರ್.ಎಸ್. ಪಂಚಮುಖಿಯವರು 'ಚಂದಾವರ ಕದಂಬರು' ಎಂಬ ಹೊಸ ಮನೆತನವನ್ನು ಪರಿಚಯಿಸಿ ಅವರ ವಂಶಾವಳಿಯನ್ನು ಕ್ರಿ.ಶ. ೧೦೭೮ ರಿಂದ ಪ್ರಾರಂಭಿಸಿದ್ದರು.[1] ಆದರೆ ಇತ್ತಿತ್ತಲಾಗಿ ದೊರೆತ ಕೆಲವು ಹೊಸಶಾಸನಗಳ ಆಧಾರದ ಮೇಲೆ ನಿಜವಾಗಿ ಚಂದಾವರ ಕದಂಬ ಮನೆತನದ ಇತಿಹಾಸ ಅರಸ ತ್ರಿಭುವನಮಲ್ಲ ಬೀರದೇವ/ವೀರದೇವನ ಕಾಲದಿಂದ ಪ್ರಾರಂಭವಾಗುತ್ತದೆಂದು ತಿಳಿದುಬಂದಿದೆ. ಇವನಿಗೆ ಸಂಬಂಧಪಟ್ಟ ಶಾಸನಗಳು ಕ್ರಮವಾಗಿ ಕ್ರಿ.ಶ. ೧೨೧೯ ಮತ್ತು ೧೨೨೩ರದ್ದಾಗಿದೆ[2].

---

* ಸಂಶೋಧನಾ ಸಹಾಯಕರು. ಪ್ರಾಚೀನ ಇತಿಹಾಸ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ—580003.

1. ಪಂಚಮುಖಿ. ಆರ್. ಎಸ್ : ಪ್ರೊಗ್ರೆಸ್ ಆಫ್ ಕನ್ನಡ ರಿಸರ್ಚ್ ಇನ್ ಬಾಂಬೆ ಪ್ರೊವ್ಹಿಯನ್ಸಿ (1941-46) ಭಾಗ 2. ಪು. 6-7. ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ.
2. ಸಂಪತ್. ಎಂ. ಡಿ. : "ಚಂದಾವರ ಇನಸ್ಕ್ರಿಪ್ಷನ್ ಆಫ್ ಕದಂಬ ಬೀರದೇವರಸ" ಜರ್ನಲ್ ಆಫ್ ದಿ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ, ಸಂಪುಟ 9 (ಧಾರವಾಡ) ಪು. 88-94

ಇದರಲ್ಲಿ ಇವರ ವಂಶಾವಳಿಯ ಕುರಿತ ಯಾವುದೇ ಪ್ರಸ್ತಾವನೇ ಇಲ್ಲ. ಆದರೆ ಬೀರದೇವನು ಚಂದ್ರಿಕಾಪುರದಲ್ಲಿ ಆಳುತ್ತಿದ್ದನೆಂದೂ, ಅವನ ಪ್ರಧಾನ ದಂಡನಾಯಕ ಕೀರ್ತಿನಾರಾಯಣನನ್ನು ಹೆಸರಿಸುತ್ತದೆ. ಆದರೆ ಗೋಕರ್ಣದ ವೀರಕಾವದೇವರಸನ ಕ್ರಿ.ಶ. ೧೨೨೫ರ ತಾಮ್ರ ಶಾಸನವು ವೀರದೇವನ ಮಗ ತೈಲನೆಂದೂ ಹಾಗೂ ಮೊಮ್ಮಗ ಕಾಮದೇವನೆಂದೂ ಹೇಳಿದೆ.[3] ಅದೇರೀತಿ ಕತಗಾಲದ ಹೈಸ್ಕೂಲಿನಲ್ಲಿರುವ ಕ್ರಿ.ಶ. ೧೨೫೬ರ ಶಾಸನವು ಕಾವದೇವನನ್ನು ಚಂದಾವರದಲ್ಲಿದ್ದ ವೀರದೇವನ ಮೊಮ್ಮಗ ಹಾಗೂ ಕಾದಂಬ ಸಂತಾನಂ ಹೈವೆಯ ಅಧಿಕಾರಿ ಎಂಡು ಹೇಳಿದೆ.[4] ಇದಕ್ಕೂ ಪೂರ್ವದಲ್ಲಿ ಕ್ರಿ.ಶ. ೧೧೬೭ರ ಎಡತಾರೆಯ ಪಟ್ಟಣದ ತೈಲವರ್ಮನ ಶಾಸನವು ಕೂಡ ವೀರದೇವ, ಕಾವದೇವ ಹಾಗೂ ಕೀರ್ತಿನಾರಾಯಣ ದಂಡನಾಯಕನನ್ನು ಹೆಸರಿಸುತ್ತದೆ.[5] ಈ ಎಲ್ಲ ಶಾಸನಗಳ ಆಧಾರದ ಮೇಲೆ ಚಂದಾವರ ಕದಂಬರ ವಂಶಾವಳಿಯನ್ನು ಈ ಕೆಳಗಿನಂತೆ ಪುನರಚಿಸಬಹುದು.

ವೀರದೇವ/ ಬೀರದೇವ
|
ತೈಲ
|
ವೀರಕಾವದೇವ

**ಶಾಸನದ ಮಹತ್ವ**

೧. ಚಂದಾವರದ ಶಾಸನದಲ್ಲಿಯ ಬೀರದೇವನೂ, ಗೋಕರ್ಣ ತಾಮ್ರಶಾಸನ, ಕತಗಾಲ ಶಿಲಾ ಶಾಸನ ಮತ್ತು ಎಡತಾರೆಯಲ್ಲಿ ಬರುವ ವೀರದೇವನು ಒಬ್ಬನೆ ಎನ್ನುವುದು ಸ್ಪಷ್ಟವಾಗುವದು.

೨. ಪ್ರಸ್ತುತ ಶಾಸನ ಕ್ರಿ.ಶ. ೧೨೪೫ಕ್ಕೆ ಸರಿಹೊಂದುವುದರಿಂದ ವೀರದೇಪನ ಮೊಮ್ಮಗ ಕಾವದೇವನ ಆಳ್ವಿಕೆ ಕ್ರಿ.ಶ. ೧೨೩೪ ರಲ್ಲಿ ಆರಂಭವಾಯಿತೆಂಬುದನ್ನು ಸ್ಪಷ್ಟಪಡಿಸುತ್ತದೆ.

೩. ಕೀರ್ತಿನಾರಾಯಣನು ಕ್ರಿ.ಶ. ೧೧೬೭ ರಿಂದ ಹಿಡಿದು ಮುಂದೆ ಬೀರದೇವ ಹಾಗೂ ಕಾವದೇವನ ೧೨ನೆಯ ವರ್ಷದವರೆಗೂ ಮಂತ್ರಿಯಾಗಿದ್ದನೆಂದು ತಿಳಿಸುತ್ತದೆ.

೪. ವಿಶಿಷ್ಟ ಹೆಬ್ಬಾರ ಮನೆತನಗಳ ಉಲ್ಲೇಖವಿರುವುದು.

೫. ಕಬ್ಬರಗಿಯಲ್ಲಿ ಚಂದಾವರ ಕದಂಬರ ಕಾಲದ ದೇವಾಲಯವಿದ್ದ ಬಗ್ಗೆ ಮಾಹಿತಿ ನೀಡುತ್ತದೆ. ಈಗ ದೇವಾಲಯವನ್ನು ಆಧುನಿಕ ರೀತಿಯಲ್ಲಿ ಕಟ್ಟಲಾಗಿದೆ.

೬. ಶಾಸನದಲ್ಲಿ ಹೇಳಿದ ಕಬ್ಬರಗಿಯು ಇಂದಿನ ಕಬ್ರಗಿಯಾಗಿದೆ. ಆದರೆ ಧೂಳಿಖೇಡಯಾವುದೆಂದು ನಿರ್ಣಯಿಸಲಾಗಲಿಲ್ಲ.

**ಶಾಸನದ ಪಾಠ**

೧. ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಸಂಭವೇ ||ಶಿವಂ||

೨. ಓಂ ನಮ ಶಿವಾಯ|| ಸ್ವಸ್ತಿ ಸಮಧಿಗತ ಪಂಚ ಮಹಾಸಬ್ದ ಮಹಾಮಂಡಳೇಸ್ವರ ತ್ರೈಕ್ಷಾಕ್ಷ್ಮಸಂ

೩. ಭವ ಚತುರಾಶೀತಿ ನಗರಾವಿದಿಷ್ಟಿತ ಲಲಾಮ ಲೋಚನ ಚತುರ್ಬುಜ ಜಗದ್ವಿತಿತಾಷ್ಟ

೪. ದಶಾಸ್ವಮೇಧಯಜ್ಞ ದೀಕ್ಷಾದೀಕ್ಷೀತ ಹಿಮವಂದು ಗಿರೀಂದ್ರಮಂದ್ರ ಭುಜಗೇಂದ್ರ ಸಂಸ್ಥಾಪಿತ ಸಿ-

೫. ಲಾ ಸ್ತಂಭ[ಬ] ದ್ಧ ಮದಗಜ ಮಹಾಮಹಿಭಿರಾಮಂ ಕಾದಂಬ ಚಕ್ರವರ್ತ್ತಿ ಮಯೂರವರ್ಮ್ಮ

೬. ಕುಳಭೂಷಣ ಪೆರ್ಮ್ಮಟ್ಟಿತೂರ್ಯ್ಯ ನಿರ್ಘೊಷಣ ಸಾಖಾಚರೇಂದ್ರ ಮಾರ್ಕ್ಕೊಳುವರಗಂ-

೭. ಡ ಗಂಡಬಂಗಾಜ ಅಜ್ಜನಸಿಂಹ ಸಾಹಸೋತ್ತುಂಗ ಸಹಜಮ್ರಿಗಮದಾಮೋದ ಶ್ರೀ ಗೋಕ-

೮. ರ್ಣ್ನ ಮಹಾಬಲಿ ದೇವರ ದಿಬ್ಯ ಶ್ರೀ ಪಾದ ಪದ್ಮಾರಾಧಕ ಪಲಿಬಲಿ ಸಾಧಕಂ ಹುಸಿವರ ಸೂಲ ಚಲದಂಕ ರಾ.

---

3. ಎಪಿಗ್ರಾಫಿಯಾ ಇಂಡಿಕಾ ಸಂಪುಟ. ಸಂಪುಟ-7, ಪುಟ 157-163.
4. ನಮ್ಮ ಗಮನಕ್ಕೆ ಬಂದ ಅಪ್ರಕಟಿತ ಶಿಲಾಶಾಸನ ಷಾಯಿಯಿಂದ ಅಚ್ಚು ಮಾಡಿದ್ದು.
5. ಅಪ್ರಕಟಿತ ಇನ್ನೊಂದು ಹೊಸ ಶಾಸನ.

೯. ಮ ನಿಗ[ಳಂ]ಕ ಮಲ್ಲ ಗಂಡರದಾವಣಿ ಪ್ರತಾಪ ವೀರ ಕಾವದೇವರಸರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವ-

೧೦. ರ್ದ್ಧ ಮಾನಮಾಚಂದ್ರಾರ್ಕತಾರಂಬರಂ || ಚಂದ್ರಿಕಾಪುರದ ನೆಲೆವೀಡಿನೊಳು ಸುಖಸಂಕಥಾ ವಿನೋ-

೧೧. ದದಿಂ ರಾಜ್ಯಂಗೆಯುತ್ತಿರೆ || ಶ್ರೀ ಧಾರಣಿ ಪವಿತ್ರ ಮಾದುದು ವಾರುಜ ಸಂಭವ ಶ್ರಿಷ್ಟಿಸಫಲಿಮದಾ-

೧೨. ಯಿತು ಚಾರುಗುಣ ಮಂತ್ರಿಮಂಡನ ನಾರಾಯಣನಿಂದವೆಂದೊಡೆನೊ ಮಹತ್ವಂ | ಗೋವಿಂದ ||

೧೩. ಶ್ರೀ ಸ್ವಸ್ತಿ ಶ್ರೀಮತು ವೀರಕಾವದೇವ ವರುಶದ [೧೨]ನೆಯ ವಿಶ್ವಾವಸು ಸಂವತ್ಸರದ ವಯುಶಾಖ ಸುಧ ೩ ರವಾರದಂ-

೧೪. ದು ಶ್ರೀ ಕಾವದೇವರಸರು ಶ್ರೀ ಕೀರ್ತಿ ನಾರಾಯಣ ದಂಣ್ನಾಯಕರುಂ ವೊಂದಾ-

೧೫. ಗಿದ್ದು ಕಬ್ಬರಗೆಯ ಗ್ರಾಮಕ್ಕೆ ಕೊಟ್ಟ ಪತ್ರ ಶ್ರೀ ಮಹಾಬಲಿ ದೇವರಿಗೆ ಸರ್ವ್ವಭಾಧೆ

೧೬. ಪರಿಹವಾಗಿಯೂ ಗ್ರಾಮವ ಕೊಟ್ಟರು || ಶ್ರೀಮತು ವೀರಕಾವದೇವರಸರು ಶ್ರೀ ಕೀರ್ತಿನಾರಾ-

೧೭. ಯಣಯ ದಂಣ್ಣಾಎಕರು ಗೋಕರ್ಣ್ನದ ಕ[ಳ]ಧಿಕಾರಿ ಧೂಳಿಖೇಡದ ಮಾದಯ್ಯನುಂ ವೈದ್ಯ-

೧೮. ರ ಹೆಬ್ಬಾರುವ ಮೊದಲಾಗಿ ಬೆಣ್ಣೆಯ ಹೆಬ್ಬಾರವ ಕೈಥಾಡಿ ಹೆಬ್ಬಾರವ

೧೯. ತೆಂಗಾಕ ಹೆಬ್ಬಾರುವ ಗಡಿಗಾರಿ ಹೆಬ್ಬಾರುವ ನಾಣೆ[ಲ್] ಹೆಬ್ಬಾರುವ ಯಿಂತಿ ನಾ-

೨೦. ಲ್ವರ ಮುಂದಿಟ್ಟು ಕಬ್ಬರಗೆಯ ಸಿದ್ಧಾಯ ವರ್ಸ ತಪ್ಪುದಂಡ ಬಡ್ಡಿ ಯಿಂತಿಸುವನೂ ಶ್ರೀ ಗೋ-

೨೧. ಕರ್ಣ್ನ ಮಹಾಬಲ[ದೇವರ್ಗ್ಗೆ]ಧಾರಪೂರ್ವ್ವಕಂ ಮಾಡಿಕೊಟ್ಟರು || ಸ್ವದತ್ತಂ ಪರದತ್ತಂ ವಾಯೋ ಹರೇತಿ ವಸುಂಧರಾ

೨೨. ಷಷ್ಟಿರ್ವ್ವರ್ಷ ಸಹಶ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿ || ಅಕರಸ್ಯ ಕರಿ ಕರ್ತ್ರೊ [.] ಕೋಟವರ್ಷ ಸ್ಥಿತ ನಕರಶ್ಚಪ

೨೩. ........ಗೋಕೋಟ ಫಲಮಂಶ್ನಿತಿ || ದಾನಂವಾ ಪಾಲನೇಯೋ

೨೪. ದಾನಾಶ್ರೇಯೋನು ಪಾಲನಂ ದಾನಾಸ್ವರ್ಗ್ಗ

೨೫. !ಗೇಯೋ... ....ನಾಡು........ಮಲ್ಲ ||

ಕೃತಜ್ಞತೆಗಳು : ಲೇಖನವನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ ಡಾ. ಸುಂದರರವರಿಗೂ, ಡಾ. ಎಸ್.ವಿ. ಪಾಡಿಗಾರರವರಿಗೂ ಕೃತಜ್ಞನಾಗಿದ್ದೇನೆ.

ಡಾ|| ಬಿ. ನಂಜುಂಡಸ್ವಾಮಿ*

# ಹೊನ್ನುಡುಕೆ ಕೆಂಪಸೋಮಯ ಒಡೆಯರ ಶಾಸನ

ಪ್ರಸ್ತುತ ಶಾಸನವು ಈಗ ಹೊನ್ನುಡಿಕೆಯಲ್ಲಿ ವಾಸವಾಗಿರುವ ಗುಬ್ಬಿ ಹೊಸಹಳ್ಳಿ ಹಿರೇಮಠದ ಲಿಂ|| ಚನ್ನಬಸವ ಆರಾಧ್ಯರ ಮನೆಯಲ್ಲಿದೆ. ಇದು ಹತ್ತೂವರೆ ಅಂಗುಲ ಉದ್ದ ಎಂಟೂವರೆ ಅಂಗುಲ ಅಗಲ ೮೦೦ ಗ್ರಾಂ ತೂಕದ ಮೂರು ಮಿಲಿಮೀಟರ್ ದಪ್ಪದ ತಾಮ್ರ ಶಾಸನದ ಮೇಲೆ ಯಾವ ಮುದ್ರೆಯೂ ಇಲ್ಲ. ಹಿಂದೆ ಸೂರ್ಯ ಚಂದ್ರ ಮತ್ತು ಲಿಂಗು ಇರುವ ಲಿಂಗಮುದ್ರೆಯ ಚಿಹ್ನೆ ಬರೆದಿದೆ. ಅಕ್ಷರಗಳು ಮತ್ತು ಅವುಗಳ ರೂಪವು ಸ್ಖಾಲಿತ್ಯದಿಂದ ಕೂಡಿದೆ.

ಈ ಶಾಸನದಲ್ಲಿ ಲಿಪಿ ದೋಷಗಳು ಬಹಳ ಇರುವುದರಿಂದ, ನಮಗೆ ರಾಜನ ಹೆಸರು ಸ್ಪಷ್ಟವಾಗಿ ಗೊತ್ತಾಗಿರುವುದರಿಂದ ಸುಮಾರು ಕ್ರಿ. ಶ. ೧೫೦೦ರ ಸುಮಾರಿಗೆ ಸೇರುತ್ತದೆಂದು ಊಹಿಸಬಹುದು. ವೀರ ನರಸಿಂಹ ಉಲ್ಲೇಖ ಬಂದಿರುವುದರಿಂದ ಅವನ ಕಾಲದಲ್ಲಿ ಗುಬ್ಬಿ ಹೊಸಹಳ್ಳಿಪಾಳೆಪಟ್ಟು ವಿಜಯನಗರದ ಅರಸರ ಆಳ್ವಿಕೆಗೆ ಸೇರಿತ್ತೆಂಬುದನ್ನು ತೋರಿಸುತ್ತದೆ. ಇದನ್ನು ಗುಬ್ಬಿ ಹೊಸಹಳ್ಳಿ ಅರಸರ ಮನೆಯಲ್ಲಿ ಇರುವ ದಾಖಲೆಗಳು ಪುಷ್ಟೀಕರಿಸುತ್ತವೆ.

ಕೆಂಪಸೋಮಯ ಒಡೆಯರಿಗೆ ಎಂದು ಹೇಳಿರುವ ಈ ಒಡೆಯರು ಗುಬ್ಬಿ ಹೊಸಹಳ್ಳಿಯಲ್ಲಿ ಇದ್ದ ಸೋಮಕಟ್ಟೆ ಮಠದ ಸ್ವಾಮಿಗಳೆ ? ಈಗ ಸೋಮಕಟ್ಟೆ ಮಠ ಪೂರ್ಣವಾಗಿ ಜೀರ್ಣವಾಗಿದೆ. "ಗುಬ್ಬಿಯ ಸ್ವಾಮಿಯು" ಎಂದು ಸ್ಪಷ್ಟವಾಗಿ ಬರೆದಿರುವ ಈ ಸ್ವಾಮಿ ಗುಬ್ಬಿ ಶ್ರೀ ಚನ್ನಬಸವೇಶ್ವರರಾಗಿರುತ್ತಾರೆ. ಗುಬ್ಬಿಯಲ್ಲಿ ಈಗಲೂ ಗುಬ್ಬಿಯಪ್ಪ, ಗುಬ್ಬಿಸ್ವಾಮಿ ಎಂದೇ ಭಕ್ತರು ಕರೆಯುವುದು. ಅವರ ಬಗ್ಗೆ ಸಿಕ್ಕ ಪ್ರಥಮ ಲಿಖಿತ ದಾಖಲೆ ಇದು.

ಬಿದರೆಸೀಮೆ ಮಧ್ಯದ ಗೋಪುರ ಇಂದು ಗೌರಿಪುರವಾಗಿದೆ. ಭೂಮಿಯ ೩೧೦ನಿ ತೆಂಕಲು ಅಮ್ಮನಕೆರೆ—ಈಗ ಅಮ್ಮನಘಟ್ಟವಾಗಿದೆ. ಪಡವಲು ಲಕ್ಕೇನಹಳ್ಳಿ, ಬಡಗಲು ಚನ್ನಶೆಟ್ಟಿಹಳ್ಳಿ ಹೀಗೆ ಇಲ್ಲಿ ಬಂದಿರುವ ಎಲ್ಲಾ ಹಳ್ಳಿಗಳನ್ನು ಈಗಲೂ ಗುರುತಿಸಬಹುದಾಗಿದೆ. ಚನ್ನಶೆಟ್ಟಿಹಳ್ಳಿಯಲ್ಲಿ ಗುಬ್ಬಿ ಶ್ರೀ ಚನ್ನಬಸವೇಶ್ವರರು ತಪಸ್ಸು ಮಾಡಿದ ಜಾಗದಲ್ಲಿ ಗುಬ್ಬಿ ಹೊಸಹಳ್ಳಿ ಅರಸರು ಭವ್ಯವಾದ ದೇವಾಲಯ ಕಟ್ಟಿಸಿ ಅವರ ಪವಾಡಗಳ ಬಗ್ಗೆ ರೇಖಾಚಿತ್ರಗಳನ್ನು ಕಲ್ಲಿನಲ್ಲಿ ಮೇಲು ಭಾಗದಲ್ಲಿ ಬಿಡಿಸಿದ್ದಾರೆ. ಶಾಸನದ ಅಂತ್ಯದಲ್ಲಿ ವಿಜಯನಗರದ ಅರಸರ ಒಪ್ಪವಾದ ಶ್ರೀ ವಿರೂಪಾಕ್ಷ ಎಂಬುದನ್ನು ಬರೆದಿದೆ.

ನಮೂದಿತವಾಗಿರುವ ಕಾಲದ ಒಂದು ವ್ಯತ್ಯಾಸ ಬಿಟ್ಟರೆ ಮಿಕ್ಕ ಎಲ್ಲಾ ವಿಷಯಗಳ ತಾಳೆಯಾಗುತ್ತದೆ ಎಡೆಯೂರು ಸಿದ್ಧಲಿಂಗೇಶ್ವರರ ಕಾಲ 1560 ಎಂದು ಸ್ಥಿರವಾಗಿದೆ. ಅವರ ಗುರುಗಳಾದ ಶ್ರೀ ಗೋಸಲ ಚನ್ನಬಸವೇಶ್ವರರ ಕಾಲ 1510ರ ತನಕ ಎಂದು ಇಟ್ಟು

* ತಾರಾನಾಥ ಆಯುರ್ವೇದ ಔಷಧಾಲಯ, ತುಮಕೂರು ಕಾಂಪ್ಲೆಕ್ಸ್, ತುಮಕೂರು.

ಕೊಂಡರೆ ಈ ಶಾಸನ 1500ರದ್ದು ಆಗುತ್ತದೆ. ಈ ದೋಷವನ್ನು ನಾವು ಒಪ್ಪದೆ ಹೋದರೆ ಇದು ಕೂಟ ಶಾಸನ ಎಂದು ಕರೆಯಬೇಕಾಗುತ್ತದೆ. ಇದರಲ್ಲಿ ಬಹಳಷ್ಟು ಕಾಗುಣಿತ ದೋಷ ಇರುವುದರಿಂದ ಲಿಪಿಗಾರನಿಗೆ ಅಕ್ಷರ ಜ್ಞಾನ ಅಷ್ಟು ಇಲ್ಲದೆ ಹೋಗಿರುವುದರಿಂದ ಕಾಲ ಒಂದು ತಿದ್ದುಪಡಿಯಾದರೆ ಗೊಂದಲ ಕಡಿಮೆಯಾಗುತ್ತದೆ. ಇದು ಒಂದು ಶಾಸನದ ಪ್ರತಿರೂಪ ಇರಬಹುದು.

## ಹಾಲಿ ಹೊನ್ನುಡಿಕೆಯಲ್ಲಿ ಇರುವ ಗುಬ್ಬಿ ಹೊಸಹಳ್ಳಿ ಹಿರೇಮಠದ ಲಿಂ॥ ಚನ್ನಬಸವ ಆರಾಧ್ಯರ ಮನೆಯಲ್ಲಿ ಇದ್ದ ಶಾಸನ

### ಶಾಸನ ಪಾಠ

○ ಸಸ್ತಿ ಶ್ರೀ ವಿಜಯಾಭುದಯ ಶಾಲಿವಾಹನ
ಶಕ ವರುಶ ೧೩೩೧ನೆಯ ಪರ ಸಂವತ್ಸರದ
ವಯಶಾಖ ಶು ೫ಲು ಶ್ರಿಮನ್ನು ಮಹಾಮಂಡಲೆ
ಶ್ವರ ರಾಜಾತಿರಾಜರಾಜಪರಮೇಶ್ವರ ಶಿ ವಿರಪ್ರ
ತಾಪನ ವಾರೀ ಸಾಳ ವಿರನರಸಿಂಗ ರಾಯ ದೆವ ಮಹಾ
ರಾಯರವರ ಕಾರ್ಯಕರರ್ತರಾದ ನರಸಂಣ ನಾ
ಯಕರವರ ತಾಯಿ ಗೌರಪಂಮನು ಕೆಂಪ ಸೊಮೆಯ
ವೊಡೆಯರಿಗೆ ಕೂಟ ತಾಂಬ್ರಸಾಸನದ ಕ್ರಮ
ರೆಂದರೆ ಗುಬಿಯು ಸಾಮಿಯ ಬಿದಿರೆಯ ಸೀಮೆ
ಮದ್ಯದ ಗೊಪುಪುರದ ಗಾಮವನು ಸರ್ವ ಮಾನ್ಯ
ದಯಾದರೆವಾಗಿ ಆ ಗಾಮಕೆ ಬೂದಲು ಮ ೩೩೦ನಿ
ನಡವುಳ್ಳ ತೆಂಕಲು ಅಂಮನಕಟೆತು ಪಡವಲು
ಲಖೆನಹಳಿ ಬಡಗಲು ಬೆವನೆಜರಂ ವಿರೂಡ ಉ
ಆ ಗೋಪಪುರದ ಬಾಗಲುಲು ಚತುಸೀಮೆಯಂ ಸಕ ಆ
ಸ್ವಾಮ ನಿದಿನಿಕ್ಷೇಪ ಜಲ ಪಾಶಣ ಎನ್ನುಂಟು ದ ಸ
ವ ಸಾಮವನು ಅನುಭವಿಸಿ ಬರುವದು ಅಂಮ
ಕೊಟ ತಾಂಬ ಶಾಸನ ಸ್ಥಳದವರ ಒಬತನಾಡ ಗಉ
ಡ ಗುಬಿ ಲಿಂಗಪಗಉಡ ಚಂನಿಸೆಟಿರೊಳದ ಶ್ರಿ
ಗೊಂದ ಗಉಡ ಲಖೆನಹಳಿ ಮಲಿ ಗೊಂಡ ಗಉಡ

ಡಾ|| ಶಿವಗೌಡ ಬಾ. ಪಾಟೀಲ (ಕೋಚರಿ)*

# ವಿಜಯಾದಿತ್ಯನ ಅಮ್ಮಣಗಿಯ ತಾಮ್ರಪಟದ ಬಗ್ಗೆ ಮಾಹಿತಿ

ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕು ಅಮ್ಮಣಗಿಯ ಗೌರಿಶಂಕರ ಹಿರೇಮಠ ಅವರ ಮನೆಯಲ್ಲಿ ಈ ತಾಮ್ರಪಟವಿರುತ್ತದೆ. ಸುಮಾರು ೩೦ ವರ್ಷಗಳ ಹಿಂದೆ ಈ ತಾಮ್ರಪಟದ ಜೊತೆಗೆ ಇನ್ನು ಎರಡು ತಾಮ್ರಪಟಗಳಿದ್ದವು ಎಂದು ಗೊತ್ತಾಗುತ್ತದೆ. ಆದರೆ ಈಗ ಒಂದೇ ಒಂದು ತಾಮ್ರಪಟವು ಇರುತ್ತದೆ. ಇದರ ಉದ್ದ ೯ ೧/೪ ಅಂಗುಲ. ಅಗಲ ೪ ೩/೪ ಅಂಗುಲವಿರುತ್ತವೆ. ಈ ಪಟದ ಎರಡೂ ಬದಿಗೆ ೯+೯ ಸಾಲುಗಳು ಇರುತ್ತವೆ. ಹಾಗೂ ನಾಲ್ಕು ಅಂಚುಗಳನ್ನು ಸ್ವಲ್ಪ ಎತ್ತರಿಸಲಾಗಿದೆ. ಅದರಲ್ಲಿ ಒಂದು ಅಂಚು ಮುರಿದಿದೆ.

ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀ ಪೃಥ್ವಿವಲ್ಲಭ. (ಚಾಲುಕ್ಯರ ೫ನೇ ಅರಸ. ಕ್ರಿ.ಶ. ೬೫೫-೬೮೦ ಎಂದು. ಕರ್ನಾಟಕ ಗತವೈಭವ ಆ. ವೆಂಕಟರಾಯ. ಪು. ೫೩) ಮಹಾರಾಜ ಪರಮೇಶ್ವರ ಭಟ್ಟಾರಕರ ಮೊಮ್ಮಗ. ಹಾಗೂ ವಿನಯಾದಿತ್ಯ ಸತ್ಯಾಶ್ರಯ ಮಹಾರಾಜರ ಮಗ ಶ್ರೀ ವಿಜಯಾದಿತ್ಯ ಸತ್ಯಾಶ್ರಯ (ಸಮಸ್ತಭುವನಾಶ್ರಯ ಆ. ವೆಂ) ಮಹಾರಾಜರು ದಾನ ಮಾಡಿದ್ದನ್ನು ಈ ಪಟದಲ್ಲಿ ಬರೆಯಲಾಗಿದೆ. ಇದರ ದಾನಿಗಳು ಪಶ್ಚಿಮ ಚಾಲುಕ್ಯ ವಂಶದ ಸುಪ್ರಸಿದ್ಧ ರಾಜರಾಗಿದ್ದಾರೆ. ಇವರು ಮೊದಲು ವಾತಾಪಿ (ಬಾದಾಮಿ) ನಗರದಲ್ಲಿ ರಾಜ್ಯವಾಳುವುದರಿಂದ ಇತಿಹಾಸ ಜಗತ್ತಿನಲ್ಲಿ ವಾತಾಪಿ ಚಾಲುಕ್ಯರೆಂದು ಹೆಸರಾಗಿದ್ದಾರೆ.

ವಂಶಾವಳಿಯ ಅನುಸಾರವಾಗಿ ಇದು ವಿಜಯಾದಿತ್ಯ ಎರಡನೇ ಪುಲಕೇಶಿಯ ಮರಿಮೊಮ್ಮಗ ಹಾಗೂ ಮೊದಲನೇ ವಿಕ್ರಮಾದಿತ್ಯನ ಮೊಮ್ಮಗ ಆಗಿರುತ್ತಾನೆ. ಆ ಕಾಲದಲ್ಲಿ ಎರಡನೇ ಪುಲಕೇಶಿಯ ತಮ್ಮ ವಿಷ್ಣುವರ್ಧನ ಮಹಾರಾಜ ಮತ್ತು ಆವನ ಮಗ ಕುಡಿಕೊಂಡು ಪೂರ್ವ ಚಾಲುಕ್ಯ (ವೈಂಗಿ ಅಥವಾ ಆಂಧ್ರ) ರಾಜ್ಯದ ಪಾಲನೆಯನ್ನು ಮಾಡುತ್ತಿದ್ದರು.

ತಾಮ್ರಪಟದ ಮುಂದಿನ ಭಾಗವು ದೊರೆಯದೇ ಇದ್ದ ಕಾರಣ ದಾನಪತ್ರ ಪಡೆದವರ ಹೆಸರು ಹೇಳಲು ಸಾಧ್ಯವಿಲ್ಲ. ಆದರೂ ಅಮ್ಮಣಗಿಯ ಮಠದ ಚಿರಕಾಲ ಪರಂಪರೆ ಅನುಸಾರವಾಗಿ ವಿಚಾರಿಸಲು ಅದೇ ಮಠದ ಪ್ರಾಚೀನ ತಪಸ್ವಿಯಾದ ವಿದ್ವಾಂಸರಿಗೆ ಈ ದಾನಪತ್ರವನ್ನು ಕೊಡಲಾಗಿರಬೇಕು.

**ಈ ತಾಮ್ರಪಟದ ಕಾಲ**—ಚತ್ವಾರಿಂಶತ್ಯುತ್ತರ ಛಟ್ ಛತೇಷು ಶಕ ವರ್ಷೇಶ್ವತಿತೇಷು ಶಕವರ್ಷ ೬೪೦ ಕಳೆದು ಹೋದನಂತರ ಎಂದಿರುವುದರಿಂದ ಇದು ಕ್ರಿ. ಶ. 718ಕ್ಕೆ ಸರಿ ಹೊಂದುತ್ತದೆ.

**ಲಿಪಿ**—ಇದರ ಲಿಪಿಯೂ ಕೂಡ ಇದನ್ನು ಸಮರ್ಥಿಸುತ್ತದೆ. ಕಾಲನಿರ್ಣಯಕ್ಕೆ ಅನುಸರಿಸಿ ಈ ದಾನಪತ್ರದ ಅಕ್ಷರಗಳು ಪ್ರಾಚೀನ ಆಂಧ್ರ, ಕರ್ನಾಟಕ ಲಿಪಿಗಳಲ್ಲಿವೆ. ಪತ್ರದ ಒಂದು ಮಗ್ಗಲು ದುಂಡಾಗಿಯೂ ಮತ್ತೊಂದು ಮಗ್ಗಲು ಸ್ವಲ್ಪ ಕೋನಾಕಾರವಾಗಿರು

* ಬಸವನ ಬೀದಿ, ಸಂಕೇಶ್ವರ ೫೯೧ ೩೧೩.

ವುದರಿಂದ ಲಿಪಿಕಾರರು ಇಬ್ಬರು ಇದ್ದಂತೆ ಭಾಸವಾಗುತ್ತದೆ. ಇ. ಎ. ಹಾಗೂ ಬಹಳಷ್ಟು ಪ್ರತ್ಯಕ್ಷ ಅಕ್ಷರ ಬಂದಿವೆ. ಸ್ವರ ಮಾತ್ರೆಯಲ್ಲಿ ಎಕಾರ, ಐಕಾರ ಬಿಟ್ಟು ಎಲ್ಲ ಮಾತ್ರೆಗಳು ಬಂದರೂ ಕೂಡ. ಇ ಮತ್ತು ಈ ಮಾತ್ರೆಗಳಲ್ಲಿ ಯಾವ ತರದ ಭೇದಗಳು ಕಂಡು ಬರುವುದಿಲ್ಲ. ವ್ಯಂಜನ ಮಾತ್ರೆಗಳಲ್ಲಿ ಕೆಲವು ಸ್ಥಾನಗಳಲ್ಲಿ ಮಹಾಪ್ರಾಣದ ಬದಲಾಗಿ ಅಲ್ಪಪ್ರಾಣಗಳನ್ನೂ ಉಪಯೋಗಿಸಲಾಗಿದೆ.

### ಶಾಸನ ಪಾಠ

೧. ಧಾನ ಪ್ರವರ ತುರಂಜ್ಗ ಮೇಣೈ ಕೇಣೈವೋಸ್ತಾ ರಿತಾಸೆಷವಿಜಿಗಿ ಷೋರವ ನಿಪತಿ ತೃತಯಾಂತ ರಿತಾ [ಸ್ವಗುರೊ] [ ಃ ]

೨. ಶ್ರೀಯ ಮಾತ್ಮಸಾತ್ರಿ ( ತ್ತೃ ) ತ್ಯ ಪ್ರಭಾವ ಕುಲಿಶ ದಲಿತ ಪಾಂಡ್ಯ ಚೋಳ ಕೇರಳ ಕಳಬ್ರ ಪ್ರಬೃತಿ ಬೃಬ್ರದದ ಬ್ರುವಿಬ್ರಮ

೩. ಸಾನನ್ಯಾವನತ ಕಾಚ್ಞೀಪತಿ ಮಕುಟ ಚುಂಬಿ ( ಬ್ಮಿ ) ತ ಪಾದಾಂಬು ( ಬ್ಮ ಮು) ಜಸ್ಯ ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀಪೃಥು ( ಥಿ ) ಭೀ ವಲ್ಲಭ ಮಹಾರಾಜಾಧಿ

೪. ರಾಜ ಪರಮೇಶ್ವರ ಭಟ್ಟಾರಕ ಪ್ರೀಯಸೊನೋ [ ಃ ] ಪಿತುರಾಜ್ಞಯಾ ಬಾಲೆಂದು ಶೇಕ (ಖ)

೫. ರಸ್ಯತಾರತಾರಾತಿರವ ದೈತ್ಯಬಲಮತಿ ಸಮುದ್ಧ ತತ್ರೈರಾಜ ಕಾಂಚೀಪತಿ ಬಲವಷ್ಮಭ್ಯ ಕರದೀ

೬. ಕೃ ( ಕೃ ) ತಕವೇರ ಪಾರಸಿಕ ಸಿಂಹಲಾಧಿ ದ್ವೀಪಾದಿಪಸ್ಯ ಸಕಲೋತ್ತರಾ ಪಥನಾಥ ಮಥ ನೋಪಾರ್ಜಿ.

೭. ತೋರ್ಜಿತ ಪಾಳಿಧ್ವಜಾದಿ ಸಮಸ್ತಪಾರ ವೈಶ್ವರ್ಯ ಚಿನ್ಹಸ್ಯ ವಿನಯಾದಿತ್ಯ ಸತ್ಯಾಶ್ರಯ ಶ್ರೀಪೃಥಿ

೮. ವಿ ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕಸ್ಯ ಪ್ರಿಯಾತ್ಮಜ ಶೈಶವ ಏವಾಧಿ

೯. ಗತಾಶೆ ಪಾಸ್ತ್ರ ಶಾಸ್ತ್ರ ( ಸ್ತ್ರೈ ) ದಕ್ಷಿಣಾಶಾ ವಿಜಯನಿ ಪಿತಾಮಹೆ ಸಮುನ್ಮ್ಮಲಿಖಿತ ನಿಖಿಲ ಕಣಕಟಿ ಸಂಹಿತಿರುತ್ತ

೧೦. ರಾಪಥ ವಿಜಿಗಿಷೋರ್ಗುರೋರಗ್ರತ ಏವಾವ ಹವ್ಯಾ ಪಾರವಾಚರನ್ನರಾತಿಗಜಘಟಾಪಾಟ ನವಿಶಿ

೧೧. ರ್ಯ್ಯವಮಾನ (ಣ) ಕ್ರ (ಕೃ) ಪಾನಾಧಾರಸ್ಸ ಮುಗ್ರ ವಿಗ್ರಹಾಗ್ರೇಸರಸ ಸಾಹಸ ರಸಿಕಃ ಪರಾಮು (ಜ್ಮ) ಖಿಕ್ರ (ಕೃ) ತಶ

೧೨. ತ್ರುಮಂಡಲ (ಲೋ) ಗಂಗಾ (ಜ್ಞಾ) ಯಮುನಾ ಪಾಳಿಧ್ವಜಪಟ (ಹ) ಡಕ್ಕಾ ಮಹಾಶಬ್ದ ಚಿನ್ಹಕ ಮಾಣಿಕ್ಯ ಮತಂಗ (ಜ್ಞಾ) ಜಾದಿಸ್ಪಿತೃ [ ಸಾ ]

೧೩. ತ್ಕುರ್ವಪ(ನ್ಪ) ರೈಃ ಪಲಾಯಮಾ ನೈಯರಾ ಸಾಧ್ಯ ಕಥಮಪಿ ವಿಧಿವಶಾದ ಪನೀತೋಪಿ ಪ್ರತಾ ಪಾದೇವಾ ವಿಷಯ ಪ್ರಕೋಪ

೧೪. ಮರಾಜಕಮುತ್ಸಾರಯನ್ವತ್ಸರಾಜ ಇವಾನಪ (ಪಿ) ಕ್ಷಿತ ಪರಸಹಾಯಕತ (ಸ್ತ) ದವಗ್ರಹಾನಿ (ನ್ನಿ) ರ್ಗತ್ಯ ಸ್ವಭುಜಾ ವಷ್ಮಭ (ವ್ಭ)

೧೫. ಪ್ರಸಾಧಿತಾಶೇಷ ವಿಶ್ವಮ್ಬರ [ ಃ ] ಪ್ರಭುರಕ (ಖ) ಣಿಡತಶಕ್ತಿತ್ರಯತ್ವ (ತ್ವಾಛ (ಚ್ಛ) ತ್ರುಮುದ ಭಜ್ಞಾನತ್ವಾ ದುದಾರತ್ವಾ

೧೬. ನ್ನಿರವವದ್ಯತ್ವಾ ದ್ಯಸ್ಸಮಸ್ತಭುವನಾಶ್ರಯಃ ಸಕಲಪಾರವೈಶ್ವರ್ಯ ವ್ಯಕ್ತಿಹೇತು ಪಾಳಿ ಧ್ವಜಾತ್ಯುಜ್ವಲ ಪ್ರಾಜ್ಯ

೧೭. ರಾಜ್ಯ ವಿಜಯಾದಿತ್ಯ ಸತ್ಯಾಶ್ರಯ ಶ್ರೀ ಪೃಥಿವಿ ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕಸ್ಸರ್ವ

೧೮. ನೇಪ ಮಾಜ್ಞಾಪಯತಿ ವಿದಿತ ಮಸ್ತುವೊ( S ) ಸ್ಮಾಭಿತ (ಶ್ವತ್ವಾಂ) [ - ] ಶತ್ಯುತ್ತರ ಪಟ್ಭ ತೇಷು ಶಕವರ್ಷೆಷ್ವ ತಿ–ತೇಷು

**ಸಾರಾಂಶ-**

ಚಿತ್ರಕಂಠವೆಂಬ ಒಂದು ಅಶ್ವದಿಂದ ಅನೇಕ ವೀರರನ್ನು ಹೊಡೆದಟ್ಟಿ ನೂರು ರಾಜ್ಯಗಳಿಂದ ಸಂಪಾದಿಸಿದ ತನ್ನ ತಂದೆಯ ಲಕ್ಷ್ಮಿಯನ್ನು ತನ್ನ ವಶಪಡಿಸಿಕೊಂಡು ತನ್ನ ಪರಾಕ್ರಮದ ವಜ್ರಾಯುಧದಿಂದ ಪಾಂಡ್ಯ,

ಚೋಳ, ಕೇರಳ ಕಳಬ್ರ ದೇಶಗಳ ನೃಪತಿಗಳಂತಹ ಪರ್ವತಗಳನ್ನು ಸೀಳಿ ಯಾವ ರಾಜರಿಗೂ ಬಾಗದಂಥ ಕಾಂಚಿನರೇಶನಿಂದ ಪೂಜಿಸಲ್ಪಟ್ಟ ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀ ಪೃಥ್ವಿವಲ್ಲಭ ಮಹಾರಾಜ ಪರಮೇಶ್ವರನ ಮೊಮ್ಮಗನು. ಶಿವನ ಆಜ್ಞೆಯಿಂದ ಕುಮಾರ ಷಣ್ಮುಖನು ಯಾವ ರೀತಿ ರಾಕ್ಷಸ ಸೈನ್ಯವನ್ನು ವಿಧ್ವಂಸ ಪಡಿಸಿದನೋ ಅದೇ ರೀತಿ ತನ್ನ ತಂದೆಯ ಆಜ್ಞೆಯಂತೆ ಅತೀ ಅದ್ಭುತವಾದಂತಹ ಕಾಂಚೀ ರಾಜ್ಯನ ಸೈನ್ಯವನ್ನು ಕಟ್ಟಿಹಾಕಿ ಕವೇರ ಪಾರ್ಸಿಕ ಸಿಂಹಳಾದಿ ದ್ವೀಪಾದಿಸೆಗಳನ್ನು (ಕರದಾತಾ ಎಂದು) ಕೊಡುಗೈ ದೊರೆಗಳೆಂದು ಮಾಡಿ ಉತ್ತರ ಖಂಡದ ರಾಜರುಗಳನ್ನು ಸೋಲಿಸಿ ಪಾಳೀ ಧ್ವಜಾದಿ ನಿಖಿಳ ಪಾರ್ಮೆಶ್ವರಿಯ ಚಿನ್ಹೆಗಳನ್ನು ಪಡೆದಂತಹ ಶ್ರೀ ವಿನಯಾದಿತ್ಯ ಸತ್ಯಾಶ್ರಯ ಮಹಾರಾಜರ ಪುತ್ರ ಎಲ್ಲ ದನುರ್ವಿದ್ಯೆಗಳ ಅಧ್ಯಯನ ಮಾಡಿದ ದಕ್ಷಿಣ ದೇಸದ ವಿಜಯಕ್ಕಾಗಿ ಅಜ್ಜನು ಹೋದ ಮೇಲೆ ತರತಸದ ಬಾಧೆಗಳನ್ನು ದೂರು ಮಾಡಿ ಉತ್ತರ ದೇಶದ ವಿಜಯಕ್ಕೆ ಹೋದಂತಹ ತನ್ನ ತಂದೆಯ ಎದುರಿಗೆ ಯುದ್ಧ ಕಾರ್ಯವನ್ನು ನೀಗಿಸುತ್ತ ಶತ್ರು ರಾಜರುಗಳ ಕುಂಭ ಬೇಧನ ಮಾಡುವಾಗ ಖಡ್ಗದ ಹರಿತು ಹರಿದು ಹೋದರೂ ಕೂಡ ಯುದ್ಧದ ಕೊನೆಯವರೆಗೆ ಎಲ್ಲಕ್ಕೂ ಮೇಲಾಗಿ ಉಳಿಯುುವದರಿಂದ ಸದ್ಧೈರ್ಯ ರಶಿಕ ಗಂಗಾ ಯಮುನಾ ಪಾಳಿಧ್ವಜಾದಿ ಚಿನ್ಹದಿಂದ ಅಲಂಕರಿಸಿದ ಮಾಣಿಕ್ಯಗಜಗಳನ್ನು ತನ್ನ ತಂದೆಗೆ ಒಪ್ಪಿಸುತ್ತ ದುರ್ದೈವದಿಂದ ಶತ್ರುಗಳ ಕೈವಶವಾದರೂ ಕೂಡ ತನ್ನ ಸ್ವಪರಾಕ್ರಮದಿಂದ ಇನ್ನಿತರ ಸಹಾಯ ಪಡೆಯದೇ ವತ್ಸರಾಜನಂತೆ ಶತ್ರು ಬಂಧನದಿಂದ ಹೊರಬಿದ್ದು ತನ್ನ ಸ್ವಭುಜದ ಬಲದಿಂದ ಈ ವಿಶ್ವವನ್ನೆ ವಶಪಡಿಸತಕ್ಕಂತಹ ಮತ್ತು ಪ್ರಭು ಮಂತ್ರೋತ್ಸಾಹ ನಾಮಶಕ್ತಿತ್ರಯಗಳನ್ನು ಸಂಪಾದಿಸಿ ಶತ್ರುಗರ್ವಹರಣ ಮಾಡಿ ಉದಾರತೆಯಿಂದ ನಿರ್ಮಲತೆಯಿಂದ ಸಮಸ್ತ ಜಗದಾಧಾರ ಮತ್ತು ನಿಖಿಲ ಪಾರ್ಮೆಶ್ವರ್ಯದ ಕಾರಣ ಪಾಳಿ ಧ್ವಜದಿಂದ ಉಜ್ವಲ ಸಾಮ್ರಾಜ್ಯದ ಮೇಲೆ ವಿರಾಜಮಾನನಾಗಿ ವಿಜಯಾದಿತ್ಯ ಸತ್ಯಾಶ್ರಯ ಮಹಾರಾಜರು ಎಲ್ಲ ಪ್ರಜೆಗೆ ಆಜ್ಞೆ ಮಾಡುತ್ತ ಈಗ ಶಕವರ್ಷದ ೬೪೦ ಕಳೆದುಹೋದಾಗ. ತಾಮ್ರಪಟಗಳ ಪಾಠ ಇಲ್ಲಿಗೆ ನಿಲ್ಲುತ್ತದೆ. ಈ ಶಾಸನದ ಉಳಿದ ಭಾಗ ಸಿಕ್ಕರೆ ವಿಕ್ರಮಾದಿತ್ಯನ ಶೌರ್ಯದ ಬಗ್ಗೆ ಇನ್ನೂ ಹೆಚ್ಚಿನ ಬೆಳಕು ಬೀಳುತ್ತದೆ.

## ಆಧಾರ ಗ್ರಂಥ


1. ಶ್ರೀ ವೀರಭದ್ರಶರ್ಮಾ ತೈಲಂಗ (ವೇದಕಾವ್ಯತೀರ್ಥ ಸಾಹಿತ್ಯ ವಿಶಾರದ) ಕಾಶಿ. ಭಾರತೀಯ ಅನುಶೀಲನ ಗ್ರಂಥ.
2. ಆಲೂರು ವೆಂಕಟರಾಯ, ಕರ್ನಾಟಕ ಗತ ವೈಭವ (೧೯೨೭) ಪುಟ. ೫೩



[ಈ ಲೇಖನ ಬರೆಯಲು ಸಹಕರಿಸಿದ

ಡಾ|| ಬಿ. ಕೆ. ಖಡಬಡಿ. ಧಾರವಾಡ, ಶ್ರೀ ಶಂಕರ ಜಾಗನೂರಿ. ಸಂಕೇಶ್ವರ, ಶ್ರೀ ಗೌರೀಶಂಕರ ಹಿರೇಮಠ ಅಮ್ಮಣಗಿ ಹಿರೇಮಠ ಪಿ. ಎಸ್. ಆಯ್ ಅಮ್ಮಣಗಿ

ಇವರಿಗೆ ಕೃತಜ್ಞತೆಗಳು]

ಎಂ.ಎನ್. ಪ್ರಭಾಕರ್ *

# ಕರ್ನಾಟಕದಲ್ಲಿ ಭೂಮಿಜ ಶೈಲಿಯ ದೇವಾಲಯಗಳು

ಕರ್ನಾಟಕದಲ್ಲಿ ದೇವಾಲಯಗಳಿಗೆ ಸಂಬಂಧಿಸಿದಂತೆ ಭೂಮಿಜ ಶೈಲಿಯ ಉಲ್ಲೇಖವು ಸೊರಬ ತಾಲ್ಲೂಕಿನ ಕುಬಟೂರು ಶಾಸನದಲ್ಲಿ ದೊರೆತಿದ್ದು ವಿದ್ವಾಂಸರು ಈ ಶೈಲಿಯನ್ನು ಗುರುತಿಸಲು ಹಲವೆಡೆ ಪ್ರಯತ್ನಿಸಿದ್ದಾರೆ. ಈ ಶಾಸನದ ಕಾಲವು ಕ್ರಿ.ಶ. ಹನ್ನೆರಡನೆಯ ಶತಮಾನದ ಆರಂಭವೆಂದು ನಿರ್ಧರಿಸಲಾಗಿದ್ದು ಡಾ|| ಪಿ.ಕೆ. ಆಚಾರ್ಯರವರು Dictionary of Hindu Architeeture ಗ್ರಂಥದಲ್ಲಿಯೂ ಈ ಶಾಸನವನ್ನು ಗಮನಿಸಿದ್ದಾರೆ. ಅಪರಾಜಿತ ಪೃಚ್ಛಾ ಗ್ರಂಥದ ಸಂಪಾದನಕಾರರಾದ ಪಿ.ಎ. ಮಂಕಂಡ್ ರವರು ಗ್ರಂಥದ ಪ್ರಸ್ತಾವನೆಯಲ್ಲಿ ಈ ಶಾಸನವನ್ನು ಹೆಸರಿಸಿ ಭೂಮಿಜ ಶೈಲಿಯು ವೇಸರ ಶೈಲಿಗೆ ಪರ್ಯಾಯವಾಗಿ ಬೆಳೆಯಿತೆಂದೂ ಒಂಬತ್ತನೆಯ ಶತಮಾನದ ನಂತರ ಕಾಣಿಸತೊಡಗಿತೆಂದೂ ಹೇಳಿರುತ್ತಾರೆ. ಭೂಮಿಜ ಶೈಲಿಯನ್ನು ಸಮರಾಂಗಣ ಸೂತ್ರಧಾರ ಹಾಗೂ ಅಪರಾಜಿತ ಪೃಚ್ಛಾ ಗ್ರಂಥಗಳು ಗುರುತಿಸಿದ್ದು, ಈ ಗ್ರಂಥಗಳ ವಿವರಣೆ ಪ್ರಕಾರ ಭೂಮಿಜ ಶೈಲಿಯ ತಲಚ್ಛಂದವು ಅಷ್ಟಾಶ್ರ ಅಥವಾ ವೃತ್ತಕವೆನ್ನಿಸಿದೆ. ಈ ವಿವರಗಳನ್ನಾಧರಿಸಿ ವೇಸರ ಹಾಗೂ ಭೂಮಿಜ ಶೈಲಿಗಳು ಒಂದೇ ಎಂದು ತೀರ್ಮಾನಿಸಿದ್ದಾರೆ. ದಾಕ್ಷಿಣಾತ್ಯ ಸಂಪ್ರದಾಯದ ವೇಸರ ಶೈಲಿಯ ಸ್ಪಷ್ಟ ಲಕ್ಷಣಗಳು ಈವರೆಗೆ ವಿವರಿಸದೆ ಈ ರೀತಿಯ ವಿರೋಧಾಭಾಸಗಳಿಗೆ ಕಾರಣವಾಗಿತ್ತು. ಈಗ ವೇಸರ ಹಾಗೂ ಭೂಮಿಜ ಶೈಲಿಗಳನ್ನು ಖಚಿತವಾಗಿ ಗುರುತಿಸಲು ಸಾಧ್ಯವಾಗಿದ್ದು, ಇವು ಪ್ರತ್ಯೇಕ ಸಂಪ್ರದಾಯಗಳಿಗೆ ಸಂಬಂಧಿಸಿಯೆಂದು ವರ್ಗೀಕರಿಸಿಕೊಳ್ಳಲಾಗಿದೆ.

ಕರ್ನಾಟಕವು ದಾಕ್ಷಿಣಾತ್ಯ ಹಾಗೂ ಔತ್ತರೇಯ ಸಂಪ್ರದಾಯಗಳ ಸಂಗಮಸ್ಥಾನವೆಂಬುದನ್ನು ಗಮನಿಸಬೇಕು; ಬಾದಾಮಿ ಚಾಲುಕ್ಯರ ಕಾಲದಲ್ಲಿ ದಾಕ್ಷಿಣಾತ್ಯ ಸಂಪ್ರದಾಯದ ಮೂರು ಪ್ರಮುಖ ಶೈಲಿಗಳೂ ದೊರೆತಿದ್ದು ಇದರೊಂದಿಗೆ ಔತ್ತರೇಯದ ಸಂಪ್ರದಾಯದ ಕಳಿಂಗ ಶೈಲಿಯೂ ಪ್ರಕಟಗೊಂಡಿತ್ತು.

ಔತ್ತರೇಯ ಸಂಪ್ರದಾಯದ ಇನ್ನಿತರ ಶೈಲಿಗಳು ಕಲ್ಯಾಣಿ ಚಾಲುಕ್ಯರು ಹಾಗೂ ಹೊಯ್ಸಳರ ಕಾಲದಲ್ಲಿ ಬೆಳೆದಿದ್ದು ಇವಕ್ಕೆ ಬಾದಾಮಿ ಚಾಲುಕ್ಯರ ಕಾಲದ ಕಳಿಂಗ ಶೈಲಿಯೇ ಆಧಾರವೆನಿಸಿದೆ. ದಾಕ್ಷಿಣಾತ್ಯ ಸಂಪ್ರದಾಯದಂತೆ ಔತ್ತರೇಯ ಸಂಪ್ರದಾಯದಲ್ಲಿ ಮೂರು ಪ್ರಮುಖ ಶೈಲಿಗಳನ್ನು ಗುರುತಿಸಬಹುದಾಗಿದ್ದು ಶಾಸನವು (ಪಿರಿದುಂ) ನಾಗರ, ದ್ರಾವಿಡ, ಭೂಮಿಜ ಎಂದು ಹೆಸರಿಸಿದೆ.

ನಾಗರ ಶೈಲಿಯು, ಕಳಿಂಗ ಶೈಲಿಯಂತೆ ಬಾಗಿದ ಶಿಖರ ಹಾಗೂ ಆಮಲಸಾರವುಳ್ಳದ್ದು. ಈ ಶೈಲಿಯ

---

* ಡೆಪ್ಯುಟಿ ಮ್ಯಾನೇಜರ್, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕೋಟೆ ಶಾಖೆ,
ಕೃಷ್ಣರಾಜೇಂದ್ರ ರಸ್ತೆ, ಬೆಂಗಳೂರು–೫೬೦ ೦೦೨

ಪ್ರಭೇದವೆನಿಸಿ ಏಕಶೃಂಗ ರಚನೆ ಹಾಗೂ ಬಹುಶೃಂಗ ರಚನೆಗಳನ್ನು ಕಾಣಬಹುದಾಗಿದೆ. ಇವುಗಳನ್ನು ಕ್ರಮ ಲತಿನ ಹಾಗೂ ವಿಮಾನನಾಗರ ಶೈಲಿಗಳೆಂದು ಕ್ರಮ ವಾಗಿ ಗುರುತಿಸಲಾಗಿದೆ. ನಾಗರಶೈಲಿಯ ಪ್ರಭೇದಗಳ ನಂತರ ಭೂಮಿಜ ಶೈಲಿಯನ್ನು ಗುರುತಿಸಬಹುದು. ಭೂಮಿಜ ಶೈಲಿಯೂ ಮೂಲತಃ ಬಾಗಿದ ಶಿಖರ ಹಾಗೂ ಆಮಲಸಾರವುಳ್ಳದ್ದು. ಈ ರೀತಿಯ ಸ್ವತಂತ್ರ ರಚನೆ ಳಗನ್ನು ಕರ್ನಾಟಕದ ಹೊರಗೂ ಕಾಣಬಹುದು. ಕೇವಲ ಅಲಂಕರಣಕ್ಕಾಗಿ ಬಳಸಿದ ಬಾಗಿದ ಶಿಖರವುಳ್ಳ ಭೂಮಿಜ ಮಾದರಿಯನ್ನು ಕರ್ನಾಟಕದ ಹಲವು ದೇವಾ ಲಯಗಳ ಜಂಘಾ ಭಾಗದಲ್ಲಿ ಕಾಣಬಹುದು.

ಕರ್ನಾಟಕದಲ್ಲಿ ಸ್ವತಂತ್ರವೆನಿಸುವ ಭೂಮಿಜ ಶೈಲಿಯ ದೇವಾಲಯುಗಳು ಎರಡು. ಇವು ತುರುವೇ ಕೆರೆಯ ಮೂಲೆ ಶಂಕರೇಶ್ವರ ಹಾಗೂ ನುಗ್ಗೇಹಳ್ಳಿಯ ಸದಾಶಿವ ದೇವಾಲಯುಗಳು. ಈ ದೇವಾಲಯಗಳ ಶಿಖರಗಳು ಪಿರಮಿಡ್ ಆಕಾರದಂತಿದ್ದು ಕೆಳಗಿನಿಂದ ಮೇಲಕ್ಕೆ ಕಿರಿದಾಗುತ್ತಾ ಸಾಗುತ್ತದೆ. ಶಿಖರದ ಮೇಲ್ಗಡೆ, ವೇದಿಕೆ ಹಾಗೂ ಕೊಂಚ ಚಪ್ಪಟೆಯಾದ ಘಂಟಾ ರಚನೆಯನ್ನು ಹೊಂದಿದೆ. ಕರ್ನಾಟಕದಲ್ಲಿ ಕಾಣುವ ಈ ರಚನೆಗಳು ಶಿಲ್ಪಿಗಳಿಗೆ ನೀಡಿದ ಸ್ವಾತಂತ್ರ ದಿಂದ ಮೂಡಿಬಂದ ಪ್ರಯೋಗಶೀಲ ರಚನೆಗಳೆನ್ನ ಬಹುದು. ಪಿರಮಿಡ್ ಆಕಾರದ ಶಿಖರಗಳು ಔತ್ತರೇಯ ದ್ರಾವಿಡ ಹಾಗೂ ದಾಕ್ಷಿಣಾತ್ಯ ಸಂಪ್ರದಾಯದ ಸಂಸರ್ಗದಿಂದ ಮೇಳೈಸಿದೆ ಎನ್ನಬಹುದು. ಇವನ್ನು ಸ್ವತಂತ್ರ ಪ್ರಾಯೋಗಿಕ ರಚನೆಗಳೆನ್ನಬೇಕೇ ಹೊರತು ವಿಕಾಸದ ಹಂತಗಳಲ್ಲಿ ಗುರುತಿಸಲಾಗದು. ಪ್ರೊ. ಎಂ.ಎ. ಢಾಕೆಯವರು ಈ ದೇವಾಲಯಗಳನ್ನು ಪ್ರಾದೇಶಿಕ ವೈವಿಧ್ಯಗಳನ್ನು ಮೈಗೂಡಿಸಿಕೊಂಡ ಭೂಮಿಜ ಶೈಲಿ ಎನ್ನುತ್ತಾರೆ. ಈ ದೇವಾಲಯಗಳ ಅಧ್ಯಯನ ಈ ಪ್ರಬಂಧದ ಉದ್ದೇಶವೆನಿಸಿದೆ.

ದಖ್ಖನ್ ಪ್ರದೇಶದಲ್ಲಿ ಹಲವಾರು ಭೂಮಿಜ ಶೈಲಿಯ ದೇವಾಲಯಗಳಿದ್ದು ಹೆನ್ರಿಕೆಜಿನ್ಸ್‌ರವರು ಈ ದೇವಾಲಯಗಳ ವಿವರಗಳನ್ನು ಒಂದೆಡೆ ನೀಡಿದ್ದಾರೆ. ಶಿಲಾಹಾರ ಮನೆತನದವರ ಕಾಲದಲ್ಲಿ ನಿರ್ಮಾಣಗೊಂಡ ಅಂಬರನಾಥ ದೇವಾಲಯ ಇವುಗಳಲ್ಲಿ ಪ್ರಮುಖ ವಾದುದು. ದೇವಾಲಯದಲ್ಲಿ ಲಭ್ಯವಿರುವ ಶಾಸನ ರೀತ್ಯಾ ಈ ದೇವಾಲಯದ ಕಾಲ ಸುಮಾರು ಕ್ರಿ.ಶ. ೧೦೬೦. ಸಿನ್ನಾರ್‌ನಲ್ಲಿರುವ ಗೊಂಡೇಶ್ವರ ದೇವಾಲಯ, ರತನ್‌ವಾಡಿಯ ಅಮೃತೇಶ್ವರ ದೇವಾಲಯ, ಗುರ್ಯಾಲ ದಲ್ಲಿರುವ ಸೋಮಲಿಂಗ ದೇವಾಲಯ ಭೂಮಿಜ ಶೈಲಿಯ ಬಾಗಿದ ಶಿಖರ ಹಾಗೂ ಆಮಲ ಸಾರವುಳ್ಳದ್ದು. ಕರ್ನಾಟಕದಲ್ಲಿ ಭೂಮಿಜ ಶೈಲಿಯು ಕ್ರಿ.ಶ. ೧೧೧೧ರಲ್ಲಿ ಬಳಕೆಗೊಂಡದ್ದನ್ನು ಪ್ರೊ. ಢಾಕೆಯವರು ಗುರುತಿಸಿ ದ್ದಾರೆ. ಲಕ್ಕುಂಡಿಯ ಕಾಶಿ ವಿಶ್ವೇಶ್ವರ ದೇವಾಲಯದ ಉತ್ತರ ಹಾಗೂ ದಕ್ಷಿಣ ಭಾಗದ ಭಿತ್ತಿಯಲ್ಲಿ ಕಂಡು ಬರುವ ಭೂಮಿಜ ಶೈಲಿಯ ಶಿಖರ ವಿನ್ಯಾಸವನ್ನು ಅತಿ ಪ್ರಾಚೀನವೆಂದಿರುತ್ತಾರೆ. ಹಾವೇರಿಯ ಸಿದ್ದೇಶ್ವರ ದೇವಾಲಯದ ಭಿತ್ತಿ ಭಾಗದಲ್ಲಿ ಭೂಮಿಜ ಮಾದರಿಯ ಶಿಖರವನ್ನು ಗಮನಿಸಿರುತ್ತಾರೆ. ಇವು ಚಾಲುಕ್ಯರ ಕಾಲದ ಮಾದರಿಗಳೆನಿಸಿವೆ.

ಹೊಯ್ಸಳರ ಕಾಲದ ಕಿಕ್ಕೇರಿಯ ಮಲ್ಲೇಶ್ವರ, ಅಮೃತಾಪುರದ ಅಮೃತೇಶ್ವರ, ಮೊಸಳೆಯ ಚನ್ನ ಕೇಶವ ದೇವಾಲಯಗಳಲ್ಲಿಯೂ ಭೂಮಿಜ ಶಿಖರದ ಮಾದರಿಗಳನ್ನು ಗುರುತಿಸಲಾಗಿದೆ. ಹನ್ನೊಂದನೆಯ ಶತಮಾನದ ಆರಂಭದಿಂದ ಈ ಶೈಲಿಯ ಲಕ್ಷಣಗಳು ದೊರಕಿರುವುದರಿಂದ ಈ ಕಾಲಕ್ಕಾಗಲೇ ನಿಶ್ಚಿತ ಆಕಾರ ತಳೆದಿತ್ತು ಎಂದು ಹೇಳಬಹುದಾಗಿದೆ. ಭೂಮಿಜ ಶೈಲಿಯ ತಲಚ್ಛಂದವು ತ್ರಯಾಂಗ, ಪಂಚಾಂಗ, ಸಪ್ತಾಂಗ, ನವಾಂಗ ಹಾಗೂ ವೃತ್ತಕವಾಗಿ ರಚಿಸಲು ಸಾಧ್ಯವಿದೆ. ಪ್ರಸ್ತುತ ಲಭ್ಯವಿರುವ ಮೂಲೆ ಶಂಕರೇಶ್ವರ ಹಾಗೂ ಸದಾಶಿವ ದೇವಾಲಯಗಳು ಪಂಚಾಂಗ ಹಾಗೂ ಅಷ್ಟಾಶ್ರ ರಚನೆಗಳು ಶೃಂಗ ರಚನೆಯನ್ನು "ಶೃಂಗಂ ಮಾಲಿಕಾ ಕ್ರಮಃ" ಎಂದು ಗ್ರಂಥಗಳು ಗುರುತಿಸಿದ್ದು ಕರ್ಣ ಹಾಗೂ ಪ್ರತಿ ರಥಗಳ ಮೇಲೆ ಶೃಂಗ ಜೋಡಣೆ ಯಿದ್ದು ಒಂದರ ಮೇಲೊಂದು ಪೋಣಿಸಿದಂತೆ ವೇದಿಕಾ ಭಾಗದವರೆಗೆ ಜೋಡಿಸಲಾಗಿದೆ. 'ಭದ್ರೇಚ ಶೃಂಗ ಮೇಕಂ' ಎನ್ನುವುದು ಈ ಶೈಲಿಯ ಮತ್ತೊಂದು ಲಕ್ಷಣ ವೆನಿಸಿದೆ. ಈ ಶೈಲಿಯ ತ್ರಯಾಂಗ, ಪಂಚಾಂಗ, ಸಪ್ತಾಂಗ, ನವಾಂಗಾದಿ ರಚನೆಗಳಲ್ಲಿ ಭದ್ರ ಭಾಗದಲ್ಲಿ

ಉರು ಶೃಂಗಕ್ಕೆ ಬದಲಾಗಿ ನೀಳವಾದ ಪಟ್ಟಿಯಂತಹ ರಚನೆಯಿದ್ದು ಕೆಳಗಿನಿಂದ ಮೇಲಕ್ಕೆ ಏಕರೂಪವಾಗಿ ಸಾಗಿದೆ. ಈ ಲಕ್ಷಣವು ಭೂಮಿಜ ಶೈಲಿಯ ವಿಶೇಷವೆನಿಸಿದೆ. ಭೂಮಿಜ ಶಿಖರದಲ್ಲಿ ಹಲವು ಭೂಮಿಗಳ ರಚನೆ ಇದ್ದಾಗ್ಯೂ ಏಕ ಶೃಂಗದ ಕಲ್ಪನೆ ಈ ನೀಳವಾದ ಪಟ್ಟಿಯಿಂದ ಮೂಡುತ್ತದೆ.

ಅಷ್ಟಾಶ್ರ, ವೃತ್ತಕ ರಚನೆಯಲ್ಲಿ ಹಲವು ಕೋನಗಳ ಪರಿಧಿಯಿದ್ದು ಭದ್ರ ಭಾಗವಿಲ್ಲ. ಪ್ರತಿಭೂಮಿಯಲ್ಲಿ ಶೃಂಗ ರಚನೆಗಳು ಕರ್ಣಕೂಟದಂತೆ ಮೂಡಿದ್ದು ಗಾತ್ರದಲ್ಲಿ ಕಿರಿದಾಗುತ್ತಾ ವೇದಿಕೆಯವರೆಗೆ ಗುರುತಿಸಬಹುದಾಗಿದೆ. ಈ ಶೃಂಗ ಮಾಲಿಕೆಯ ಇಕ್ಕೆಲಗಳಲ್ಲಿ ನೀಳವಾದ ಇಮ್ಮೊಗದ ಪಟ್ಟಿಕೆ ಕೆಳಗಿನಿಂದ ಮೇಲಕ್ಕೆ ಸಾಗುತ್ತದೆ. ಈ ಇಮ್ಮೊಗದ ಪಟ್ಟಿಕೆಯ ಮೇಲೆ ಲತಾಲಂಕರಣವಿದೆ. ಇಂತಹ ಶಿಖರವನ್ನು ಸದಾಶಿವ ದೇವಾಲಯದಲ್ಲಿ ಕಾಣಬಹುದು. ಮೂಲೆ ಶಂಕರೇಶ್ವರ ಹಾಗೂ ಸದಾಶಿವ ದೇವಾಲಯಗಳು ಹೆಚ್ಚು ಅಲಂಕರಣವಿಲ್ಲದ ಪೂರ್ಣ ಬೆಳವಣಿಗೆಯನ್ನು ಪಡೆದ ಚತುರ್ಭೂಮಿ ಹಾಗೂ ತ್ರಿಭೂಮಿರಚನೆಗಳು. ಇವೆರಡೂ ದೇವಾಲಯಗಳು ಭೂಮಿಜ ಶೈಲಿಯ ಶಿಖರದಿಂದಾಗಿ ಮಹತ್ವದ್ದೆನಿಸಿದೆ.

ಸದಾಶಿವ ದೇವಾಲಯವು ಜಗತಿಯ ಮೇಲೆ ರಚನೆಗೊಂಡಿದ್ದು ಜಗತಿಯು ಸುಮಾರು ೨೧/೨.೩ ಅಡಿ ಎತ್ತರವಿದೆ. ಜಗತಿಯಲ್ಲಿ, ಖುರಕ, ಪದ್ಮ, ಪತ್ರ, ಕರ್ಣಿಕಾ ಹಾಗೂ ವೇದಿಕಾ ಸ್ತರಗಳ ರಚನೆಯಿದೆ. ಎರಡು ದೇವಾಲಯಗಳಲ್ಲಿಯೂ ಎರಡು ಹಂತದ ಪೀಠವಿದೆ. ಖುರಕ, ಪದ್ಮಪತ್ರ, ಕರ್ಣಿಕಾ, ಪುನಃ ಪದ್ಮಪತ್ರ, ಕರ್ಣಿಕಾ ಹಾಗೂ ವೇದಿಕಾ ಭಾಗಗಳನ್ನು ಕಾಣಬಹುದಾಗಿದೆ. ಎರಡೂ ದೇವಾಲಯಗಳಲ್ಲಿ ಅಲಂಕರಣವಿಲ್ಲದ ಜಂಘೆ ರಚನೆಯಿದೆ. ಗರ್ಭಗೃಹದ ದ್ವಾರವು ತ್ರಿಶಾಖೆಯುಳ್ಳ ರಚನೆಯೆನಿಸಿದು ಅಲಂಕರಣವಿಲ್ಲ. ಈ ಬಾಗಿಲುವಾಡಕ್ಕೆ ಹೊಂದಿಕೊಂಡಂತೆ ಇಕ್ಕೆಲಗಳಲ್ಲಿ ಅರೆಗಂಬಗಳಿವೆ. ಗರ್ಭಗೃಹದ ಮುಂಗಡೆ ಕೋಲಿಕಾ ಅಥವಾ ಅಂತರಾಳವಿದೆ. ಅಂತರಾಳದ ಮುಂದೆ ಶಾಖಾ ರಚನೆಯುಳ್ಳ ಬಾಗಿಲುವಾಡವಿದೆ. ಕೋಲಿಕಾ ರಚನೆಯ ನಂತರ ಹದಿನಾರು ಸ್ತಂಭಗಳು ಮಂಡಪವಿದೆ. ಮಧ್ಯದ ನಾಲ್ಕು ಸ್ತಂಭಗಳು ಪೂರ್ಣ ಪ್ರಮಾಣದ್ದೆನಿಸಿದ್ದು ಮಧ್ಯದ ಅಂಕಣವು ತುಸು ಎತ್ತರವಾಗಿದೆ. ಉಳಿದ ಹನ್ನೆರಡು ಸ್ತಂಭಗಳು ಜಂಘಾ ಭಾಗದಲ್ಲಿ ಸೇರಿದ್ದು ಅರೆಗಂಭಗಳೆನಿಸಿವೆ.

ಎರಡೂ ದೇವಾಲಯಗಳಲ್ಲಿ ದಕ್ಷಿಣ ದಿಕ್ಕಿನಲ್ಲಿ ಪ್ರವೇಶಾವಕಾಶವಿದ್ದು ಶಾಖಾ ರಚನೆಯುಳ್ಳ ಬಾಗಿಲುವಾಡವನ್ನೂ, ಪ್ರಾಗ್ರೀವ ಮಂಡಪವನ್ನೂ ಹೊಂದಿದೆ. ಸದಾಶಿವ ದೇವಾಲಯದ ಪೂರ್ವ ದಿಕ್ಕಿನಲ್ಲಿಯೂ ಪ್ರವೇಶ ದ್ವಾರವಿದ್ದು ಮುಖ ಮಂಡಪ ಹಾಗೂ ಪ್ರತ್ಯೇಕ ನಂದಿ ಮಂಡಪಗಳಿವೆ. ಇವೆರಡೂ ತ್ರಿಕ ರಚನೆಯಿಂದ ಬಂಧಿಸಲಾಗಿದ್ದು ಇದಕ್ಕೆ ಇಕ್ಕೆಲಗಳಲ್ಲಿ ಪ್ರವೇಶಕ್ಕೆ ಅವಕಾಶವಿದೆ. ಮೂಲೆ ಶಂಕರೇಶ್ವರ ದೇವಾಲಯದ ಪ್ರಾಗ್ರೀವ ಮಂಡಪದಲ್ಲಿ ಕಕ್ಷಾಸನ ರಚನೆಯಿದೆ. ಸದಾಶಿವ ದೇವಾಲಯದ ನಂದಿ ಮಂಡಪವು ನಾಲ್ಕು ಸ್ತಂಭಗಳಿಂದ ಕೂಡಿದ್ದು ಕಕ್ಷಾಸನದಿಂದ ಬಂಧಿಸಲಾಗಿವೆ. ಕಕ್ಷಾಸನದ ಮೇಲ್ಭಾಗವಾದ ಚಂದ್ರಾವಲೋಕನ ಭಾಗವು ಜಾಲಂದ್ರಗಳಿಂದ ಜೋಡಿಸಲ್ಪಟ್ಟಿದೆ. ಸದಾಶಿವನಿಗೆ ಅಭಿಮುಖವಾದ ಭಾಗವು ಶಾಖಾ ರಚನೆಯುಳ್ಳ ಬಾಗಿಲುವಾಡವನ್ನು ಹೊಂದಿದೆ. ಈ ಬಾಗಿಲುವಾಡದಲ್ಲಿ ರತ್ನ, ಪತ್ರ, ಲತಾ, ಸಿಂಹ ಶಾಖಾ ರಚನೆಯೂ ರೂಪ ಸ್ತಂಭವೂ ರಚನೆಗೊಂಡಿದೆ. ಸದಾಶಿವ ದೇವಾಲಯದ ಪೂರ್ವ ದಿಕ್ಕಿನ ಬಾಗಿಲು ವಾಡದ ಕೆಳ ಭಾಗದಲ್ಲಿ ಉಬ್ಬು ಶಿಲ್ಪಗಳಿದ್ದು, ಶಿಲ್ಪಿಗಳ ಹೆಸರೂ ಕಂಡರಿಸಿದೆ. ನಂದಿ ಮಂಡಪದಲ್ಲಿ ಸುಂದರ ನಂದಿ ವಿಗ್ರಹವಿದೆ. ಈ ದೇವಾಲಯಗಳ ಶಿಖರದ ಭೂಮಿ ರಚನೆಯ ನಂತರ ವೇದಿ ಹಾಗೂ ಘಂಟಾ ರಚನೆಯಿದೆ. ವೇದಿ ಹಾಗೂ ಘಂಟಾ ರಚನೆಯ ಆಕಾರವು ತಲಚ್ಛಂದವನ್ನು ಅನುಸರಿಸಿದ್ದು ಘಂಟಾಕಾರವು ಕೊಂಚ ಚಪ್ಪಟೆಯಾಗಿದ್ದು ಆಮಲಸಾರ ರಚನೆಯನ್ನು ಜ್ಞಾಪಿಸುತ್ತದೆ. ಸದಾಶಿವ ದೇವಾಲಯದ ವೇದಿಕೆಯ ಮೇಲೆ ನಾಲ್ಕು ಮೂಲೆಗಳಲ್ಲಿ ನಂದಿ ವಿಗ್ರಹಗಳು ಜೋಡಿಸಲ್ಪಟ್ಟಿವೆ. ಮೂಲೆ ಶಂಕರೇಶ್ವರ ದೇವಾಲಯದಲ್ಲಿ ಘಂಟಾ ರಚನೆಯ ನಂತರ ಶಿಲಾ ಕಳಶವಿದೆ.

ಸುಗ್ಗೇಹಳ್ಳಿಯ ಕೇಶವ ದೇವಾಲಯದ ಶಾಸನವೊಂದರ ಪ್ರಕಾರ ಸದಾಶಿವ ದೇವಾಲಯದ ಪ್ರತಿಷ್ಠಾಪನೆ ಕ್ರಿ.ಶ. ೧೨೪೯ರಲ್ಲಿ ನೆರವೇರಿತೆಂದು ತಿಳಿಯುತ್ತದೆ. ಮೂಲೆ ಶಂಕರೇಶ್ವರ ದೇವಾಲಯವೂ ಬಹುಶಃ ಇದೇ ಕಾಲದ್ದಿರಬೇಕು. ಕ್ರಿ.ಶ. ೧೨-೧೩ನೇ ಶತಮಾನದ ಕಾಲದಲ್ಲಿ ಭೂಮಿಜ ಶೈಲಿಯು ಉತ್ತುಂಗ ಸ್ಥಿತಿಯನ್ನು ತಲುಪಿತ್ತು ಎಂದು ಹೇಳಬಹುದಾಗಿದೆ. ಹೊಯ್ಸಳರ ಕಾಲದ ಇವೆರಡು ದೇವಾಲಯಗಳೂ ದಾಕ್ಷಿಣಾತ್ಯ ಸಂಪ್ರದಾಯ ಹಾಗೂ ಔತ್ತರೇಯ ದ್ರಾವಿಡ ಶೈಲಿಯ ಪ್ರಭಾವದಿಂದ ಮೂಡಿದ್ದು ತಮ್ಮ ವಿಶೇಷ ಶಿಖರ ಮಾದರಿಯಿಂದ ಕರ್ನಾಟಕದ ದೇವಾಲಯ ಶಿಲ್ಪದ ನಕ್ಷೆಯಲ್ಲಿ ವಿಶಿಷ್ಟ ಸ್ಥಾನ ಗಳಿಸಿಕೊಂಡಿವೆ.

ಕೂ.ಸ. ಅಪರ್ಣ*

# "ಶಿಲ್ಪಶಾಸ್ತ್ರ ಗ್ರಂಥಗಳ ಹಿನ್ನೆಲೆಯಲ್ಲಿ ದೇವಾಲಯದ ಭಿತ್ತಿಯ ಬೆಳವಣಿಗೆ"-ಒಂದು ಅಧ್ಯಯನ

ಷಡ್ವರ್ಗ[1] ರೀತಿಯ ದೇವಾಲಯಗಳಲ್ಲಿ ಭಿತ್ತಿಯು (=ಕುಡ್ಯ) ಎರಡನೇ ಭಾಗ. ಮೊದಲನೇ ಭಾಗವಾದ ಅಧಿಷ್ಠಾನದ ಮೇಲೆ ರಚಿಸಲ್ಪಡುವ ಭಿತ್ತಿಯು ಪ್ರಸ್ತರದವರೆಗಿನ ಭಾಗವಾಗಿದ್ದು ಆಲಯದ ಮೂರ್ತಿ ಮತ್ತು ಇತರ ಭಾಗಗಳನ್ನು ರಕ್ಷಿಸುವುದಲ್ಲದೆ, ಕೆಲ ಮಟ್ಟಿಗೆ ದೇವಾಲಯದ ಭಾರವನ್ನೂ ಹೊರುವುದು. ಇದರ ವಿನ್ಯಾಸವು ಅಧಿಷ್ಠಾನದ ವಿನ್ಯಾಸವನ್ನನುಸರಿಸಿ ಚೌಕಾಕಾರ, ವೃತ್ತಾಕಾರ, ಗಜಪೃಷ್ಠಾಕಾರದಲ್ಲಿರುತ್ತದೆ. ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ಭಿತ್ತಿಯನ್ನು ಪಾದವರ್ಗ[2], ಜಂಘಾವರ್ಗ[3], ಮುಂತಾಗಿಯೂ ಕರೆಯಲಾಗಿದ್ದು, ಇದು ಭಿತ್ತಿಯೊಂದಿಗಿರುವ ಕಂಬದ (=ಕುಡ್ಯಸ್ತಂಭ) ಪ್ರಾಮುಖ್ಯತೆಯನ್ನು ಸೂಚಿಸುತ್ತದೆ. ಈ ಕುಡ್ಯಸ್ತಂಭವು ರಚನಾತ್ಮಕವಾಗಿ ಮುಖ್ಯ ಭಾಗವಾಗಿದ್ದರೆ, ಭಿತ್ತಿಯ ಮೇಲೆ ಬರುವ ಜಾಲಕ, ಕೋಷ್ಠ, ತೋರಣಗಳು ಆಲಯದ ಆವಶ್ಯಕತೆ ಮತ್ತು ಅಲಂಕಾರಕ್ಕೆ ಪೂರಕವಾಗಿರುವ ಅಂಶಗಳಾಗಿವೆ. ಪ್ರಾಸಂಗಿಕವಾಗಿಯೋ, ಉದ್ದೇಶಪೂರ್ವಕವಾಗಿಯೋ ಶಾಸ್ತ್ರಗ್ರಂಥಗಳಲ್ಲಿ ಇವುಗಳ ವಿವರಗಳು ನಮಗೆ ದೊರೆಯುತ್ತವೆ. ಮಯಮತ, ಮಾನಸಾರ, ಕಾಶ್ಯಪಶಿಲ್ಪ, ಕಾಮಿಕಾಗಮ ಮುಂತಾದ ಶಿಲ್ಪ ಶಾಸ್ತ್ರಗ್ರಂಥಗಳಲ್ಲಿ ದೊರಕುವ ಈ ವಿವರಗಳನ್ನು ಕೂಲಂಕಷವಾಗಿ ನೋಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಮಯಮತವು ಭಿತ್ತಿಯನ್ನು ಫಲಕ ಕುಡ್ಯ, ಜಾಲಕಕುಡ್ಯ ಮತ್ತು ಇಷ್ಟಕಕುಡ್ಯ ಎಂದು ೩ ವಿಧವಾಗಿ ಹೇಳಿದೆ. ಇದರ ಪ್ರಕಾರ, ಜಾಲಕಗಳಿಂದ ಕೂಡಿದ ಭಿತ್ತಿಯು ಜಾಲಕ ಕುಡ್ಯವಾದರೆ, ಇಟ್ಟಿಗೆಯಿಂದ ಮಾಡಿದ್ದು ಇಷ್ಟಕ ಕುಡ್ಯವೆನಿಸುತ್ತದೆ. ಫಲಕಗಳಿಂದ ಕೂಡಿ ಮಧ್ಯೆ ಕಂಬಗಳಿಗಿರುವ ಭಿತ್ತಿಯನ್ನು ಫಲಕಕುಡ್ಯವೆಂದೂ ಅದರ ಮೇಲೆ ಮತ್ತು ಕೆಳಗೆ ಪದ್ಮಪಟ್ಟಿಕೆ ಇರಬೇಕೆಂದೂ ಇದರಲ್ಲಿ ಹೇಳಲಾಗಿದೆ.[4] ಕಾಮಿಕಾಗಮದಲ್ಲೂ ಫಲಕಕುಡ್ಯ ಮತ್ತು ಜಾಲಕ ಕುಡ್ಯದ ವಿವರವಿದ್ದು, ಅದರಲ್ಲಿ ಬಳಸಿರುವ

* ನಂ 1643, 21ನೆಯ ಮುಖ್ಯರಸ್ತೆ, ಬನಶಂಕರಿ ಮೊದಲಹಂತ, ಬೆಂಗಳೂರು–560050

1 ದೇವಾಲಯದಲ್ಲಿ ಊರ್ಧ್ವಮುಖದಲ್ಲಿ ಆರುಭಾಗಗಳಿದ್ದು ಅವು ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ' ಶಿಖರ, ಸ್ತೂಪಿಗಳಾಗಿದ್ದು ಇಂತಹ ದೇವಾಲಯವನ್ನು 'ಷಡ್ವರ್ಗ ದೇವಾಲಯ'ಗಳೆನ್ನುತ್ತಾರೆ,

2 ಕಾಶ್ಯಪಶಿಲ್ಪ-ಅ. 11.2

3 ಮಯಮತ-14.10

4 ಮಯಮತ,16.63–66

ವಸ್ತುವನ್ನನುಸರಿಸಿ ಭಿತ್ತಿಯನ್ನು ಶೈಲಕುಡ್ಯ ಮತ್ತು ಇಷ್ಟಕಕುಡ್ಯ ಎಂದು ಬೇರೆ ಬೇರೆಯಾಗಿ ಹೇಳಲಾಗಿದೆ. ಈ ಗ್ರಂಥದಲ್ಲಿ ಭಿತ್ತಿಯನ್ನು ಮಣ್ಣಿನಿಂದಲೂ ಮಾಡಬಹುದೆಂದಿದೆ[5]. ಈ ವಿವರಣೆಗಳು ಭಿತ್ತಿಯ ರಚನೆ ಮತ್ತು ಸಾಮಗ್ರಿಯ ಮೇಲೆ ಬೆಳಕು ಚೆಲ್ಲುತ್ತವೆ.

**ಭಿತ್ತಿಯ ಅಂಗಗಳು :**

ಭಿತ್ತಿಯ ಅಂಗಗಳ ದೃಷ್ಟಿಯಿಂದ ಕಾಮಿಕಾಗಮದ ಈ ಕೆಳಗಿನ ಶ್ಲೋಕವು ಮುಖ್ಯವಾದುದಾಗಿದೆ :

> 'ಕುಡ್ಯೇ ಸ್ತಂಭ ಲತಾ ಕಾರ್ಯಾ ವಸ್ತ್ವಾತ್ವ
> ಧಾರಸ್ಯ ಚೋಪರಿ |
> ವೇದಿಕೋರ್ಧ್ವಾಧರೆ ಕೂಟ ಕೋಷ್ಠಾ
> ದೀನಾಂ ತ್ರಿಧಾಸ್ಮೃತಾ ||
> ಚಿತ್ರಕುಂಭಲತಾ ಪೂರ್ವಾಸ್ತಂಭ
> ಕುಂಭಲತಾ ಪರಾ ||' LV. 98-99

ಇದರಲ್ಲಿ ಸ್ತಂಭ, ಕೂಟಕೋಷ್ಠ, ಕುಂಭಲತಾ– ಈ ಅಂಶಗಳನ್ನು ಹೇಳಲಾಗಿದ್ದು, (ಜಾಲಕ, ತೋರಣ ಹೇಳಿಲ್ಲ) ಕುಡ್ಯಸ್ತಂಭ ಮತ್ತು ಕುಂಭಲತಾ–ಇವು ಅಧಿಷ್ಠಾನದ ಮೇಲೂ ಕೂಟಕೋಷ್ಠವು ವೇದಿಕೆಯ ಮೇಲೂ ಬರಬೇಕೆಂದು ಹೇಳಿರುವುದು ವಿಶೇಷವಾಗಿದೆ. ಭಿತ್ತಿಯಲ್ಲಿ ವೇದಿಕೆಯು ಮೊದಲ ಅಂಗವಾಗಿದ್ದು, ಇದರ ಮೇಲೆ ಕುಡ್ಯಸ್ತಂಭವಿರುತ್ತದೆ. ಇದರ ಅಕ್ಕಪಕ್ಕ ಜಾಲಕ ಮತ್ತು ಕೋಷ್ಠಗಳೂ ಇದ್ದು ಇವುಗಳ ಮೇಲೆ ತೋರಣದ ಅಲಂಕಾರವಿರುತ್ತದೆ. 'ಕುಂಭಲತಾ' ಕೂಡಾ ಕೆಲವು ದೇವಾಲಯಗಳಲ್ಲಿ ಕಾಣಬರುತ್ತದೆ.

**ವೇದಿಕಾ :**

ಭಿತ್ತಿಯಲ್ಲಿ ಬರುವ ಮೊದಲ ಅಂಗವೇ 'ವೇದಿಕಾ' ವೇದಿ ಸ್ತಂಭ ಮತ್ತು ಕೋಷ್ಠಗಳಿಗೆ ಇದು ಅಡಿಪಾಯವನ್ನು ಒದಗಿಸುತ್ತದೆ. ಕಾಶ್ಯಪ ಶಿಲ್ಪದಲ್ಲಿ 'ವೇದಿ'ಯ ಬಗ್ಗೆ ವಿವರವಾಗಿದ್ದು, ಅದರಲ್ಲಿಯೂ ಕೂಡಾ ಭಿತ್ತಿಯಲ್ಲಿ ಬರುವ ಸ್ತಂಭದ ಕೆಳಗೆ (ಸ್ತಂಭಕ್ಕೆ ಆಧಾರವಾಗಿ) ವೇದಿಯನ್ನು ಅಧಿಷ್ಠಾನದ ಮೇಲೆ ರಚಿಸಬೇಕೆಂದಿದೆ.[7] ಅಜಿತಾಗಮದಲ್ಲೂ ಕಂಬದ ಕೆಳಗೆ ವೇದಿಕೆಯನ್ನು ರಚಿಸಬೇಕೆಂದಿದೆ.[8] ಮಯಮತದ ಪ್ರಕಾರ 'ಪ್ರತಿ'ಯ ಮೇಲೆ ವೇದಿ ಬರಬೇಕು.[9] ವೇದಿಯಲ್ಲಿ ಬರುವ ಉಪ ಅಂಗಗಳ ಬಗ್ಗೆ ಗ್ರಂಥಗಳಲ್ಲಿ ಒಟ್ಟಾರೆ ಒಮ್ಮತ ಇರುವುದಾದರೂ, ಭಿನ್ನತೆಯೂ ಇದೆ. ಕಾಶ್ಯಪ ಶಿಲ್ಪದಲ್ಲಿ ಗಲ ವೇದಿಕಾ (?) –ಗಲ–ಕಂಪ–ಪದ್ಮ–ಕಂಪ–ಗಲ–ಪದ್ಮ–ಕಂಪ–ಪ್ರಾಗ್ರೀವ (?)–ಕಂಪ–ಕಂಠ–ಪದ್ಮ—ಈ ಅಂಗಗಳನ್ನು ಹೇಳಿದ್ದರೆ[10] ಅಜಿತಾಗಮದಲ್ಲಿ ಕಂಪ–ಗಲ–ಪಟ್ಟ–ವೇದಿಕೆ–ಪಟ್ಟಿಕಾಗಳನ್ನು ಹೇಳಿದೆ.[10] ಮಯಮತದಲ್ಲಿರುವ ವಿವರವೆಂದರೆ, ಅದು ೨,೪,೬,– 'ಕಂಪ'ಗಳಿಂದ ಕೂಡಿರಬೇಕು ; ಅದನ್ನು ಪದ್ಮ ಮತ್ತು ಎಲೆಗಳಿಂದ ಅಲಂಕರಿಸಬೇಕು. 'ಕಂಪ'ದ ಮೇಲೆ ಮತ್ತು ಕೆಳಗೆ 'ಪದ್ಮಪಟ್ಟಿಕೆ'ಯೂ 'ಅಗ್ರಬಂಧನ' ವೂ ಇರಬೇಕು.[10] ಸಾಮಾನ್ಯವಾಗಿ ದೇವಾಲಯಗಳಲ್ಲಿ ನಾವು ಕಾಣುವ 'ವೇದಿ'ಯು ಕಂಪ–ಗಲ–ಕಂಪ–ಪಟ್ಟಿಕಾ–ಕಂಪಗಳಿಂದ ಕೂಡಿರುತ್ತದೆ. ಈ ಮೇಲಿನ ಪಟ್ಟಿಕೆಯನ್ನೇ ಮಯಮತವು 'ಅಗ್ರಬಂಧನ'ವೆಂದು ಕರೆದಿರಬಹುದೇ ಎಂಬ ಅನುಮಾನ ಬರುತ್ತದೆ.

---

5 ಕಾಮಿಕಾಗಮ LV 94–97 ; ಬೃಹತ್‌ಸಂಹಿತಾ LIII.23 ; ಇದರಲ್ಲಿ ಗೃಹವಾಸ್ತುವಿಗೆ ಅನ್ವಯಿಸಿ ಇಷ್ಟಕ ಮತ್ತು ಮರದ ಭಿತ್ತಿಯನ್ನು ಹೇಳಲಾಗಿದೆ.
6 ಕಾಶ್ಯಪಶಿಲ್ಪ-10.1
7 ಅಜಿತಾಗಮ-14.2
8 ಮಯಮತ-16.51
9 ಕಾಶ್ಯಪಶಿಲ್ಪ-10 15-16
10 ಅಜಿತಾಗಮ 14.2-4
11 ಮಯಮತ. 21.51-53

ಆರಂಭ ಕಾಲದ ಕೆಲವು ದೇವಾಲಯಗಳನ್ನು ಬಿಟ್ಟರೆ, ಪ್ರಾಚೀನ ಕಾಲದಿಂದಲೂ ಭಿತ್ತಿಗೆ ವೇದಿಕೆಯನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ಅವುಗಳಲ್ಲಿ 'ಪಟ್ಟಿಕಾ'ದ ಕೆಳಗೆ ಕಮಲದ ಮೊಗ್ಗನ್ನೂ ಬಿಡಿಸಿದ್ದು, ಇದು ಮಯಮತದ 'ಪದ್ಮ ಪಟ್ಟಿಕೆ'ಯನ್ನು ನೆನಪಿಗೆ ತರುತ್ತದೆ. ಮಹಾಕೂಟದ ಮಹಾಕೂಟೇಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳಲ್ಲಿ 'ವೇದಿ'ಯನ್ನು ರಚಿಸಿದ್ದು ಅದರಲ್ಲಿ ಪದ್ಮ-ಪಟ್ಟಿಕೆಯೂ 'ಗಳ' ಭಾಗದಲ್ಲಿ ಶಿಲ್ಪಸಾಲೂ ಇದೆ. ಪಟ್ಟದ ಕಲ್ಲಿನ ವಿರೂಪಾಕ್ಷ ದೇವಾಲಯದಲ್ಲೂ ಇದೇ ರೀತಿ ಇದ್ದು, ಅದರಲ್ಲಿ 'ಗಳ' ಭಾಗದಲ್ಲಿ ಬಳ್ಳಿಯನ್ನು ಬಿಡಿಸಿದೆ. ಸೀರ್ವಾಳನ 'ಗಳ' ದಲ್ಲಿ ಪಂಚತಂತ್ರದ ಕಥೆಯಿದೆ. ಈ ಪದ್ಧತಿ ನೊಳಂಬರ ಕಾಲದಲ್ಲೂ ಮುಂದುವರಿದಿದೆ. ಆದರೆ, ಗಂಗ ಮತ್ತು ವಿಜಯನಗರ ಕಾಲದ ಅನೇಕ ದೇವಾಲಯಗಳಲ್ಲಿ ವೇದಿಯನ್ನು ಬಿಡಿಸಿದ್ದರೂ ಅದು ನಿರಲಂಕೃತವಾಗಿರುವುದನ್ನೇ ಹೆಚ್ಚಾಗಿ ಕಾಣುತ್ತೇವೆ. ಆದರೂ ಎಲ್ಲ ದೇವಾಲಯಗಳಲ್ಲೂ ವೇದಿ ಇದ್ದೇ ಇರುತ್ತದೆ ಎಂದು ಹೇಳಲಾಗುವುದಿಲ್ಲ.

**ಕುಡ್ಯಸ್ತಂಭ :–**

ಭಿತ್ತಿಯಲ್ಲಿ ಕಾಣಬರುವ ಅರ್ಧಸ್ತಂಭವೇ– 'ಕುಡ್ಯಸ್ತಂಭ', ಇದನ್ನು ಕುಡ್ಯಪಾದ, ಭಿತ್ತಿಪಾದ, ಭಿತ್ತಿಸ್ತಂಭ ಎಂದೂ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ. ದೇವಾಲಯದ ಭಾರವನ್ನು ಹೊರುವುದರಿಂದ ಇದು ರಚನಾತ್ಮಕವಾಗಿ ಮುಖ್ಯವಾದ ಅಂಗ. ಕುಡ್ಯಸ್ತಂಭದ ಸ್ಥಾನವನ್ನು ವೇದಿಯ ಮೇಲಿನಿಂದ 'ಉತ್ತರ' (ಪ್ರಸ್ತರದ ಮೊದಲ ಭಾಗ)ದವರೆಗೆ ಎಂದು ಗುರುತಿಸಬಹುದು. ಗ್ರಂಥಗಳಲ್ಲಿ ಇದರ ಬಗ್ಗೆ ಸುದೀರ್ಘವಾದ ವಿವರಣೆ ಇದೆ. ಇದು ಅರ್ಧಸ್ತಂಭವಾಗಿದ್ದರೂ, ಪೂರ್ಣ ಸ್ತಂಭದಂತೆಯೇ ವಿವರಿಸಲಾಗಿದ್ದು, ಕಂಬದ ಅಂಗಾಂಗಗಳು ಮತ್ತು ವಿವಿಧ ಪ್ರಭೇದಗಳನ್ನು ಕುರಿತು ಈ ಭಾಗದಲ್ಲಿ ಹೇಳಲಾಗಿದೆ. ಕುಡ್ಯ ಸ್ತಂಭಗಳು ನಾಲ್ಕು ಮುಖ, ಎಂಟು ಮುಖ ಅಥವಾ ವೃತ್ತಾಕಾರದಲ್ಲಿರಬೇಕು ಎಂದು ಅಜಿತಾಗಮದಲ್ಲಿ ಹೇಳಿದೆ.[12]

ಇದರಂತೆ, ಬಹುಪಾಲು ಕುಡ್ಯ ಸ್ತಂಭಗಳು ನಾಲ್ಕು ಮುಖದ ಬ್ರಹ್ಮಕಾಂತ ರೀತಿಯದಾಗಿರುವುದನ್ನು ಕಾಣುತ್ತೇವೆ. ವಿಷ್ಣುಕಾಂತ-ರೀತಿಯ ಎಂಟು ಮುಖದ ಕುಡ್ಯ ಸ್ತಂಭಗಳನ್ನು ವಿಜಯನಗರ ಕಾಲದ ದೇವಾಲಯಗಳಲ್ಲಿ ಕಾಣಬಹುದು. ನರಸಮಂಗಲದ ರಾಮಲಿಂಗೇಶ್ವರ ದೇವಾಲಯದ ಭಿತ್ತಿಯಲ್ಲಿ ನಾಲ್ಕು ಮುಖ, ಎಂಟು ಮುಖ ಮತ್ತು ರುದ್ರಕಾಂತ–ಈ ಎಲ್ಲ ರೀತಿಯ ಸ್ತಂಭಗಳನ್ನೂ ಕಾಣಬಹುದಾಗಿದೆ. ಇವುಗಳೂ ಕೂಡಾ ಕಂಬದ ಎಲ್ಲ ಅಂಗಗಳನ್ನೂ ಹೊಂದಿದ್ದು, ನಾಲಾಸ್ಥಾನ, ಪದ್ಮದಳ-ಇತ್ಯಾದಿಗಳಿಂದ ಅಲಂಕರಿಸಲ್ಪಟ್ಟಿರುತ್ತದೆ. ಐಹೊಳೆಯ ಲಾಡ್‌ಖಾನ್, ಗೌಡರು ಗುಡಿ ಇತ್ಯಾದಿ ದೇವಾಲಯಗಳಲ್ಲಿ ಮೂಲೆಗಳಲ್ಲಿ ಮಾತ್ರ ಇದ್ದ ಈ ಸ್ತಂಭಗಳು ಅನಂತರ ಕಾಲದ ಮಹಾಕೂಟ ಮತ್ತು ಪಟ್ಟದ ಕಲ್ಲಿನ ದೇವಾಲಯಗಳಲ್ಲಿ ಭಿತ್ತಿಯ ತುಂಬ ನಿಶ್ಚಿತ ಅಂತರದಲ್ಲಿ ಬರುತ್ತವೆ. ದೇವಾಲಯವು ಹೆಚ್ಚು ವಿಶಾಲವಾಗಿ ರಚನೆಗೊಳ್ಳುವುದು ಮತ್ತು ಶಿಖರದ ರಚನೆಯ ಕಾರಣದಿಂದ ಹೆಚ್ಚು ಭಾರವನ್ನು ಹೊರುವ ಅವಶ್ಯಕತೆಯುಂಟಾಗಿದ್ದು-ಇದಕ್ಕೆ ಕಾರಣವೆನ್ನಬಹುದು. ಈ ರೀತಿ ಕಂಬಗಳನ್ನು ರಚಿಸಿ ಭಿತ್ತಿಯನ್ನು ಭಾಗಗಳಾಗಿ ಮಾಡಿಕೊಂಡದ್ದರಿಂದ ದೃಢತೆಯ ಜೊತೆಗೆ ವಿವಿಧ ರೀತಿಯ ಅಲಂಕಾರಕ್ಕೆ ಅವಕಾಶವಾಯಿತೆಂದೂ ಹೇಳಬಹುದು.

**ಕೋಷ್ಠ**

ಕೋಷ್ಠಗಳ ಬಗ್ಗೆ ಶಾಸ್ತ್ರ ಗ್ರಂಥಗಳಲ್ಲಿ ಹೆಚ್ಚಿನ ವಿವರವಿಲ್ಲ. ಕೋಷ್ಠಗಳನ್ನು ರಚಿಸಿ ಅದರಲ್ಲಿ ಬಿಂಬವನ್ನಿಡಬೇಕೆಂದು ಮಯಮತದಲ್ಲಿ ಹೇಳಿದ್ದು[13] ಅದು ಕೋಷ್ಠದ ಉದ್ದೇಶವನ್ನು ಸ್ಪಷ್ಟಪಡಿಸುತ್ತಿದೆ. ಈ ಕೋಷ್ಠವನ್ನು, ದೇವಾಲಯದ ಪೂರ್ಣಭಾಗವನ್ನು ಒಳಗೊಂಡಿರುವ, ದುಂಡು ಶಿಲ್ಪವನ್ನಿಡಲು ಸಾಧ್ಯವಾಗುವಂತೆ ಬಿಡಿಸಬಹುದು; ಇಲ್ಲವೇ ಎರಡು ಸ್ತಂಭಗಳ ನಡುವೆ ಗೂಡಿನಂತೆ 'ತೆರುವು' ಮಾಡಿ ಅದರಲ್ಲಿ ಉಬ್ಬು ಶಿಲ್ಪಗಳನ್ನು ಬಿಡಿಸಬಹುದು. ನಾವು ದೇವಾಲಯಗಳಲ್ಲಿ ಹೆಚ್ಚಾಗಿ ಕಾಣುವುದು ಎರಡನೆಯ ರೀತಿಯ

12 ಅಜಿತಾಗಮ-14.4

13 ಮಯಮತ-22.37

ದನ್ನೇ. ಐಹೊಳೆ, ಮಹಾಕೂಟ, ಪಟ್ಟದಕಲ್ಲಿನ ದೇವಾಲಯುಗಳಲ್ಲಿ ಇದೇ ರೀತಿಯ ಕೋಷ್ಠಗಳಿದ್ದು, ರಾಷ್ಟ್ರಕೂಟರ ಕಾಲದ ಎಲ್ಲೋರದ ಕೈಲಾಸ, ಛೋಟಾ ಕೈಲಾಸ ದೇವಾಲಯುಗಳಲ್ಲಿ ಹೆಚ್ಚು ಆಳವಾಗಿ ಕೊರೆದಿರುವ ಕೋಷ್ಠಗಳಿವೆ. ಕೋಷ್ಠಕ್ಕೆ 'ವೇದಿ' ರಚಿಸಬೇಕೆಂದು ಕಾಮಿಕಾಗಮದಲ್ಲಿ ಹೇಳಿದ್ದರೂ,[14] ಕೋಷ್ಠಕ್ಕೇ ಪ್ರತ್ಯೇಕ ವೇದಿ ರಚಿಸಿದ್ದು ಅಷ್ಟಾಗಿ ಕಾಣಬರುವುದಿಲ್ಲ. ಮಹಾಕೂಟದ ಮಹಾಕೂಟೇಶ್ವರ, ಎಲ್ಲೋರದ ಕೈಲಾಸ ದೇವಾಲಯುಗಳಲ್ಲೂ, ಒಂದು ಚೌಕಟ್ಟನ್ನು ಪೂರೈಸುವ ಪೀಠದಂತೆ ಇದೆಯೇ ಹೊರತು ವೇದಿಯ ಅಂಗಗಳನ್ನು ಅಲ್ಲಿ ರಚಿಸಿಲ್ಲ. ಕೋಷ್ಠಗಳಿಗಾಗಿಯೇ ಪ್ರತ್ಯೇಕ ಎರಡು ಸ್ತಂಭ ನಿಲ್ಲಿಸಿರುವುದನ್ನು ಮಹಾಕೂಟದ ಮಲ್ಲಿಕಾರ್ಜುನ, ಎಲ್ಲೋರದ ಕೈಲಾಸ, ಮಣ್ಣೆಯ ಕಪಿಲೇಶ್ವರ-ಈ ದೇವಾಲಯುಗಳಲ್ಲಿ ಕಾಣಬಹುದು.

ಇವುಗಳ ಉದ್ದೇಶ ಶಿಲ್ಪಿವನ್ನಿಡುವುದಷ್ಟೇ ಆದರೂ, ಅವುಗಳ ರಚನೆಯನ್ನು ಶಿಲ್ಪಿಯು ಅಷ್ಟಕ್ಕೇ ಕೈಬಿಡಲಿಲ್ಲ. ಆ ಕೋಷ್ಠಗಳ ಮೇಲೆ ಶಿಖರದ ಅಂಗಗಳಾದ ಶಾಲಾ–ಕೂಟ–ನಾಸಿಕಾ–ಪಂಜರ–ಇವುಗಳಲ್ಲಿ ಯಾದನ್ನಾದರೂ ಬಿಡಿಸಿ, ಭಿತ್ತಿಯನ್ನು ಶಿಖರದ ಮಾದರಿಯಂತೆ ರಚಿಸಲು ಶಿಲ್ಪಿಯು ಯತ್ನಿಸಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ. ಇವುಗಳಿಗೆ ಶಾಸ್ತ್ರಗ್ರಂಥದ ಹಿನ್ನೆಲೆಯಂತೂ ಇದೆ. ಕಾಮಿಕಾಗಮದಲ್ಲಿ ಕೂಟಕೋಷ್ಠ[15]ವನ್ನೂ, ಮಯಮತದಲ್ಲಿ ಕಪೋತಪಂಜರವನ್ನು[16] ಉಲ್ಲೇಖಿಸಲಾಗಿದೆ. ಈ ಸೂಚನೆಯಿಂದ ಶಿಲ್ಪಿಯು ಕೂಟವಲ್ಲದೆ, ಶಿಖರದ ಇತರ ಅಂಗಗಳಾದ ಶಾಲಾ, ನಾಸಿ, ಪಂಜರಗಳನ್ನೂ ತನ್ನ ಅಲಂಕಾರದಲ್ಲಿ ಅಳವಡಿಸಿಕೊಂಡಿದ್ದಾನೆಂದು ಹೇಳಬಹುದು. ಐಹೊಳೆಯ ದುರ್ಗ ದೇವಾಲಯುದಲ್ಲಿ ಕೂಟಕೋಷ್ಠ ಮತ್ತು ಶಾಲಾಕೋಷ್ಠಗಳೂ, ಪಟ್ಟದಕಲ್ಲಿನ ಮಲ್ಲಿಕಾರ್ಜುನ ಮತ್ತು ವಿರೂಪಾಕ್ಷ ದೇವಾಲಯುಗಳಲ್ಲಿ ಕೂಟಕೋಷ್ಠ ಮತ್ತು ಪಂಜರಕೋಷ್ಠಗಳೂ ಇವೆ. ಮುಧೋಳಿನ ಸಿದ್ಧೇಶ್ವರ ದೇವಾಲಯುದಲ್ಲಿ ಈ ಮೂರೂ ಕೋಷ್ಠಗಳಿವೆ. ಹುಂಚದ ಸೂಳೆಬಸದಿ, ಎಲ್ಲೋರದ ಕೈಲಾಸ ದೇವಾಲಯುಗಳಲ್ಲಿ ನಾಸಿಕೋಷ್ಠಗಳಿವೆ. ವಿಜಯನಗರ ಕಾಲದ ದೇವಾಲಯುಗಳಲ್ಲಿ ಶಾಲಾಕೋಷ್ಠಗಳು ಹೆಚ್ಚಾಗಿ ಕಂಡು ಬರುತ್ತವೆ. 'ಕಪೋತಪಂಜರ'ದ ಆರಂಭವನ್ನು ಬಾದಾಮಿಯ ಮೇಲಣ ಶಿವಾಲಯುದಲ್ಲೇ ಗುರುತಿಸಬಹುದಾಗಿದ್ದು, ಬೇಗೂರಿನ ಚೋಳೇಶ್ವರ ಮತ್ತು ನರಸಮಂಗಲದ ರಾಮಲಿಂಗೇಶ್ವರ ದೇವಾಲಯುಗಳಲ್ಲೂ ಕಂಡುಬರುತ್ತವೆ. ಮಯಮತದ ಪ್ರಕಾರ, ಇದರಲ್ಲಿ (ಕಪೋತಪಂಜರದಲ್ಲಿ) ಕಂಬಕ್ಕೆ ಪ್ರಸ್ತರ, ಗ್ರೀವ ಶಿಖರ ಇದ್ದು, ಪಂಜರಾಕೃತಿಯು ಪ್ರಸ್ತರದ ಕಪೋತದೊಳಗೆ ಹೋಗಬೇಕು.[17] ಬೇಗೂರಿನ ಚೋಳೇಶ್ವರ ದೇವಾಲಯುದ ಕಪೋತಪಂಜರವು ಇದೇ ರೀತಿಯಲ್ಲಿದ್ದು, ಕಪೋತದೊಳಗಿನ ಭಾಗ ಮಾತ್ರ ಖಾಲಿಯಾಗಿದೆ. ನರಸಮಂಗಲದ ದೇವಾಲಯುದಲ್ಲಿ ಅದರ ಮೇಲ್ಭಾಗದಲ್ಲಿರುವ ಬಿಂಬದ ತಲೆಯು ಕಪೋತದೊಳಗೆ ಸೇರಿದೆ. ಭವನಾನಿಸಂಗಂನ[17a] ರೂಪಾಲ ಸಂಗಮೇಶ್ವರ ದೇವಾಲಯುದಲ್ಲಿ ಇದರ ಸ್ವರೂಪವನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಕೆಲವೊಮ್ಮೆ ಈ ಕೋಷ್ಠಗಳ ಮೇಲೆ ತೋರಣವನ್ನೂ ರಚಿಸಿರುತ್ತಾರೆ.

ಮೊದಮೊದಲಿಗೆ ಗರ್ಭಗೃಹದ ಭಿತ್ತಿಯಲ್ಲಿ 'ತೆರವಿ'ನಂತೆ ಮಾತ್ರ ಕಾಣಿಸಿಕೊಳ್ಳುತ್ತಿದೆ. ಈ ಕೋಷ್ಠಗಳು ಕಾಲಕ್ರಮೇಣ ಸಂಖ್ಯಾ ದೃಷ್ಟಿಯಿಂದ ಮತ್ತು ರಚನಾತ್ಮಕ ಗುಣದ ದೃಷ್ಟಿಯಿಂದ ಬೆಳೆಯುತ್ತಾ ಸಾಗುತ್ತವೆ. ರಾಷ್ಟ್ರಕೂಟರ ದೇವಾಲಯುಗಳ ಕೋಷ್ಠಗಳಂತೂ ಸಾಲಂಕೃತ ಬ್ರಹ್ಮಕಾಂತ ಸ್ತಂಭಗಳು, ಹೆಚ್ಚು

4 ಕಾಮಿಕಾಗಮ—LV.98a

15 ಕಾಮಿಕಾಗಮ—LV.99

16 ಮಯಮತ—22.37

17 ಅದೇ. 37—42

17a ಈ ಮೂರನ್ನೂ ಎನ್‌ಸೈಕ್ಲೋಪೀಡಿಯಾ ಆಫ್ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್—ಸಂ.1.ಭಾಗ-2-ಪುಟ 200,202 ಮತ್ತು 131 ಪಂಜರಕೋಷ್ಠವೆಂದಿರುವುದು ಸರಿಯಲ್ಲವೆನಿಸುತ್ತದೆ.

ಆಳವಾದ ತೆರವು, ಅದರ ಮೇಲೆ ಸುಂದರ ನಾಸಿ ತೋರಣಗಳು-ಈ ಎಲ್ಲ ದೃಷ್ಟಿಗಳಿಂದ ಹೆಚ್ಚು ಆಕರ್ಷಣೀಯವೆನಿಸುತ್ತದೆ.

**ಜಾಲಕ :**

ಜಾಲಕವು ಆಲಯದೊಳಗೆ ಬೆಳಕನ್ನು ಚೆಲ್ಲಲು ಮಾಡಿರುವ ಅನುಕೂಲಕರ ಮತ್ತು ಆವಶ್ಯಕ ಅಂಗ. ಇದನ್ನು ಮಾನಸಾರವು ಪರೋಕ್ಷವಾಗಿ ಹೇಳಿದೆ.[18] ವಾತಾಯನ,[19] ಜಾಲಗವಾಕ್ಷ[20] ಈ ಪರ್ಯಾಯ ಪದಗಳು ಜಾಲಕದ ಉಪಯುಕ್ತತೆಯನ್ನು ಸ್ಪಷ್ಟಪಡಿಸಿದರೆ, ಮಾನಸಾರದಲ್ಲಿನ 'ಜಾಲಕದಲ್ಲಿ ಮಧ್ಯೆ ರಂಧ್ರವಿರಬೇಕೆಂಬ' ಉಕ್ತಿಯು ಅದರ ರಚನೆಯ ಮೇಲೆ ಬೆಳಕು ಚೆಲ್ಲುತ್ತಿದೆ. ಜಾಲಕವು ದೇವಾಲಯದಲ್ಲಿ ಬೇರೆ ಎಡೆಗಳಲ್ಲೂ ಬರುವುದರಿಂದ, ಕಾಶ್ಯಪಶಿಲ್ಪದಂತೆ ಭಿತ್ತಿಯ ಮೇಲೆ ಬರುವ ಜಾಲಕವನ್ನು 'ಭಿತ್ತಿಜಾಲಕ' ಅಥವಾ 'ಕುಡ್ಯಜಾಲಕ'[21] ಎಂದು ಹೇಳುವುದು ಸೂಕ್ತವೆನ್ನಿಸುತ್ತದೆ. ಈ ಜಾಲಕದ 'ಸ್ಥಾನ'ದ ಬಗ್ಗೆ ಹೇಳುವಾಗ ಬೃಹತ್ಸಂಹಿತಾದ ವ್ಯಾಖ್ಯಾನಕಾರನು, ಸುತ್ತಗೋಡೆ ಕಟ್ಟಿ, ಅದರ ಮೇಲ್ಭಾಗದಲ್ಲಿ ಭಿತ್ತಿಗೆಹೊಂದಿಕೊಂಡಂತೆ ತೆರವು ಇರಬೇಕೆಂದೂ, ಹೊರಗಡೆಯಿಂದ ಬೆಳಕು ಒಳಗಡೆಗೆ ಬರಬಾರದೆಂದೂ[22] ಹೇಳಿದ್ದಾನೆ. ಇದರಂತೆ ಗರ್ಭಗೃಹಕ್ಕೆ ಬೆಳಕು ಬರಬಾರದೆಂಬುದು ಸ್ಪಷ್ಟವಾಗುತ್ತದೆ. ದೇವಾಲಯ ರಚನೆಯಲ್ಲಿಯೂ ಈ ಅಂಶವನ್ನು ಗಮನಿಸಿಕೊಂಡಂತೆ ತೋರುತ್ತದೆ, ಇದು ಗರ್ಭಗೃಹದಲ್ಲಿರುವ ದೇವರ ಗೌಪ್ಯತೆಯನ್ನು ಕಾಪಾಡುವುದರಿಂದಲೂ ಗರ್ಭಗೃಹದ ಭಿತ್ತಿಯಲ್ಲಿ ಜಾಲಕವನ್ನು ಅಳವಡಿಸಿರುವುದಿಲ್ಲ; ಅದರ ಮುಂದಿನ ಅಂತರಾಳ, ನವರಂಗಗಳಲ್ಲಿ ಮಾತ್ರ ಇರುತ್ತದೆ. ಸಾಂಧಾರ ದೇವಾಲಯಗಳಲ್ಲಿ ಮಾತ್ರ ಗರ್ಭಗೃಹದ ಸುತ್ತ ಪ್ರದಕ್ಷಿಣೆ ಬರಲು ಅನುಕೂಲವಾಗುವಂತೆ ಬೆಳಕು ಬೀರಲು ಗರ್ಭಗೃಹದ ಹೊರಭಿತ್ತಿಯಲ್ಲಿ ಜಾಲಕಗಳನ್ನು ಅಳವಡಿಸಿರುತ್ತಾರೆ. ಉದಾಹರಣೆಗೆ-ಐಹೊಳೆಯ ಮೇಗುತಿ, ಮಹಾಕೂಟದ ಮಹಾಕೂಟೇಶ್ವರ ದೇವಾಲಯಗಳನ್ನು ಹೇಳಬಹುದು. ಮಯಮತ ಮತ್ತು ಕಾಶ್ಯಪಶಿಲ್ಪಗಳ ಪ್ರಕಾರ, ಜಾಲಕವನ್ನು ಸ್ತಂಭಗಳ ನಡುವೆ ಇಡಬೇಕು ಎಂದು ಅರ್ಥೈಸಬಹುದು[23]. ಜಾಲಕವನ್ನು ವೇದಿಕೆಯ ಮೇಲೆ ಅಕ್ಕ-ಪಕ್ಕದ ಸ್ತಂಭಗಳೊಂದಿಗೆ ರಚಿಸಬೇಕೆಂದೂ,

ಜಾಲಕಕ್ಕಾಗಿ ವೇದಿಯನ್ನು ಭೇದಿಸಬಾರದೆಂದು ಗ್ರಂಥಗಳು ಹೇಳುತ್ತವೆ. ಜಾಲಕವನ್ನು ಒಂದು ಚೌಕಟ್ಟಿನೊಳಗೆ ಬಂಧಿಸುವ ಪರಿಪಾಠವನ್ನು ನಾವು ದೇವಾಲಯಗಳಲ್ಲಿ ಕಾಣುತ್ತೇವೆ. ಮಹಾಕೂಟದ ಮಲ್ಲಿಕಾರ್ಜುನ ದೇವಾಲಯದಲ್ಲಿ ಈ ಚೌಕಟ್ಟಿನೊಳಗೆ ಅಕ್ಕಪಕ್ಕ ಕಂಬಗಳಿದ್ದರೆ, ಬಹುಪಾಲು ದೇವಾಲಯಗಳಲ್ಲಿ ಈ ಕಂಬಗಳು ಆ ಚೌಕಟ್ಟಿನ ಹೊರಗೆ ನಿಲ್ಲುತ್ತವೆ. ಪಟ್ಟದಕಲ್ಲಿನ ಸಂಗಮೇಶ್ವರ ಮತ್ತು ವಿರೂಪಾಕ್ಷ ದೇವಾಲಯಗಳನ್ನು ಹೇಳಬಹುದು. ನಂದಿಯ ಅರುಣಾಚಲೇಶ್ವರ ದೇವಾಲಯದಲ್ಲಿ ಈ ಚೌಕಟ್ಟನ್ನು ಪದ್ಮದಳಗಳಿಂದ ಅಲಂಕರಿಸಲಾಗಿದೆ. ಭವನಾಸಿಯ ರೂಪಾಲ ಸಂಗಮೇಶ್ವರ ದೇವಾಲಯದಲ್ಲಿ ಜಾಲಕಕ್ಕೇ ಪೀಠದಂತಹ ವೇದಿಯನ್ನು ರಚಿಸಿದ್ದಾರೆ. ಜಾಲಕಗಳನ್ನು ಸ್ತಂಭಗಳ ನಡುವೆಯೇ ರಚಿಸಿದ್ದಾರೆಂಬುದನ್ನಾಗಲೀ ಅದಕ್ಕಾಗಿ ವೇದಿಯನ್ನು ಭೇದಿಸಿಲ್ಲವೆಂಬುದನ್ನಾಗಲೀ ವಿವರಿಸುವ ಅಗತ್ಯವಿಲ್ಲ.

ಗ್ರಂಥಗಳಲ್ಲಿರುವ ಜಾಲಕದ ವಿವಿಧ ಪ್ರಕಾರಗಳೆಂದರೆ ಗೋನೇತ್ರ, ಹಸ್ತಿನೇತ್ರ, ನಂದ್ಯಾವರ್ತ, ಋಜುಕ್ರಿಯಾ, ಪುಷ್ಪಕಂಠ ಮತ್ತು ಸಕರ್ಣ[25] ಮಯಮತದಲ್ಲೂ ಇದೇ ಪ್ರಕಾರಗಳಿದ್ದು, ಗೋನೇತ್ರ ಮತ್ತು

---

18 ಇದರಲ್ಲಿ 'ಶ್ರೀಸಂಪದಭಿವೃದ್ಧ್ಯರ್ಥಂ' ಎಂದಿದೆ—83.596(ಸಾಲು)

19 ಮಾನಸಾರ—33.568 (ಸಾಲು) ; ಮಯಮತ—16-6 1

20 ಬೃಹತ್ಸಂಹಿತಾ—LV 1.22(ಸಂ.1)

21 ಕಾಶ್ಯಪಶಿಲ್ಪ—11.14

22 ಬೃಹತ್ಸಂಹಿತಾ—ಸಂ.1 ಪುಟ.500

23 ಮಯಮತ—16-61 ; ಕಾಶ್ಯಪಶಿಲ್ಪ-11.1

24 ಕಾಶ್ಯಪಶಿಲ್ಪ—11.3.8 ; ಮಯಮತಿ—6.54.167 ; ಮಾನಸಾರ—33.574 (ಸಾಲು)

25 ಕಾಶ್ಯಪಶಿಲ್ಪ—11.9

ಹಸ್ತಿನೇತ್ರದ ಬದಲು ಅದರಲ್ಲಿ ಕ್ರಮವಾಗಿ ಗವಾಕ್ಷ ಮತ್ತು ಕುಂಜರಾಕ್ಷ ಎಂಬ ಪರ್ಯಾಯ ಪದಗಳಿವೆ.[26] ವಿವರಣೆಯ ದೃಷ್ಟಿಯಿಂದಲೂ ಈ ಗ್ರಂಥಗಳಲ್ಲಿ ಹೋಲಿಕೆ ಇದೆ. ಇವುಗಳ ಪ್ರಕಾರ, ದೀರ್ಘಾಶ್ರ ಅಥವಾ ಆಯತಾಕಾರವಾಗಿರುವುದು– ಗವಾಕ್ಷ; ನಾಲ್ಕು ಮೂಲೆಗಳಿಂದ ಕೂಡಿರುವುದು–ಕುಂಜರಾಕ್ಷ; ನಂದ್ಯಾವರ್ತದಂತಿದ್ದು, ಐದು ಮೂಲೆಗಳಿಂದ ಕೂಡಿರುವುದು–ನಂದ್ಯಾವರ್ತ; ಲಂಬಕೋನದಲ್ಲಿ ಅಡ್ಡ ಮತ್ತು ನೇರ ರೇಖಾಪಟ್ಟಿಗಳಿರುವುದು–ಋಜುಕ್ರಿಯಾ;[27] ಪುಷ್ಪಕಂಠ ಮತ್ತು ಸಕರ್ಣಗಳನ್ನು ನಂದ್ಯಾವರ್ತದಂತೆಯೇ ರಚಿಸಬೇಕು. ಕಾಶ್ಯಪ ಶಿಲ್ಪದಲ್ಲೂ ಹೀಗೇ ಇದ್ದು, ಅದರಲ್ಲಿ 'ಋಜುಕ್ರಿಯಾ'ವನ್ನು "ಸ್ತಂಭ ಕಂಪೌದ್ವಾ ಜಾಲಂತ ಋಜುಕ್ರಿಯಾಂ" ಎಂದಿದೆ.[28] ಮಾನಸಾರದಲ್ಲಿ ನಾಗಬಂಧ, ವಲ್ಲೀಬಂಧ, ಗವಾಕ್ಷ, ಕುಂಜರಾಕ್ಷ, ಸ್ವಸ್ತಿಕ, ಸರ್ವತೋಭದ್ರ ಮತ್ತು ನಂದ್ಯಾವರ್ತಗಳ ಉಲ್ಲೇಖವಿದ್ದು, ಅದರಲ್ಲಿ ಹೆಚ್ಚಿನ ವಿವರಗಳೇನೂ ಇಲ್ಲ.[29] ಕಾಮಿಕಾಗಮದಲ್ಲಿ ಸರ್ವತೋಭದ್ರ, ವರ್ಧಮಾನ, ಸ್ವಸ್ತಿಕ, ನಂದ್ಯಾವರ್ತ ಚರುಕ, ವಿದ್ಯಾ—ಈ ಪ್ರಕಾರಗಳನ್ನು ಹೇಳಲಾಗಿದೆ. ಇದರ ಪ್ರಕಾರ, ಎಂಟು ಮುಖವುಳ್ಳದ್ದು—ಸರ್ವತೋಭದ್ರ; ನಾಲ್ಕು ಮುಖವುಳ್ಳದ್ದು ವರ್ಧಮಾನ; ಉಳಿದದ್ದನ್ನು ಇದು ದಿಕ್ಕು ಮತ್ತು ನೇತ್ರಗಳ ಮೂಲಕ ವಿವರಿಸಿದ್ದು, ಅಸ್ಪಷ್ಟವಾಗಿದೆ.[30]

ಮಯಮತವು ವೃತ್ತಾಕಾರವಾಗಿ ಉಳ್ಳ ಜಾಲಕವನ್ನು 'ಗುಲಿಕಾ ಜಾಲಕ' ಎಂದು ಕರೆದಿದ್ದು, ಅದರಲ್ಲಿ ಸ್ವಸ್ತಿಕ, ವರ್ಧಮಾನ ಮತ್ತು ಸರ್ವತೋಭದ್ರ ಎಂದು ಮೂರು ವಿಧಗಳನ್ನು ಹೇಳಿದೆ.[31] ಇಲ್ಲಿ ಕಾಮಿಕಾಗಮ ಮತ್ತು ಮಯಮತದ ವಿವರಗಳನ್ನು ಹೊಂದಿಸಿಕೊಳ್ಳುವ ಸಾಧ್ಯತೆ ಇರುವಂತಿದೆ. ಕಾಮಿಕಾಗಮದ ಸರ್ವತೋಭದ್ರ, ಸ್ವಸ್ತಿಕ, ವರ್ಧಮಾನ ರೀತಿಗಳು ದುಂಡಾಕಾರದ ಜಾಲಕದಲ್ಲಿ ಬರುವುದೆಂದೂ, ಈ ಗ್ರಂಥದಲ್ಲಿ ಹೇಳಿರುವಂತೆಯೇ, ಮಯಮತದ ಸ್ವಸ್ತಿಕ, ವರ್ಧಮಾನ ಮತ್ತು ಸರ್ವತೋಭದ್ರ ರೀತಿಗಳು ಕ್ರಮವಾಗಿ ಆರು, ನಾಲ್ಕು ಮತ್ತು ಎಂಟು ಮುಖವುಳ್ಳದ್ದೆಂದು ಊಹಿಸಬಹುದಾಗಿದೆ. ದೇವಾಲಯಗಳಲ್ಲಿ ಕಾಣಬರುವ ದುಂಡಾಕಾರದ ಜಾಲಕಗಳ ರಚನೆಯ ರೀತಿಯೂ ಇದಕ್ಕೆ ಪುಷ್ಟಿಕೊಡುವಂತಿದೆ. ಗುಲಿಕಾ ಜಾಲಕವೂ ಒಂದು ಹೊರ ಚೌಕಟ್ಟಿನೊಳಗೆ ಬಂದಿದೆಯೇ ಹೊರತು ಪೂರ್ಣ ವೃತ್ತಾಕಾರದ ಚೌಕಟ್ಟನ್ನು ಹೊಂದಿಲ್ಲವೆಂಬುದನ್ನು ಇಲ್ಲಿ ಗಮನಿಸಬಹುದು. ಐಹೊಳೆಯ ದುರ್ಗ ದೇವಾಲಯದ 'ಸ್ವಸ್ತಿಕ' ವಾತಾಯನವು ದುಂಡಾಕಾರದ ಜಾಲಕದಲ್ಲಿ ಬಂದಿದ್ದರೆ, ಪಟ್ಟದಕಲ್ಲಿನ ಸಂಗಮೇಶ್ವರ ದೇವಾಲಯದಲ್ಲಿ ನಾಲ್ಕು ಮುಖವುಳ್ಳ (=ವರ್ಧಮಾನ) ದುಂಡಾಕಾರದ ಜಾಲಕವಿದೆ. ಮಹಾಕೂಟದ ಮಲ್ಲಿಕಾರ್ಜುನ ಮತ್ತು ಮಹಾಕೂಟೇಶ್ವರ ದೇವಾಲಯಗಳ ಗುಲಿಕಾ ಜಾಲಕದಲ್ಲಿ 'ಮತ್ಸ್ಯಚಕ್ರ'ವನ್ನು ಬಿಡಿಸಿದ್ದು, ಇದು ಎಂಟು ಮೂಲೆ/ರಂಧ್ರಗಳನ್ನು (=ಸರ್ವತೋಭದ್ರ) ಹೊಂದಿದೆ.

ಇವುಗಳನ್ನು ಗಮನಿಸಿದಾಗ, ಗ್ರಂಥಗಳಲ್ಲಿ, ಜಾಲಕದ ಹೊರ ಆಕಾರ, ಒಳ ಆಕಾರ, ಮತ್ತು ಅಲಂಕಾರ– ಎಲ್ಲವನ್ನೂ ಒಟ್ಟಿಗೇ ಸೇರಿಸಿ ಅದರ ವಿವಿಧ ರೂಪಗಳನ್ನು ಹೇಳಿರುವಂತೆ ತೋರುತ್ತದೆ. ಹೀಗೆ ನೋಡಿದಾಗ, ಗವಾಕ್ಷ ಮತ್ತು ಕುಂಜರಾಕ್ಷಗಳು ಹೊರ ಆಕಾರಕ್ಕೂ, ಋಜುಕ್ರಿಯಾ ಮತ್ತು ಗುಲಿಕಾ ಜಾಲಕಗಳು ಅದರ ಒಳ ಆಕಾರಕ್ಕೂ ಪುಷ್ಪಕಂಠ ಮತ್ತು

---

26 ಮಯಮತ—16.56-57

27 ಮಯಮತ—16.57-60

28 ಕಾಶ್ಯಪಶಿಲ್ಪ—11.10-15

29 ಮಾನಸಾರ—33. 582-585 (ಸಾಲುಗಳು)

30 ಕಾಮಿಕಾಗಮ—XXXV—89-92 ; ಇದರಲ್ಲಿ ಜಾಲಕವನ್ನು 'ಶಾಲಾ' ಎಂದಿದೆ.

31 ಮಯಮತ—16.62-63

ಸಕರ್ಣಗಳು—ಅದರ ಅಲಕಾರ ರೀತಿಗೂ ಅನ್ವಯಿಸು ವಂತೆ ತೋರುತ್ತದೆ. ಅಂತೆಯೇ ಮಾನಸಾರದ ನಾಗ ಬಂಧ ಮತ್ತು ವಲ್ಲೀಬಂಧುಗಳು ಅಲಂಕಾರಕ್ಕೆ ಸಂಬಂಧಿ ಸಿದ್ದೆಂದೂ, ಇದೇ ಮಾನಸಾರ ಮತ್ತು ಕಾಮಿಕಾಗಮದ ಸರ್ವತೋಭದ್ರ, ವರ್ಧಮಾನ—ಇತ್ಯಾದಿ ರೀತಿಗಳು ಗುಲಿಕಾ ಜಾಲಕದಲ್ಲಿ ಬರುವುವೆಂದೂ ಹೇಳಬಹುದು. ದೇವಾಲಯಗಳ ರಚನೆಯನ್ನು ಗಮನಿಸಿದರೆ, ಐಹೊಳೆಯ ಲಾಡ್‌ಖಾನ್ ದೇವಾಲಯದ ಜಾಲಕವು 'ಗವಾಕ್ಷ' ರೀತಿಗೂ, ಅಲ್ಲಿಯ ಮೇಗುತಿ ದೇವಾಲಯದ್ದು 'ಕುಂಜರಾಕ್ಷ' ರೀತಿಗೂ, ಉದಾಹರಣೆಯಾಬಲ್ಲು ದಾಗಿದೆ. ಬಾದಾಮಿಯ ಮಾಲೆಗಿತ್ತಿ ದೇವಾಲಯ ಮತ್ತು ಚಿಕ್ಕಮಹಾಕೂಟದ ಗಜಪೃಷ್ಠ ಶಿವದೇವಾಲ ಯದ್ದನ್ನು 'ಋಜುಕ್ರಿಯ' ಎಂದು ಗುರುತಿಸಬಹುದು. ಐಹೊಳೆಯ ಲಾಡ್‌ಖಾನ್ ಮತ್ತು ಹಳ್ಳೂರಿನ ಮೇಲ ಗುಡಿ ಜೈನ ದೇವಾಲಯಗಳಲ್ಲಿ ಜಾಲಕದ ಮಧ್ಯೆ ಪುಷ್ಪಾಲಂಕರಣವಿದ್ದು, ಅದನ್ನು 'ಪುಷ್ಪಕರ್ಣ' ಎನ್ನ ಬಹುದು. ಮಾನಸಾರದಲ್ಲಿ ಗುರುತಿಸುವಂತೆ ಪಟ್ಟದ ಕಲ್ಲಿನ ಮಲ್ಲಿಕಾರ್ಜುನ ಮತ್ತು ಸೀರ್‍ವಾಳ್‌ನ ದೇವಾಲಯ ವೊಂದರಲ್ಲಿ 'ವಲ್ಲೀಬಂಧ' ಜಾಲಕವೂ, ಪಟ್ಟದಕಲ್ಲಿನ ಪಾಪನಾಥ ದೇವಾಲಯದಲ್ಲಿ ನಾಗಬಂಧ ಜಾಲಕವೂ ಇದೆ. ವಲ್ಲೀಬಂಧ ಜಾಲಕದಲ್ಲಿ ಶಿಲ್ಪವನ್ನು ಬಿಡಿಸುವ ಶಿಲ್ಪಿಗಳ ಪದ್ಧತಿಗೆ ಮಣ್ಣೆಯ ಕಪಿಲೇಶ್ವರ, ಅರಳು ಗುಪ್ಪೆಯ ಕಲ್ಲೇಶ್ವರ ದೇವಾಲಯಗಳು ಉದಾಹರಣೆ ಯಾಗಿವೆ. ಭವನಾಸೀ ಸಂಗಂನ ರೂಪಾಲ ಸಂಗಮೇ ಶ್ವರ, ನಂದಿಯ ಭೋಗನಂದಿ, ಹೇಮಾವತಿಯ ದೊಡ್ಡೇಶ್ವರ ದೇವಾಲಯಗಳ ಜಾಲಕಗಳಲ್ಲಿ ಪೂರ್ಣ ಶಿಲ್ಪವನ್ನು ಬಿಡಿಸಲಾಗಿದ್ದು, ಜಾಲಕಗಳು ಕೋಷ್ಠ ಗಳೂ ಆಗಿ ಪರಿಣಮಿಸಿದನ್ನು ಇಲ್ಲಿ ಗುರುತಿಸ ಬಹುದಾಗಿದೆ.

ಜಾಲಕಗಳ ಮೇಲ್ಭಾಗದ ಅಲಂಕರಣದ ಬಗ್ಗೆ ಗ್ರಂಥಗಳಲ್ಲಿ ಏನೂ ಹೇಳಿಲ್ಲವಾದರೂ, ಕೆಲವು ದೇವಾ ಲಯಗಳಲ್ಲಿ ಈ ಭಾಗವನ್ನು ವಿವಿಧ ರೀತಿಯಲ್ಲಿ ಅಲಂಕರಿ ಸಿರುವುದು ಕಂಡುಬರುತ್ತದೆ. ಮಹಾಕೂಟದ ಮಹಾ ಕೂಟೇಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳಲ್ಲಿ ಈ ಭಾಗದಲ್ಲಿ ಶಾಲಾ-ಕೂಟಗಳನ್ನು ಬಿಡಿಸಲಾಗಿದೆ. ಬಾದಾಮಿಯ ಮಾಲೆಗಿತ್ತಿ ಶಿವಾಲಯ, ಭವನಾಸೀ ಸಂಗಂನ ರೂಪಾಲ ಸಂಗಮೇಶ್ವರ ದೇವಾಲಯಗಳಲ್ಲಿ ಈ ಭಾಗವನ್ನು ತೋರಣವು ಆವರಿಸಿದೆ. ಪಟ್ಟದ ಕಲ್ಲಿನ ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ದೇವಾಲಯ ಗಳಲ್ಲಿ 'ನಾಸಿ'ಯನ್ನು ಬಿಡಿಸಿದ್ದಾರೆ. ಜಾಲಕದಲ್ಲಿ ಶಿಲ್ಪಗಳನ್ನು ಬಿಡಿಸುವ ಪದ್ಧತಿ ಆರಂಭವಾದ ಮೇಲೆ ಅದೇ ಆಕರ್ಷಕವಾಗಿದ್ದುದರ ಕಾರಣವಾಗಿಯೋ ಏನೋ ಈ ಮೇಲ್ಭಾಗದ ಅಲಂಕರಣವನ್ನು ಕೈಬಿಟ್ಟಂತೆ ಇದೆ.

ಉಪಯುಕ್ತತೆಯ ದೃಷ್ಟಿಯಿಂದ ಆರಂಭ ವಾದರೂ ಜಾಲಕಗಳು ಬಹುಬೇಗ ಅಲಂಕಾರಿಕವಾಗಿ ಬೆಳವಣಿಗೆ ಪಡೆದದ್ದನು ಮೇಲಿನ ಉದಾಹರಣೆಗಳು ಸ್ಪಷ್ಟಪಡಿಸುತ್ತವೆ. ಬಾದಾಮಿಯ ಜಂಬುಲಿಂಗ, ಮೇಲಣ ಶಿವಾಲಯ, ಐಹೊಳೆಯ ಮೇಗುತಿ—ಇವು ಗಳಲ್ಲಿ ಉದ್ದೇಶವನ್ನು ಪೂರೈಸುವ ಸರಳ ಜಾಲಕಗಳಿದ್ದರೆ, ಕಾಲಾನಂತರ ವಿವಿಧ ರೂಪವನ್ನು ಪಡೆದು ಶಿಲ್ಪಿಯ ಕುಶಲತೆ ಮತ್ತು ಗ್ರಂಥಗಳ ಉಲ್ಲೇಖಗಳಿಗೆ ಸಾಕ್ಷಿ ಯಾಗಿ ನಿಂತಿತೆಂದು ಹೇಳಬಹುದು. ರಾಷ್ಟ್ರಕೂಟರ ಕಾಲದಲ್ಲಿ ಜಾಲಕವು ಹೆಚ್ಚಾಗಿ ಕಂಡುಬರದಿದ್ದರೂ, ಇರುವ ಕೆಲವು ಶಿಲ್ಪ ಜಾಲಕಗಳು ಗಂಗ ನೊಳಂಬರಿಗೆ ಮಾರ್ಗದರ್ಶಿಯಾಗಿರಬಹುದು. ಆದರೂ ಅದನ್ನು ಹೆಚ್ಚುಪ್ರಚಲಿತಗೊಳಿಸಿದ ಕೀರ್ತಿ ಅವರಿಗೇ ಸಲ್ಲುತ್ತದೆ. ವಿಜಯನಗರ ಕಾಲದ ದೇವಾಲಯಗಳಲ್ಲಿ ಜಾಲಕಗಳು ಕಾಣಬರದಿರುವುದೂ ಗಮನಾರ್ಹ ವಿಷಯವಾಗಿದೆ.

**ತೋರಣ**

ಭಿತ್ತಿಯಲ್ಲಿ ಕೋಷ್ಠ ಮತ್ತು ಜಾಲಕಗಳ ಮೇಲೆ ಬರುವ ಅಲಂಕಾರಿಕ ಭಾಗವೇ ತೋರಣ. ಪ್ರಾಸಾದ, ಮಂಟಪಗಳ ಮಧ್ಯಭಾಗದಲ್ಲ ತೋರಣವು ಇರಬೇಕೆಂದು ಕಾಶ್ಯಪಶಿಲ್ಪದಲ್ಲಿ ಹೇಳಿದ್ದರೂ ಅದನ್ನು ಭಿತ್ತಿಗೂ

ಅನ್ವಯಿಸಿ ಹೇಳಿರುವುದು ಸ್ಪಷ್ಟವಾಗಿದೆ.[32] ಮಾನಸಾರದಲ್ಲಿ ತೋರಣವನ್ನು ಸಿಂಹಾಸನದ ಮೇಲೂ ರಚಿಸಬಹುದೆಂದಿದೆ.[33] ತೋರಣವು ಬಿಡಿಕಂಬ ಮತ್ತು ದ್ವಾರಗಳ ಮೇಲೂ ಬರುವುದರಿಂದ ಭಿತ್ತಿಯ ಮೇಲೆ ಬರುವ ತೋರಣವನ್ನು 'ಈಶಾನ ಶಿವಗುರುದೇವಪದ್ಧತಿ' ಗ್ರಂಥದಲ್ಲಿರುವಂತೆ 'ಕುಡ್ಯತೋರಣ' ಅಥವಾ ಭಿತ್ತಿ ತೋರಣ ಎಂದು ಗುರುತಿಸುವುದು ಸೂಕ್ತವೆನಿಸುತ್ತದೆ. ತೋರಣವು ಪಂಕ್ತಿ (=ಸ್ತಂಭ)ಯ ಮಧ್ಯೆ ಬರಬೇಕೆಂದೂ, 'ಪ್ರತಿ'ಯಿಂದ 'ಉತ್ತರ'ದವರೆಗೆ ಇರಬೇಕೆಂದೂ ಅಜಿತಾಗಮದಲ್ಲಿದೆ.[34] ತೋರಣವು ಕಂಬದ ಮೇಲೆ ನಿಂತಿರುವುದರಿಂದ ಆ ಕಂಬವನ್ನು 'ತೋರಣಾಂಘ್ರಿ' ಎಂದು ಮಾನಸಾರವೂ,[35] 'ಪಾರ್ಶ್ವಪಾದ' ಎಂದು ಮಯಮತವೂ ಕರೆದಿದೆ.[36] ಮಯಮತದಲ್ಲಿ, ತೋರಣವು 'ಉತ್ತರ'ದ ಕೆಳಗೆ ಇರುವುದೆಂದು ಹೇಳಿದೆಯಲ್ಲದೆ, ಅದರ ಕಂಬವು ಎಂಟು ಅಥವಾ ನಾಲ್ಕು ಮುಖದಲ್ಲಿ ಇರಬೇಕೆಂದೂ ಹೇಳಿದೆ. ಅಲ್ಲದೆ, ಈ ಕಂಬಕ್ಕೆ ಬೋದಿಗೆಯನ್ನು ರಚಿಸದೆ, ವೀರಕಾಂಡದ ಮೇಲೆ ಉತ್ತರ, ವಾಜನ, ಸಾಬ್ಜಕ್ಷೇಪಣ, ಕ್ಷುದ್ರ ವಾಜನವನ್ನು ರಚಿಸಿ, ಅದರ ಮೇಲಿನಿಂದ ಮಕರದಂತೆ ಬಾಗಿರುವ ತೋರಣವನ್ನು ರಚಿಸಬೇಕು ; ಎದುರಿಗೆ ಕಾಣುವ ಭಾಗವು ಮಕರದಂತಿರಬೇಕು. ಇದರಲ್ಲಿ ಅಷ್ಟಮಂಗಲಗಳನ್ನು ಬಿಡಿಸಬೇಕು,—ಇದು ಮಯಮತವು ವಿವರಿಸುವ ತೋರಣ ರಚನಾಕ್ರಮ.[37] ಮಾನಸಾರದಲ್ಲಿ, ತೋರಣವನ್ನು ವೃತ್ತಾಕಾರ, ತ್ರಿಕೋನಾಕಾರ, ಅರ್ಧಚಂದ್ರಾಕಾರ ಅಥವಾ ಬಿಲ್ಲಿನಂತೆ ಬಾಗಿಸಬಹುದೆಂದು ಹೇಳಿದೆ.[38] ಇದರ ಮಧ್ಯಭಾಗವನ್ನು ಗ್ರಂಥಗಳಲ್ಲಿ ಪೂರಿತ,[39] ನಿಮ್ನಕ,[40] ಪೂರೀಮ,[41] ಪೃಷ್ಠ[42]—ಎಂದು ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ. ಮಾನಸಾರದಂತೆ, ಈ ಭಾಗದಲ್ಲಿ ಗಜಲಕ್ಷ್ಮಿಯನ್ನು ಬಿಡಿಸುವುದಲ್ಲದೆ, ಮೇಲೆ ತುಂಬುರುನಾರದರನ್ನೂ ಬಿಡಿಸಬೇಕು.[43]

ದೇವಾಲಯದಲ್ಲಿ ತೋರಣಗಳ ರಚನೆಯನು ಗಮನಿಸಿದಾಗ, ಕೆಲಮಟ್ಟಿಗೆ ಇವುಗಳನ್ನು ಗಮನದಲ್ಲಿಟ್ಟುಕೊಂಡಂತೇ ತೋರುತ್ತದೆ. ಬಾದಾಮಿಯ ಮಾಲೆಗಿತ್ತಿ ದೇವಾಲಯದಲ್ಲಿ ಫಲಕದ ಮೇಲೆ ತೋರಣ ಆರಂಭವಾಗಿದ್ದರೆ, ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿ, ಮಯಮತವು ಹೇಳುವಂತೆ, 'ವೀರಕಂಠ'ದ ಮೇಲೆ ಉತ್ತರ, ವಾಜನಗಳಿದ್ದು, ಅದರ ಮೇಲಿನಿಂದ ತೋರಣ ಆರಂಭವಾಗಿದೆ. ಎಲ್ಲೋರದ ಕೈಲಾಸ ದೇವಾಲಯದಲ್ಲಿ ಕಂಬದ ಮೇಲೆ ಬೋದಿಗೆ, ನಂತರ ಪ್ರಸ್ತರವು ಬಂದಿದ್ದು, ಅದರ ಮೇಲೆ ತೋರಣ ರಚಿಸಲಾಗಿದೆ. ತೋರಣದ ಮಧ್ಯೆ ಗಜಲಕ್ಷ್ಮಿಯನ್ನು ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿ ಬಿಡಿಸಿದ್ದರೆ, ಅದೇ ಮಲ್ಲಿಕಾರ್ಜುನ ದೇವಾಲಯದಲ್ಲಿ ತೋರಣದ ನಡುವೆ ಒಂದು ಕುಳಿತ ಶಿಲ್ಪವಿದೆ. ಎಲ್ಲೋರದ

---

32 ಕಾಶ್ಯಪಶಿಲ್ಪ—12.5

33 ಮಾನಸಾರ—46.3

34 ಅಜಿತಾಗಮ—14.59 ಇದೇ ಗ್ರಂಥದಲ್ಲಿ ಉದ್ಧೃತವಾಗಿರುವ ಈಶಾನಶಿವ ಗುರುದೇವ ಪದ್ಧತಿಯಲ್ಲೂ ಇದೇ ವಿವರವಿದೆ. VOL.IV ಪುಟ. 320,22)

35 ಮಾನಸಾರ—46.2 ಇದರಲ್ಲಿ 'ತೋರಣಸ್ತಂಭ' ಎಂಬ ಪದವೂ ಇದೆ

36 ಮಯಮತ—21.72

37 ಮಯಮತ—22.73-79. ಇದು ದ್ವಾರತೋರಣಕ್ಕೆ ಹೆಚ್ಚು ಅನ್ವಯಿಸುವಂತಿದೆ.

38 ಮಾನಸಾರ—46.31-32 (ಸಾಲುಗಳು)

39 ಕಾಮಿಕಾಗಮ—LV.66

40 ಸುಪ್ರಭೇದಾಗಮ—31.71 (ಉದ್ಧೃತ—ಪಿ. ಕೆ. ಆಚಾರ್ಯ—ಎನ್.ಆ.ಹಿಂ.ಆ. ಪುಟ-123)

41 ಕಾಶ್ಯಪಶಿಲ್ಪ—12.8 ; ಮಯಮತ—21.70

42 ಅಜಿತಾಗಮ—14.63

43 ಮಾನಸಾರ—46.45 (ಸಾಲು)

ಕೈಲಾಸ ದೇವಾಲಯದಲ್ಲಿ ತೋರಣದ ಮೇಲೆ ಲಕ್ಷ್ಮಿಯನ್ನು ಬಿಡಿಸಲಾಗಿದೆ. ಇದೇ ದೇವಾಲಯದಲ್ಲಿ ಕೆಲವೆಡೆ ಶಿಖರದ ಮಾದರಿಗಳನ್ನೂ ಬಿಡಿಸಲಾಗಿದೆ. ಕಂಬದಹಳ್ಳಿಯಲ್ಲಿ ತೋರಣದ ಮಧ್ಯದಲ್ಲಿ ಜಿನಬಿಂಬವಿದೆ. ಮಾನಸಾರದಲ್ಲಿ ಎರಡು ಬಿಂಬಗಳನ್ನು ಹೇಳಿರುವುದು ಅನುಮಾನಕ್ಕೆಡೆಯಾದರೂ, ಕುಕ್ಕನೂರಿನ ನವರಂಗ ದೇವಾಲಯದ ತೋರಣವು ಕೆಲಮಟ್ಟಿಗೆ ಇದನ್ನು ಹೋಲುವಂತಿದೆ. ಇದರಲ್ಲಿ ತೋರಣವು ಮೇಲಕ್ಕೆ ಏರಿದ್ದು, ಅಂತ್ಯದಲ್ಲಿ 'ವೃತ್ತ'ವಿದೆ. ಅದರ ಕೆಳಗೆ ಆನೆಯನ್ನು ಬಿಡಿಸಿದೆ.

ಅಲಂಕಾರದ ಆಧಾರದ ಮೇಲೆ ತೋರಣವನ್ನು ಪತ್ರತೋರಣ, ಚಿತ್ರತೋರಣ ಮತ್ತು ಮಕರ ತೋರಣ ಎಂದು ಮೂರು ವಿಧವಾಗಿ ಬಹುಪಾಲು ಗ್ರಂಥಗಳು ಗುರುತಿಸಿವೆ.[44] ಇವುಗಳ ಪ್ರಕಾರ, ಅರ್ಧಚಂದ್ರಾಕಾರ ಅಥವಾ ಬಾಲಚಂದ್ರಾಕಾರದಲ್ಲಿದ್ದು, ಎಲೆ-ಬಳ್ಳಿಗಳಿಂದ ಅಲಂಕರಿಸಲ್ಪಟ್ಟದ್ದು—ಪತ್ರತೋರಣ ಮಾನಸಾರದಲ್ಲಿ ಮಾತ್ರ, 'ಮಕರ ಮತ್ತು ಪತ್ರವನ್ನು ಮೇಲೆ ಮತ್ತು ಕೆಳಗೆ—ಎರಡೂ ಕಡೆ ಬಿಡಿಸಬೇಕು' ಮುಂಭಾಗದಲ್ಲಿ ಪತ್ರ, ಬಳ್ಳಿ, ಭೂತಗಳನ್ನು ಬಿಡಿಸಿ ಕಂಬದ ಎರಡೂ ಕಡೆಗಳಲ್ಲಿ ವ್ಯಾಳಗಳು ತೋರಣವನ್ನು ಹಿಡಿದಂತೆ ಬಿಡಿಸಬೇಕು. (ಉಳಿದದ್ದನ್ನು ಇಷ್ಟಬಂದಂತೆ ಅಲಂಕರಿಸಬೇಕು). ಎಂದು ಹೇಳಲಾಗಿದೆ.[45] ಟಿ. ವಿ. ಮಹಾಲಿಂಗಂ ರವರು ಪತ್ರತೋರಣವನ್ನು ಪ್ರಾಚೀನ ವಿಧನೆಂದೂ ಇದರಿಂದಲೇ ಉಳಿದ ತೋರಣ ರೀತಿಗಳು ಬಂದವೆಂದೂ ಹೇಳಿದ್ದಾರೆ.[46] ದೇವಾಲಯಗಳಲ್ಲಿ ಮೊದಲು ಕಾಣಿಸಿಕೊಳ್ಳುವುದು ಪತ್ರತೋರಣವೇ ಆಗಿರುವುದರಿಂದ ಮತ್ತು ಮೊದಮೊದಲಿನ ಮಕರತೋರಣದ ರಚನೆಯೂ ಪತ್ರತೋರಣದ ರಚನೆಯನ್ನೇ ಹೋಲುತ್ತಿರುವುದರಿಂದ ಹಾಗೇ ಹೇಳಿರುವುದು ಸೂಕ್ತವಾಗಿದೆ.

ಪಟ್ಟದ ಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿ ಪತ್ರ ತೋರಣವನ್ನು ಕಾಣಬಹುದಾಗಿದೆ. ಕಂಬದಹಳ್ಳಿಯ ಪಂಚಕೂಟ ಬಸದಿಯಲ್ಲಿ ಪತ್ರ ತೋರಣದ್ದು ಕೆಳಗೆ ಜಿನನನ್ನು ಬಿಡಿಸಿದೆ. ಬೇಗೂರಿನ ಚೋಳೇಶ್ವರ ದೇವಾಲಯದಲ್ಲೂ ಪತ್ರ ತೋರಣವಿದೆ. ಅನಂತರದ ದೇವಾಲಯಗಳಲ್ಲಿ ಇದು ಅಷ್ಟಾಗಿ ಕಾಣಬರುವುದಿಲ್ಲ.

ಶಾಸ್ತ್ರ ಗ್ರಂಥಗಳ ಪ್ರಕಾರ, ಎರಡೂ ಕಡೆ ಮಕರವೂ ಮಧ್ಯೆ 'ಪೂರಿತ'ವೂ[47] ಇದ್ದು, ನಾನಾ ವಿಧ ಲತೆಗಳಿಂದ ಅಲಂಕರಿಸಲ್ಪಟ್ಟದ್ದು-ಮಕರತೋರಣ ಇದು ಐದು ಮುಖಗಳಿಂದ ಕೂಡಿರಬೇಕೆಂದು ಕಾಶ್ಯಪ ಶಿಲ್ಪದಲ್ಲಿದೆ.[47ಎ] ಇದರ 'ಸಿಮ್ಮಕ'ವು ವೃತ್ತಾಕಾರದಲ್ಲಿರಬೇಕೆಂದು ಸುಪ್ರಭೇದಾಗಮದಲ್ಲಿದ್ದರೆ, ಮಧ್ಯದ ವೃತ್ತವು ನಾನಾ ಅಲಂಕಾರದಿಂದ ಕೂಡಿರಬೇಕು ಎಂದು ಕಾಶ್ಯಪ ಶಿಲ್ಪದಲ್ಲಿದೆ.[48] ಅಜಿತಾಗಮದಲ್ಲಿ ಪಕ್ಕಗಳಲ್ಲಿ ಮಕರಗಳನ್ನು ಬಿಡಿಸಿ ಸರ್ವಲಕ್ಷಣ ಸರ್ವಾಲಂಕಾರಗಳಿಂದ ಕೂಡಿದ ತೋರಣವನ್ನು ರಚಿಸಬೇಕೆಂದಿದೆಯಲ್ಲದೆ, ಬ್ರಹ್ಮ, ವಿಷ್ಣುಗಳಿಂದ ಕೂಡಿದ ಲಿಂಗವನ್ನು 'ಪೃಷ್ಠ'ದಲ್ಲಿ ಬಿಡಿಸಬೇಕೆಂದಿದೆ.[49] ಅಲ್ಲದೆ ಉತ್ತರದಲ್ಲಿ ಬ್ರಹ್ಮನನ್ನೂ, ದಕ್ಷಿಣದಲ್ಲ ದಕ್ಷಿಣಾಮೂರ್ತಿಯನ್ನೂ, ಪಶ್ಚಿಮದಲ್ಲಿ ವಿಷ್ಣುವನ್ನೂ ಬಿಡಿಸಬೇಕೆಂದೂ ಈ ಗ್ರಂಥ-

---

44 ಮಾನಸಾರದಲ್ಲಿ ಮಕರ ತೋರಣ ಹೇಳಿಲ್ಲ. ಅಜಿತಾಗಮ ಮತ್ತು ಸುಪ್ರಭೇದಾಗಮದಲ್ಲಿ ಮಕರ ತೋರಣ ಮಾತ್ರ ಇದೆ.

45 ಮಾನಸಾರ—46-47-48

46 ಟಿ. ವಿ. ಮಹಾಲಿಂಗಂ South Indian Temple Complex

47 ಕಾಮಿಕಾಗಮ—LV-65; ಕಾಶ್ಯಪಶಿಲ್ಪ-12-8-80 ಮಯಮತ 21 ¦69b- ಸುಪ್ರಭೇದಾಗಮ—31-68-77 (ಉದ್ಧೃತ-ಪಿ.ಕೆ. ಆಚಾರ್ಯ ಎನಸೈಕ್ಲೋಪೀಡಿಯ ಆಫ್ ಹಿಂದೂ ಆರ್ಕಿಟೆಕ್ಚರ್—ಪುಟ 123)

47ಎ ಅದೇ.

48 ಕಾಶ್ಯಪಶಿಲ್ಪ—12-8-9

49 ಅಜಿತಾಗಮ—14 62

ದಲ್ಲಿ ಹೇಳಿದೆ.[50] ತೋರಣದ ಮಧ್ಯದಲ್ಲಿ ಲಿಂಗವನ್ನಿಡಬೇಕೆಂದು ಈಗಾಗಲೇ ಇದರಲ್ಲಿ ಹೇಳಿರುವುದರಿಂದ ಈ ಶಿಲ್ಪನಿಯಮವು ತೋರಣಕ್ಕೆ ಅನ್ವಯಿಸದೆ, ತೋರಣದ ಕೆಳಗಿರುವ ಕೋಷ್ಠದಲ್ಲಿಡಬೇಕಾದ ಶಿಲ್ಪಗಳಿಗೆ ಅನ್ವಯವಾಗುವಂತಿದೆ.

ಸುಪ್ರಭೇದಾಗಮದಲ್ಲಿ ಮಕರ ತೋರಣದ ಬಗ್ಗೆ ಮಾತ್ರ ವಿವರಣೆ ಇರುವುದು ಗಮನಾರ್ಹವಾಗಿದೆ. ಇದರಲ್ಲಿ ವೃತಾಕಾರದ ನಿಮ್ನಕದ ಮೇಲೆ ಊಹೆಗೆ ತಕ್ಕಂತೆ ಮಾಡುವ ಆದೇಶವಿರುವುದರಿಂದ ಮಕರದೊಂದಿಗೆ ಉಳಿದ ಆಲಂಕಾರವನ್ನೂ ಮಾಡಬಹುದಾಗಿದೆ. ಅದರಂತೆ, ಚಿತ್ರ ಮತ್ತು ಪತ್ರ ತೋರಣಗಳ ಆಲಂಕಾರವನ್ನು ಇದರಲ್ಲಿಯೇ ಅಳವಡಿಸಬಹುದಾಗಿದ್ದು, ಆ ಕಾರಣದಿಂದ ಇದರಲ್ಲಿ ಮಕರತೋರಣವನ್ನು ಮಾತ್ರ ಹೇಳಿದ್ದು ಉಳಿದದ್ದನ್ನು ಕೈಬಿಡಲಾಗಿದೆ ಎನ್ನಬಹುದು, ಮಾನಸಾರದ ಪ್ರಕಾರ ಎಲ್ಲತೋರಣಗಳಲ್ಲೂ ಮಕರವನ್ನು ಬಿಡಿಸಬೇಕಾಗಿದ್ದು, ಈ ಕಾರಣವಾಗಿಯೇ ಇದರಲ್ಲಿ ಮಕರತೋರಣವನ್ನು ಪ್ರತ್ಯೇಕವಾಗಿ ಹೇಳಿಲ್ಲವೆನಿಸುತ್ತದೆ.

ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯದಲ್ಲಿ ಮಕರತೋರಣವಿದ್ದು ಅದರಲ್ಲಿ ಮಧ್ಯೆ ಕುಳಿತಿರುವ ಒಂದು ಶಿಲ್ಪವಿದೆ. ಇದರಲ್ಲಿ ಮಕರದ ಬೆನ್ನ ಮೇಲೂ ಶಿಲ್ಪವನ್ನು ಬಿಡಿಸಲಾಗಿದೆ. ಕುಕ್ಕನೂರಿನ ನವಲಿಂಗ ದೇವಾಲಯದಲ್ಲಿ ಮಕರ ತೋರಣವಿದ್ದು, ಮಕರಗಳ ಮಧ್ಯೆ ಆನೆಯನ್ನು ಬಿಡಿಸಿದೆ ಮತ್ತು ಅದರ ಅಂತ್ಯದಲ್ಲಿ ವೃತ್ತವನ್ನು ಕೊರೆಯಲಾಗಿದೆ. ಭವನಾಸೀ ಸಂಗಂನ ರೂಪಾಲಾ ಸಂಗಮೇಶ್ವರ ದೇವಾಲಯದಲ್ಲಿ ಮಕರ ತೋರಣದಲ್ಲಿ ಮಧ್ಯೆ ಲಕ್ಷ್ಮಿಯನ್ನು ಬಿಡಿಸಿದೆ. ಹುಂಚದ ಸೂಳೆ ಬಸದಿಯಲ್ಲೂ ಮಕರ ತೋರಣವಿದೆ.

ಗ್ರಂಥಗಳಲ್ಲಿ ಹೇಳಿರುವಂತೆ, ಭೂತ, ವಿದ್ಯಾಧರ, ಯಕ್ಷ, ಹಂಸ, ಸಿಂಹ, ವ್ಯಾಲಗಳಿಂದ ಅಲಂಕರಿಸಲ್ಪಟ್ಟದ್ದು, 'ಚಿತ್ರತೋರಣ'ವೆಂದು ಸ್ಥೂಲವಾಗಿ ಹೇಳಬಹುದು. ಈ ಪ್ರಕಾರದ ತೋರಣದಲ್ಲೂ ಪಕ್ಕದಲ್ಲಿ ಮಕರಗಳನ್ನು ಬಿಡಿಸಿ ಅವುಗಳ ಬಾಯಿಂದ ಹೊರಟಂತೆ ಯಕ್ಷ, ವಿದ್ಯಾಧರವನ್ನು ಬಿಡಿಸಬೇಕೆಂದೂ ಇವುಗಳಲ್ಲಿ ಹೇಳಿದೆ.[51] ಕಾಶ್ಯಪಶಿಲ್ಪದಲ್ಲಿ ಇದರೊಂದಿಗೆ, ಅನೇಕ ರೀತಿಯ ಛತ್ರಗಳಿಂದಲೂ, ರತ್ನದ ಸಮೂಹಗಳಿಂದಲೂ ಮಾಡಬೇಕೆಂದಿದೆ. ಮಾನಸಾರದ ಪ್ರಕಾರ, ಚಿತ್ರತೋರಣದಲ್ಲಿ ಯಕ್ಷ, ವಿದ್ಯಾಧರರೊಂದಿಗೆ ಪುಷ್ಪವನ್ನು ಬಿಡಿಸಬೇಕು.[52]

ಎಲ್ಲೋರದ ಕೈಲಾಸ ದೇವಾಲಯ, ಭವನಾಸೀ ಸಂಗಂನ ರೂಪಾಲ ಸಂಗಮೇಶ್ವರ ದೇವಾಲಯ, ಕಂಬದಹಳ್ಳಿಯ, ಆದಿನಾಥ ಬಸದಿ–ಇತ್ಯಾದಿಗಳಲ್ಲಿ ಚಿತ್ರತೋರಣವನ್ನು ಕಾಣಬಹುದು. ಕೈಲಾಸ ದೇವಾಲಯದಲ್ಲಿ ಮಕರದಬಾಯನ್ನು ಬಿಡಿಸಿ, ವಿದ್ಯಾಧರರೇ ತೋರಣವನ್ನು ಹಿಡಿದಂತಿದೆ. ಭವನಾಸೀ ಸಂಗಂನ ರೂಪಾಲ ಸಂಗಮೇಶ್ವರ ದೇವಾಲಯದಲ್ಲಿ ಮಕರದ ಬಾಯಿಂದ ಹೊರಟಂತೆ ವಿದ್ಯಾಧರರನ್ನು ಬಿಡಿಸಿರುವುದಲ್ಲದೆ, ಅದರ ಬೆನ್ನಿನ ಮೇಲೂ ವಿದ್ಯಾಧರರನ್ನು ಬಿಡಿಸಲಾಗಿದೆ. ತೋರಣದ ಮಧ್ಯೆಯೂ ಶಿಲ್ಪವಿದೆ. ಇವುಗಳಲ್ಲಿ ಮುಖ್ಯವಾಗಿ ಎಲ್ಲೋರದ ದೇವಾಲಯದಲ್ಲಿ

---

50 ಈಶಾನಶಿವಗುರುದೇವ ಪದ್ಧತಿಯಲ್ಲೂ ಇದೇ ವಿವರವಿದೆ. (ಸಂ. IV. ಪುಟ 320-22) (ಉದ್ಧೃತ-ಅಜಿತಾಗಮಅ. 15) ; ಟಿ. ವಿ. ಮಹಾಲಿಂಗಂರವರು ತಮ್ಮ 'South Indian Temple complex'ನಲ್ಲಿ (ಪುಟ 27), ಮಕರತೋರಣವು ಐದು ಬಾರಿ ಬಾಗಿದ್ದು, ಅವುಗಳ ಪ್ರತಿ ತುದಿಗಳಲ್ಲಿ ಅಸಮಂಜಸ ಪ್ರಾಣಿರೂಪಗಳನ್ನು ಬಿಡಿಸಬೇಕೆಂದು ಹೇಳಿವೆ' ಎಂದಿದ್ದಾರೆ. ಶಿಲ್ಪರತ್ನದ ಚಿತ್ರತೋರಣದ ಬಗ್ಗೆ ಇದೇ ವಿವರವನ್ನು ಹೇಳಿ, ಈ ಎರಡನ್ನೂ ಹೊಂದಿಸಿದ್ದಾರೆ. ನನಗೆ ದೊರೆತ, ಮೇಲೆ ಉಲ್ಲೇಖಿತವಾದ ಶ್ಲೋಕದಲ್ಲಿ ಈ ಅರ್ಥ ಕಂಡುಬರಲಿಲ್ಲ.

51 ಕಾಶ್ಯಪಶಿಲ್ಪ—12-9-11; ಕಾಮಿಕಾಗಮ—LV66-70 ಈಶಾನ ಶಿವಗುರು ದೇವಪದ್ಧತಿ ಸಂ. ಪು. IVಪುಟ—320-22 (ಉದ್ಧೃತ ಅಜಿತಾಗಮ-ಅ 14)

52 ಮಾನಸಾರ-46-51-52 (ಸಾಲುಗಳು)

ತೋರಣವು ಹೆಚ್ಚುಬಾರಿ, ವಿವಿಧ ರೀತಿಗಳಲ್ಲಿ ಬಾಗಿ-ರುವುದನ್ನೂ, ಕೆಳಕ್ಕೆ ಹೆಚ್ಚು ಇಳಿ ಬಿದ್ದಿರುವುದನ್ನೂ ಗುರುತಿಸಬಹುದಾಗಿದೆ.

ಮಾನಸಾರದಲ್ಲಿ ಪತ್ರ ಮತ್ತು ಚಿತ್ರತೋರಣ ಮಾತ್ರವಲ್ಲದೆ, ಪುಷ್ಪತೋರಣ ಮತ್ತು ರತ್ನತೋರಣವನ್ನೂ ಹೇಳಿದೆ. ತಾವರೆ, ಮಕರಂದ, ಇತರ ಪುಷ್ಪ-ಗಳು, ಮಕರ, ಕಿನ್ನರಿ ಇತ್ಯಾದಿ ಅಲಂಕಾರವಿದ್ದರೆ, ಅದು–'ಪುಷ್ಪತೋರಣ'[53] 'ರತ್ನತೋರಣ'ದ ಬಗ್ಗೆ ಇದು ನೀಡುವ ವಿವರವೆಂದರೆ, ನವರತ್ನ, ಕಿನ್ನರ, ಮಕರ-ಗಳನ್ನು ಬಿಡಿಸಬೇಕು; ಮಕರದ ಬಾಲದ ಮೇಲೆ ರತ್ನಗಳನ್ನು ಬಿಡಿಸಿ, ತೋರಣದ ಮೇಲ್ಭಾಗದಲ್ಲಿ ಸರ್ಪಾಕಾರದ ಸ್ತಂಭಗಳನ್ನು ಬಿಡಿಸಬೇಕು; ಮಕರದ ತುದಿಗಳಲ್ಲಿ ನವರತ್ನಗಳನ್ನು ಸಾಲಾಗಿ ಜೋಡಿಸಿದಂತೆ ಬಿಡಿಸಬೇಕು; ಇದು ರತ್ನತೋರಣ.[54] ಈ ವಿವರಣೆಯನ್ನು ಗಮನಿಸಿದಾಗ, ಬಹುಶಃ ಇದು ಸಿಂಹಾಸನದ ಮೇಲೆ ರಚಿಸುವ ತೋರಣಾಲಂಕರಣಕ್ಕೆ ಅನ್ವಯಿಸು-ವಂತಿದೆ.

ಇವುಗಳನ್ನು ಗಮನಿಸಿದಾಗ, ಪತ್ರತೋರಣವೇ ಪ್ರಾಚೀನವಾದುದೆಂದು ಹೇಳಬಹುದಾಗಿದೆ. ಇದರಿಂದ ಮುಂದೆ ಮಕರದ ತೋರಣವೂ, ನಂತರ ಚಿತ್ರತೋ-ರಣವೂ ರೂಪಗೊಂಡಿದ್ದು, ಒಂದು ಇನ್ನೊಂದರ ಬೆಳವಣಿಗೆ ಎಂಬಂತೆ ಪ್ರಕಟಗೊಂಡಿದೆ. ಆರಂಭದ ದೆಸೆ-ಯಲ್ಲಿ ಪತ್ರತೋರಣವು ಕಾಣಿಸಿಕೊಂಡರೆ, ಪಟ್ಟದ ಕಲ್ಲಿನ ದೇವಾಲಯಗಳಲ್ಲಿ ಮಕರತೋರಣವು ಹೆಚ್ಚಾಗಿ ಕಂಡುಬರುತ್ತದೆ. ಎಲ್ಲೋರ ಮತ್ತು ಕೆಲವು ರಾಷ್ಟ್ರ-ಕೂಟರ ದೇವಾಲಯಗಳಲ್ಲಿ ಚಿತ್ರತೋರಣವು ಹೆಚ್ಚು ಪ್ರಚಲಿತದಲ್ಲಿದೆ. ಗಂಗರ ಕಾಲದಲ್ಲಿ, ತೋರಣವನ್ನು ಕೆಲವು ದೇವಾಲಯಗಳಲ್ಲಿ ಕಾಣಬಹುದಾದರೂ, ವಿಜಯನಗರ ಕಾಲದಲ್ಲಿ ತೋರಣ ಅಲಂಕರಣ ಅಷ್ಟಾಗಿ ಕಂಡುಬರುವುದಿಲ್ಲ. ಶಾಸ್ತ್ರ ಗ್ರಂಥಗಳ ದೃಷ್ಟಿಯಿಂದ ನೋಡಿದಾಗ, ಮಾನಸಾರದಲ್ಲಿ ಹೇಳಿರುವಂತಹ ತೋರಣ ರಚನೆಯ ಕ್ರಮವನ್ನು ಶಿಲ್ಪಿಗಳು ಅನುಕರಿಸಿಲ್ಲವೆಂದು ಹೇಳಬಹುದು. ಕಾರಣ, ಅದರ ವಿವರಣೆಗಳು ಅಷ್ಟು ಸೂಕ್ತವಾಗಿಲ್ಲ. ಗ್ರಂಥಗಳಲ್ಲಿಲ್ಲದಿದ್ದರೂ, ಕೋಷ್ಠದ ಮೇಲೆ ನವಿಲನ್ನು ಬಿಡಿಸಿ ಮಧ್ಯ ಲಕ್ಷ್ಮಿಯನ್ನು ಬಿಡಿಸಿರುವುದನ್ನು ಎಲ್ಲೋರದ ಕೈಲಾಸ ದೇವಾಲಯದಲ್ಲಿ ಕಾಣಬಹುದಾಗಿದೆ.

**ಕುಂಭಲತಾ ಮತ್ತು ವೃತ್ತಸ್ಫುಟಿತ** : — ಭಿತ್ತಿಯಲ್ಲಿ ಬರುವ ಅಲಂಕಾರಿಕಭಾಗಗಳಲ್ಲಿ 'ಕುಂಭಲತಾ'ವೂ ಒಂದು ಕಾಶ್ಯಪಶಿಲ್ಪ, ಕಾಮಿಕಾಗಮ, ಮಯಮತಗಳಲ್ಲಿ ಈ ಬಗ್ಗೆ ವಿವರವಿದೆ.[55] "ಪದ್ಮ, ಕಂಪ, ಪದ್ಮ, ಗಲ, ಕಂಪ-ಗಳಿಂದ ಕೂಡಿದ ವೇದಿಕೆಯ ಮೇಲೆ ಪದ್ಮಾಸನವನ್ನು ರಚಿಸಿ,ಅದರ ಮೇಲೆ ಕುಂಭವನ್ನು ಬಿಡಿಸಬೇಕು. ಆ ಕುಂಭದ ಮೇಲ್ಭಾಗವೂ ಪದ್ಮದಿಂದ ಕೂಡಿದ್ದು, ಕುಂಭ-ದೊಳಗಿಂದ ವಲ್ಲಿಗಳಿಂದ ಕೂಡಿದ ಸ್ತಂಭವು ಹೊರಟಂತೆ ಮಾಡಬೇಕು. ಈ ಸ್ತಂಭಕ್ಕೆ ಕುಂಭ, ಮಂಡಿ ಇದ್ದು ವೀರಕಾಂಡ ಇರುವುದಿಲ್ಲ. ಫಲಕದ ಮೇಲೆ ಪದ್ಮ-ಕುಂಭ ಇರುತ್ತದೆ. ಬೋದಿಗೆ ಇಲ್ಲದ ಈ ಸ್ತಂಭವನ್ನು 'ಸ್ತಂಭಕುಂಭಲತಾ' ಎನ್ನುತ್ತಾರೆ. ಅಂತಹ ಸ್ತಂಭದ ಮೇಲ್ಭಾಗದಿಂದ ತೋರಣ ಮಾಡಬೇಕು.[56] ಇದು 'ಕುಂಭಲತಾ' ಅಥವಾ 'ಸ್ತಂಭಕುಂಭಲತಾ'ದ ಬಗ್ಗೆ ಕಾಶ್ಯಪದಲ್ಲಿರುವ ವಿವರ. 'ಕುಂಭಲತಾ'ದ ಮೇಲೆ ತೋರಣ ಬರುತ್ತದೆ ಎಂದು ಇಲ್ಲಿ ಹೇಳಿದ್ದರೂ 'ಕುಂಭ, ಲತಾದ' ಮೇಲ್ಭಾಗದಲ್ಲಿ ಯಾವ ಬಗೆಯ ಅಲಂಕರಣ ಮಾಡಬೇಕೆಂದು ಸ್ಪಷ್ಟವಾಗಿ ಹೇಳಿಲ್ಲ. ಇದರೊಂದಿಗೇ ವ್ಯಕ್ತವಾಗಿರುವ ಇನ್ನೊಂದು ರಚನೆಯೆಂದರೆ— 'ವೃತ್ತಸ್ಫುಟಿತ'. ವೃತ್ತಾಕಾರದ ಸ್ತಂಭ, ಕಂದರವು ಇದ್ದು ಅದರ ಮೇಲೆ ಪ್ರಸ್ತರ ಮತ್ತು ಶುಕನಾಸಿ[57] ಇರಬೇಕು. ಇದು ಕರ್ಣಕೂಟ ಅಥವಾ ವೃತ್ತಾಕಾರ-ದಲ್ಲಿರಬೇಕು ಮತ್ತು ಲತಾಮಂಡಲದಿಂದ ಕೂಡಿರ-

---

53 ಮಾನಸಾರ 53-55 (ಸಾಲುಗಳು)

54 ಅದೇ. 56-61 (ಸಾಲುಗಳು)

55 ಕಾಶ್ಯಪಶಿಲ್ಪ—ಅ. 15; ಕಾಮಿಕಾಗಮ—ಅ. LV ; ಮಯಮತ—ಅ. 21

56 ಕಾಶ್ಯಪಶಿಲ್ಪ—ಅ. 15

57 ಈ ಶುಕನಾಸಿಯನ್ನು (ಪ್ರಸ್ತರದಲ್ಲಿ) ಕಪೋತದ ಮೇಲೆ ಬರುವ 'ಅಲ್ಪನಾಸಿ' ಎಂದು ಅರ್ಥೈಸುವುದು ಸೂಕ್ತವೆನ್ನಿಸುತ್ತದೆ.

ಬೇಕು. ಇದೇ 'ವೃತ್ತಸ್ಫುಟಿತ'[58] ಇದನ್ನು ಸ್ತಂಭಾಂತರಗಳಲ್ಲಿ ಹಾರಾಂತರಗಳಲ್ಲಿ[59] ಮಾಡಬೇಕೆಂಬ ಸೂಚನೆಯೂ ಇದೆ. ಮಯಮತ[60] ಮತ್ತು ಕಾಮಿಕಾಗಮಗಳೂ [61] ಇದನ್ನೇ ಸಂಕ್ಷಿಪ್ತವಾಗಿ ಹೇಳಿದೆ. ಮಯಮತದಲ್ಲಿ ಫಲಕದ ಮೇಲೆ ಅಬ್ಜ ಮತ್ತು ಕುಂಭಲತಾ ಬರುವುದರಿಂದ 'ಪದ್ಮಕುಂಭಲತಾ' ಎಂದು ಹೇಳಿದೆ. ವೃತ್ತ ಸ್ಫುಟಿಕಾ ಮತ್ತು ಕುಂಭಲತಾಗೆ ಇರುವ ವ್ಯತ್ಯಾಸವೆಂದರೆ, ಕುಂಭಲತಾದಲ್ಲಿ ಸ್ತಂಭದ ಕೆಳಗೆ 'ಕುಂಭ'ವು ಬರುತ್ತದೆ ; ವೃತ್ತಸ್ಫುಟಿಕಾದಲ್ಲಿ ಇದು ಇರುವುದಿಲ್ಲ. 'ಕುಂಭಲತಾ'ವನ್ನು ಭಿತ್ತಿಯಲ್ಲಿ ಸ್ತಂಭಾಂತರಗಳಲ್ಲೂ, 'ವೃತ್ತ ಸ್ಫುಟಿತಾ'ವನ್ನು ಶಿಖರದಲ್ಲಿ ಹಾರಾಂತರಗಳಲ್ಲೂ ಕಾಣುತ್ತೇವೆ. ಅಲಂಕರಣವು ಎದ್ದು ಕಾಣುವ ದೃಷ್ಟಿಯಿಂದ ಇದು ಸೂಕ್ತವಾದದ್ದೆಂದು ಹೇಳಬಹುದು.

'ಕುಂಭಪಂಜರ' ಎಂದು ಸಾಮಾನ್ಯವಾಗಿ ಗುರುತಿಸಲ್ಪಟ್ಟಿರುವ ಈ 'ಕುಂಭಲತಾ'ವನ್ನು ವಿಜಯನಗರ ಕಾಲದ ದೇವಾಲಯಗಳಲ್ಲಿ ಕಾಣುತ್ತೇವೆ. ಉದಾಹರಣೆಗೆ, ಹಂಪೆಯ ರಾಮಚಂದ್ರ (ಹಜಾರರಾಮ) ಮತ್ತು ಚಂದ್ರಶೇಖರ ಮುಂತಾದ ದೇವಾಲಯಗಳನ್ನು ಹೇಳಬಹುದು. ಪೀಠಯುಕ್ತ ಕುಂಭ, ಕುಂಭದಿಂದ ಹೊರ ಚೆಲ್ಲಿದಂತೆ ಲತಾಮಂಡಲವಿದ್ದು, ಆ ಕುಂಭದಿಂದ ಹೊರಟಂತೆ ವೃತ್ತಾಕಾರದ ಸ್ತಂಭವಿದೆ. ಅದರಲ್ಲಿ ಕಂಬದ ಎಲ್ಲ ಅಂಗಗಳೂ ಇದ್ದು, ಫಲಕದ ಮೇಲೆ 'ವೀರಕಂಠ'ದ ಭಾಗದಲ್ಲಿ, ಅದರ ಬದಲಿಗೆ, ಅಕ್ಕ ಪಕ್ಕ 'ಆಧಾರ' ವಿರುವ ಕಂಧರದಂತಹ ಭಾಗವಿದೆ. ಇದು ಮೇಲ್ಭಾಗಕ್ಕೆ ಆಧಾರವನ್ನು ನೀಡುವುದಲ್ಲದೆ, ಬೋದಿಗೆಯ ಕಾರ್ಯವನ್ನೂ ನಿರ್ವಹಿಸುತ್ತಿದೆ. ಇದರ ಮೇಲೆ ಪ್ರಸ್ತರವು ಬಂದಿದ್ದು, ಅಂತ್ಯದಲ್ಲಿ 'ವೇದಿ'ಯ ಮೇಲೆ 'ಕೂಟ' ವನ್ನೂ ರಚಿಸಿದೆ. ಬೆಂಗಳೂರಿನ (ಬನ್ನೇರು ಘಟ್ಟದ) ಚಂಪಕಧಾಮಸ್ವಾಮಿ ದೇವಾಲಯದಲ್ಲಿ ಕೂಟದಲ್ಲಿ ಅಲ್ಪನಾಸಿಯನ್ನು ಎದ್ದು ಕಾಣುವಂತೆ ಬಿಡಿಸಲಾಗಿದೆ.

ಗ್ರಂಥಗಳಿಗೂ, ಈ ರಚನೆಗೂ ಇರುವ ವ್ಯತ್ಯಾಸ ಇಲ್ಲಿ ಗುರುತಿಸಬಹುದು. ಗ್ರಂಥದಲ್ಲಿ ಫಲಕದ ಮೇಲೆ ಪದ್ಮ ಮತ್ತು ಕುಂಭವನ್ನು ಹೇಳಿದ್ದರೆ ಇಲ್ಲಿ ಈ ಭಾಗವನ್ನು ಸಾಧಾರಿತ 'ಕಂಧರ'ದಂತೆ ರಚಿಸಲಾಗಿದೆ. ಇದರ ಮೇಲೆ ಬರುವ ಅಂಗಗಳ ದೃಷ್ಟಿಯಿಂದ ರಚನಾತ್ಮಕವಾಗಿ ಈ ಮಾರ್ಪಾಟು ಅವಶ್ಯಕವೆಂಬುದು ಸ್ಪಷ್ಟವಾಗುತ್ತದೆ. ಮತ್ತೆ, ಗ್ರಂಥಗಳಲ್ಲಿ ಹೇಳಿಲ್ಲದಿದ್ದರೂ ಕಂಬದ ಮೇಲೆ ಪ್ರಸ್ತರ, 'ಕೂಟ'ವನ್ನು ರಚಿಸಿದೆ. ಈ ರೀತಿ ರಚಿಸುವಾಗ, 'ವೃತ್ತಸ್ಫುಟಿತಾ'ದ ವಿವರಗಳನ್ನು ಗಮನಿಸಿ, ಅದರಲ್ಲಿ ಹೇಳಿರುವಂತೆ ಪ್ರಸ್ತರ, ಕೂಟಗಳಿಂದ ಈ ರಚನೆಯನ್ನು ಪೂರ್ಣಗೊಳಿಸಿರಬೇಕು. ಅಲ್ಲದೆ, ತೋರಣದ ಕೆಳಗೆ 'ಕುಂಭಲತಾ'ವನ್ನು ರಚಿಸಬೇಕೆಂದು ಸೂಚನೆ ಇದ್ದರೂ, ಇದನ್ನು ಎಲ್ಲೆಡೆಯೂ ಬಿಡಿಯಾಗಿಯೇ ರಚಿಸಲಾಗಿದೆ.

ಈ ಅಧ್ಯಯನದಿಂದ ಕಾಣಬರುವ ಅಂಶಗಳನ್ನು ಈ ರೀತಿಯಾಗಿ ಸಂಗ್ರಹಿಸಬಹುದು—

1) ಕಾಶ್ಯಪಶಿಲ್ಪವೊಂದನ್ನು ಬಿಟ್ಟರೆ, ಭಿತ್ತಿಗಾಗಿಯೇ ಪ್ರತ್ಯೇಕವಾದ ಅಧ್ಯಾಯ ಗ್ರಂಥಗಳಲ್ಲಿಲ್ಲ. ಕಾಮಿಕಾಗಮ ಮತ್ತು ಮಯಮತದಲ್ಲಿ ಭಿತ್ತಿಗೆ ಸಂಬಂಧಿಸಿದಂತೆ ಸ್ವಲ್ಪ ಮಟ್ಟಿನ ವಿವರಗಳು ದೊರೆಯುತ್ತವೆ. ತೋರಣದ ಬಗ್ಗೆ ಮಾತ್ರ ಎಲ್ಲ ಗ್ರಂಥಗಳಲ್ಲೂ ವಿವರವಿದೆ.

2) ಶಾಸ್ತ್ರ ಗ್ರಂಥಗಳ ನಡುವೆ ಈಗಾಗಲೇ ಗುರುತಿಸಿರುವಂತೆ, ಕೆಲವು ವ್ಯತ್ಯಾಸಗಳಿವೆ. ಮಾನಸಾರದಲ್ಲಿ ಕೆಲವೆಡೆ ವಿಶೇಷ ಅಂಶಗಳಿವೆ. ಕಾಮಿಕಾಗಮವು ಜಾಲಕದ ವಿವರಗಳಲ್ಲಿ ಮಾನಸಾರವನ್ನು ಹೋಲುತ್ತಿದ್ದರೆ, ತೋರಣ, ಕುಂಭಲತಾ–ಇತ್ಯಾದಿ ವಿವರಗಳಲ್ಲಿ ಮಯಮತವನ್ನು ಹೋಲುತ್ತಿದೆ. ಮಯಮತ ಮತ್ತು

---

58 ಕಾಶ್ಯಪಶಿಲ್ಪ- 13.3-8

59 ಕಾಶ್ಯಪಶಿಲ್ಪದ ಪಾಠದಲ್ಲಿ 'ಹಾರಂ ತಾರೇಷು' ಎಂದಿದೆ. ಬಹುಶಃ ಇದು 'ಹಾರಾಂತರೇಷು' ಎಂದಿರಬೇಕು.

60 ಮಯಮತ—21.83-86.

61 ಕಾಮಿಕಾಗಮ—LV-101-119

ಕಾಶ್ಯಪಶಿಲ್ಪ-ಗ್ರಂಥಗಳಲ್ಲಿ ಹೆಚ್ಚಿನ ಹೋಲಿಕೆ ಇದೆ.

3) ಭಿತ್ತಿಯು ಗೃಹವಾಸ್ತುವಿಗೂ ಅನ್ವಯ ವಾಗುವುದರಿಂದ ಗ್ರಂಥಗಳ ವಿವರಗಳು ಕೆಲವೊಮ್ಮೆ ಎರಡಕ್ಕೂ ಅನ್ವಯವಾಗುತ್ತವೆ.

4) ದೇವಾಲಯದ ಇತರ ಭಾಗಗಳ ಬಗ್ಗೆ ಗ್ರಂಥ ಗಳಲ್ಲಿ ಹೇಳಿರುವ ಅಂಶಗಳನ್ನು ಭಿತ್ತಿಯ ರಚನೆ ಅಲಂಕಾರದಲ್ಲಿ ಬಳಸಿಕೊಳ್ಳಲಾಗಿದೆ.

5) ಭಿತ್ತಿಯೂ ಕೂಡಾ ಶಿಖರದ ಪ್ರತಿರೂಪವೆಂಬಂತೆ ಗುರುತಿಸಲ್ಪಟ್ಟಿದೆ. ಈ ಕಾರಣವಾಗಿಯೇ ದೇವತೆಗಳನ್ನಿಡುವ ಕೋಷ್ಠಗಳೂ, ಅದರ ಮೇಲೆ ಶಿಖರದ ಅಂಗಗಳಾದ ಶಾಲಾ-ಕೂಟ ಇತ್ಯಾದಿ ಗಳ ಮಾದರಿಗಳೂ ರಚಿತವಾದವು.

6) ದೇವಾಲಯದಲ್ಲಿ ಅವಶ್ಯಕ ಅಂಗಗಳೇ ಅಲಂಕಾ ರದ ಅಂಶಗಳಾಗಿ ಪರಿಣಮಿಸಿರುವುದಕ್ಕೆ ಭಿತ್ತಿಯು (ಅದರಲ್ಲೂ ಜಾಲಕವು) ಉತ್ತಮ ಉದಾಹರಣೆ ಯಾಗಬಲ್ಲುದು.

7) ಗ್ರಂಥಗಳಲ್ಲಿ ಹೇಳಿರುವ ಜಾಲಕ, ತೋರಣ, ಕಂಬ-ಈ ವಿವರಗಳು ಹರ್ಮ್ಯದಲ್ಲಿ ಭಿತ್ತಿಗೆ ಮಾತ್ರವಲ್ಲದೆ, ದ್ವಾರ, ಮಂಟಪ, ಗೋಪುರ- ಇತ್ಯಾದಿ ರಚನೆಗಳಿಗೂ ಅನ್ವಯವಾಗುತ್ತದೆ.

8) ಪ್ರಾಚೀನ ಕಾಲದಿಂದಲೇ ಭಿತ್ತಿಯ ವಿವಿಧ ಅಂಗ ಗಳು ಅಸ್ತಿತ್ವದಲ್ಲಿ ಇದ್ದರೂ, ಪಟ್ಟದ ಕಲ್ಲಿನ ದೇವಾಲಯಗಳಲ್ಲಿ ಅವು (ತೋರಣ ಬಿಟ್ಟು) ಸ್ಪಷ್ಟತೆಯನ್ನು ಪಡೆಯುತ್ತದೆ. ರಾಷ್ಟ್ರಕೂಟರ ಕಾಲದ ದೇವಾಲಯಗಳಲ್ಲಿ ಈ ಅಂಗಗಳು ಹೆಚ್ಚು ಅಲಂಕಾರಿಕವಾಗಿ ರಚಿಸಲ್ಪಡುವುದಲ್ಲದೆ, ತೋರಣ ರಚನೆಯು ಹೆಚ್ಚು ಮಹತ್ವವನ್ನು ಪಡೆಯುತ್ತವೆ. ಜಾಲಂದ್ರಗಳ ದೃಷ್ಟಿಯಿಂದ ಗಂಗ-ನೊಳಂಬರ ಕಾಲದ ದೇವಾಲಯಗಳು ಬದಲಾವಣೆಯನ್ನು ಹೊಂದಿದ್ದರೆ, ವಿಜಯನಗರ ಕಾಲದ ದೇವಾಲಯ ಗಳ ಭಿತ್ತಿಯು ಸುಂದರ 'ಕುಂಭಲತಾ' ಅಲಂಕರಣದಿಂದ ವಿಶೇಷ ಮಾನ್ಯತೆಯನ್ನು ಪಡೆಯುತ್ತವೆ.

9) ಭಿತ್ತಿಯು, ಶಿಲ್ಪಿಯು ಹೆಚ್ಚು ಸ್ವತಂತ್ರ ವಹಿಸಿ ರಚಿಸಿದ ಭಾಗವೆನ್ನಬಹುದು. ವೇದಿ, ಕೋಷ್ಠ-ಇತ್ಯಾದಿಗಳ ದೃಷ್ಟಿಯಿಂದ ಹೀಗೆ ಹೇಳಬಹುದಾಗಿದೆ. ಅಲ್ಲದೆ, ಪಟ್ಟದ ಕಲ್ಲಿನ ವಿರೂಪಾಕ್ಷ ದೇವಾಲಯದ ಪೂರ್ವ ದಿಕ್ಕಿನ ಪ್ರತೋಲಿಯಲ್ಲಿ ತುದಿಯಲ್ಲಿರುವ ಸಾಲು ಕುಬ್ಜ ಶಿಲ್ಪ, ಹಂಸವಾಹನ ಸಾಲು ಮತ್ತು ಎಲ್ಲೋರದ ಕೈಲಾಸ ದೇವಾಲಯದ ಎತ್ತರದ ಭಿತ್ತಿಯಲ್ಲಿ ಮೇಲ್ಭಾಗದಲ್ಲಿ ಬಿಡಿಸಿರುವ ಒಂದೊಂದು ಸುಂದರ ಶಿಲ್ಪಗಳೂ ಇದಕ್ಕೆ ಸಾಕ್ಷಿಯಾಗಿವೆ. ಇಲ್ಲೆಲ್ಲಾ, ಭಿತ್ತಿಯ ಏಕತಾನತೆಯನ್ನು ಹೋಗಲಾಡಿಸು ವುದೇ ಶಿಲ್ಪಿಯ ಮುಖ್ಯ ಆಶಯವಾಗಿದೆ. ಅಷ್ಟೇ ಅಲ್ಲದೆ, ಭಿತ್ತಿಯ ವೈಶಾಲ್ಯತೆಯೂ ಅವನ ಕಲ್ಪನೆಗೆ ರೂಪು ಕೊಡುವಲ್ಲಿ ಹೆಚ್ಚು ಸಹಕಾರಿ ಯಾಗಿದೆ. ಮೇಲೆ ಹೇಳಿದ ಗ್ರಂಥಗಳಲ್ಲಿಲ್ಲದಿದ್ದರೂ (ಅಧಿಷ್ಠಾನದಿಂದಲೇ) ಭಿತ್ತಿಯಲ್ಲಿ ಹಿಂಚಾಚು- ಮುಂಚಾಚುಗಳನ್ನು ರಚಿಸಿರುವುದು ಶಿಲ್ಪಿಯ ಸ್ವತಂತ್ರ ಆಲೋಚನೆಗೆ ಉದಾಹರಣೆ ಎನ್ನ ಬಹುದು. ಕೋಷ್ಠಗಳನ್ನು ರಚಿಸುವ ಪದ್ಧತಿಯು ಇದಕ್ಕೆ ಕಾರಣವಾಗಿರಬಹುದು.

10) ಶಿಲ್ಪಿಗಳು ಕುರುಡು ಕುರುಡಾಗಿ ಗ್ರಂಥಗಳನ್ನು ಅನುಕರಿಸದೆ, ಅಂದ-ಚೆಂದ ಮತ್ತು ರಚನಾತ್ಮಕ ದೃಷ್ಟಿಯಿಂದ ಸೂಕ್ತವಾದದ್ದನ್ನು ಅನುಸರಿಸಿ ದರು ಎಂಬುದಕ್ಕೆ 'ಕುಂಭಲತಾ' ರಚನೆಯು ಒಂದು ಒಳ್ಳೆಯ ಉದಾಹರಣೆಯಾಗಬಲ್ಲುದು.*

---

* ಈ ಲೇಖನವನ್ನು ಸಿದ್ಧಪಡಿಸುವಲ್ಲಿ ನನಗೆ ಸಹಾಯ ಮಾಡಿದ ಶ್ರೀಮತಿ. ವಿಜಯಲಕ್ಷ್ಮಿಯವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

## ಗ್ರಂಥಋಣ :


1) ಮಾನಸಾರ ಸೀರೀಸ್–ಸಂ. vii 1979), iii (1979), ಮತ್ತು iv (1980)–ಪಿ.ಕೆ. ಆಚಾರ್ಯ–ನವದೆಹಲಿ.
2) ಮಯಮತ—(ಸಂ)—ಬ್ರೂನೋ ಡೇಗನ್ಸ್—ಪಾಂಡಿಚೆರಿ, 1970
3) Mayamata-(Tr)-Bruno Dagens–New Delhi-1985
4) ವರಾಹಮಿಹರನ ಬೃಹತ್ಸಂಹಿತಾ—(ಸಂ)–ವಿ. ಸುಬ್ರಹ್ಮಣ್ಯಶಾಸ್ತ್ರಿ ಮತ್ತು ಎಂ. ರಾಮಕೃಷ್ಣಭಟ್–1947
5) ಅಜಿತಾಗಮ—(ಸಂ)—ಎನ್. ಆರ್. ಭಟ್—ಪಾಂಡಿಚೆರಿ–1964 ಮತ್ತು 1967
6) ಕಾಶ್ಯಪಶಿಲ್ಪ—(ಸಂ)—ಡಿ. ಕೃಷ್ಣರಾಯ ಮತ್ತು ವಿನಾಯಕ ಗಣೇಶ ಆಪ್ಟೆ–1926
7) ಕಾಮಿಕಾಗಮ—(ಸಂ). ಚಿ. ಸ್ವಾಮಿನಾಥ ಶಿವಾಚಾರ್ಯ : ಮದ್ರಾಸು–1976
8) Encyelopedia of Indian Temple Architecture—vol. I–pt-2-(ed)—Michael w. Meister and M.A. Dhaky—New Delhi-1986
9) South Indian Temple complex—T·V Mahalingam—Dharwad·1970
10) Early Chalukya Art at Aihole—S. Rajasekhara—New Dellhi-1985

ಹರಿಹರ ಶ್ರೀನಿವಾಸರಾವ್*

# ಹೊಯ್ಸಳರ ಕಾಲದ ನವರಂಗಗಳಲ್ಲಿ ಸ್ವರ-ವಿಸ್ವರತೆಯ ವೈಶಿಷ್ಟ್ಯ

ಸಾಮಾನ್ಯವಾಗಿ ನವರಂಗ ಎಂದರೆ ಒಂಭತ್ತು ಅಂಕಣಗಳುಳ್ಳ ಒಂದು ಮಂಟಪ. ವೇದಿಕೆಯ ಮೇಲಿರುವ ನಾಲ್ಕು ಕಂಭಗಳ ಮಧ್ಯೆ ಮೇಲ್ಭಾಗದಲ್ಲಿ ಭುವನೇಶ್ವರಿ ಇರುತ್ತದೆ. ಇವುಗಳನ್ನು ವಾಸ್ತು ಗ್ರಂಥಗಳಾದ ಮಾನಸಾರ ಮತ್ತು ಸುಪ್ರಭೇದಾಗಮ ಗ್ರಂಥಗಳಲ್ಲಿ ನಾಟ್ಯ ಮಂಟಪವೆಂತಲೂ ಕರೆದಿದ್ದಾರೆ.

ಹೊಯ್ಸಳರ ಕಾಲದಲ್ಲಿಯ ನವರಂಗಗಳ ಕಂಭಗಳಲ್ಲಿ ಮತ್ತು ಭುವನೇಶ್ವರಿಗಳಲ್ಲಿ ವಿಶೇಷ ಕೆತ್ತನೆ ಇರುವುದನ್ನು ಬೇಲೂರು, ಸೋಮನಾಥಪುರ, ಹರಿಹರ ಮುಂತಾದ ಕಡೆಗಳಲ್ಲಿ ಕಾಣುತ್ತೇವೆ. ಈ ನವರಂಗಗಳ ವೇದಿಕೆಗಳನ್ನು ನಾಟ್ಯ, ಸಂಗೀತ ಮುಂತಾದ ಕಲಾ ಪ್ರದರ್ಶನಗಳಿಗೆ ಬಳಸುತ್ತಿದ್ದರೆನ್ನಲು ಬೇಲೂರಿನ ನವರಂಗದಲ್ಲಿ ಅಳವಡಿಸಲಾಗಿರುವ ಭರತ ನಾಟ್ಯ ಭಂಗಿಯ ಮದನಿಕಾ ವಿಗ್ರಹಗಳು, ಅವುಗಳ ಜೊತೆಯಲ್ಲಿರುವ ವಾದ್ಯಗಾರರ ಶಿಲ್ಪಗಳಿಂದ ತಿಳಿಯಬಹುದು. ನವರಂಗದ ವಿನ್ಯಾಸವನ್ನು ಹೇಗೆ ಸಂಗೀತದ ಸ್ವರ-ವಿಸ್ವರ ಕಂಪನಗಳಿಗೆ ತಕ್ಕಂತೆಯೇ ನಿರ್ಮಿಸುತ್ತಿದ್ದರು ? ಎನ್ನುವುದನ್ನು ಪರಿಶೀಲಿಸೋಣ.

ಭರತನ ನಾಟ್ಯ ಶಾಸ್ತ್ರದಲ್ಲಿ ನಾಟ್ಯ ಅಥವಾ ನೃತ್ಯ ಮಂಟಪವೂ, ಪ್ರೇಕ್ಷಾಗೃಹವೂ ಹೇಗೆ ಇರತಕ್ಕದ್ದು ? ಅದರ ಪ್ರಮಾಣ ಎಷ್ಟಿರ ತಕ್ಕದ್ದು ? ಅದಕ್ಕೆ ಕಾರಣಗಳೇನು ? ಎಂಬ ವಿಚಾರವನ್ನು ಸ್ಪಷ್ಟವಾಗಿ ಅಧ್ಯಾಯ ೧೨ರಲ್ಲಿ ೯ನೇ ಶ್ಲೋಕದಿಂದ ಪ್ರಾರಂಭವಾಗಿ ೧೩ನೇ ಶ್ಲೋಕದವರೆಗಿನ ನಿರೂಪಣೆಯಲ್ಲಿ ನೋಡಬಹುದು.

**ನಾಟ್ಯ ಮಂಟಪದ ಆಕಾರಗಳು :**

ಚತುರಸ್ರ, ತ್ರಿಕೋಣ, ವಿಕೃಷ್ಟ

**ನಾಟ್ಯ ಮಂಟಪದ ಅಳತೆ :**

೧೦೮ ಹಸ್ತ ; ಜ್ಯೇಷ್ಟ ಪ್ರಮಾಣದ್ದು ; ದೇವತೆಗಳಿಗೆ ಮೀಸಲಾಗಬೇಕಾದದ್ದು.

೬೪ ಹಸ್ತ ; ಮಧ್ಯಮ ಪ್ರಮಾಣದ್ದು ; ರಾಜರ ಪ್ರೇಕ್ಷಾಗೃಹ.

೩೨ ಹಸ್ತ ; ಕನಿಷ್ಠ ಪ್ರಮಾಣದ್ದು; ಸಾಮಾನ್ಯ ಪ್ರಜೆಗಳ ಪ್ರೇಕ್ಷಾಗೃಹ.

ಪ್ರಮಾಣ ವೇಷಾಂ ನಿರ್ದಿಷ್ಟಂ
ಹಸ್ತದಂಡ ಸಮಾಶ್ರಯಮ್ ।
ಶತಂ ಚಾಷ್ಟಾ ಚತುಃ ಷಷ್ಟಿ-
ರ್ಹಸ್ತಾ ದ್ವಾತ್ರಿಂಶ ದೇವಚ ||೯||

* ನಂ. ೭೫-೧೫, ಒಂದನೆಯ ಮಹಡಿ, ೨ನೆಯ ಅಡ್ಡರಸ್ತೆ, ೫ನೆಯ ಬ್ಲಾಕ್, ಬನಶಂಕರಿ ೩ನೆಯ ಹಂತ, ಬೆಂಗಳೂರು-೫೬೦ ೦೮೫

ಅಷ್ಟಾಧಿ ಕಂ ಶತಂ ಜ್ಯೇಷ್ಟಂ
ಚತುಷಷ್ಟಿಸ್ತು ಮಧ್ಯಮಮ್ ।
ಕನೀಯಸ್ತು ತಥಾ ವೇಶ್ಮ
ಹಸ್ತಾ ದ್ವಾತ್ರಿಂಶ ದಿಷ್ಯತೇ ॥೧೦॥

ದೇವಾನಾಂತುಭವೇ ಜ್ಯೇಷ್ಠಂ
ನೃಪಾಣಾಂ ಮಧ್ಯಮ ಭವೇತ್ ।
ಶೇಷಾಣಾಂ ಪ್ರಕೃತೀನಾಂತು
ಕನೀಯಸ್ಸಂ ವಿಧೀಯತೇ ॥೧೧॥

ಪ್ರೇಕ್ಷಾಗೃಹಾಣಾಂ ಸರ್ವೇಷಾಂ
ಪ್ರಶಸ್ತಂ ಮಧ್ಯಮಂಸ್ಮೃತಮ್ ।
ತತ್ರ ಪಾಠ್ಯಂಚ ಗೇಯಂಚ
ಸುಖ ಶ್ರಾವ್ಯತರಂ ಭವೇತ್ ॥೧೨॥

ಪ್ರೇಕ್ಷಾಗೃಹಾಣಾಂ ಸರ್ವೇಷಾಂ
ತ್ರಿಪ್ರಕಾರೋ ವಿಧಿಃಸ್ಮೃತಃ ।
ವಿಕೃಷ್ಟಶ್ಚತುರಸ್ರಶ್ಚ
ತ್ರ್ಯಸ್ರ ಚೈವ ಪ್ರಯೋಕ್ತೃಭಿಃ ॥೧೩॥
(ನಾಟ್ಯಶಾಸ್ತ್ರ : ಅಧ್ಯಾಯ ೧೨)

*ಪ್ರೇಕ್ಷಾಗೃಹವು ಉದ್ದವಾಗಿದ್ದಲ್ಲಿ ನಟರ ಸಂಭಾಷಣೆಯೂ, ಗೀತೆಗಳ ವರ್ಣ ಸ್ವರಗಳೂ ಸ್ಫುಟವಾಗಿ ಉಚ್ಚಾರಣೆಯಾಗದೇ ವಿಸ್ವರತೆಯನ್ನು ಪಡೆಯುವುದರಿಂದಲೂ ; ಅಭಿನೇತೃಗಳ ಮುಖದ ನಾನಾ ದೃಷ್ಟಿ ಭಾಗಗಳು ಅಸ್ಪಷ್ಟವಾಗಿ ಗೋಚರಿಸುವುದರಿಂದಲೂ ಪ್ರೇಕ್ಷಾಗೃಹಗಳಲ್ಲಿ ೬೪ ಹಸ್ತಗಳುಳ್ಳ ಮಧ್ಯಮ ಪರಿಮಾಣದ ಪ್ರೇಕ್ಷಾಗೃಹವೇ ಶ್ರೇಷ್ಠವೆಂದೂ, ತಿಳಿಸಿದ್ದಾನೆ. ಕಾರಣ ಆದರಲ್ಲಿ ಸಂಭಾಷಣೆಗಳೂ ವಾದ್ಯಗಳೂ ಪ್ರೇಕ್ಷಕರಿಗೆ ಸುಖವಾಗಿ ಕೇಳಿಬರುತ್ತವೆ ಎಂಬುದು ಭರತಾಚಾರ್ಯನ ಇಂಗಿತ. ಇಲ್ಲಿ ವಿಸ್ವರವೆಂದರೆ ಪ್ರತಿಧ್ವನಿ (Echo) ಎಂದೂ ಅರ್ಥೈಸಬಹುದು.

ಈ ಶ್ಲೋಕಗಳಲ್ಲಿ ಬಂದಿರುವ 'ಅನೇನೈವ ಪ್ರಮಾಣೇನ ವಕ್ಷ್ಯಾಮ್ಯೇಷ್ಯಂ ವಿನಿರ್ಣಯಮ್'' ಎಂದು ನಿರ್ದಿಷ್ಟವಾಗಿ ನಿರ್ದೇಶಿತವಾಗಿರುವ ವಾಕ್ಯವನ್ನೂ ಮತ್ತು ಶಾಸನೋಕ್ತವಾಗಿರುವ 'ಸಂಗೀತ ಪ್ರಸಂಗ ಭಂಗಿ ಸಂಗತ ಚತುರ ಭರತನುಂ । ಶಬ್ದ ವಿದ್ಯಾ ಸಮಗ್ರ ಲಕ್ಷಣ ಸುಶಿಕ್ಷನುಂ ॥ (Ec cv ಬೇ. ೫೮) ಮತ್ತು 'ಭರತಾಗಮ ಭವ ನಿಹಿತ ಮಹನೀಯ ಪ್ರದೀಪೆ' (ಅದೇ ಶಾಸನ) ಎನ್ನುವಂಥ ಸಾಲುಗಳನ್ನು ಗಮನಿಸಿ ಬೇಲೂರಿನ ವಿಜಯನಾರಾಯಣ ಸ್ವಾಮಿ ದೇವಾಲಯ, ಹರಿಹರದ ಹರಿಹರೇಶ್ವರ ದೇವಾಲಯ, ಹಿಡಿಂಬೇಶ್ವರ ದೇವಾಲಯ ಚಿತ್ರದುರ್ಗ, ಇವುಗಳಲ್ಲಿಯ ನವರಂಗಗಗಳ ಉದ್ದಗಲಗಳನ್ನುಪರೀಕ್ಷಿಸಿದಾಗ ಅವುಗಳ ಪರಿಮಾಣವು ಕ್ರಮವಾಗಿ ಸು. ೬೩ ಹಸ್ತ (ಗೇಣು), ೩೩ ಹಸ್ತ ಮತ್ತು ೩೩ ಹಸ್ತ ಇರುವುದಾಗಿ ಸ್ಥಿರಪಟ್ಟಿತು. ಇಲ್ಲಿ ೧ ಹಸ್ತ=೧ ಗೇಣು ಎಂದೂ ೧ ಗೇಣು=೮" (ಸಾಮಾನ್ಯ ಮನುಷ್ಯನ ಗೇಣು) ಎಂದೂ ಗ್ರಹಿಸಿಕೊಳ್ಳಲಾಗಿದೆ: ಇವುಗಳೆಲ್ಲವೂ ಚತುಸ್ರಾಕಾರವಾಗಿರುವುದನ್ನೂ ಗಮನಿಸಲಾಗಿದೆ. ಅವು ಕ್ರಮವಾಗಿ ೧೨.೮೦ ಮೀ (೪೨'×೪೨'), ೬.೭೧ ಮೀ (೨೨'×೨೨'), ೬.೭೧ ಮೀ. (೨೨'×೨೨') ಉದ್ದಗಲಗಳನ್ನು ಹೊಂದಿವೆ.

---

* ರಂಗಸ್ಥಳ ಪು. ೨೩೯, ೨೪೦ ; ಭರತ ನಾಟ್ಯ ದಿಗ್ದರ್ಶನ—ವಿ.ಎಸ್. ಕೌಶಿಕ್




ಬೇಲೂರು ಶ್ರೀ ಚೆನ್ನಕೇಶವ ದೇವಸ್ಥಾನ
ಬೇಲೂರು ಮಧ್ಯಮ ಪ್ರಮಾಣದ ಪ್ರೇಕ್ಷಾಗೃಹ
(೬೩ ಹಸ್ತ ಪ್ರಮಾಣ)




ಶ್ರೀ ಹರಿಹರೇಶ್ವರ ದೇವಸ್ಥಾನ
ಹರಿಹರ ಕನಿಷ್ಠ ಪ್ರಮಾಣದ
ಪ್ರೇಕ್ಷಾಗೃಹ (೩೩ ಹಸ್ತ ಪ್ರಮಾಣ)




ಶ್ರೀ ಹಿಡಿಂಬೇಶ್ವರ ದೇವಸ್ಥಾನ
ಚಿತ್ರದುರ್ಗ, ಕನಿಷ್ಠ ಪ್ರಮಾಣದ
ಪ್ರೇಕ್ಷಾಗೃಹ (೩೩ ಹಸ್ತ ಪ್ರಮಾಣ)

ಹೀಗೆ ದೊರಕಿರುವ ಆಧಾರಗಳ ಮೇಲೆ ಬೇಲೂರಿನ ಚೆನ್ನಕೇಶವ ದೇವಸ್ಥಾನ, ಕಪ್ಪೆ ಚೆನ್ನಿಗ ರಾಯ ಮತ್ತು ವೀರನಾರಾಯಣಸ್ವಾಮಿ ದೇವಸ್ಥಾನದ ನವರಂಗಗಳಲ್ಲಿ, ಹೊಯ್ಸಳರ ಕಾಲದಲ್ಲಿ ಪ್ರಮುಖ ವಾಗಿ ಪ್ರಚಲಿತವಿದ್ದ 'ಯಂಶೈವೋ ಮಾಪಸತೇ....' ಧ್ಯಾನ ಶ್ಲೋಕವನ್ನು ವೇದಗಳನ್ನು ಹಾಡುವ ಸ್ವರ ಸಂಚಾರದಿಂದ ಯುಕ್ತವಾದ ರೇವತಿ ರಾಗದಲ್ಲಿ ಹಾಡಿ ಧ್ವನಿಮುದ್ರಿಕೊಂಡು ಅದರ ಸ್ವರ ಕಂಪನಗಳಲ್ಲಾಗುವ ವ್ಯತ್ಯಾಸವನ್ನು ಗುರ್ತಿಸಿದಾಗ ಈ ಕೆಳಗಿನ ಅಂಶಗಳು ವ್ಯಕ್ತವಾದವು.

೧. ಚೆನ್ನಕೇಶವ ದೇವಸ್ಥಾನದ ನವರಂಗವು ಸು. ೬೩ ಹಸ್ತ ಪ್ರಮಾಣ ಮತ್ತು ಚತುರಸ್ರಾಕಾರ ವನ್ನು ಹೊಂದಿರುವುದರಿಂದ, ಭರತ ನಾಟ್ಯಶಾಸ್ತ್ರದ ಪ್ರಕಾರ ಮಧ್ಯಮ ಪ್ರಮಾಣದ ಪ್ರೇಕ್ಷಾಗೃಹವಾಗಿ ರುತ್ತದೆ.

೨. ಧ್ವನಿಯ ತರಂಗಗಳ ವಿಸ್ವರತೆ ಚೆನ್ನಕೇಶವ ಸ್ವಾಮಿ ದೇವಸ್ಥಾನದ ನವರಂಗಕ್ಕೂ, ವೀರನಾರಾಯಣ ಸ್ವಾಮಿ ದೇವಸ್ಥಾನದ ನವರಂಗಕ್ಕೂ ಹೋಲಿಸಿ ನೋಡಿ ದಾಗ ಅದು ೫ ರಷ್ಟು ಕಡಿಮೆ ಇರುತ್ತದೆ.

೩. ಚೆನ್ನಕೇಶವ ದೇವಸ್ಥಾನದಲ್ಲಿರುವ ಸೂಕ್ಷ್ಮ ಕಲಾಕುಶಲತೆಯಿಂದಾಗಿಯೂ ವಿಸ್ವರತೆ ಕಡಿಮೆ ಇರುವ ಸಾಧ್ಯತೆಗಳಿವೆ. ಈ ಬಗ್ಗೆ ಹೆಚ್ಚಿನ ಸಂಶೋಧನೆಯನ್ನು ನಡೆಸಲಾಗುತ್ತಿದೆ.

೪. ವಿಷ್ಣುವರ್ಧನನ ಕಾಲದಲ್ಲಿ ಈ ನವರಂಗವು ಬಯಲು ಪ್ರೇಕ್ಷಾಗೃಹವೆಂದು ವಿದ್ವಾಂಸರು ಅಭಿಪ್ರಾಯ ಪಟ್ಟರೂ, ಮತ್ತು ಅದೇ ದೇವಸ್ಥಾನದ ಸುಕನಾಸಿ, ಗರ್ಭಗೃಹಗಳು ನವರಂಗದ ಅಳತೆಗಿಂತ ಕಡಿಮೆ ಇದ್ದರೂ. ಧ್ವನಿಯ ಕಂಪನ (ಸ್ವರ-ವಿಸ್ವರತೆ)ದಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲದಿರುವುದು ಪ್ರಮುಖ ಅಂಶ. ಚಿತ್ರದುರ್ಗದ ಹಿಡಿಂಬೇಶ್ವರ ದೇವಸ್ಥಾನ ಮತ್ತು ಬೇಲೂರಿನ ವೀರ ನಾರಾಯಣಸ್ವಾಮಿ ದೇವಸ್ಥಾನಗಳ ನವರಂಗ, ಸುಕನಾಶಿ, ಗರ್ಭಗೃಹಗಳಲ್ಲಿಯ ವಿಸ್ವರತೆ ಯನ್ನು ಸ್ಪಷ್ಟವಾಗಿ ಕೇಳಬಹುದಾದ್ದರಿಂದ, ಹಿಂದಿನ ಬಯಲು ನವರಂಗಕ್ಕೂ ಈಗ ಜಾಲಂಧರ ಮುಂತಾದವು ಗಳಿಂದ ಮುಚ್ಚಲಾಗಿರುವ ವಿಜಯನಾರಾಯಣ ಸ್ವಾಮಿ ದೇವಸ್ಥಾನದಲ್ಲಿಯ ಸುಸ್ವರತೆಯಲ್ಲಿ ಗಮನಾರ್ಹ ಬದ ಲಾವಣೆ ಇಲ್ಲ ಎಂಬ ಅಭಿಪ್ರಾಯಕ್ಕೆ ಬರಬಹುದು.

ಮೇಲ್ಕಂಡ ಸಾಧಾರಗಳಿಂದ ಹೊಯ್ಸಳರ ಕಾಲದ ನವರಂಗಗಳನ್ನು ಸುಸ್ವರತೆ ಮತ್ತು ವಿಸ್ವರತೆ ಯನ್ನು ಗಮನಿಸಿಯೇ ರಚಿಸಲಾಗಿದೆ ಎಂಬುದು ಸ್ಪಷ್ಟ ವಾಗುತ್ತದೆ. 'ಶಬ್ದವಿದ್ಯಾ ಸುಲಕ್ಷಣ' 'ಭರತಾಗಮ ಭವನಿಹಿತ ಮತಿ' ಮುಂತಾದ ಶಾಸನೋಕ್ತಿಗಳು, ಭರತ ನಾಟ್ಯದಲ್ಲಿಯ ವಿವರಣೆಗಳು ಅಂದಿನವರಿಗೂ ಈ ವೈಜ್ಞಾನಿಕ ಸತ್ಯದ ಅರಿವಿತ್ತೆನ್ನುವುದಕ್ಕೆ ನಿದರ್ಶನ ಗಳಾಗಿವೆ.

ಡಿ. ವಿ. ದೇವರಾಜ್*

# ರಾಜಕೀಯ ದೃಷ್ಟಿಕೋನದಲ್ಲಿ ಸೋಮನಾಥಪುರದ ದೇವಾಲಯ ಸಂಕೀರ್ಣ

ಕರ್ನಾಟಕದ ರಾಜಕೀಯ ಇತಿಹಾಸವನ್ನು ಅವಲೋಕಿಸಿದರೆ ಒಂದು ವಿಷಯ ಸ್ಪಷ್ಟವಾಗುತ್ತದೆ. ಅದೆಂದರೆ ನಮ್ಮ ನಾಡಿನ ರಾಜರು ತಮ್ಮೆಲ್ಲ ಕಾಲ, ಧನ, ಮತ್ತು ಶ್ರಮವನ್ನು ವ್ಯಯಮಾಡಿ, ಬಹು ಸುಂದರವಾದ ದೇವಾಲಯಗಳನ್ನು ನಿರ್ಮಿಸಿದ್ದು. ಈ ದೃಷ್ಟಿಯಿಂದ ಹೊಯ್ಸಳರ ಕಾಲ ಮುಖ್ಯವಾದದ್ದು. ಕರ್ನಾಟಕಕ್ಕೆ ರಾಮಾನುಜಾಚಾರ್ಯರ ಆಗಮನ ಮತ್ತು ವಿಷ್ಣುವರ್ಧನನ ಸಂಪರ್ಕದಿಂದ ಕರ್ನಾಟಕದ ದಕ್ಷಿಣ ಭಾಗದಲ್ಲಿ ಹೆಚ್ಚಾಗಿ ವಿಷ್ಣು ದೇವಾಲಯಗಳು ರಚಿತವಾದವು. ಈ ದಿಸೆಯಲ್ಲಿ 13ನೇ ಶತಮಾನದ ಉತ್ತರಾರ್ಧದಲ್ಲಿ ಮೂರನೇ ನರಸಿಂಹನ ಕಾಲದಲ್ಲಿ ಸೋಮನಾಥಪುರ ಅಗ್ರಹಾರ ಮತ್ತು ದೇವಾಲಯ ಸಂಕೀರ್ಣ ನಿರ್ಮಾಣಗೊಂಡಿತು. ನರಸಿಂಹನಿಗೆ ಭುಜಬಲದಂತಿದ್ದ ಆ ಕಾಲದ ಅತ್ಯಂತ ಪ್ರಮುಖ ವ್ಯಕ್ತಿಯಾಗಿದ್ದ ಸೋಮನಾಥ ದಂಡನಾಯಕನು ಈ ದೇವಾಲಯದ ರಚನೆಗೆ ಕಾರಣನಾದವನು.

ಕ್ರಿ.ಶ. ೧೨೬೮-೬೯ರಲ್ಲಿ ಈ ದೇವಾಲಯ ಸಂಕೀರ್ಣ ಕಾವೇರಿ ನದಿಯ ದಂಡೆಯ ಮೇಲೆ ಸೃಷ್ಟಿಗೊಂಡಿತು. ಈಗ ನಾವು ಪರಿಶೀಲಿಸಬೇಕಾದ ಅಂಶವೆಂದರೆ, ಈ ಸಂಕೀರ್ಣ ಮತ್ತು ಅಗ್ರಹಾರದ ನಿರ್ಮಾಣ ಅಂದಿನ ರಾಜಕೀಯ ವ್ಯವಸ್ಥೆಯ ಯಾವುದಾದರೂ ಅಂಶವನ್ನು ಸೂಚಿಸುತ್ತದೆಯೇ ಎಂಬುದು. ರಾಜಕೀಯಕ್ಕೂ ಮತ್ತು ದೇವಾಲಯಗಳ ನಿರ್ಮಾಣಕ್ಕೂ ಯಾವ ಸಂಬಂಧ ಎಂಬ ಪ್ರಶ್ನೆ ಮೂಡಬಹುದು. ರಾಜರು ದೇವಾಲಯಗಳನ್ನು ನಿರ್ಮಾಣ ಮಾಡುತ್ತಿದ್ದುದು ಭಕ್ತಿ ಪ್ರದರ್ಶನದ ಜೊತೆಗೆ ತಮ್ಮ ಧನಶಕ್ತಿ ಮತ್ತು ಪ್ರಭುತ್ವಶಕ್ತಿಗಳನ್ನು ಶಾಶ್ವತವಾಗಿ ಪ್ರದರ್ಶಿಸಲು ಒಂದು ಮಾಧ್ಯಮವಾಗಿತ್ತು. ಈ ದೃಷ್ಟಿಯಿಂದ ಸೋಮನಾಥಪುರ ದೇವಾಲಯ ಸಂಕೀರ್ಣವನ್ನು ಪರಿಶೀಲಿಸಬಹುದು.

ಈ ಸಂಕೀರ್ಣದಲ್ಲಿ ಸ್ಥೂಲವಾಗಿ ಎರಡು ವರ್ಗಗಳ ದೇವಾಲಯಗಳು ಕಾಣಬರುತ್ತವೆ. ಒಂದು ವಿಷ್ಣು ಮತ್ತು ಅವನ ಅವತಾರಗಳಿಗೆ ಸಂಬಂಧಿಸಿದ ದೇವಾಲಯಗಳು. ಅದರಲ್ಲಿ ಬಹಳ ಮುಖ್ಯವಾದುದ್ದು ಸೋಮನಾಥಪುರದ ಹೃದಯದಂತಿರುವ ಕೇಶವ ದೇವಾಲಯ. ಪಂಚಲಿಂಗದೇವಾಲಯ ಶಿವನಿಗೆ ಸಂಬಂಧಿಸಿದ ಎರಡನೇ ವರ್ಗದ ದೇವಾಲಯ. ಈ ಎರಡೂ ಸಂಕೀರ್ಣಗಳನ್ನು ಕಟ್ಟಿಸಿದವನು ಪ್ರಖ್ಯಾತನಾಗಿದ್ದ ಸೋಮನಾಥ ದಂಡನಾಯಕ. ಈ ದೇವಾಲಯದ ಸಮಸ್ತ ಆಡಳಿತ ಮತ್ತು ಕೈಂಕರ್ಯಗಳಿಗೆ ಮತ್ತು ಊಳಿಗದವರ ಸಂಬಳಕ್ಕೆ ವ್ಯವಸ್ಥೆ ಮಾಡಿದವನು ಮೂರನೇ ನರಸಿಂಹ. ನರಸಿಂಹ ಶ್ರೀವೈಷ್ಣವ ; ಸೋಮನಾಥ ದಂಡನಾಯಕ ಶೈವ. ಈ ಸಂಕೀರ್ಣದಲ್ಲಿ ವೈಭವ, ಮತ್ತು ಆಡಂಬರಾಲಂಕಾರಗಳಿಂದ ಎದ್ದು ಕಾಣುವ ದೇವಾಲಯ ಕೇಶವ ದೇವಾಲಯ. ಸರಳವಾಗಿ ನಿರ್ಮಿತವಾಗಿರುವುದು ಪಂಚಲಿಂಗ. ಇಲ್ಲಿಯ

* ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ. ಮೈಸೂರು.

ವಸತಿ ನೆಲೆಗೆ ಹೆಸರು ಕೊಟ್ಟಿರುವುದು ಸೋಮನಾಥನ ಹೆಸರು. ಇದು ದಂಡನಾಯಕನ ಹೆಸರಲ್ಲ. ಇತಿಹಾಸ ಕಾರರಾದ ಎಂ. ಎಚ್. ಕೃಷ್ಣ ಮೊದಲಾದವರು ಸೋಮನಾಥ ದಂಡನಾಯಕನ ಹೆಸರನ್ನೆ ಅಲ್ಲಿನ ದೇವಾಲಯ ಸಂಕೀರ್ಣವನ್ನೊಳಗೊಂಡ ವಸತಿ ಪ್ರದೇಶಕ್ಕೆ ಕೊಟ್ಟನೆಂದು ಊಹಿಸಿದ್ದಾರೆ. ಆದರೆ, ಈ ಅಭಿಪ್ರಾಯ ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಏಕೆಂದರೆ, ಅಂದಿನ ಊಳಿಗಮಾನ್ಯ ರೀತಿಯ ರಾಜಕೀಯ ವ್ಯವಸ್ಥೆಯಲ್ಲಿ ಅಧಿರಾಜನ ಹೆಸರನ್ನು ಬಿಟ್ಟು, ತನ್ನ ಹೆಸರನ್ನೇ ಕೊಡುವುದು ಅಂದಿನ ದೃಷ್ಟಿಯಲ್ಲಿ ವಿರೋಧಾಭಾಸವಾಗಿ ತೋರುತ್ತದೆ. ಹಾಗಿದ್ದಲ್ಲಿ, ಸೋಮನಾಥಪುರ ಎಂಬ ಹೆಸರಿಗೆ ಆಧಾರವಾದದ್ದು ಯಾವುದು ಎಂಬ ಪ್ರಶ್ನೆ ಏಳುತ್ತದೆ. ಇದಕ್ಕೆ ಉತ್ತರ ಸುಲಭ. ಇದರ ಮೂಲ ಶಿವನ ಪ್ರಖ್ಯಾತ ರೂಪವಾದ ಸೋಮನಾಥ ಎಂಬುದು ಸ್ಪಷ್ಟ. ಗುಜರಾತಿನ ಸೌರಾಷ್ಟ್ರದ ಸೋಮನಾಥ ಅಂದಿನ ಭಾರತೀಯ ಜನಮನದಲ್ಲಿ ಭಕ್ತಿಯನ್ನು ಹುಟ್ಟಿಸುವ ಖ್ಯಾತ ದೈವವಾಗಿತ್ತು. ಆ ದೇವಾಲಯವನ್ನು ಮಹಮ್ಮದ್ ಘಜನಿ ನಾಶಮಾಡಿದ ನೆನಪು ಇನ್ನೂ ಹಚ್ಚಹಸುರಾಗಿತ್ತು. ಕನ್ನಡದಲ್ಲಿ ಈ ವೇಳೆಗೆ ರಾಘವಾಂಕನ **ಸೋಮನಾಥ ಚರಿತೆ** ಕರ್ನಾಟಕದಲ್ಲಿ ಪ್ರಚಾರಕ್ಕೆ ಬಂದಿದ್ದಿತು. ಈ ಕಾವ್ಯದ ನಾಯಕನಾದ ಆದಯ್ಯ, ಸೌರಾಷ್ಟ್ರದಲ್ಲಿ ನೆಲೆಸಿದ್ದ ಸೋಮನಾಥನನ್ನು ಕರ್ನಾಟಕಕ್ಕೆ ಕರೆದುಕೊಂಡು ಬಂದು ಪ್ರತಿಷ್ಠಾಪಿಸಿರುವುದು ಅರ್ಥಪೂರ್ಣವಾದದ್ದು. ಮೂರನೇ ನರಸಿಂಹನ ದಂಡನಾಯಕ ಸೋಮನಾಥನ ವಂಶದ ಪೂರ್ವಜರು ಶಾಸನಗಳಲ್ಲಿ ದಾಖಲಾಗಿರುವಂತೆ ಚಾಲುಕ್ಯ ವಂಶಕ್ಕೆ ಸೇವೆ ಸಲ್ಲಿಸಿದವರಾಗಿದ್ದರು. ಸೋಮನಾಥ ಸಂಪ್ರದಾಯ ದಕ್ಷಿಣ ಕರ್ನಾಟಕಕ್ಕೂ ಹಬ್ಬಿತು. ಒಂದು ಮುಖ್ಯವಾದ ಸಂಗತಿಯೆಂದರೆ, ಈ ಸಂಕೀರ್ಣದಲ್ಲಿರುವ ಪಂಚಲಿಂಗಗಳ ಪೈಕಿ, ಸೋಮನಾಥಲಿಂಗವೂ ಒಂದು. ಇದರಿಂದ ಸೋಮನಾಥ ಎಂಬ ಹೆಸರು ಬಂದಿತು ; ದಂಡನಾಯಕನಿಂದಲ್ಲ. ಏಕೆಂದರೆ, ಮೂರನೇ ನರಸಿಂಹನ ಹೆಸರನ್ನು ಬಿಟ್ಟು ಸೋಮನಾಥ ದಂಡನಾಯಕನ ಹೆಸರನ್ನು ನೀಡುವುದು ಅಂದು ಸಮಂಜಸದಾಗಿರಲಿಲ್ಲ.

ಸೋಮನಾಥಪುರದಲ್ಲಿ, ಸುಂದರವೂ, ಬೃಹತ್ ಮತ್ತು ಮಹತ್ ಎರಡರಲ್ಲೂ ಪ್ರಖ್ಯಾತವಾಗಿರುವುದು ಕೇಶವ ದೇವಾಲಯ. ಆದರೆ ಅದಕ್ಕೆ ಕೇಶವಪುರ ಎಂಬ ಹೆಸರನ್ನು ಏಕೆ ನೀಡಿಲಿಲ್ಲ ? ಇದಕ್ಕೆ ಕಾರಣ ಪ್ರಾಯಶಃ ದೇವಾಲಯ ಸಂಕೀರ್ಣವನ್ನು ನಿರ್ಮಾಣ ಮಾಡಿದವನ ಆದಿದೈವದ ಹೆಸರನ್ನು ನೀಡಬೇಕಾದದ್ದು ಸಹಜವಾಗಿತ್ತು. ಶೈವ ಪಂಥಕ್ಕೆ ಸೇರಿದ ಸೋಮನಾಥ ಕಟ್ಟಿಸಿದ್ದು ಸುಂದರವಾದ ವಿಷ್ಣು ಪಂಥದ ದೇವಾಲಯ. ತನ್ನ ಪ್ರಭುವಿನ ಗೌರವ ಮತ್ತು ಮನ್ನಣೆಯನ್ನು ಹಾಗೂ ಆತನ ಧಾರ್ಮಿಕ ಸಹಿಷ್ಣುತೆಯನ್ನು ಪ್ರದರ್ಶಿಸುವುದು ಸೋಮನಾಥನ ಉದ್ದೇಶವಾಗಿತ್ತು. ಅಂದು ಪ್ರಧಾನ ಅಧಿಕಾರಿಗಳು ರಾಜನ ಮನಸ್ಸನ್ನು ಒಲಿಸಲು ಇಂತಹ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು. ಈ ದೃಷ್ಟಿಯಿಂದ ಸೋಮನಾಥಪುರ ದೇವಾಲಯ ಸಂಕೀರ್ಣವನ್ನು ಮತ್ತು ಸ್ಥಳಕ್ಕೆ ಬಂದ ಹೆಸರನ್ನು ಅರ್ಥೈಸುವುದು ಹೆಚ್ಚು ಸಮಂಜಸವಾಗಿ ತೋರುತ್ತದೆ. ಶೈವರೂ ಮತ್ತು ವೈಷ್ಣವರೂ ಭ್ರಾತೃತ್ವ ಭಾವನೆಯಿಂದ ಬದುಕುತ್ತಿದ್ದ ಚಿತ್ರ, ಶಾಸನಗಳಿಂದ ಸ್ಪಷ್ಟವಾಗುತ್ತದೆ. ಎರಡೂ ವರ್ಗದ ದೇವಾಲಯಗಳಿಗೂ ಒಂದೇ ಮೊತ್ತದ ದತ್ತಿಯನ್ನು ಮೂರನೇ ನರಸಿಂಹ ಬಿಟ್ಟಿರುವುದು ಇದನ್ನು ಮತ್ತಷ್ಟು ಪುಷ್ಟೀಕರಿಸುತ್ತದೆ. ಒಟ್ಟಿನಲ್ಲಿ ಪ್ರಜಾವರ್ಗದಲ್ಲಿದ್ದ ವೈವಿಧ್ಯತೆಯನ್ನು ಗೌರವಿಸಿ, ಆಡಳಿತಕ್ಕೆ ಸುಭದ್ರತೆಯನ್ನು ಮತ್ತು ನಿಷ್ಠೆಯನ್ನು ಸಂಪಾದಿಸುವುದು, ಧರ್ಮ ಮತ್ತು ದೈವಭಕ್ತಿಗಳ ಪ್ರದರ್ಶನದಷ್ಟೇ ಪ್ರಮುಖವಾಗಿದ್ದವೆಂದು ಹೇಳಬಹುದು.

–ವಸಂತಲಕ್ಷ್ಮಿ ಕೆ *

# ಪುಷ್ಪಗಿರಿಯ ಮಲ್ಲಿಕಾರ್ಜುನ ದೇವಾಲಯ

ನಮ್ಮ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವು "ಅನೇಕತೆಯಲ್ಲಿ ಏಕತೆಯನ್ನು ಬಿಂಬಿಸುವುದಾಗಿದ್ದು, ಕಾಲಪ್ರವಾಹದ ಪ್ರಭಾವದಲ್ಲಿ ಸಿಲುಕಿ ನೂರಾರು ಮತ ಪರಂಪರೆಗಳು ಹಲವಾರು ತತ್ವಗಳು ಸಂಮಿಳಿತಗೊಂಡಿರುವುದು ಸರ್ವವಿದಿತವಾಗಿದೆ. ಕ್ರಿ.ಶ. ೧೧–೧೨ನೇ ಶತಮಾನಗಳಲ್ಲಿ ಕರ್ನಾಟಕದ ವಿವಿಧ ಭಾಗಗಳಲ್ಲಿ ಮತೀಯ ಘರ್ಷಣೆಗಳು ನಡೆದಿದ್ದು ಆ ಕಾಲವು ಸಂಕ್ರಮಣದ ಕಾಲವಾಗಿದೆ. ಹೊಯ್ಸಳರ ರಾಜಧಾನಿಯಾಗಿದ್ದ ದ್ವಾರಸಮುದ್ರದಲ್ಲಿನ ಗತಕಾಲದ ಸಂದಿಗ್ಧತೆಯನ್ನು ತಿಳಿಸುವ ಪುಷ್ಪಗಿರಿಯ ಮಲ್ಲಿಕಾರ್ಜುನ ದೇವಾಲಯ ಒಂದು ಕುತೂಹಲಕಾರಿ ವಿಷಯವಾಗಿದೆ.

ಕ್ರಿ.ಶ. ೧೨ನೇ ಶತಮಾನದ ಸುಮಾರಿನಲ್ಲಿ ದ್ವಾರಸಮುದ್ರದಲ್ಲಿ ಶೈವರ ಕಾಳಾಮುಖಮತ, ಶ್ರೀ ವೈಷ್ಣವ ಮತ ಮತ್ತು ಜೈನಮತಗಳು ಪ್ರಚಲಿತದಲ್ಲಿದ್ದು ಅನೇಕ ದೇವಾಲಯಗಳು ಮತ್ತು ಬಸದಿಗಳು ನಿರ್ಮಾಣಗೊಂಡಿವೆ. ಬಸದಿಗಳು ನಿರ್ಮಾಣವಾದುದಕ್ಕೆ ಶಾಸನಾಧಾರಗಳಿವೆಯಾದರೂ ಎಲ್ಲಾ ಬಸದಿಗಳು ಯಥಾಸ್ಥಿತಿಯಲ್ಲಿಲ್ಲ ಅಥವಾ ಉಳಿದು ಬಂದಿರುವುದಿಲ್ಲ. ಇದಕ್ಕೆ ಪುಷ್ಪಗಿರಿಯ ಮಲ್ಲಿಕಾರ್ಜುನ ದೇವಾಲಯವು ಇಂತಹ ಬದಲಾದ ರಚನೆಗಳಲ್ಲಿ ಒಂದಾಗಿದೆ.

ಹಳೇಬೀಡಿನಿಂದ ದಕ್ಷಿಣಕ್ಕೆ ಸು. ೧ ೧/೨ ಕಿ.ಮೀ ದೂರದಲ್ಲಿರುವ ಸಿದ್ಧಾಪುರ ಗ್ರಾಮದ ಒಂದು ಸಣ್ಣ ಬೆಟ್ಟ 'ಪುಷ್ಪಗಿರಿ'. ಸು.೩೦೦ ಅಡಿ ಎತ್ತರವಿರುವ ಈ ಬೆಟ್ಟದ ಮಧ್ಯಭಾಗವನ್ನು ಸಮತಳವಾಗಿಸಿ ವಿಸ್ತಾರವಾದ ದೇವಾಲಯವನ್ನು ಕಟ್ಟಲಾಗಿದೆ. ಇಲ್ಲಿ ಮತ್ತೊಂದು ಬಸವಣ್ಣನ ದೇವಾಲಯ, ಸಮೀಪದ ಗುಡ್ಡದಲ್ಲಿ ಒಂದು ವೀರಭದ್ರ ದೇವಾಲಯಗಳಿವೆ. ಮಲ್ಲಿಕಾರ್ಜುನ ದೇವಾಲಯಕ್ಕೆ ಸಂಬಂಧಿಸಿದಂತೆ ಸುಮಾರು ಎಂಟು ಶಾಸನಗಳಿದ್ದು ಇಲ್ಲಿಯ ಪ್ರಾಚೀನ ಶಾಸನವು ಸು. ಕ್ರಿ.ಶ. ೧೨೨೭ ಕಾಲದ್ದಾಗಿದೆ. ಇದು ಹೊಯ್ಸಳ ಮಹಾರಾಣಿ ಉಮಾದೇವಿಯವರು ಸೇಸೆ ಸಿದ್ಧಾಯವನ್ನು ತುಂಬಿಕೊಡಲು ನೀಡಿರುವ ದಾನಶಾಸನವಾಗಿದೆ. 'ಶ್ರೀ ಕೇಶವನಾಥ' 'ಶ್ರೀ ಚೆನ್ನಕೇಶವ' ಎಂಬ ಒಪ್ಪಗಳುಳ್ಳ ವೈಷ್ಣವ ದೇವರಿಗಿತ್ತಿರುವ ಈ ದಾನಶಾಸನವು [ಬೇಲೂರು ೪೪೦] ದೇವಾಲಯದ ಮಹಾದ್ವಾರದ ಕೈಸಾಲೆ ಕಂಬದ ಮೇಲಿದ್ದು, ಇದು ಈಗಿನ ಮಲ್ಲಿಕಾರ್ಜುನ ದೇವಾಲಯಕ್ಕೆ ಸಂಬಂಧಿಸಿದುದಾಗಿರುವುದಿಲ್ಲ.

ಪುಷ್ಪಗಿರಿಯ ಮಲ್ಲಿಕಾರ್ಜುನ ದೇವಾಲಯದ ಮೊದಲ ಉಲ್ಲೇಖವು, ಕ್ರಿ.ಶ. ೧೪೬೯ [ಬೇ ೪೪೫] ತೆಲುಗು ಶಾಸನವೊಂದರದ್ದಾಗಿದೆ.[1] ಈ ಕಾಲದ ನಂತರ

* ನಂ. ೧೬೪೩, ೨೧ನೆಯ ಮುಖ್ಯರಸ್ತೆ, ಬನಶಂಕರಿ ಮೊದಲ ಹಂತ, ಬೆಂಗಳೂರು-೫೬೦೦೫೦.

1 ಶ್ರೀ ಶೈಲದ ಮಲ್ಲಿಕಾರ್ಜುನ ದೇವರ ಪ್ರತಿರೂಪವೆಂಬಂತೆ ಇದು ನಿರ್ಮಾಣವಾಗಿದೆ. ಶ್ರೀಶೈಲದ ಬಳಿಯಲ್ಲೂ 'ಸಿದ್ಧಾಪುರ'ವೆಂಬ ಪ್ರಾಚೀನ ಜೈನಕೇಂದ್ರವೂ, ಆ ಸಿದ್ಧಾಪುರದ ಬಳಿಯೇ ಇರುವ ಪುಷ್ಪಗಿರಿಯೂ ಮಲ್ಲಿಕಾರ್ಜುನ ಕ್ಷೇತ್ರವೆನಿಸಿದೆ ಎಂದು ಶ್ರೀ. ಕೆ. ಆರ್. ಗಣೇಶ್‌ರವರು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಹಳೇಬೀಡಿನ ಬಳಿಯ ಪುಷ್ಪಗಿರಿಯಲ್ಲಿ ಮೊದಲು ತೆಲಗು ಶಾಸನ ಸಿಕ್ಕಿರುವುದು ಗಮನಾರ್ಹವಾಗಿದೆ.

ದಲ್ಲಿ ದೇವಾಲಯದಲ್ಲಿ ಪೂಜೆ-ಉತ್ಸವಗಳು ನಡೆಯುತ್ತಿತ್ತೆಂದು ಇದರಿಂದ ತಿಳಿಯುತ್ತದೆ. ಇಲ್ಲಿಯ ಮಲ್ಲಾಪುರ ಮಠದ ತಾಮ್ರಶಾಸನವು ಕ್ರಿ.ಶ. ೧೪೬೧ ರದಾಗಿದ್ದು. ಮೇಹಾರ ಖತ್ರಿವಂಶಕ್ಕೆ ಸೇರಿದ 'ಚಂದೂಲಾಲ್ ಪ್ರಭು' ಎಂಬುವನು ಲಿಂಗಾಲ ಗ್ರಾಮವನ್ನು ಮಲ್ಲಿಕಾರ್ಜುನ ದೇವರಿಗೆ ದತ್ತಿ ಬಿಟ್ಟ ಶಾಸನವಾಗಿದೆ. [ಬೇ ೪೫೨,] ಹೀಗೆ ೧೫ನೇ ಶತಮಾನದಿಂದ ಈ ದೇವಾಲಯವು ಪ್ರಸಿದ್ಧ ಶಿವಾಲಯವಾಗಿದೆಯೆಂದು ತಿಳಿದು ಬರುತ್ತದೆ.

## ವಾಸ್ತು-ಮೂರ್ತಿಶಿಲ್ಪ

ಈ ಹೊಯ್ಸಳರ ಶೈಲಿಯ ದೇವಾಲಯದ ಅಧಿಷ್ಠಾನವು ಖುರ, ಪದ್ಮಪತ್ರಿಕಾ, ಕರ್ಣಿಕಾ, ಕಂಠಕಾ, ಮತ್ತು ಕಪೋತಗಳನ್ನು ಹೊಂದಿದೆ. ಕಪೋತವು ನಾಸಿಗಳಿಂದ ಅಲಂಕಾರಗೊಂಡಿದ್ದು ಇದರ ಮೇಲೆ ಈಗ ಜೀರ್ಣೋದ್ಧಾರಗೊಂಡಿರುವ ಅಲಂಕಾರರಹಿತವಾದ ಗಾರೆಯ ಭಿತ್ತಿ ಇದೆ. ಇದು ಮೊದಲಿಗೆ ಹೊರ ಆವರಣದ ಹೊರ ಭಿತ್ತಿಯಂತೇ ಸ್ತಂಭಗೋಪುರಗಳಿಂದ ಅಲಂಕಾರಗೊಂಡ ಭಿತ್ತಿಯಾಗಿದ್ದಿರಬೇಕು. ಈ ದೇವಾಲಯದ ಪ್ರಸ್ತರದ ಭಾಗದಲ್ಲಿ ಉತ್ತರ, ವಲಭಿ, ವಾಜನ ಮತ್ತು ಕಪೋತದ ಭಾಗಗಳಿವೆ. ಇದರ ಮೇಲೆ ಕೈಪಿಡಿಗೋಡೆ ಬಂದಿದೆ. ಗರ್ಭಗೃಹದ ಮೇಲೆ ಎತ್ತರವಾದ ಎರಡು ತಳಗಳುಳ್ಳ ಜೀರ್ಣೋದ್ಧಾರವಾಗಿರುವ ಶಿಖರವಿದೆ. ಎರಡೂ ತಳಗಳಲ್ಲೂ ಶಾಲಾಕೂಟ ನಾಸಿಗಳ ಹಾರವೂ, ಶಿಖರದ ಮುಂಭಾಗದಲ್ಲಿ ಸುಕನಾಸಿಯೂ ಇವೆ. ಶಿಖರದ ಯಾವ ಭಾಗದಲ್ಲೂ ಬಿಂಬಗಳನ್ನು ಬಿಡಿಸಿಲ್ಲ. ಶಿಖರದ ಮೇಲೆ ಎತ್ತರವಾದ ಕಳಶವಿದೆ. ಕೈಪಿಡಿ ಗೋಡೆಯ ಮೂಲೆಗಳಲ್ಲಿ ನಂದಿಯ ಬಿಂಬಗಳನ್ನಿಡಲಾಗಿದೆ.

ಈ ದೇವಾಲಯದ ಒಳ ಆವರಣವು ಗರ್ಭಗೃಹ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಅಂತರಾಳಕ್ಕೆ ಸಮಾನಾಂತರವಾಗಿ ಇನ್ನೆರಡು ಗುಡಿಗಳೂ ನವರಂಗದ ಎಡ ಭಾಗದಲ್ಲಿ ಮತ್ತೊಂದು ಗುಡಿ ಇದ್ದು ದೇವಿಯ ಗುಡಿಯು ಸೇರಿ ಐದು ಗುಡಿಗಳು ಇಲ್ಲಿ (ಕಾಣಬರುತ್ತವೆ.)[2] ದೇವಾಲಯದ ಮುಂಭಾಗದಲ್ಲಿ ಚಿಕ್ಕದಾದ ನಂದಿಮಂಟಪ, ದೀಪಸ್ತಂಭ, ಗಣಪತಿಗುಡಿ, ದೇವಿಯಗುಡಿ ಇವೆಲ್ಲವನ್ನು ಒಳಗೊಂಡಂತೆ ಪ್ರಾಕಾರವಿದ್ದ ಪ್ರತೋಲಿಯೂ ಇದೆ.

ಚಿಕ್ಕದಾದ, ಚೌಕಾಕಾರದ ಗರ್ಭಗೃಹವಿದ್ದು, ಇಲ್ಲಿ ಪಾಣಿಪೀಠದಿಂದ ಕೂಡಿರುವ ಪ್ರತಿಷ್ಠಿತ ಲಿಂಗವಿರದೇ, ಹಿಂದಿದ್ದ ಪಾಣಿಪೀಠವನ್ನೇ ಉದ್ದುದ್ದವಾಗಿ ತಿರುಗಿಸಿಟ್ಟು ಇದರ ಮೇಲೆ ನಿರಾಕಾರವಾದ ಬಂಡೆಯೊಂದನ್ನಿಡಲಾಗಿದೆ. ಇದನ್ನೇ ಸ್ವಯಂಭೂ ಮಲ್ಲಿಕಾರ್ಜುನ ದೇವರೆಂದು ಪೂಜಿಸುತ್ತಾರೆ. ಅಂತರಾಳದ ದ್ವಾರಬಂಧವು ಹೊಯ್ಸಳರ ಶೈಲಿಯದಾಗಿದ್ದು, ಉತ್ತರಾಂಗದ ಪಟ್ಟಿಕೆಯ ಕೆಳಭಾಗದಲ್ಲಿ ಎರಡು ಅಧೋಕುಮುದಗಳ ಮಧ್ಯೆ ಲಲಾಟ ಫಲಕವಿದೆ. ಲಲಾಟ ಫಲಕದಲ್ಲಿರುವ ದೇವಿಗೆ ಎರಡು ಆನೆಗಳು ನಿಂತುಕೊಂಡು ಕುಂಭಾಭಿಷೇಕ ಮಾಡುತ್ತಿರುವಂತೆ ಬಿಡಿಸಲಾಗಿದೆ. ಪಟ್ಟಿಕೆಯ ಮೇಲ್ಭಾಗದಲ್ಲಿ ವಿವಿಧ ರೀತಿಯ ಶಿಖರಗಳ ಮಾದರಿಗಳನ್ನು ಬಿಡಿಸಲಾಗಿದೆ. ಇದೇ ಮಾದರಿಯ ಶಿಖರಗಳನ್ನು ಹೊರ ಆವರಣದ ಹೊರ ಭಿತ್ತಿಯ ಮೇಲೂ ಕಾಣುತ್ತೇವೆ. ದ್ವಾರಬಂಧದ ಕೆಳಭಾಗದಲ್ಲೂ ಚಾಮರಧಾರಿ ಮತ್ತು ಸೇವಕರಿಂದ ಕೂಡಿದ ದ್ವಾರಪಾಲಕರ ಶಿಲ್ಪಗಳಿವೆ.

ನವರಂಗವು ಸುಂದರವಾದ ಕಂಬಗಳಿಂದ ಕೂಡಿದ್ದು ನವರಂಗದಲ್ಲಿ ಒಂಬತ್ತು ಅಂಕಣಗಳಿವೆ. ಮಧ್ಯಭಾಗದಲ್ಲಿ ಒಂಬತ್ತು ವಿತಾನಗಳಿವೆ. ನವರಂಗದ ಮಧ್ಯಭಾಗದಲ್ಲಿ ವೃತ್ತಾಕಾರದ ಸಣ್ಣ ವೇದಿಕೆಯೊಂದಿದ್ದು ಇದರ ಮೇಲೆ ನಾಲ್ಕು ವತ್ತಾಕಾರದ ಕಂಬಗಳಿವೆ. ಈ ಕಂಬಗಳು ತಿರುಗಣೆಯಿಂದ ಮಾಡಿದ ಕಂಬಗಳಾಗಿದ್ದು ಪಾದ, ಪೀಠ, ವೃತ್ತಕಾಂಡ, ಕಳಶ, ತಡಿ, ಕುಂಭ

2 ಕಂಬದಹಳ್ಳಿಯ ಮತ್ತು ಮರಿಕ್ಕಲಿಯ ಬಸದಿಗಳೂ ಕೂಡ ಇದೇ ರೀತಿಯ ರಚನೆಯನ್ನು ಹೊಂದಿದ್ದು ಮೂಲ ದೇವಾಲಯ ಮತ್ತು ಅದರ ಪಕ್ಕದ ಗುಡಿಗಳನ್ನು ಸೇರಿಸಿ ಪಂಚಕೂಟ ಬಸದಿಗಳೆಂದು ಕರೆಯುತ್ತಾರೆ.

ಮುಂಡಿ ಮತ್ತು ಫಲಕದ ಭಾಗಗಳನ್ನು ಹೊಂದಿದೆ. ಕಂಬದ ಪೀಠ ಭಾಗದಲ್ಲಿ ತೋರಣವನ್ನು ಬಿಡಿಸಿ, ಇದರ ಮಧ್ಯದಲ್ಲಿ ಯಕ್ಷಿಯರ ಬಿಂಬಗಳನ್ನು ಕೆತ್ತಲಾಗಿದೆ. ಕಾಂಡದ ಭಾಗದಲ್ಲಿ ಸುರುಳಿಗಳಂತೆ ಮುಕ್ತಮಾಲೆ, ಪುಷ್ಪಲತೆ, ವಜ್ರಾಕೃತಿ ಮೊದಲಾದ ಚಿತ್ರಗಳ ಪಟ್ಟಿಕೆಯನ್ನು ಬಿಡಿಸಲಾಗಿದೆ. ಕಂಬದ ಮುಂಚಾಚಿರುವ ಭಾಗದಲ್ಲಿ ಹಾರುವ ಗಂಧರ್ವರ ಸಣ್ಣ ಶಿಲ್ಪಗಳನ್ನು ಜೋಡಿಸಿದೆ. ಕುಂಭದ ಮತ್ತು ಫಲಕದ ಮುಂಡಿಯು ಭಾಗದಲ್ಲಿ ಮುಕ್ತಮಾಲೆಯ ಅಲಂಕಾರವಿದೆ. ಈ ಕಂಬಗಳಲ್ಲದೇ ನವರಂಗದ ಭಿತ್ತಿಯಲ್ಲೂ, ಮುಖಮಂಟಪದಲ್ಲೂ ಹೊಯ್ಸಳರ ಶೈಲಿಯ ವಿವಿಧ ಮಾದರಿಯ ಕಂಬಗಳಿವೆ. ನಕ್ಷತ್ರಾಕಾರದ, ಬಹುಕೋನಾಕಾರದ, ಕಮಲದಾಕಾರದ, ಚೌಕಾಕಾರದ ಮೊದಲಾದ ಹಲವು ಮಾದರಿಯ ತಿರುಗಣಿ ಯಂತ್ರದಿಂದ ರಚಿಸಿರುವ ಕಂಬಗಳನ್ನು ಇಲ್ಲಿಯ ಮುಖಮಂಟಪದಲ್ಲಿ ಕಾಣಬಹುದು. ಇಲ್ಲಿಯ ಕಂಬಗಳು ಬೇಲೂರಿನ ಕೇಶವ ದೇವಾಲಯದ ಕಂಬಗಳಂತೆ ಸುಂದರವಾಗಿದೆ ಎಂದು ವಿದ್ವಾಂಸರು ಪ್ರಶಂಸಿಸಿರುತ್ತಾರೆ. (MAR 1945 )

ಈ ದೇವಾಲಯದ ವಿತಾನಗಳು ಗಮನಾರ್ಹವಾಗಿದ್ದು, ಚೌಕಾಕಾರದ್ದಾಗಿವೆ. ಇಲ್ಲಿಯ ಮೊದಲ ವಿತಾನದಲ್ಲಿ ಒಂಬತ್ತು ಚೌಕಗಳಿದ್ದು ಅವುಗಳೊಳಗೆ ನಾಗಮಂಡಲವನ್ನು ಬಿಡಿಸಿ ಈ ಮಂಡಲದ ಮಧ್ಯಭಾಗದಲ್ಲಿ ಚಿಕಣಿ ಬಿಂಬಗಳನ್ನು ಕೆತ್ತಲಾಗಿದೆ. ಆರು ಚೌಕಗಳಲ್ಲಿ ಯಕ್ಷಯಕ್ಷಿಯರ ಶಿಲ್ಪಗಳನ್ನು ಬಿಡಿಸಿದ್ದು, ಮಧ್ಯಭಾಗದ ಚೌಕಗಳಲ್ಲಿ ಗಂಧರ್ವರನ್ನು ಬಿಡಿಸಿದ್ದು ಮಧ್ಯದ ಚೌಕದಲ್ಲಿ ಆಸೀನ ಜಿನಬಿಂಬವನ್ನು ಕೆತ್ತಲಾಗಿದೆ ; ಈ ಮಂಡಲಗಳೊಳಗೆ ಮೂಲೆಗಳಲ್ಲಿ ಯಕ್ಷಯಕ್ಷಿಯರ ಶಿಲ್ಪಗಳು ಮಧ್ಯದಲ್ಲಿದ್ದರೆ ಮೂಲೆಗಳಲ್ಲಿ ಗಂಧರ್ವರನ್ನು ಬಿಡಿಸಲಾಗಿದೆ. ಇಲ್ಲಿ ಚೌಕಗಳನ್ನು ಬೇರ್ಪಡಿಸಲು ಕಮಲದ ಪಟ್ಟಿಕೆಗಳನ್ನು ರಚಿಸಿದ್ದು ವಿತಾನವು ಬಹು ಸುಂದರವಾಗಿದೆ.

ಇದರಂತೆ ಈ ಸಾಲಿನ ವಿತಾನದ ಸುತ್ತ ಇರುವ ಪಟ್ಟಿಕೆಯಲ್ಲಿ ವಾದಕರ, ಗಂಧರ್ವರ ಬಿಂಬಗಳಿದ್ದು, ಮಧ್ಯದ ಚೌಕಟ್ಟು ಅಗಲವಾಗಿದೆ. ಇದರಲ್ಲಿ ನಾಟ್ಯಭಂಗಿಯಲ್ಲಿರುವ ಇಂದ್ರನ ಸುಂದರವಾದ ಶಿಲ್ಪವಿದೆ. ಮುಕ್ಕೊಡೆ ಕಿರೀಟವುಳ್ಳ ಇಂದ್ರನ ಮುಖ ಪ್ರಸನ್ನವಾಗಿದೆ. ನಾಟ್ಯಭಂಗಿಯಲ್ಲಿರುವ ಇಂದ್ರನ ಕಾಲ ಬಳಿ ಬಲಭಾಗದಲ್ಲಿ ವಾದಕನೊಬ್ಬನೂ, ಎಡಭಾಗದಲ್ಲಿ ಆನೆಯೂ ಮತ್ತು ವಿಸ್ಮಯ ಭಂಗಿಯಲ್ಲಿರುವ ಸೇವಕನೊಬ್ಬನನ್ನು ಕೆತ್ತಲಾಗಿದೆ. ಅಷ್ಟಭುಜಗಳುಳ್ಳ ಇಂದ್ರನು ಬಲಗೈಗಳಲ್ಲಿ ಕ್ರಮವಾಗಿ ಅಕ್ಷಮಾಲೆ ಮತ್ತು ಅಭಯಹಸ್ತ, ಅಂಕುಶ, ಗಜಹಸ್ತ ಮತ್ತು ಕಮಲವನ್ನು ಮತ್ತು ಎಡಗೈಗಳಲ್ಲಿ ಕ್ರಮವಾಗಿ ವಿಸ್ಮಯಹಸ್ತ, ಅಂಕುಶ ಪಾಶ ಮತ್ತು ಬೀಜಪೂರಗಳನ್ನು ಧರಿಸಿದ್ದಾನೆ. ಇಂದ್ರನು ಬಲಗಾಲನ್ನು ಸಮಪಾದವಾಗಿರಿಸಿ ಎಡಗಾಲನ್ನು ನಾಟ್ಯಭಂಗಿಯಲ್ಲಿ ಮೇಲೆತ್ತಿದ್ದಾನೆ. ಇಂದ್ರನಿಗೆ ಮುಕ್ಕೊಡೆಯ ಕಿರೀಟವಲ್ಲದೆ, ಸುಂದರವಾದ ಶಿರಶ್ಚಕ್ರ, ಕೈಗಳಲ್ಲಿ ಮೂರು ರತ್ನದ ಕಂಕಣಗಳಿವೆ. ಎಲ್ಲಾ ಬೆರಳುಗಳಲ್ಲೂ ಉಂಗುರಗಳಿವೆ. ಬೆರಳನ್ನು ನೀಳವಾಗಿ ಬಿಡಿಸಿದ್ದು, ಉಗುರಿನ ಭಾಗಕ್ಕೆ ಹೆಚ್ಚಿನ ಮೆರಗನ್ನಿತ್ತಿದೆ. ಕೊರಳಿನಲ್ಲಿ ಪದಕದ ಹಾರ, ದಪ್ಪದಾದ ಮಣಿಯುಕ್ತವಾದ ಉರಹಾರವಿದ್ದು ಯಜ್ಞೋಪವೀತವು ಮಣಿಮಾಲೆಯಂತಿದ್ದು ಎಡಭುಜದಿಂದ ಬಲಗಡೆಗೆ ಹಾದುಹೋಗಿದೆ. ಅಗಲವಾದ ಉದರಬಂಧವಿದ್ದು ಕಟೀಸೂತ್ರವು ಹೆಚ್ಚು ಅಲಂಕಾರಿಕವಾಗಿಲ್ಲ. ತೋರ ಹಾರವು ಹೊಯ್ಸಳರ ಶೈಲಿಯದೇ ಆಗಿದ್ದರೂ, ಹೆಚ್ಚಿನ ಕುಸುರಿ ಹೊಂದಿರುವಂತಿಲ್ಲ. ಇಂದ್ರನ ಇಕ್ಕೆಲದಲ್ಲೂ ವಸ್ತ್ರವು ಇಳಿಬಿದ್ದಿದೆ. ಕಾಲುಗಳಲ್ಲಿ ದಪ್ಪವಾದ ಕಡಗ, ಕಾಲ್ಗೆಜ್ಜೆಗಳನ್ನು ಧರಿಸಿರುವ ಇಂದ್ರನ ಬಳಿ ಇರುವ ವಾದಕ ಸಾಮಾನ್ಯ ವ್ಯಕ್ತಿಯಂತೆ ವೇಷಭೂಷಣ ಧರಿಸಿ ಚಿತ್ರಿತನಾಗಿದ್ದಾನೆ : ತೀರ್ಥಂಕರನ ಸಮವಸರಣವನ್ನು ಕಂಡು ಆನಂದಗೊಂಡು ಇಂದ್ರನು ನರ್ತಿಸುತ್ತಾನೆಂದು ಸಾಹಿತ್ಯ ಕೃತಿಗಳು ತಿಳಿಸುತ್ತವೆ.

ನವರಂಗದ ವೇದಿಕೆಯ ಮೇಲಿನ ವಿತಾನವು ಪ್ರಧಾನವಾಗಿದ್ದು ಮೂರು ಹಂತಗಳನ್ನು ಹೊಂದಿದೆ. ಒಂದನೇ ಪಟ್ಟಿಕೆಯಲ್ಲಿ ವಿವಿಧ ವಾದಕರನ್ನು ಈ ಪಟ್ಟಿಕೆಗಳ ಮಧ್ಯೆ ಅಡ್ಡವಾಗಿ ಮುಂಚಾಚಿರುವ ಪಟ್ಟಿಕೆಗಳ ಮೇಲೆ ಅಷ್ಟದಿಕ್ಪಾಲಕರನ್ನು ಕೆತ್ತಲಾಗಿದೆ. ಎರಡನೇ ಹಂತದ ಪಟ್ಟಿಕೆಗಳಲ್ಲಿ, ಒಂದೊಂದು ಪಟ್ಟಿಕೆಯಲ್ಲೂ ಮೂರು ಮೂರು ಆಸೀನ ಜಿನ ಬಿಂಬಗಳನ್ನು, ಚಾಮರ

ಧಾರಿಯರೊಂದಿಗೆ ಬಿಡಿಸಲಾಗಿದೆ. ಈ ಬಿಂಬಗಳನ್ನು, ಬೇರ್ಪಡಿಸಲು ಸಣ್ಣ ಸಣ್ಣ ಕಂಬಗಳನ್ನು ಬಿಡಿಸಿದೆ. ಮೂರನೇ ಹಂತದ ಮಧ್ಯದ ಅಗಲವಾದ ಚೌಕಟ್ಟಿನಲ್ಲಿ ಹಿಂದಿನಂತಹದೇ ಇಂದ್ರನ ನಾಟ್ಯಶಿಲ್ಪವಿದೆ. ಈ ವಿತಾನವು ಇಲ್ಲಿರುವ ಎಲ್ಲಾ ವಿತಾನಗಳಿಗಿಂತ ಹೆಚ್ಚು ಸೊಗಸಾದುದು. ಉಳಿದ ವಿತಾನಗಳಲ್ಲಿ ಒಂದೆರಡರಲ್ಲಿ ಗಂಧರ್ವರನ್ನು, ಒಂದೆರಡು ವಿತಾನಗಳಲ್ಲಿ ಯಕ್ಷರನ್ನು, ವಿವಿಧ ವಾದಕರನ್ನು ಬಿಡಿಸಲಾಗಿದೆ. ಈ ಎಲ್ಲಾ ವಿತಾನಗಳೂ ಹೊಯ್ಸಳ ಶಿಲ್ಪಿಗಳ ಕೌಶಲ್ಯದ ಚಿರ ಸಾಕ್ಷಿಗಳಾಗಿವೆ.

ನವರಂಗದ ದ್ವಾರಬಂಧವು ಐದು ಶಾಖೆಗಳನ್ನು ಹೊಂದಿದ್ದು ವಜ್ರಶಾಖೆ, ವಲ್ಲಿಶಾಖೆ, ಸ್ತಂಭಶಾಖೆ, ವಲ್ಲೀಶಾಖೆ ಮತ್ತು ಪತ್ರಶಾಖೆಗಳನ್ನು ಹೊಂದಿದೆ. ಇದರ ವಲ್ಲೀಶಾಖೆಯ ಸುರುಳಿಗಳಲ್ಲಿ ಕುಬ್ಜರು ವಿವಿಧ ವಾದ್ಯಗಳನ್ನು ನುಡಿಸುತ್ತಿರುವಂತೆ, ನರ್ತಿಸುತ್ತಿರುವಂತೆ ಬಿಡಿಸಲಾಗಿದೆ. ದ್ವಾರಬಂಧದ ಕೆಳಭಾಗದಲ್ಲಿ ಚಾಮರ ಧಾರಿ ಮತ್ತು ಸೇವಕರನ್ನೊಳಗೊಂಡಂತೆ ಧರಣೇಂದ್ರ ಯಕ್ಷ ಮತ್ತು ಪದ್ಮಾವತೀಯಕ್ಷಿಯರ ಶಿಲ್ಪಗಳನ್ನು ಬಿಡಿಸಲಾಗಿದೆ. ಈ ಪಟ್ಟಿಕೆಯು ಒಟ್ಟು ಐದು ಜನರ ಶಿಲ್ಪಗಳನ್ನು ಹೊಂದಿದೆ. ಸುಂದರವಾದ ಈ ದ್ವಾರ ಬಂಧದ ಲಲಾಟಫಲಕದಲ್ಲಿ ಮೊದಲಿಗೆ ಚಾಮರಧಾರಿ ಯರ ಸಹಿತ 'ಆಸೀನಜಿನ' ಬಿಂಬವಿದ್ದಿರಬೇಕು. ಆ ಜಿನಬಿಂಬವನ್ನೇ 'ಲಿಂಗದಂತೆ' ಮಾರ್ಪಡಿಸಿದ್ದು, ಲಿಂಗವು ಮುಕ್ಕೊಡೆಯ ಕೆಳಗೆ ಇದೆ. ಇಂಥಹದೇ ದ್ವಾರಬಂಧವನ್ನು ಉತ್ತರದಿಕ್ಕಿನ ಬಾಗಿಲುವಾಡದಲ್ಲೂ ಕಾಣುತ್ತೇವೆ. ನವರಂಗದ ಎಡಭಾಗದಲ್ಲಿ ಮತ್ತೊಂದು ಗರ್ಭಗೃಹವಿದ್ದು, ಇದೂ ಅಂತರಾಳವನ್ನು ಹೊಂದಿದೆ. ಈ ಗರ್ಭಗೃಹವನ್ನು ಉತ್ಸವ ಮೂರ್ತಿಗಳನ್ನಿಡಲು ಬಳಸುತ್ತಾರೆ. ಅಂತರಾಳದ ಸಾಲಿನಲ್ಲೇ ಮತ್ತೆರಡು ಗರ್ಭಗೃಹಗಳಿರುವಂತಿದೆ, ಇಂದು ಆ ಅಂಕಣಗಳನ್ನು ಉಗ್ರಾಣವಾಗಿಸಿದ್ದು ಸದಾ ಮುಚ್ಚಿರುತ್ತದೆ.

ನವರಂಗದ ಮುಂದಿರುವ ಮುಖಮಂಟಪವು ಸಾಕಷ್ಟು ಮಾರ್ಪಾಟಿಗೆ ಒಳಗಾಗಿದೆ. ಇಲ್ಲಿರುವ ವಿತಾನಗಳಲ್ಲಿ 'ಕಮಲ'ಗಳನ್ನು ಬಿಡಿಸಿದ್ದು, ಮಧ್ಯದ ವಿತಾನದಲ್ಲಿ ಅರೆಬಿರಿದ ಕಮಲವಿದ್ದು ಕಮಲದ ಮೊಗ್ಗನ್ನು 'ಕೆಳಮುಖವಾಗಿ ಬಿಡಿಸಿದ್ದಾರೆ. ಇಲ್ಲಿಯ ಒಂದು ವಿತಾನವು ಅಷ್ಟದಿಕ್ಪಾಲಕರ ಮಧ್ಯೆ ಗೋಪಾಲ ಕೃಷ್ಣನ ಬಿಂಬವಿದ್ದು ಇದನ್ನು ಬೇರೆ ದೇವಾಲಯದಿಂದ ತಂದು ಸೇರಿಸಲಾಗಿದೆ. ಈ ಮುಖಮಂಟಪದ ವೇದಿಕೆಯ ಮಧ್ಯಭಾಗದಲ್ಲಿ ಹೊಯ್ಸಳರ ಕಾಲದ ನಂದಿಯೊಂದನ್ನಿಡಲಾಗಿದೆ. ಈ ಮುಖಮಂಟಪಕ್ಕೆ ಪೂರ್ವ ಮತ್ತು ಉತ್ತರ ದಿಕ್ಕಿನಲ್ಲಿ ಬಾಗಿಲುಗಳಿಲ್ಲ. ದ್ವಾರಬಂಧವು ಜಾಲಾಂಧ್ರದಿಂದ ಕೂಡಿದೆ.

ಈ ದೇವಾಲಯದ ಎಡಭಾಗದಲ್ಲಿ ದೇವಿಯ ಗುಡಿಯೊಂದಿದ್ದು, ಇದರಲ್ಲಿನ ಕಂಬಗಳು ಸುಮಾರು ೧೧-೧೨ನೇ ಶತಮಾನದ ಹೊಯ್ಸಳ ಶೈಲಿಯ ವೃತ್ತಾ ಕಾರದ ಕಾಂಡಗಳೇ ಆಗಿವೆ. ಆದರೆ ಮಲ್ಲಿಕಾರ್ಜುನ ದೇವಾಲಯದ ಕಂಬಗಳಷ್ಟು ಕುಸುರಿ ಕೆತ್ತನೆಯಿಂದ ಕೂಡಿಲ್ಲ. ನವರಂಗದಲ್ಲಿ ಕಕ್ಷಾಸನವೂ ಇದೆ. ಈ ದೇವಾಲಯ ಪ್ರವೇಶ ದ್ವಾರಬಂಧವು ೧೪ನೇ ಶತಮಾನ ದಂತಿದೆ. ಈ ದೇವಾಲಯವು ಜೀರ್ಣೋದ್ಧಾರವಾಗಿ ರುವ ದೇವಾಲಯವಾಗಿದೆ. ಚಿಕ್ಕನಂದಿ ಮಂಟಪ ಗಣಪತಿಗುಡಿ, ಪ್ರಕಾರದ ಇತರ ಅಂಕಣಗಳು ನೂತನ ವಾಗಿ ಕಟ್ಟಿದವವಾಗಿವೆ. ಧ್ವಜಸ್ತಂಭ ಪ್ರತೋಲಿಯ ಭಾಗಗಳೂ ಪ್ರಾಚೀನವೇ, ಪ್ರತೋಲಿಯ ಹೊರ ಭಿತ್ತಿಯ ಮೇಲೆ ಸುಂದರವಾದ ಸ್ತಂಭಗೋಪುರಗಳಿದ್ದು, ಇದರಲ್ಲಿ ಬರುವ 'ನಾಸಿ'ಗಳಲ್ಲಿ ಆಸೀನಜಿನ ಬಿಂಬಗಳಿವೆ. ಇದರಂತೆ ಪ್ರವೇಶದ್ವಾರದ ದ್ವಾರಬಂಧದ ಲಲಾಟ ಫಲಕದಲ್ಲೂ, ಮಹಾದ್ವಾರದಂತಿರುವ ತೋರಣದ ಮೇಲೆ ಮುಕ್ಕೊಡೆಯ ಕೆಳಗೆ, ಚಾಮರಧಾರಿ ಸಮೇತನಾಗಿರುವ 'ಆಸೀನಜಿನ'ನ ಬಿಂಬಗಳನ್ನು ಕಾಣುತ್ತೇವೆ. ಹೀಗೆ ಈ ಮಲ್ಲಿಕಾರ್ಜುನ ದೇವಾಲಯದ ವಾಸ್ತುವಿನ್ಯಾಸ ಮತ್ತು ಮೂರ್ತಿಶಿಲ್ಪವನ್ನು ಗಮನಿಸಿದರೆ, ಹಿಂದೆ ಇದು ಹೊಯ್ಸಳರ ಕಾಲದ ಒಂದು ಸುಂದರ ಬಸದಿಯಾಗಿ ತ್ತೆಂದು ಸ್ಪಷ್ಟವಾಗುತ್ತದೆ. ಆದರೆ ಈ ದೇವಾಲಯದ ಆವರಣದಲ್ಲಿ ಒಂದೂ ಜೈನ ಶಾಸನವಿಲ್ಲದಿರುವುದು ಗಮ ನಾರ್ಹವಾಗಿದೆ.

ಈ ಸುಂದರವಾದ ವಿಶಾಲವಾದ ಭವ್ಯ ಬಸದಿಯನ್ನು

ಕಟ್ಟಿಸಿದವರಾರು ? ಎಂದು ಯೋಚಿಸಿದಾಗ ಮೊದಲಿಗೆ ಈ ನಿಟ್ಟಿನಲ್ಲಿ ಚಿಂತಿಸಿರುವ ಡಾ|| ವಿಜಯದಬ್ಬೆಯವರು —"ಇದು ಹಿಂದೆ ಮಲ್ಲಿನಾಥ ಬಸದಿಯಾಗಿತ್ತೆಂಬ ಐತಿಹ್ಯವಿದೆ. ಈಗ ಈ ಪ್ರದೇಶ ಹಾಳು ಬಿದ್ದ ದೇವಾಲಯಗಳು ಅವಶೇಷಗಳಿಂದ ತುಂಬಿದೆ. ದೇವಾಲಯದ ಮೇಲ್ಭಾಗದ ಬಸವಣ್ಣ ಮತ್ತು ಮೇಲ್ಭಾಗದ ಕಟ್ಟಡ ತೀರಾ ಇತ್ತೀಚಿನದು....ಖಾಲಿ ಬಿದ್ದಿರುವ ಪೀಠಗಳು, ಪೀಠಗಳಲ್ಲಿ ತಂದು ತುಂಬಿರುವಂತೆ ಕಾಣುವ ವಿಗ್ರಹಗಳು, ಮಲ್ಲಿಕಾರ್ಜುನ ದೇವಾಲಯದ ಗರ್ಭಗುಡಿಯ ಹೊರಗೆ ಕೂಡಿಸಿರುವ ಭಗ್ನಗೊಂಡ ಕಾರ್ತಿಕೇಯ, ಗಣಪತಿ ಈ ಎಲ್ಲವೂ ಹಟತೊಟ್ಟು ಇದನ್ನೊಂದು ಶಿವ ದೇವಾಲಯವಾಗಿಸಿದ್ದಿರಬೇಕು.—"ಎಂದು ಯೋಚಿಸುವಂತೆ ಮಾಡುತ್ತವೆ ಎಂದಿರುತ್ತಾರೆ. ಆದರೆ ಇದರ ಒಳ ವಿವರಗಳು ಸ್ಪಷ್ಟವಾಗುವುದಿಲ್ಲ ಎಂದಿದ್ದಾರೆ. [ನಾಗಚಂದ್ರ ಒಂದು ಅಧ್ಯಯನ ಪು ೧೯].

ಇದು ನಾಗಚಂದ್ರ ಕವಿ ನಿರ್ಮಿಸಿದ ಮಲ್ಲಿಜಿನಾಲಯವೇ ? ಎಂಬ ನಿಟ್ಟಿನಲ್ಲಿ ಯೋಚಿಸಿದ್ದ ವಿಜಯದಬ್ಬೆಯವರ ಸಮಸ್ಯೆ ಇಂದು ಪರಿಹಾರವಾಗಿದ್ದು, ಬಿಜಾಪುರದ ಬಳಿ ಇರುವ ಮಲ್ಲಿನಾಥ ಜಿನಾಲಯವು ನಾಗಚಂದ್ರ ಕವಿ ನಿರ್ಮಿಸಿದ್ದ ಮಲ್ಲಿಜಿನಾಲಯವೆಂದು ದೃಢಪಟ್ಟಿದೆ. ಈಚೆಗೆ ಮತ್ತೆ ಮಲ್ಲಿಕಾರ್ಜುನ ದೇವಾಲಯವನ್ನು ಅದರ ಕಮಿಟಿಯವರು ಶುಚಿಗೊಳಿಸಿರುವುದರಿಂದ ಅಲ್ಲಿಯ ವಿತಾನಗಳು, ದ್ವಾರಬಂಧದ ಶಿಲ್ಪಗಳು ನನ್ನ ಅಧ್ಯಯನಕ್ಕೆ ಸಹಕಾರವೊದಗಿಸಿ ದೇವಾಲಯದ ಹಲವಾಂಶಗಳನ್ನು ದೃಢಪಡಿಸಿವೆ. ಈ ಭವ್ಯ ಬಸದಿಯ ನಿರ್ಮಾಪಕನ ಬಗೆಗೆ ಮತ್ತೆ ಚಿಂತಿಸಿದಾಗ ಹಾಸನ ತಾಲ್ಲೂಕಿನ ಮುಗುಳೂರಿನ ಶಾಸನವೊಂದು ಇದರ ಬೆಳಕು ಚೆಲ್ಲಿದೆ. ಇದರಂತೆ ಹೊಯ್ಸಳರ ದೊರೆ ವಿಷ್ಣುವರ್ಧನನು ಆಳುತ್ತಿದ್ದಾಗ, ಅವನ ಪಾದಪದ್ಮೋಪಜೀವಿಯಾಗಿದ್ದ ಶ್ರೀಮನ್ಮಹಾಪ್ರಭು ಪೆರ್ಮಾಡಿಯ ವಂಶಸ್ಥನಾದ ಮೆಣಸಿನ ಮಾರಿಶೆಟ್ಟಿಯು ಈ ಬಸದಿಯನ್ನು ಕಟ್ಟಿಸಿದವನಿರಬೇಕೆಂದೂ ಊಹಿಸಬಹುದಾಗಿದೆ. [ಹಾ ೧೪, ಎಕ ೮] ಶಾಸನವು ಇವನನ್ನು "ಬಾನ್ಧವಜನ ಸರ್ವ ಭವ್ಯಕಲ್ಪಮಹೀರುಹ"ನೆಂದೂ, 'ಮಹಾತ್ಮ'ನೆಂದೂ, 'ತವದ ವಿಭೂತಿಯಂ ಪಡೆದವ'ನೆಂದೂ ಹೊಗಳಿದೆ. ಇವನು ಕಟ್ಟಿಸಿರುವ ಬಸದಿಯನ್ನು ಕುರಿತು 'ದೋರಸಮುದ್ರದ ನಡುವಿದು ಮೇರುಮಹೀಂಧರಮೆನಲ್ಕೆ ಮಾಡಿಸಿದಂ ಶ್ರೀಮಾರನುತ್ತುಂಗ ಜಿನಾಗಾರಮೆನಿಪ್ಪ ವಿಶ್ವಕರ್ಮ ನಿರ್ಮಿತಮೆನಿಪಲ್' ಎಂದಿದೆ. ಈ ಸಾಲುಗಳಲ್ಲಿರುವ ವಿಶೇಷಣಗಳು ಮೇಲೆ ವಿವರಿಸಿದ ದೇವಾಲಯವನ್ನು ನಿಖರವಾಗಿ ಸೂಚಿಸುತ್ತಿರುವುದು ಅಚ್ಚರಿಯ ಸಂಗತಿಯಾಗಿದೆ. ಅವೆಂದರೆ

೧. 'ಮೇರು ಮಹೀಧರ' ಮೆನಲ್ಕೆ—ಎಂದಿದ್ದು ದ್ವಾರಸಮುದ್ರದಲ್ಲಿನ ಮತ್ತ್ಯಾವ ಬಸದಿಗಳೂ ಬೆಟ್ಟದ ಮೇಲಿರುವುದಿಲ್ಲ, ಇಷ್ಟು ವಿಶಾಲವಾದುದ್ದಾಗಿಲ್ಲ.

೨. ಇದರಂತೆ 'ಉತ್ತುಂಗ ಜಿನಾಗಾರ'ವೆಂದಿರುವುದು 'ಶ್ರೇಷ್ಠ ಬಸದಿ', ಬೆಟ್ಟದ ಮೇಲೆ ಕಟ್ಟಿರುವುದೆಂಬುದನ್ನು ದೃಢಪಡಿಸುತ್ತಿದೆ.

೩. 'ವಿಶ್ವಕರ್ಮ ನಿರ್ಮಿತ ಮೆನಿಪಲ್' — ಎಂಬ ಉಲ್ಲೇಖವು, ದ್ವಾರಸಮುದ್ರದ ವಿಜಯಪಾರ್ಶ್ವನಾಥ ಬಸದಿಯನ್ನು ಬಿಟ್ಟರೇ ಬೇರಾವ ಬಸದಿಗೂ ಈ ವಿವರಣೆ ಹೋಲುವಂತಿಲ್ಲ. ಈ ಬಸದಿಯ ವಾಸ್ತು ವಿನ್ಯಾಸದ ಸೊಗಸು ಅಪೂರ್ವವೆಂದೂ ಮೇಲೆಯೇ ವಿವರಿಸಿದೆ. ಈ ಕಾರಣಗಳಿಂದ ಮಾರಿಸೆಟ್ಟಿಯು ಕಟ್ಟಿಸಿದ ಬಸದಿಯೇ ಇಂದು ಮಲ್ಲಿಕಾರ್ಜುನ ದೇವಾಲಯವಾಗಿದೆ ಎಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

ಈ ಮೆಣಸಿನ ಮಾರಿಶೆಟ್ಟಿಯು ಮಗುಳೂರಿನಲ್ಲಿಯೂ ಬಸದಿಯೊಂದನ್ನು [ಹಾ ೧೩] ಕಟ್ಟಿಸಿದ್ದ. ಇಂದು ಆ ಬಸದಿಯು ನಶಿಸಿದ್ದು ಅವಶೇಷಗಳು ಮಾತ್ರ ಉಳಿದಿವೆ.

ಈ ಬೆಟ್ಟದ ಬಳಿಯ ಸಿದ್ದಾಪುರದ ವೀರಭದ್ರ ದೇವಾಲಯದ ಶಾಸನವು [ಬೇ ೪೩, ಎಕ ೯] ಕ್ರಿ.ಶ. ೧೨೮೫ರಲ್ಲಿ ಅಲ್ಲಿದ್ದ ಪ್ರಸಿದ್ಧ ಕಾಳಮುಖಯತಿಯೊಬ್ಬನನ್ನು ಉಲ್ಲೇಖಿಸಿದೆ. ಇದರಿಂದ ಬಹುಶಃ ಈ ಸುಮಾರಿನಲ್ಲೇ ಈ ಭಾಗವೆಲ್ಲ ಶೈವಮತದ ಪ್ರಭಾವಕ್ಕೆ

ಸಿಲುಕಿ, ಮತಾಂತರ ಹೊಂದಿದ್ದು, ಆ ಕಾರಣದಿಂದಲೇ ಸುಂದರ ಬಸದಿಯನ್ನು ನಾಶಪಡಿಸದೇ, ಅದನ್ನೇ ಶಿವಾಲಯವಾಗಿ ಪರಿವರ್ತಿಸಿಕೊಂಡಿದ್ದಿರಬೇಕೆಂದು ಊಹಿಸಬಹುದಾಗಿದೆ. ಒಟ್ಟಿನಲ್ಲಿ ಪುಷ್ಪಗಿರಿಯ ಮಲ್ಲಿಕಾರ್ಜುನ ದೇವಾಲಯವು ಹೊಯ್ಸಳರ ಕಾಲದ ಜೈನ, ವೈಷ್ಣವ ಮತ್ತು ಶೈವ ಅವಶೇಷಗಳ ಸಮ್ಮಿಳಿತದಿಂದ ಉಂಟಾಗಿರುವ ಒಂದು ಭವ್ಯ ದೇವಾಲಯವಾಗಿದೆ.

ಈ ಲೇಖನವನ್ನು ಸಿದ್ಧಪಡಿಸುವಲ್ಲಿ ನನಗೆ ಸಹಕರಿಸಿದ ಶ್ರೀ ಕೆ. ಆರ್. ಗಣೇಶ್‌ರವರಿಗೂ ಸೋದರಿ ಕು. ಸ. ಅಪರ್ಣ ರವರಿಗೂ, ಹಳೇಬೀಡಿನ ಸೋದರಿ ವೇದಾವತಿಯವರಿಗೂ ಮತ್ತು ಛಾಯಾಚಿತ್ರಗಳನ್ನು ಒದಗಿಸಿಕೊಟ್ಟಿರುವ ಅ. ಲ. ನರಸಿಂಹನ್‌ರವರಿಗೂ ಋಣಿಯಾಗಿದ್ದೇನೆ.

ಚಂದನ್ (ಸಿಲ್ವಿಯಾ)*

# ಹರಿಹರದ ಸಂಗಮೇಶ್ವರ ದೇವಾಲಯದ ಪರಿಚಯ

ಸಾಮಾನ್ಯವಾಗಿ ಐತಿಹಾಸಿಕವಾಗಿಯೂ ಪೌರಾಣಿಕವಾಗಿಯೂ ಪ್ರಸಿದ್ಧವಾಗಿರುವ ಹರಿಹರದ ಹೆಸರು ನಮಗೆಲ್ಲರಿಗೂ ಅಲ್ಲಿಯ ಬೃಹತ್ ದೇವಾಲಯವಾಗಿರುವ ಹರಿಹರೇಶ್ವರ ದೇವಾಲಯದ ನೆನಪು ಮಾಡಿ ಕೊಡುತ್ತದೆ. ಇದು ಹೊಯ್ಸಳರ ಕಾಲದ ಭವ್ಯ ಕಲಾಕೃತಿಯಾಗಿರುವುದು ನಿಜ, ಆದರೆ ಹರಿಹರವು ಹಿಂದಿನಿಂದಲೂ ಪವಿತ್ರ ಕ್ಷೇತ್ರವೆಂದೂ, ದಕ್ಷಿಣ ಕಾಶಿ ಎಂದೂ ಪ್ರಸಿದ್ಧವಾಗಿರುವ ಇಲ್ಲಿ ಹರಿಹರೇಶ್ವರ ದೇವಾಲಯವನ್ನು ಹೊರತುಪಡಿಸಿ ಪುರಾತನ ಕಾಲದ ಇನ್ನೂ ಚಿಕ್ಕ ಪುಟ್ಟ ದೇವಾಲಯಗಳಿವೆ. ಹರಿಹರೇಶ್ವರ ದೇವಾಲಯದ ಶಿಲ್ಪಕಲೆ ಹಾಗೂ ವಿಸ್ತಾರವು ಇಂತಹ ಸಣ್ಣ ಪುಟ್ಟ ದೇವಾಲಯಗಳನ್ನು ಇತಿಹಾಸಕಾರರಿಂದ ದೂರವಿರಿಸಿರುವುದೇ ಇದಕ್ಕೆ ಮುಖ್ಯ ಕಾರಣವಿರಬೇಕು. ಈಗ ನಾನಿಲ್ಲಿ ಹರಿಹರ ತುಂಗಾಭದ್ರಾ ಹಾಗೂ ಕುಮುದ್ವತಿ ನದಿಗಳ ಸಂಗಮದಲ್ಲಿ ಆಗಲೇ 90ರಷ್ಟು ಭೂಗತ ಹೊಂದಿರುವ ಒಂದು ಸಣ್ಣ ದೇವಾಲಯದ ಕಡೆ ನಿಮ್ಮ ಗಮನ ಸೆಳೆಯಲು ಇಚ್ಛಿಸುತ್ತೇನೆ.

ಸದರಿ ದೇವಾಲಯವು ಹರಿಹರದ ನದಿ ತಟದಲ್ಲಿ ನದಿಯ ಹರಿಯುವ ಕಡೆಯಿಂದ ೧೦–೧೨ ಅಡಿಗಳಷ್ಟೇ ದೂರದಲ್ಲಿದೆ. ಆದರೂ ಈ ದೇವಾಲಯ ವರ್ಷದ ಹೆಚ್ಚಿನ ದಿನಗಳಲ್ಲಿ ಜಲ ಸಮಾಧಿ ಹೊಂದಿರುತ್ತದೆ. ಬೇಸಿಗೆ ಕಾಲ ಬಂದಾಗ ನೀರಿನ ಮಟ್ಟ ಇಳಿದಾಗ ದೇವಾಲಯದ ಶಿಖರವಷ್ಟೇ ಕಂಡು ಬರುತ್ತದೆ. ಈಗಲೂ ದೇವಾಲಯದ ಭಕ್ತಾದಿಗಳ ಕೃಪೆಯೇ ಈ ದೇವಾಲಯ ಇನ್ನೂ ಉಳಿದಿರಲು ಕಾರಣವಾಗಿದೆ. ಎಲ್ಲಾ ನೀರು ಇಳಿದು ಹೋದ ನಂತರ ಸಂಗಮೇಶ್ವರನ ಭಕ್ತಾದಿಗಳು ದೇವಾಲಯದ ದ್ವಾರಕ್ಕೆ ಬಂದು ಬಿದ್ದಿರುವ ಮರಳು ಕೆಸರು ಕಸ ಕಡ್ಡಿಗಳನ್ನು ತೆಗೆದು ದೇವಾಲಯ ಸ್ವಚ್ಛ ಗೊಳಿಸಿ ಪೂಜೆಗೆ ಯೋಗ್ಯ ಮಾಡುತ್ತಾರೆ. ಈ ದೇವಾಲಯವನ್ನು ಇಲ್ಲಿಯ ಜನರು ಸಂಗಮೇಶ್ವರ ದೇವಾಲಯವೆಂದೇ ಕರೆಯುತ್ತಾರೆ. ಇಲ್ಲಿ ವರುಷಕ್ಕೊಮ್ಮೆ ಚಿಕ್ಕಮಟ್ಟದ ಜಾತ್ರೆ ಶಿವರಾತ್ರಿಯಾದ ನಂತರದ ದಿನಗಳಲ್ಲಿ ನಡೆಯುತ್ತದೆ. ಈ ಬಗ್ಗೆ ಕೆಲವು ಜನರು ಇದನ್ನು ಮಹೇಶ್ವರನ ಜಾತ್ರೆ ಎಂದು ಕರೆಯುವುದುಂಟು.

ಸದರಿ ದೇವಾಲಯವು ಕಲ್ಲಿನ ಚಿಕ್ಕ ದೇವಾಲಯವಾಗಿದ್ದು ಇದರ ಒಳಗೆ ಅಂದರೆ ಗರ್ಭ ಗುಡಿಯಲ್ಲಿ ಒಂದು ಶಿವಲಿಂಗವಿದೆ. ಎದುರಿಗೆ ಒಂದು ನಂದಿ ವಿಗ್ರಹವಿದೆ, ದೇವಾಲಯದ ಶಿಖರ ಪಿರಮಿಡ್ ಆಕಾರವಿದ್ದು ಭಕ್ತರು ಆಗಾಗ್ಗೆ ಇದಕ್ಕೆ ಸುಣ್ಣ ಬಳಿದು ಅದರ ನೈಜ ಕಲಾಕೃತಿಗಳು ಮುಚ್ಚಿ ಹೋಗಿವೆ. ಒಬ್ಬ ಮನುಷ್ಯ ಒಳಗೆ ಹೋಗಬಹುದಾದಷ್ಟೇ ಮುಖದ್ವಾರವನ್ನು ಸ್ವಚ್ಛಗೊಳಿಸಿದುದರಿಂದ ಇದರ ದ್ವಾರ ಬಾಗಿಲು ಹೊರ

* ಶ್ರವಣ್ ಟುಟೋರಿಯಲ್ಸ್ ನಂ., 312, 'ಇ' ವಿಭಾಗ ನಡುವಲ್‌ಪೇಟೆ, ಹರಿಹರ-577601

ಆವರಣದ ಗೋಡೆಗಳೆಲ್ಲವೂ ಮಣ್ಣು ಕಸ ಕಡ್ಡಿಗಳಿಂದ ಮುಚ್ಚಿ ಯಾವ ಶಾಸನಾಧಾರಗಳನ್ನೂ ಪಡೆಯುವುದು ಕಷ್ಟವಾಗಿದೆ. ಆದರೂ ೧೧ನೇ ಶತಮಾನದಲ್ಲಿ ಚಾಲುಕ್ಯ ವಿಕ್ರಮ ಜಗದೇವ ಮಲ್ಲನ ಒಂದು ಶಾಸನ ಈಗಾಗಲೇ ಇತಿಹಾಸಕಾರರು ಓದಿರುವುದು ಇದಕ್ಕೆ ಸಂಬಂಧ ಪಟ್ಟದೆ ಎಂಬುದು ನನ್ನ ಊಹೆ. ಈ ಶಾಸನದ ಪ್ರಕಾರ ಗುಹಾರಣ್ಯ, ದಕ್ಷಿಣ ಕಾಶಿ ಎಂದು ಪ್ರಸಿದ್ಧವಾದ ಕೂಡಲೂರು ಕ್ಷೇತ್ರದಲ್ಲಿ ತಪಸ್ಸಿಗಾಗಿ ಬರುವ ಋಷಿ ಗಳಿಗೆ ಯೋಗೀಶ್ವರ ದೇವಾಲಯವಿತ್ತೆಂದೂ, ಈ ದೇವಾಲಯಕ್ಕೆ ಜಗದೇವ ಮಲ್ಲನು ಬೆಳ್ವೊಡಿ ಹಾಗೂ ಕೇಕರಕೊಳ (ಕಕ್ಕರಗೋಳದ) ವ್ಯವಸಾಯ ಜಮೀನನ್ನು ದತ್ತಿ ಬಿಟ್ಟಿರುವುದಾಗಿಯೂ ತಿಳಿದು ಬರುತ್ತದೆ.

ಕೂಡಲೂರು ಎಂದರೆ ಕೂಡಲಿ ಅಥವಾ ನದಿಗಳ ಸಂಗಮ ಪ್ರದೇಶವೆಂಬ ಅರ್ಥವನ್ನು ಕೊಡುತ್ತದೆ. ಮೂರು ನದಿಗಳು ಈ ಪ್ರದೇಶದಲ್ಲಿ ಸಂಗಮಗೊಳ್ಳುವುದ ರಿಂದ ಈ ಹೆಸರು ಈ ಪ್ರದೇಶಕ್ಕೆ ಒಪ್ಪಿಗೆಯಾಗಿದೆ. ಎರಡನೆಯದಾಗಿ ಕೂಡಲೂರು ಹಾಗೂ ಹರೀಪಪುರ ಅಥವಾ ಹರಿಹರ ಎರಡೂ ಒಂದೇ ಆಗಿವೆಯೇ ? ನನ್ನ ಅನಿಸಿಕೆ ಪ್ರಕಾರ ಹರೀಪಪುರ ಎಂದರೆ ನಗರ ಪ್ರದೇಶ ವಾಗಿದೆ. ಶಾಸನಗಳಲ್ಲಿ ಕಂಡು ಬರುವ ಕೂಡಲೂರು ಈ ನಗರ ವ್ಯಾಪ್ತಿಗೆ ಸೇರಿದ ಒಂದು ಚಿಕ್ಕ ಗ್ರಾಮವಾಗಿರಲೂ ಬಹುದು. ಈಗ ಸಂಗಮೇಶ್ವರ ದೇವಾಲಯವಿರುವ ಪ್ರದೇಶವೇ ಕೂಡಲೂರು ಗ್ರಾಮವಾಗಿರಬಹುದು. ನದಿಯ ಪಾತ್ರ ಅಗಲವಾದಂತೆ ಈ ಗ್ರಾಮ ನಾಶ ವಾಗಿರಬೇಕು. ಸಂಗಮೇಶ್ವರ ದೇವಾಲಯವು ಭೂ ಸಮಾಧಿಯಾಗಿರುವುದನ್ನು ಹಾಗೂ ಇದು ಮಳೆಗಾಲ ದಲ್ಲಿ ಪೂರ್ತಿಯಾಗಿ ಜಲಸಮಾಧಿ ಹೊಂದುತ್ತಿರುವುದನ್ನು ಗಮನದಲ್ಲಿಟ್ಟುಕೊಂಡರೆ ಈ ಪ್ರದೇಶದಲ್ಲಿ ಒಂದು ಚಿಕ್ಕ ಗ್ರಾಮವೇ ನಾಶವಾಗಿದ್ದಿರಬೇಕು. ಉತ್ಖನನಕಾರರು ಈ ಬಗ್ಗೆ ಆಸಕ್ತಿ ವಹಿಸಿದಲ್ಲಿ ಹರಿಹರದಲ್ಲಿಯ ಈ ಸಂಗಮೇಶ್ವರನ ದೇವಾಲಯದ ಬಳಿ ಸಮೀಕ್ಷೆ ನಡೆಸಿದಲ್ಲಿ ಹರಿಹರದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯ ವನ್ನೇ ಬರೆಯಬಹುದು.

ಡಾ|| ಅ. ಸುಂದರ*

# ಹಿಂದೆ ವರದಿಯಾದ ಹಿರೆಜಂತಕಲ್ಲಿನ ಶಿಲಾಮೂರ್ತಿಗಳು ಬೌದ್ಧಶಿಲ್ಪಗಳೆ ?

ಹಿಂದಿನ ಹೈದರಾಬಾದ್ ಸಂಸ್ಥಾನದ ಪುರಾತತ್ವ ಇಲಾಖೆಯು ೧೯೩೦ರಲ್ಲಿ ಪ್ರಕಟಿಸಿದ ತನ್ನ ೧೯೨೭–೨೮ನೆಯ ವಾರ್ಷಿಕ ವರದಿಯಲ್ಲಿ ಲಿಯೊನಾರ್ಡ್‌ಮನ್ ಅವರು ದಿನಾಂಕ ೨೭ ಸೆಪ್ಟೆಂಬರ್ ೧೯೨೭ರಂದು ರಾಯಚೂರು ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಹಿರೆ ಜಂತಕಲ್ಲಿನಲ್ಲಿ ಶೋಧಿಸಿದ ಒಂದು ಸಾಲಿನ ಎಂಟು ಚಿತ್ರ ಗಳ ಒಂದು ಶಿಲ್ಪ ಪಟ್ಟಿಕೆಯ ಬಗ್ಗೆ ರೇಖಾ ಚಿತ್ರ ಸಹಿತ ಅವರ ಟಿಪ್ಪಣಿಯನ್ನು ಪುಟ ೩೨ರಲ್ಲಿ ಪ್ರಕಟಿಸಿದೆ. ಈ ಶಿಲ್ಪಗಳು ಈ ಹಳ್ಳಿಯ ದಕ್ಷಿಣ ಬದಿಯಲ್ಲಿರುವ ಗುಡ್ಡದ ಮೇಲಿನ ಒಂದು ನೈಸರ್ಗಿಕ ಗವಿಯೊಳಗೆ ಒಂದು ಬಂಡೆಯ ಮೇಲೆ ಇವೆ. ಈ ಶಿಲ್ಪಗಳಲ್ಲಿ (ಎಡದಿಂದ ಬಲಕ್ಕೆ) ಮೊದಲನೆಯದು "ನಿಸ್ಸಂಶಯವಾಗಿ ಸರಳ ವಾಗಿ ಅಲಂಕೃತವಾದ ಒಂದು ಪೀಠದ ("ಚಬುತರ") ಮೇಲೆ ಅಡ್ಡಗಾಲು ಹಾಕಿ (ಪದ್ಮಾಸನದಲ್ಲಿ) ಕುಳಿತ ಬುದ್ಧ"ನೆಂದು, ಎರಡನೆಯದು ಧರಿಸಿದ ಕಿರೀಟ ಮತ್ತು ಪಕ್ಕದಲ್ಲಿರುವ ಗಿಡ್ಡ ವ್ಯಕ್ತಿಯನ್ನು ಗಮನಿಸಿ ಒಬ್ಬ ರಾಜನದೆಂದು, ಮೂರನೆಯದು ಒಬ್ಬ ದಿವಾನನೆಂದು, ನಾಲ್ಕನೆಯದು ಒಂದು ಸ್ತ್ರೀಯೆಂದು, ಐದನೆಯದು ಒಬ್ಬ ಸಾಧುವೆಂದು ಆರು ಮತ್ತು ಏಳನೆಯದು ಮತ್ತೊಬ್ಬ ರಾಜ ಮತ್ತು ಅವನ ಹೆಂಡತಿಯೆಂದು ಇವೆಲ್ಲ ಶಿಲ್ಪಗಳಿಗಿಂತ ದೊಡ್ಡದಾಗಿಯೂ ವಿಚಿತ್ರ ವಾಗಿಯೂ ಇರುವ ಎಂಟನೆಯದು ತಾನು ಒಂದೇ ಒಂದು ಸೂಚನೆ ಮಾಡುವುದಾದರೆ ಒಬ್ಬ ರಾಕ್ಷಸನೆಂದು ಮನ್ ಅವರು ಗುರುತಿಸಿದ್ದಾರೆ. ಇವುಗಳ ಕೆಳಗಿರುವ ಹಳಗನ್ನಡದಲ್ಲಿಯ ಒಂದೆರೆಡು ಸಾಲಿನ ಶಾಸನಗಳನ್ನು "ಬುದ್ಧೈ ಪಿದಶಯ ನಮಃ ("ಓ ಬುದ್ಧ ದೇವನೆ ನಾವು ನಿನ್ನನ್ನು ಪೂಜಿಸುತ್ತೇವೆ"), ಎರಡನೇ ಸಾಲು "ನಗರವಿ ನಮಃ ವೀರ (ನಗರದ ಮುಖ್ಯಸ್ಥನು ಪ್ರಾರ್ಥಿಸುತ್ತಾನೆ" ಮತ್ತು ಆರನೆ ಚಿತ್ರದ ಕೆಳಗೆ "ರಂಗ ನಮಃ ಎಂದು ಓದಿದ್ದಾರೆ. ಇವಲ್ಲದೆ, ಇತರೆ ದೇವತೆಗಳ ತಲೆಗಳನ್ನು ಹಿಂಬದಿಯ ಬಂಡೆಯ ಮೇಲೆ ಬಿಡಿಸಲಾಗಿದ್ದು ಹೊರಗಿನ ಒಂದು ಬಂಡೆಯ ಮೇಲೆ ಹೆಚ್ಚಿನ ಶಾಸನಗಳು ಮತ್ತು ರೇಖಾ ಚಿತ್ರಗಳು ಇವೆ ಎಂದು ಹೇಳಿದ್ದಾರೆ.

೧೯೭೧–೭೨ರಲ್ಲಿ ಗಂಗಾವತಿ ತಾಲ್ಲೂಕಿನ ಎಲ್ಲ ಹಳ್ಳಿಗಳಲ್ಲಿಯ ಪುರಾತತ್ವ ಅವಶೇಷಗಳ ಶೋಧನ ಕಾರ್ಯವನ್ನು ನಡೆಸುತ್ತಿರುವಾಗ ಮನ್ ಅವರ ವರದಿ ಯನ್ನು ಗಮನದಲ್ಲಿಟ್ಟುಕೊಂಡು ಹಿರೆ ಜಂತಕಲ್ಲನ್ನು ಪರಿಶೀಲಿಸಿದೆ. ಗುಡ್ಡದ ಬದಿಯಲ್ಲಿ ನೂತನ ಶಿಲಾಯುಗ (ಕ್ರಿ.ಪೂ. ೨೦೦೦–೮೦೦) ಮತ್ತು ಬೃಹತ್ ಶಿಲಾ ಯುಗ (ಸು. ಕ್ರಿ. ಪೂ. ೯೦೦–೨೦೦ ಸಂಸ್ಕೃತಿಗಳ ಅವಶೇಷಗಳ ಒಂದು ಪ್ರಾಚೀನ ನೆಲೆಯನ್ನು ಶೋಧಿಸ ಲಾಯಿತು.ಮತ್ತು ಗುಡ್ಡದ ಮೇಲೆ ಉಲ್ಲೇಖಿಸಿದ ಶಿಲ್ಪ ಗಳನ್ನು ಪರೀಕ್ಷಿಸಲಾಯಿತು.

ಮನ್ ಅವರು ತಿಳಿಸಿದಂತೆ ಗವಿಯೊಳಗಿನ ಬಂಡೆಯಲ್ಲಿ ಕೆತ್ತಿದ ಒಂದು ಕಟ್ಟೆಯ ಮೇಲೆ ಒಂದು

* ಪ್ರಾಧ್ಯಾಪಕರು ಪ್ರಾಚೀನ ಭಾರತ ಇತಿಹಾಸ ಮತ್ತು ಶಾಸನ ವಿಜ್ಞಾನ ಅಧ್ಯಯನ ವಿಭಾಗ, ಕ.ವಿ.ವಿ. ಧಾರವಾಡ.

ಸಾಲಿನಲ್ಲಿ ಏಳು ವ್ಯಕ್ತಿಗಳ ಚಿತ್ರಗಳಿವೆ. ಈ ಸಾಲಿನ ಎಡಬದಿಯಲ್ಲಿ ಮತ್ತು ಉಳಿದ ಬದಿಗಳ ಬಂಡೆಗಳ ಮೇಲೂ ಮತ್ತು ಬಿಡಿಯಾಗಿ ದೇವ-ದೇವಿಯರ ಶಿಲ್ಪ-ಗಳಿವೆ. ವ್ಯಕ್ತಿಗಳ ಸಾಲಿನ ಕೆಳಗಿನ ವಿಜಯನಗರೋ-ತ್ತರ ಕಾಲದ ಕನ್ನಡ ಶಾಸನಗಳಿವೆ.

ಬುದ್ಧನೆಂದ ಗುರುತಿಸಲಾದ ಮೊದಲನೆಯದು ಸಿದ್ಧಾಸನದಲ್ಲಿ ಕುಳಿತ ಒಬ್ಬಯೋಗಿ. ಎಡ ಅಂಗೈಯಲ್ಲಿ ಪ್ರಾಯಶಃ ಶಿವಲಿಂಗವನ್ನಿಟ್ಟುಕೊಂಡು ಬಲಗೈಯಿಂದ ಅರ್ಚಿಸುತ್ತಿರುವಂತೆ ಕಾಣುತ್ತದೆ. ವೃತ್ತಾಕಾರವಾಗಿ ಎಳೆಗಳನ್ನು ಹೆಣೆದ ದಟ್ಟ ಜಟಾಮುಕುಟ, ಕರ್ಣಕುಂಡಲ ಎರಡೆಳೆಯ ರುದ್ರಾಕ್ಷಿಮಾಲೆ, ರುದ್ರಾಕ್ಷಿತೋಳ್ಬಂದಿ, ರುದ್ರಾಕ್ಷಿ ಕಡಗವನ್ನು ಧರಿಸಿದ್ದಾನೆ. ನೆಟ್ಟಗೆ ಮೊನೆಚಾದ ತುದಿಗಳನ್ನು ಮೇಲ್ಮುಖವಾಗಿ ನಿಲ್ಲಿಸಿದ ಕಠಾರಿಗಳ ಪೀಠದ ಮೇಲೆ ಯೋಗಿಯು ಕುಳಿತಿದ್ದಾನೆ. ಆದ್ದರಿಂದ ಈ ವ್ಯಕ್ತಿಯು ಒಬ್ಬ (ವೀರ?) ಶೈವ ಹಠಯೋಗಿ ಯೆಂದು ಗುರುತಿಸಬಹುದು.

ಈ ಯೋಗಿಯ ಎಡ ಬದಿಯಲ್ಲಿ ದರ್ಶನ ಮಾಡು-ತ್ತಿರುವ ಒಬ್ಬ ಗಣ್ಯ ಪುರುಷನು ಇವನ ಎಡ ಪಕ್ಕದಲ್ಲಿ ಬಹುಶಃ ಇವನ ಪತ್ನಿಯರಾದ ಇಬ್ಬರು ಸ್ತ್ರೀಯರು ಕೈಮುಗಿದುಕೊಂಡು ನಿಂತಿದ್ದಾರೆ. ಇವರ ವೇಷ ಭೂಷಣಗಳನ್ನು ನೋಡಿದಾಗ ಈ ಪ್ರದೇಶದ ಆಡಳಿ-ತಾಧಿಕಾರಿಯೆಂದು ಕಾಣುತ್ತದೆ. ಇವರ ತರುವಾಯ ಎಡ ಬದಿಗೆ ನಿಂತುಕೊಂಡಿರುವ ಕೇವಲ ಕೌಪೀನವುಳ್ಳ ಒಬ್ಬ ಗಡ್ಡ ಜಟಾಧಾರಿ, ಒಬ್ಬಯತಿಯು ಎಡ ಅಂಗೈಯ ಮೇಲೆ ಇಷ್ಟ ಲಿಂಗವನ್ನಿಟ್ಟುಕೊಂಡು ಬಲಗೈಯಿಂದ ಅರ್ಚಿಸುತ್ತಿದ್ದಾನೆ. ಇವನ ಎಡ ಬದಿಗೆ ಗಣ್ಯ ದಂಪತಿಗಳು ಕೈಮುಗಿದುಕೊಂಡು ನಿಂತಿದ್ದಾರೆ. ಇವರು ಮೊದಲಿನ ಗಣ್ಯ ವ್ಯಕ್ತಿಗಳನ್ನು ಹೋಲುತ್ತಾರೆ.

ಸಿದ್ಧಾಸನದಲ್ಲಿ ಕುಳಿತ ಯೋಗಿಯ ಕೆಳಗೆ ಒಂದು ಸಣ್ಣ ಕನ್ನಡ ಶಾಸನವಿದೆ. ಆದರೆ ಇದರಲ್ಲಿ ಹಲವಾರು ಅಕ್ಷರಗಳು ಸ್ಪಷ್ಟವಾಗಿಲ್ಲ ದೋಷಪೂರಿತ ಶಬ್ದಗಳಿವೆ. ಆದ್ದರಿಂದ ಈ ಶಾಸನದ ಸಂಪೂರ್ಣ ಪಾಠ ಸರಿಯಾಗಿ ತಿಳಿದಿಲ್ಲ. ಒಟ್ಟಿನಲ್ಲಿ ಪರುಬರೂಪುರದ ಸಿದ (ದ್ಧ) ಲಿಂಗ ಮತ್ತು (ಶಕವರ್ಷ) ೧೬೮೪ (=ಕ್ರಿ. ಶ.೧೭೬೨) ಎಂಬುದಷ್ಟು ತಿಳಿದಿದೆ. ಆದ್ದರಿಂದ ಕಠಾರಿ ಪೀಠದ ಮೇಲೆ ಕುಳಿತ ಯೋಗಿಯು ೧೮ನೇ ಶತಮಾನದ ಉತ್ತರಾರ್ಧದಲ್ಲಿ ಈ ಭಾಗದಲ್ಲಿದ್ದ ಸಿದ್ದಲಿಂಗ ಯೋಗಿ ಗಳೆಂದು ನಿಸ್ಸಂದೇಹವಾಗಿ ಗುರುತಿಸಬಹುದು. ಉಳಿದ ಚಿತ್ರಗಳ ಕೆಳಗೂ ಅವರವರ ಹೆಸರುಗಳಿವೆ. ಸಿದ್ದಲಿಂಗ ಯೋಗಿಯು ಎಡಬದಿಗಿರುವ ಗಣ್ಯವ್ಯಕ್ತಿಯ ಹೆಸರು ಬಹುಶಃ "ಬದ್ದೆಯ್ಯ" ಅವನ ಪತ್ನಿಯರಲ್ಲಿ ಒಬ್ಬಳಲ್ಲಿ ನಾಗಂಮ ೫ನೆಯ ಯತಿಯ ಚಿತ್ರ ವು"ಸಂಕರದೇವರು" ಮತ್ತೊಬ್ಬ ಗಣ್ಯವ್ಯಕ್ತಿಯು "ನಗಪ್ರಿಯಣ"(?)

ಒಟ್ಟಿನಲ್ಲಿ ಇವುಗಳು ಚೌದ್ದ ಶಿಲ್ಪಿಗಳಾಗಿರದೆ ೧೮ ನೇ ಶತಮಾನದ ಉತ್ತರಾರ್ಧ ವೀರಶೈವ ಯತಿಗಳ ಮತ್ತು ಅವರ ಭಕ್ತರ ಚಿತ್ರಗಳಾಗಿವೆ.

ಇನ್ನು ರಾಕ್ಷಸನೆಂದು ಗುರುತಿಸಿದ ೮ನೇ ಯ ಚಿತ್ರವು ಚತುರ್ಭುಜೆ ಮಹಿಷಾಸುರ ಮರ್ದಿನಿಯ| ವಿರಭದ್ರನ ಮೂರ್ತಿ, ಮೂರು ಕಾಲುಗಳುಳ್ಳ ಒಬ್ಬ ವಿಚಿತ್ರ ಪುರುಷ, ಮತ್ತೊಂದು ಬದಿಯಲ್ಲಿ ದ್ವಿಮುಖ ನವಿಲು ವಾಹನ ಅಷ್ಟಭುಜ ದೇವತೆ (ಕಾರ್ತಿಕೇಯ?) ಅಷ್ಟಭುಜ ವೀರಭದ್ರ ಮೊದಲಾದ ದೇವರ ಶಿಲ್ಪಗಳಿವೆ. ಗವಿಯ ಹೊರಗೆ ಮುಂದೆ, ವೀರಭದ್ರನ ಗುಡಿಯಿತ್ತು.

ಮತ್ತೊಂದು ಬದಿಯಲ್ಲಿ ಹೊರಗೆ ಬಯಲು ಬಂಡೆಯು ಬಂಡೆಯ ಮೇಲೆ ಮನ್ ಅವರು ಗ್ರಾಫಿಟಿ ಹೇಳಿದ ಒಂದು ಅತ್ಯಂತ ಅಪರೂಪದ ದೇವತೆಯ ರೇಖಾ ಚಿತ್ರವಿದೆ. ಶಂಖ, ಚಕ್ರ, ಗದೆ, ಖಡ್ಗ, ಕಠಾರಿ ಮೊದಲಾದ ವಿವಿಧ ಆಯುಧಗಳನ್ನು ಧರಿಸಿದ ಈ ದೇವತೆಯು ತ್ರಿಮುಖ, ಮತ್ತು ಇಪ್ಪತ್ತು ಭುಜ-ಗಳುಳ್ಳವನಾಗಿದ್ದಾನೆ. ಬಲ ಬದಿಯ ಮುಖ ವರಾಹ, ಮುಂಬದಿಯದು ಸಿಂಹ ಮುಖ, ಎಡಬದಿಯದು ಗರುಡ ಮುಖ. ಆರು ಕಣ್ಣುಗಳು ಮುಂದಿನ ಮುಖದ ಎರಡು ಕಣ್ಣುಗಳಲ್ಲಿ ಬಲಬದಿಯದು ವರಾಹ ಮುಖದ ಕಣ್ಣು ಗಳಲ್ಲೊಂದಾಗಿದೆ. ಹೀಗೆಯೆ ಎಡಗಡೆಯದು. ಸೊಂಟ-ದಿಂದ ಕೆಳಬಾಗಿವೆ ಎದುರು ಬದುರು ಬಾಲವನ್ನೆತ್ತಿ ಕೊಂಡು ನಿಂತಿರುವ ಎರಡು ಸಿಂಹಗಳು. ಇವುಗಳ ತಲೆಗಳ ಭಾಗದಿಂದ ಮೇಲೆ ದೇವತೆ ಭಾಗ. ಕೀರಿಟ, ಹಾರ ಮೊದಲಾದ ಕೆಲವೇ ಆಭರಣಗಳಿಂದ ಅಲಂಕೃತ ನಾಗಿದ್ದಾನೆ. ಬಹುಶಃ ಮಧ್ವ ಸಂಪ್ರದಾಯದ

ಪ್ರಕಾರ ಈ ರೇಖಾ ಚಿತ್ರವು ಸಂಕರ್ಷಣ ಮತ್ತು ಜಯಾ ಇವರಿಂದ ಉಂಟಾದ ಪಂಚಮುಖಿ ಮುಖ್ಯ ಪ್ರಾಣ ದೇವರೆಂದು ಗುರುತಿಸಬಹುದು. ಈ ದೇವರ ಎಡಬದಿಗೆ ಪಗಡಿ ಧರಿಸಿದ ಕೈ ಮುಗಿದು ನಿಂತುಕೊಂಡ ಒಬ್ಬ ಭಕ್ತನ ಚಿತ್ರವಿದೆ.

ಮಂತ್ರಾಲಯದ ಹತ್ತಿರ ಘಾಣಧಾಳದ ಪಂಚ ಮುಖಿ ಮುಖ್ಯ ಪ್ರಾಣ ದೇವರು ಪ್ರಸಿದ್ಧ. ಇದರೊಡನೆ ಹೋಲಿಸಿದಾಗ ಈ ರೇಖಾಚಿತ್ರವು ಬಹುಶಃ ಪಂಚ ಮುಖಿ ಮುಖ್ಯ ಪ್ರಾಣ ದೇವರೆಂದು ಗುರುತಿಸಬಹುದು. ಆದರೂ ಭುಜಗಳ ಬಾಹುಳ್ಯ ದೇಹದ ಕೆಳಭಾಗವು ಎರಡು ಸಿಂಹಗಳು ಈ ಚಿತ್ರದ ವೈಶಿಷ್ಟ್ಯ ಒಟ್ಟಿನಲ್ಲಿ ಇದೊಂದು ಅನುಪಮ ರೇಖಾ ಚಿತ್ರ.

ಈ ರೇಖಾಚಿತ್ರ ಸಮೀಪದ ಬಂಡೆಗಳ ಮೇಲೆ ಶಾಸದ ಸಹಿತ ಜೈನ ತೀರ್ಥಂಕರ ಮತ್ತು ನಿಷಿಧಿಗಳ ಪೂರ್ಣ ಚಿತ್ರಗಳಿವೆ.

ಹೀಗೆ ಒಂದೆಡೆಯಲ್ಲಿಯ ಜೈನ, ಮಧ್ವ ಮತ್ತು ವೀರಶೈವ ಮತಗಳಿಗೆ ಸಂಬಂಧಿಸಿದ ಶಿಲ್ಪಗಳಿಂದ ಕೂಡಿದ ಈ ಸ್ಥಳವು ಮಹತ್ವದ್ದಾಗಿದೆ.

ಎಸ್.ಎಂ. ನಾಗಭೂಷಣ*

# ದೇವಲಾಪುರದ ವಾಸ್ತು ಶಿಲ್ಪ ವ್ಯಾಸಂಗ

'ದೇವಲಾಪುರ'ವು ಬಳ್ಳಾರಿಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಲ್ಲಿರುವ ಒಂದು ಪಾಳು ಬಿದ್ದ ಊರು. ಕೂಡ್ಲಿಗಿಯಿಂದ ನೈರುತ್ಯದಿಕ್ಕಿನಲ್ಲಿ ೬ ಕಿ. ಮೀ. ಅಂತರದಲ್ಲಿದೆ. ಕೊಟ್ಟೂರು ರಸ್ತೆಯಲ್ಲಿರುವ ಗಜಾಪುರದ ವರೆಗೆ ಬಸ್ಸಿನಲ್ಲಿ ಹೋಗಬಹುದು. ಅಲ್ಲಿಂದ ಆಗ್ನೇಯ ದಿಕ್ಕಿನಲ್ಲಿರುವ ಬಂಡಿಜಾಡಿನಲ್ಲಿ ಸುಮಾರು ೩ಕಿ.ಮೀ ಗದ್ದೆಗಳ ಮಧ್ಯೆ ನಡೆದು ಹೋಗಬೇಕು. ಸ್ವಲ್ಪ ದೂರದಲ್ಲಿ ಅಡವಿ, ಗುಡ್ಡಗಳ ಮಧ್ಯದಲ್ಲಿ ಶಿಲಾ ಮಂಟಪಗಳು, ಶಿಲಾ ದೇವಸ್ಥಾನ, ಮೇಲೆ ಬಿಳಿಯ ಗೋಪುರ ಕಂಗೊಳಿಸುತ್ತದೆ. ಆದರ ಹಿಂಬದಿಯ ಗುಡ್ಡದ ಮೇಲೆ ಕೋಟೆ, ಕೊತ್ತಲಗಳು ಕಾಣಿಸುತ್ತವೆ. ಅಲ್ಲಿಗೆ ಹೋಗಲು ರಸ್ತೆ ಇಲ್ಲ. ಕಾಡು ದಾರಿಯಲ್ಲಿ ಕಲ್ಲು, ಮುಳ್ಳು, ನೋಡಿಕೊಂಡು ೨ ಕಿ.ಮೀ. ನಿಧಾನವಾಗಿ ನಡೆದು ಹೋಗಬೇಕು. ದೇವಸ್ಥಾನದ ವಿಜಯನಗರ ಶೈಲಿಯ ಬೃಹದ್ಗಾಕಾರದ ದ್ವಾರ ಗೋಪುರ ಬಿದ್ದು ಹಾಳಾಗಿದೆ. ದೇವಸ್ಥಾನದ ಸುತ್ತ ಪ್ರಕಾರವಿದೆ, ಈ ದೇವಸ್ಥಾನವನ್ನು ಕುರಿ ಹಿಕ್ಕೆ ಲಿಂಗ, ವಸಂತರಾಯ ಎಂದು ಮುಂತಾಗಿ ಸ್ಥಳಿಕರು ಕರೆಯುತ್ತಾರೆ. ಶಾಸನದಲ್ಲಿ ವಸಂತ ಮಲ್ಲಿಕಾರ್ಜುನ ದೇವರೆಂದು ಉಲ್ಲೇಖಿಸಿದೆ. ದೇವಸ್ಥಾನದ ಸುತ್ತಲೂ ಸುಮಾರು ಅರ್ಧ ಕಿ. ಮೀ ದೂರದವರೆಗೆ ಪಾಳು ಬಿದ್ದ ಗ್ರಾಮ. ಸುಂದರ ಕಟ್ಟಡ ಗಳು, ಬಂಡೆಗಲ್ಲುಗಳು, ಬೀದಿಗಳ ಅವಶೇಷಗಳು ಹರಡಿವೆ. ಇದೊಂದು ಹಾಳೂರು ಎಂದು ಯಾರು ಬೇಕಾದರೂ ಹೇಳಬಹುದು.

ಈ ಗ್ರಾಮವನ್ನು ಸ್ಥಳಿಕರು ಹಾಳಗಜಾಪುರ ಎಂದು ಕರೆಯುವುದುಂಟು, ಆದರೆ ಶಾಸನದಲ್ಲಿ "ದೇವಲಾಪುರ"ವೆಂದು ಉಲ್ಲೇಖಿಸಿದೆ. ಉತ್ತರಾಭಿ ಮುಖವಾಗಿರುವ ದೇವಸ್ಥಾನ ಪ್ರಕಾರ ಹಾಳಾಗಿದ್ದರೂ, ಮಧ್ಯದಲ್ಲಿಯ ವಸಂತ ಮಲ್ಲಿಕಾರ್ಜುನ ದೇವಸ್ಥಾನ ಸುರಕ್ಷಿತವಾಗಿದೆ. ದೇವಸ್ಥಾನದ ನವರಂಗದ ಪೂರ್ವದ ದ್ವಾರದಲ್ಲಿ ವಿಜಯನಗರದರಸ ಸದಾಶಿವ ದೇವರಾಯ ಬರೆಸಿದ ಕಂಬ ಶಾಸನವಿದೆ. ಈ ಶಾಸನ ಸ್ಥಳೀಯ ಇತಿಹಾಸ ಹಾಗೂ ಸುತ್ತಣ ಸೀಮೆಯ ಗ್ರಾಮಗಳ ಉಲ್ಲೇಖಗಳು ಹಾಗೂ ದೇವಸ್ಥಾನಕ್ಕೆ ಅರ್ಪಿಸಿದ ದತ್ತಿ ವಿಚಾರಗಳನ್ನು ತಿಳಿಸುತ್ತದೆ. ದೇವಸ್ಥಾನದ ಉತ್ತರಕ್ಕೆ ಸುಂದರ "ಪುಷ್ಕರಣಿ" ಹಾಗೂ ಪೂರ್ವಕ್ಕೆ ವೀರಭದ್ರ ದೇವಸ್ಥಾನ, ದಕ್ಷಿಣಕ್ಕೆ ಮಟ್ಟೆಯ ಮೇಲಿರುವ ಕೋಟೆ ಇವು ಇಲ್ಲಿನ ಪ್ರಮುಖ ಸ್ಮಾರಕಗಳು. ಈ ಸ್ಮಾರಕಗಳು, ಪಾಳು ಬಿದ್ದ ಗ್ರಾಮ, ಶಾಸನ, ವಿಜಯನಗರ ಕಾಲದ ಸ್ಥಳೀಯ ಇತಿಹಾಸಕ್ಕೆ ಪುರಾವೆಗಳಾಗಿವೆ. ಸ್ಥಳನಾಮ:- "ದೇವಲಾಪುರ" ದೇವರಿಗೆ ಬಿಟ್ಟ ಪುರ> ದೇವರ ಪುರ, ದೇವಲಾಪುರ ಆಗಿರಬಹುದು. ಅಥವಾ ದೇವಾಂಗದವರ ಪುರ> ದೇವಾಂಗಪುರ "ದೇವಲಾಪುರ"ವಾಗಿರಬಹುದು. ಕ್ರಿ.ಶ. ೧೫೫೨ರ ಸ್ಥಳೀಯ ಶಿಲಾ ಶಾಸನದಲ್ಲಿ ದೇವಲಾಪುರವೆಂದು ಉಲ್ಲೇಖಿಸಿದ್ದು ಇಲ್ಲಿನ ದೇವರನ್ನು ವಸಂತಮಲ್ಲಿಕಾರ್ಜುನನೆಂದು ಕರೆದಿದೆ ; ಈ ಗ್ರಾಮವು ಮೊರಬ ಸೀಮೆಯ ಆಡಳಿತಕ್ಕೆ ಸೇರಿತ್ತೆಂಬುದನ್ನು ತಿಳಿಸುತ್ತದೆ.

---

* 'ಗುರುಕೃಪ' ಗಾಂಧಿನಗರ, ಕೊಟ್ಟೂರು,-೫೮೩೧೩೪

ವಸಂತರಾಯ, ಕುರಿಹಿಕ್ಕೆ ಲಿಂಗ, ಎಂಬ ನಾಮಗಳಿಂದ ಖ್ಯಾತನಾಗಿರುವ ಈ ದೇವಸ್ಥಾನವು ಉತ್ತರಾಭಿಮುಖ ವಾಗಿದ್ದು ಈ ದೇವಸ್ಥಾನ ಕ್ರಮವಾಗಿ ಗರ್ಭಗೃಹ, ಅಂತರಾಳ, ನವರಂಗ, ಮುಖ ಮಂಟಪಗಳನ್ನು ಹೊಂದಿದ್ದು, ಗ್ರಾನೈಟ್ ಶಿಲೆಯಿಂದ ನಿರ್ಮಿತವಾಗಿದೆ. ಗೋಪುರವನ್ನು ಮಾತ್ರ ಸುಟ್ಟ ಇಟ್ಟಿಗೆಗಳಿಂದ ನಿರ್ಮಿಸಿ ದ್ದಾರೆ. ದೇವಸ್ಥಾನದ ಸುತ್ತಲೂ ಪ್ರಾಕಾರವಿದ್ದು ಉತ್ತರದ ದ್ವಾರ ಗೋಪುರ ಬಿದ್ದು ಹಾಳಾಗಿದೆ. ದ್ವಾರ ಗೋಪುರದ ಎದುರು ನಿಂತಿದ್ದ ೫೦ ಅಡಿ ಎತ್ತರದ ದೀಪ ಸ್ತಂಭ ಬಿದ್ದು ತುಂಡಾಗಿದೆ. ಪ್ರಕಾರದ ಪೂರ್ವಕ್ಕೆ ಒಂದು ಸಣ್ಣ ದ್ವಾರವಿದೆ.

ಗರ್ಭಗೃಹವು ಸುಮಾರು ೮ ಅಡಿ ಚೌಕಾಕಾರ ದಲ್ಲಿದ್ದು ಇದರ ಮಧ್ಯದಲ್ಲಿ ಹುಟ್ಟು ಬಂಡೆಯಲ್ಲಿ ಶಿವಲಿಂಗವಿದೆ. ಗರ್ಭಗೃಹದ ದ್ವಾರ ಸುಮಾರು $4\frac{1}{2}$ ಅಡಿ ಎತ್ತರವಿದ್ದು ದ್ವಾರಬಂಧವು ಅನೇಕ ಪಟ್ಟಿಕೆ ಗಳಿಂದ ಕೂಡಿದೆ. ಲಲಾಟದಲ್ಲಿ ಯಾವ ಶಿಲ್ಪವೂ ಇಲ್ಲ. ದ್ವಾರಗಳಲ್ಲಿ ದ್ವಾರ ಪಾಲಕರ ಉಬ್ಬು ಶಿಲ್ಪಗಳಿವೆ.

ಅಂತರಾಳವು ಗರ್ಭಗೃಹದಷ್ಟೇ ವಿಸ್ತಾರವಾಗಿದ್ದು ಅಂತರಾಳಥ ದ್ವಾರಬಂದ ಸಹ ಸರಳವಾಗಿದ್ದು $4\frac{1}{2}$ ಅಡಿ ಎತ್ತರವಾಗಿದೆ. ದ್ವಾರದಲ್ಲಿ ಅನೇಕ ಶಾಖಾ ಪಟ್ಟಿಕೆಗಳಿವೆ. ಇಕ್ಕೆಲಗಳಲ್ಲಿ ದ್ವಾರ ಪಾಲಕರ ಉಬ್ಬು ಶಿಲ್ಪಗಳಿವೆ.

ನವರಂಗದ ಮಧ್ಯದ ಅಂಕಣ ವೇದಿಕೆ $\frac{1}{2}$ ಅಡಿ ಎತ್ತರವಾಗಿದ್ದು ಮೇಲೆ ಛತ್ತು ಚೌರಸಗಳಿಂದ ಕೂಡಿದೆ. ನವರಂಗದ ನಾಲ್ಕು ಕಂಬಗಳು ಕಲಾತ್ಮಕವಾಗಿವೆ. ಕಂಬ ಶಿಲ್ಪ ಕೆಳಭಾಗ ಚೌಕಾಕಾರವಾಗಿದ್ದು ಎರಡನೇ ಹಂತದಲ್ಲಿ ೧೬ ಹಾಗೂ ೩ನೇ ಹಂತದಲ್ಲಿ ಅಷ್ಟ ಕೋನಾಕೃತಿ ಹೊಂದಿದ್ದು ೪ನೇ ಹಂತದಲ್ಲಿ ಚೌಕಾಕೃತಿ ಗಳಲ್ಲಿ ಬದಿಗಳಲ್ಲಿ ದೇವತಾ ಉಬ್ಬು ಶಿಲ್ಪಗಳಿವೆ. ೫ನೇ ಹಂತದಲ್ಲಿ ಅನೇಕ ಬಳೆಗಳ ಹಾಗೂ ಕುಂಭ ಶಿಲ್ಪವನ್ನು ಹೊಂದಿದೆ. ಬೋದಿಗೆ ಸೇರಿಕೊಂಡಿದೆ. ನವರಂಗದ ನಾಲ್ಕು ಕಂಬಗಳಲ್ಲಿಯ ಮುಖ್ಯವಾದ ಉಬ್ಬು ಶಿಲ್ಪ ಗಳೆಂದರೆ, ನಂದಿ, ಭೈರವ, ಆದಿಶಕ್ತಿ, ಗಣಪತಿ, ನೃತ್ಯ ಸ್ತ್ರೀಯರು, ನವರಂಗದ ತೋರಣ ಸುಮಾರು ೭ ಅಡಿ ಎತ್ತರವಾಗಿದ್ದು, ದ್ವಾರ ಬಂಧದಲ್ಲಿ ಲತಾ ಸುರುಳಿ ಶಾಖೆ, ಸಿಂಹ ಶಾಖೆ ಹಾಗೂ ಪಟ್ಟಿಕೆಗಳಿದ್ದು ಲಲಾಟದಲ್ಲಿ ಅರಳಿದ ಕಮಲವಿದೆ. ದ್ವಾರಬಂಧದ ಬಂದಿಗಳಲ್ಲಿ ಚತುರ್ಭುಜ ಗದಾಧಾರಿ ದ್ವಾರಪಾಲಕರಿ ದ್ದಾರೆ. ಚತುರ್ಭುಜಗಳಲ್ಲಿ ಹಿಂಬದಿಯ ಕೈಗಳಲ್ಲಿ ತ್ರಿಶೂಲ, ಡಮರುಗಳಿದ್ದು, ಉಳಿದೆರಡು ಕೈಗಳಿಂದ ಗದೆಯನ್ನು ಕೆಳಮುಖವಾಗಿ ಹಿಡಿದು ದ್ವಾರದ ಕಡೆಗೆ ಪಾರ್ಶ್ವ ಭಂಗಿಯಲ್ಲಿ ನಿಂತಿದ್ದಾರೆ. ನವರಂಗದ ಎರಡು ಪಕ್ಕಗಳಲ್ಲಿ ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ದ್ವಾರಗಳಿವೆ. ನವರಂಗದಲ್ಲಿ ಅಂತರಾಳದ ದ್ವಾರದ ಹೊರಬದಿಗೆ ಎರಡು ಪಕ್ಕಗಳಲ್ಲಿ ಮೂರ್ತಿಗಳಿಲ್ಲದ ಎರಡು ಸಣ್ಣ ಗರ್ಭ ಗೃಹಗಳಿವೆ. ಇವನ್ನು ಗೌರಿ, ಗಣೇಶ ಗುಡಿಗಳೆಂದು ಹೇಳುತ್ತಾರೆ.

**ಸಭಾಮಂಟಪ :** ಸಭಾ ಮಂಟಪದ ಪ್ರಾಂಗಣ ವಿಶಾಲವಾಗಿದ್ದು ೧೬ ಕಲಾತ್ಮಕ ಕಂಬಗಳನ್ನೊಳ ಗೊಂಡಿದೆ. ಛತ್ತು ೨೦ ಅಡಿ ಎತ್ತರವಾಗಿದೆ. ಛತ್ತು ಗಳಲ್ಲಿ ಪದ್ಮ ಹಾಗೂ ಸರ್ಪ ವಿನ್ಯಾಸಗಳ ಉಬ್ಬು ಶಿಲ್ಪ ಗಳಿವೆ. ಈ ಉಬ್ಬು ಶಿಲ್ಪಗಳಿಗೆ ನಸುಕೆಂಪು ತೈಲವರ್ಣ ರೇಖೆಗಳನ್ನು ಬರೆದು ಅಂದ ಗೊಳಿಸಿದ್ದಾರೆ. ಇದಲ್ಲದೆ ಕಂಬ, ಬೋದಿಗೆ, ಶಿಲ್ಪಗಳಿಗೂ ಸಹ ತೈಲ ರೇಖಾಚಿತ್ರ ಗಳನ್ನು ಬರೆಯಲಾಗಿದೆ. ಸಭಾ ಮಂಟಪದ ೧೬ ಕಂಬ ಗಳು ಹಲವು ಶೈಲಿಗಳಲ್ಲಿದ್ದು, ಸುಂದರ ಹಾಗೂ ಮಹತ್ವದ ಉಬ್ಬು ಶಿಲ್ಪಗಳಿಂದ ಕೂಡಿವೆ. ಗ್ರಾನೈಟ್ ಕಲ್ಲಿನಲ್ಲಿ ಇಂತಹ ಸುಂದರ ಶಿಲ್ಪಗಳಿರುವುದು ತುಂಬಾ ವಿರಳ. ಕಂಬಗಳ ಕೆಳಭಾಗ ಒಂದನೇ ಹಂತ ೩ ಅಡಿ ಚೌಕಾಕಾರವಾಗಿದ್ದು ೨ನೇ ಹಂತದಲ್ಲಿ ೧೬ ಅಥವಾ ೮ ಕೋನಗಳು ಸುಂದರ ಸರಮುತ್ತುಗಳಿಂದ ಅಲಂಕರಿಸಿ ದ್ದಾರೆ. ೩ನೇ ಹಂತದಲ್ಲಿ ಚೌಕಾಕಾರವಾಗಿದ್ದು ನಾಲ್ಕು ಬದಿಗಳಿಗೆ ಉಬ್ಬು ಶಿಲ್ಪಗಳು ಮತ್ತು ೫ನೇ ಹಂತಗಳಲ್ಲಿ ಅನೇಕ ಬಳೆಗಳಿಂದ ಕುಂಭ ಅಥವಾ ಅಷ್ಟಕೋನ ಗಳನ್ನೊಳಗೊಂಡ ಬೋದಿಗೆ ಶಿಲ್ಪಕ್ಕೆ ಸೇರಿ ಕೊಂಡಿವೆ. ಈ ಶಿಲ್ಪಗಳಿಗೆಲ್ಲಾ ತೈಲ ರೇಖೆಗಳನ್ನು ಬರೆಯಲಾಗಿದೆ. ಈ ಕಂಬಗಳಲ್ಲಿಯ ಮುಖ್ಯವಾದ ಉಬ್ಬು ಶಿಲ್ಪಗಳ ದೃಶ್ಯಾವಳಿಗಳೆಂದರೆ, ದೇವತೆಗಳಿಗೆ ಸಂಬಂಧಿಸಿದ ಶಿವ, ನಟರಾಜ, ಶಿವಪಾರ್ವತಿ, ಸುಖಾಸೀನ ಗಣಪತಿ,

ಶಕ್ತಿ ಗಣಪತಿ, ನಾಟ್ಯ ಗಣಪತಿ, ಭೈರವ, ವೀರಭದ್ರ, ಷಣ್ಮುಖ, ಲಕ್ಷ್ಮೀನರಸಿಂಹ, ಉಗ್ರನರಸಿಂಹ, ವಿಷ್ಣು, ಕಾಳಿ, ಆದಿಶಕ್ತಿ, ಮಹಿಷಾಸುರ ಮರ್ಧಿನಿ, ರಾಮಾಯಣಕ್ಕೆ ಮತ್ತು ಮಹಾಭಾರತಕ್ಕೆ ಸಂಬಂಧಿಸಿದ ಶಿಲ್ಪಗಳಲ್ಲದೆ ನಂದಿ, ನವಿಲು, ಚಾತುಕೋಳಿ, ಚಿಗುರಿ ಪದ್ಮ ವಿನ್ಯಾಸ ಶಿಲ್ಪಗಳಿವೆ. ಮಹತ್ವವಾದ ಉಬ್ಬು ಶಿಲ್ಪಗಳೆಂದರೆ, ಶಿವಪಾರ್ವತಿಯರ ರಥ ಶಿವಪಾರ್ವತಿ ಯರು ರಥದಲ್ಲಿ ಕುಳಿತು ಹೊರಟಿದ್ದಾರೆ. ಗಣಪತಿ ಸಾರಥಿಯಾಗಿ ನಂದಿಗಳನ್ನು ಓಡಿಸುತ್ತಿದ್ದಾನೆ. ಅವನ ವಾಹನ ಮೂಷಿಕ ರಥದಡಿಯಲ್ಲಿ ಓಡುತ್ತಿದೆ. ರಥ ಛತ್ರಿಯೊಂದಿಗೆ ಅಲಂಕರಿಸಲಾಗಿದೆ. ರಥದ ಪೀಠಗಳು ಚಕ್ರ ಸುಂದರವಾಗಿ ಚಿತ್ರಿಸಲಾಗಿದೆ. ಮೂರ್ತಿ ಶಿಲ್ಪ ಗಳ ಉಡುಪು ಒಡವೆಗಳನ್ನು ಸಹ ಸುಂದರವಾಗಿ ಸ್ಪಷ್ಟ ವಾಗಿ ಕೆತ್ತಲಾಗಿದೆ. ಪಶ್ಚಿಮದ ಕಂಬ ಒಂದರಲ್ಲಿ ಬೋದಿಗೆಯಲ್ಲಿಯ ಭಾರ ವಾಹಕರು ಬೋದಿಗೆಯನ್ನು ಹೊತ್ತು ನಿಂತಿರುವ ಕುಬ್ಜರನ್ನು ಮನಮೋಹಕವಾಗಿ ಕೆತ್ತಲಾಗಿದೆ. ಈ ಶಿಲ್ಪ ಬಾದಾಮಿ ಚಾಲುಕ್ಯರ ಶಿಲ್ಪ ಗಳನ್ನು ನೆನಪು ಮಾಡಿಕೊಡುತ್ತದೆ. ಮತ್ತೊಂದು ಮಹತ್ವ ಶಿಲ್ಪ ಶಕ್ತಿ ಗಣಪತಿ, ಎಡತೊಡೆಯಲ್ಲಿ ಶಕ್ತಿ ದೇವತೆಯನ್ನು ಕೂಡಿಸಿಕೊಂಡು ಚತುರ್ಭಜ ಸುಖಾ ಸೀನ ಗಣಪತಿ ಆಕರ್ಷಣೀಯವಾಗಿದೆ.ಶಕ್ತಿ ಗಣಪತಿಯ ಶಿಲ್ಪಗಳು ಬಹು ವಿರಳ. ಮತ್ತೊಂದು ಕಂಬದಲ್ಲಿ ಭೈರವನ ಶಿಲ್ಪವು ಸಹ ಅಷ್ಟೇ ಸುಂದರವಾಗಿದೆ. ನನಗೆ ತಿಳಿದಂತೆ ಗ್ರ್ಯಾನೈಟ್ ಶಿಲೆಯಲ್ಲಿ ಇಷ್ಟು ಸುಂದರವಾದ ಶಿಲ್ಪಗಳು ವಿರಳ.

ಈ ದೇವಸ್ಥಾನದ ನವರಂಗದ ಪೂರ್ವ ದ್ವಾರದ ಹೊರಗಡೆ ಶಿಥಿಲ ಕರಿ ಶಿಲೆಯ ಕಂಬ ಶಾಸನ ಒಂದು ಬಿದ್ದಿದೆ. ಕಂಬದ ಕೆಳಭಾಗದ ಚೌಕಾಕಾರದ ಹಂತ ಗಳಲ್ಲಿ ೩ ಮುಖಗಳಲ್ಲಿ ಈ ಶಾಸನವಿದೆ. ಈ ಶಾಸನವನ್ನು ಶಾಲಿವಾಹನ ಶಕ ೧೪೭೪ನೇ ವಿರೋಧಿಕೃತು ಸಂವತ್ಸ ರದ ಪುಷ್ಯ ಬ ೩ ಸೋಮವಾರದಂದು (ಕ್ರಿ. ಶ. ೧೫೫೩ನೇ ಜನವರಿ ೨೫) ವಿಜಯನಗರದರಸ ಸದಾಶಿವ ರಾಯನ ನಿರೂಪದಲ್ಲಿ ಬರೆಸಲಾಗಿದೆ. ಶಾಸನದಲ್ಲಿ ಈ ಗ್ರಾಮವನ್ನು ದೇವಲಾಪುರವೆಂದು, ದೇವಸ್ಥಾನವನ್ನು ವಸಂತ ಮಲ್ಲಿಕಾರ್ಜುನ ದೇವರೆಂದು ಉಲ್ಲೇಖಿಸ ಲಾಗಿದೆ. ಪಕ್ಕದಲ್ಲಿರುವ ಮೊರಬ ಸೀಮೆಯ ಆಡಳಿತಕ್ಕೆ ಸೇರಿದ ಗ್ರಾಮವೆಂದು ಹೇಳಲಾಗಿದೆ. ಸದಾಶಿವ ದೇವ ರಾಯರ ನಿರೂಪದ ಮೇಲೆಗೆ ಈ ದೇವರ ಅಂಗಭೋಗ ಕ್ಕೆಂದು ಮೊರಬ ಸೀಮೆಯೊಳಗಣ ಪಂನೂಲ ಸುಂಕನ ಹಳ್ಳಿಯನ್ನು ದತ್ತಿ ಬಿಟ್ಟು,"ನಿಧಿ ನಿಕ್ಷೇಪಗಳಾದ ಹೆಣ್ಣು, ಹೊನ್ನು, ಮಣ್ಣು (ಭೂಮಿ) ಗೃಹ, ಪಾಷಾಣ (ವಜ್ರ) ಪುಷ್ಪ, ಹಣ, ಅಡಿಕೆ ಎಲೆ, ಹೀಗೆ ಅಷ್ಟ ಭೋಗ ಗಳನ್ನು ಸಮರ್ಪಿಸಿದ ಉಲ್ಲೇಖವಿದೆ. ಅಲ್ಲದೇ ಬಿಳಿ ಜೋಡು ಗ್ರಾಮದ ಧನಿಕರೊಬ್ಬರು ದೇವರ ಸೇವೆಗೆಂದು ಎರಡು ನಾಗಸ್ವರ ಡೊಳ್ಳುಗಳನ್ನು ಅರ್ಪಿಸಿದ ಉಲ್ಲೇಖ ಗಳಿವೆ. ಅಲ್ಲದೇ ಸೀಮೆಯ ಆಡಳಿತ ಅಧಿಕಾರಿಗಳ ವಂಶಾವಳಿ, ಸುತ್ತಲ ಗ್ರಾಮಗಳ ಸ್ಥಳ ನಾಮಗಳನ್ನು ತಿಳಿಸುತ್ತದೆ. ಅಕ್ಕಸಾಲಿ ಸಿರಿಯಣ್ಣ ಎಂಬ ಶಾಸನ ಶಿಲ್ಪಿ ಈ ಶಾಸನವನ್ನು ಕೊರೆದಿರುವುದಾಗಿ ತಿಳಿಸುತ್ತದೆ. ಸ್ಥಳೀಯ ಇತಿಹಾಸಕ್ಕೆ ಈ ಶಾಸನ ಪ್ರಮುಖ ಉಲ್ಲೇಖ ಗಳನ್ನೊಳಗೊಂಡಿದೆ. ದೇವಸ್ಥಾನದ ಹೊರನೋಟ ಅಧಿಷ್ಠಾನ, ಬಿತ್ತಿ ಕಪೋತ ಶಿಖರಗಳಿಂದ ಕೂಡಿದೆ. ಹೊರಗೋಡೆ ಭಿತ್ತಿ ಸರಳವಾಗಿದ್ದು ದೊಡ್ಡ ಆಯತಾ ಕೃತಿಯ ಕಲ್ಲುಗಳನ್ನು ಹೊಂದಿಸಿದ್ದಾರೆ. ಅಲ್ಲಲ್ಲಿ ಸರ್ಪ, ರಥ, ಗೋಪುರ, ಭಕ್ತ, ಪ್ರಾಣಿ-ಪಕ್ಷಿಗಳ ಉಬ್ಬು ಶಿಲ್ಪಗಳಿವೆ. ಗರ್ಭಗೃಹದ ಮೇಲಿರುವ ಶಿಖರ ಸುಮಾರು ೨೦ ಅಡಿ ಎತ್ತರವಿದ್ದು ಸುಟ್ಟ ಇಟ್ಟಿಗೆಗಳಿಂದ ದ್ರಾವಿಡ ಶೈಲಿಯಲ್ಲಿ ಕಟ್ಟಲಾಗಿದೆ. ನಿಧಿಯಾಸೆಗೆ ಜನ ತೋಡಿ ಶಿಖರವನ್ನು ವಿರೂಪಗೊಳಿಸಿರುವರು. ಇತ್ತೀಚೆಗೆ ಭಕ್ತರೊಬ್ಬರು ಅದನ್ನು ಸರಿಪಡಿಸಿ ಕಟ್ಟಿಸಿ ಸುಣ್ಣ ಬಳಿಸಿದ್ದಾರೆ. ದೇವಾಲಯದ ಸುತ್ತಲೂ ಪ್ರಕಾರವಿದ್ದು ಪಶ್ಚಿಮ ಭಾಗದಲ್ಲಿ ಮಂಟಪಗಳ ಅವಶೇಷಗಳಿವೆ. ಉತ್ತರಾಭಿಮುಖವಿರುವ ವಿಜಯನಗರ ಶೈಲಿಯ ಹೆಬ್ಬಾಗಿಲು ಬಿದ್ದು ಹಾಳಾಗಿದೆ. ಸುಂದರ ಉಬ್ಬು ಶಿಲ್ಪಗಳಿರುವ ಶಿಲಾ ಬಂಡೆಗಳು ಹರಡಿವೆ. ಪೂರ್ವಕ್ಕೆ ಮತ್ತೊಂದು ಸಣ್ಣ ದ್ವಾರವಿದೆ. ಕೂಡ್ಲಿಗಿ ತಾಲ್ಲೂಕಿ ನಲ್ಲಿ ಈ ಶೈಲಿಯ ದ್ವಾರ ಗೋಪುರಗಳು ಕೇವಲ ಎರಡು ಮಾತ್ರವಿದ್ದು ದೇವಲಾಪುರದ ಈ ದೇವಾಲಯ ವಲ್ಲದೆ ಇನ್ನೊಂದು ಉಜ್ಜನಿಯ ಮರುಳಸಿದ್ದೇಶ್ವರ ದೇಗುಲದದ್ವಾರ ಗೋಪುರವಾಗಿದೆ. ದೇವಸ್ಥಾನದ ಉತ್ತರಕ್ಕೆ ಸ್ವಲ್ಪ ದೂರದಲ್ಲಿ ಸಾಲುಗಲ್ಲಿನ ೨೦ಅಡಿ

ಚೌಕಾಕಾರದ ಪುಷ್ಕರಣಿಯೊಂದಿದೆ. ಇದರ ನಾಲ್ಕು ದಿಕ್ಕಿನಲ್ಲಿ ದೇವಕೋಷ್ಟಕಗಳಿವೆ.

ದೇವಸ್ಥಾನದ ಪೂರ್ವಕ್ಕೆ ಇರುವ ವೀರಭದ್ರ ದೇವಸ್ಥಾನವನ್ನು ಗ್ರಾನೈಟ್ ಶಿಲೆಯಿಂದ ಕಟ್ಟಲಾಗಿದ್ದು ಗೋಡೆಗಳನ್ನು ಮಾತ್ರ ಇಟ್ಟಿಗೆ ಗಾರೆಗಳಿಂದ ಕಟ್ಟಲಾಗಿದೆ. ಇಲ್ಲಿನ ಕಂಬಗಳೂ ಅನೇಕ ಉಬ್ಬು ಶಿಲ್ಪಗಳನ್ನು ಒಳಗೊಂಡಿವೆ. ಗರ್ಭ ಗೃಹದಲ್ಲಿ ಇದ್ದ ಕರಿಕಲ್ಲಿನ ವೀರಭದ್ರ ಶಿಲ್ಪಮೂರ್ತಿಯನ್ನು ಪಕ್ಕದ ಹಳ್ಳಿಗೆ ಸ್ಥಳಾಂತರಿಸಿದ್ದಾರೆ.

ದೇವಸ್ಥಾನದ ಹಿಂಬದಿಗೆ ಸ್ವಲ್ಪ ದೂರದಲ್ಲಿ ಮಟ್ಟಿಯ ಸುತ್ತ ಕೋಟೆ ಗೋಡೆಯ ಅವಶೇಷಗಳಿವೆ. ಮಟ್ಟಿಯ ಮಧ್ಯದಲ್ಲಿ ಕೊತ್ತಲವಿದೆ. ಅದರ ಮೇಲೆ ನಿಂತು ನೋಡಿದರೆ ಸುತ್ತಲ ೩೦ ಕಿ. ಮೀ ಮನಮೋಹಕ ದೃಶ್ಯ ಕಾಣಿಸುತ್ತದೆ. ಕೆಳಗೆ ಪಾಳು ಬಿದ್ದ ಗ್ರಾಮ, ಗ್ರಾಮದ ಮಧ್ಯೆ ಇರುವ ದೇವಸ್ಥಾನದ ಈ ಗ್ರಾಮದ ಗತ ವೈಭವದ ದೃಶ್ಯವನ್ನು ನೀಡುತ್ತದೆ.

ಶ್ರೀನಿವಾಸ ವೆಂ. ಪಾಡಿಗಾರ*

# ದೇವರ ಶೀಗಿಹಳ್ಳಿಯ ವಿಶಿಷ್ಟ ಸೂರ್ಯವಿಗ್ರಹ

ಬೆಳಗಾಂವ ಜಿಲ್ಲೆಯ ಬೈಲಹೊಂಗಲ ತಾಲೂಕಿನ ದೇವರಶೀಗಿಹಳ್ಳಿಯಲ್ಲಿ ಕಲ್ಯಾಣದ ಚಾಲುಕ್ಯರ ಕಾಲಕ್ಕನ್ವಯಿಸುವ ಜೀರ್ಣಾವಸ್ಥೆಯಲ್ಲಿರುವ ತ್ರಿಕೂಟ (ತ್ರೈಪುರುಷ–ಶಿವ, ವಿಷ್ಣು, ಸೂರ್ಯ) ದೇವಾಲಯವಿದೆ.[1] ಇದರ ಒಂದು ಗರ್ಭಗುಡಿಯಲ್ಲಿ ಸೂರ್ಯನ ವಿಗ್ರಹವಿದ್ದು, ೧೩೫ ಸೆಂ. ಮಿ. ಎತ್ತರದಾಗಿದ್ದು ಸುಮಾರು ೧೧ನೇ ಶತಮಾನದ ಶಿಲ್ಪಶೈಲಿಗೆ ಸೇರುತ್ತದೆ.

ಈ ಶಿಲ್ಪದಲ್ಲಿ ಕಿರೀಟ, ಹಾರ, ಕೇಯೂರ, ಕಟಕಾದಿ ಹಲವು ಆಭರಣಗಳಿಂದ ಅಲಂಕೃತವಾಗಿರುವ ಸೂರ್ಯವಿಗ್ರಹವು ಸಮಸ್ಥಾನಕ ಭಂಗಿಯಲ್ಲಿ ನಿಂತಿದ್ದು, ಕೈಕಾಲುಗಳ ಪ್ರತಿಯೊಂದು ಬೆರಳಿಗೂ ಉಂಗುರಗಳಿವೆ. ಎರಡೂ ಕೈಗಳಲ್ಲಿ ಭುಜದೆತ್ತರಕ್ಕೆ ನಿಂತಿರುವ ಪದ್ಮಗಳಿವೆ. ಶಿರಸ್ಸಿನ ಹಿಂದೆ ಪ್ರಭಾಮಂಡಲ, ಪಾದಪೀಠದ ಮುಮ್ಮುಖದಲ್ಲಿ ಏಳು ಕುದುರೆಗಳಿವೆ. ಪ್ರಭಾವಳಿಯ ಸ್ತಂಭಿಕೆಗಳ ಮೇಲೆ ಒಂದೇ ಕಮಾನಿನ ಮಕರ ತೋರಣ ಕೀರ್ತಿಮುಖದಲ್ಲಿ ಪರ್ಯವಸಾನ ಹೊಂದಿದೆ. ಮಕರಗಳಿಗೆ ಅಡ್ಡವಾಗಿ ಸೂರ್ಯನ ಇಕ್ಕೆಲಗಳಲ್ಲಿ ಒಂದೊಂದು ಚಿಕಣಿ ಗುಡಿಯ ಮಾದರಿ ಇದೆ. ಈ ಚಿಕಣಿಗುಡಿಗಳಲ್ಲಿ ಸೂರ್ಯ ಬಿಂಬದ ಬಲಕ್ಕೆ ಅಕ್ಷಮಾಲೆ, ಅಂಕುಶ, ಸ್ರುಕ್ ಕಮಂಡಲು ಹಿಡಿದು ಕುಳಿತಿರುವ ಚತುರ್ಮುಖ ಬ್ರಹ್ಮ ಮತ್ತು ಎಡಕ್ಕೆ ಅಕ್ಷಮಾಲೆ ಪದ್ಮ, ಶಂಖ ಹಾಗೂ ಫಲ ಹಿಡಿದು ಕುಳಿತಿರುವ ವಿಷ್ಣು ಚಿತ್ರಿಸಲ್ಪಟ್ಟಿದ್ದಾರೆ. (ಇವರಿಬ್ಬರೂ ಕ್ರಮವಾಗಿ ಮೊದಲ ಮತ್ತು ಕೊನೆಯ ಆದಿತ್ಯರೆನಿಸಿದ ಧಾತೃ ಮತ್ತು ವಿಷ್ಣುವನ್ನು ಪ್ರತಿನಿಧಿಸುತ್ತಿದ್ದರೂ ಇರಬಹುದು). ಪ್ರಭಾವಳಿಯ ಸ್ತಂಭಿಕೆಗಳಲ್ಲಿ ಆಲೀಢ ಭಂಗಿಯಲ್ಲಿ ಉಷಾ, ಪ್ರತ್ಯುಷಾ ಇದ್ದಾರೆ. ಇನ್ನೂ ಕೆಳಕ್ಕೆ, ಪಾದಪೀಠದ ಮೇಲೆ, ಸೂರ್ಯನ ಬಲಕ್ಕೆ ಕ್ರಮವಾಗಿ ಲೇಖನಿ ಮತ್ತು ಷಾಯಿಯ ಪಾತ್ರೆ ಹಿಡಿದಿರುವ ಪಿಂಗಳ, ಅಶ್ವಮುಖವಾದ ಅಶ್ವಿನೀದೇವತೆ, ಚಾಮರಧಾರಿಣಿಯಾದ ರಾಜ್ಞೀ ಹಾಗೂ ಎಡಕ್ಕೆ ದಂಡ ಹಿಡಿದಿರುವ ದಂಡ, ಅಶ್ವಮುಖದ ಅಶ್ವಿನೀದೇವತೆ, ಚಾಮರಧಾರಿಣಿಯಾದ ನಿಕ್ಷುಭಾ ನಿಂತಿದ್ದಾರೆ. ಈ ವಿವರಗಳು ಭವಿಷ್ಯತ್ ಪುರಾಣದಲ್ಲಿ ಹೇಳಿರುವ ಸೂರ್ಯ ಪ್ರತಿಮಾಲಕ್ಷಣಕ್ಕೆ ಸರಿಹೊಂದುತ್ತವೆ.[2]

ಕರ್ನಾಟಕದಲ್ಲಿ ಈವರೆಗೆ ಗಮನಿಸಲ್ಪಟ್ಟಿರುವ ಸಮಕಾಲಿನ ಶಿಲ್ಪಗಳಲ್ಲಿ ಸೂರ್ಯನ ಇಕ್ಕೆಲಗಳಲ್ಲಿ ಉಷಾ, ಪ್ರತ್ಯುಷಾ, ಇಲ್ಲವೆ ಚಾಮರಧಾರಣಿ ಸ್ತ್ರೀಯರನ್ನು ಸಾಮಾನ್ಯವಾಗಿ ಬಿಡಿಸಿರುತ್ತಾರೆ.[3] ಪ್ರಭಾವಳಿಯ ಮಕರ ತೋರಣದಲ್ಲಿ ಎಂಟು ಗ್ರಹಗಳ ಅಥವಾ

---

*ರೀಡರ್, ಪ್ರಾಚೀನ ಇತಿಹಾಸ ಹಾಗೂ ಶಾಸನದ ಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦೦೦೩.

1 ಇಲ್ಲಿರುವ ಶಾಸನದ ಪ್ರಕಾರ ಈ ಹಳ್ಳಿಯ ಮೂಲ ಹೆಸರು ಮಾಗೋಡು. ೫೦ ವಿಪ್ರರಿದ್ದ ಅಗ್ರಹಾರ ಇದಾಗಿತ್ತು ಈ ಶಾಸನದ ಅಧ್ಯಯನವನ್ನೊಳಗೊಂಡ ಬೇರೆ ಲೇಖನ ಅಚ್ಚಿನಲ್ಲಿದೆ.

2 GopinathaRao T.A. Elements of Hindu Iconography Vol.Ipt. II,(Indological Book House, Varanasi, 1971), ಪುಟಗಳು 304-305

3 ನೋಡಿ, ಅದೇ, ಚಿತ್ರ xci, ಹಾವೇರಿಯ ಸೂರ್ಯಪ್ರತಿಮೆ

ಹನ್ನೊಂದು ಆದಿತ್ಯರ ಚಿಕಣಿ ಚಿತ್ರಗಳ್ನು ತೋರಿಸಿರುವುದುಉಂಟು. ಆದರೆ ಯನಕ್ಕೊಳಗಾಗಿರುವ ದೇವರ ಶೇಗಿಹಳ್ಳಿಯ ಸೂರ್ಯಪ್ರತಿಯಂತೆ ಅವು ಇಲ್ಲ.[4]

ಶಿಲ್ಪಶೈಲಿಯ ದೃಷ್ಟಿಕೋನದಿಂದ ನೋಡಿದರೆ ಕಲ್ಯಾಣ ಚಾಲುಕ್ಯ ಶಿಲ್ಪಗಳಿಗಿಂತ ಪೂರ್ತಿ ಭಿನ್ನವಾಗಿದೆಯೆಂದು ಹೇಳಲಾಗದಿದ್ದರೂ ಮಕರತೋರಣ, ಪ್ರಭಾವಳಿ ಇತ್ಯಾದಿ ವಿವರಗಳಲ್ಲಿ ಈ ಶಿಲ್ಪ ವಿಶಿಷ್ಟವಾಗಿದೆ. ಸುಮಾರು ಇದೇ ಕಾಲದ್ದೆನ್ನಬಹುದಾದ ಗೋಕರ್ಣದ ಬ್ರಹ್ಮದೇವನ ಶಿಲ್ಪ ಹಾಗೂ ಗೋವಾ ಪ್ರದೇಶದ ಕೆಲ ಶಿಲ್ಪಗಳನ್ನು ಪ್ರಸ್ತುತ ಸೂರ್ಯಪ್ರತಿಮೆ ನೆನಪಿಸುತ್ತದೆ.[5] ಶೈಲಿಯಲ್ಲಿ ಇವೆಲ್ಲ ಮಾಳವ–ಗುಜರಾತ್–ಪಶ್ಚಿಮ ಮಹಾರಾಷ್ಟ್ರ ಪ್ರದೇಶದ ಶಿಲ್ಪಗಳಿಗೆ ತೀರ ಹತ್ತಿರವಾಗಿವೆ[6].

ವಿಗ್ರಹವಿರುವ ಗರ್ಭಗುಡಿಯ ಅರ್ಧಗಂಬದಲ್ಲಿರುವ ಕ್ರಿ. ಶ. ೧೦೯೩ರ ಶಾಸನ ಜೋಯಿಮದೇವನೆಂಬ[7] ಮಂಡಳೇಶ್ವರನನ್ನು ಹೆಸರಿಸುತ್ತದಲ್ಲದೆ ಶಿವ ಮತ್ತು ಕಮಲನಾಭ (ವಿಷ್ಣು) ದೇವರುಗಳಿಗೆ ನೀಡಲ್ಪಟ್ಟ ದಾನವನ್ನು ತಿಳಿಸುತ್ತದೆ. ಶಿಲ್ಪಶೈಲಿಯಾದರೂ ಕ್ರಿ.ಶ. ೧೧ನೇ ಶತಮಾನದ ಉತ್ತರಾರ್ಧಕ್ಕೆ ಸರಿಹೊಂದುತ್ತದೆ.

ಹೀಗೆ ಕ್ರಿ. ಶ. ೧೧ನೇ ಶತಮಾನದ ಉತ್ತರಾರ್ಧದ ಈ ಶಿಲ್ಪ ಕರ್ನಾಟಕದ ಇತರ ಸೂರ್ಯಶಿಲ್ಪಗಳಿಗಿಂತ ವೈಶಿಷ್ಟ್ಯ ಪೂರ್ಣವಾಗಿದೆ, ಭವಿಷ್ಯತ್ ಪುರಾಣ ಹೇಳಿರುವ ಪ್ರತಿಲಕ್ಷಣಕ್ಕೆ ಹೋಲುತ್ತದೆ, ಶೈಲಿಯ ದೃಷ್ಟಿಯಿಂದಾದರೂ ಗಮನಾರ್ಹವಾಗಿದ್ದು, ಹೊರನಾಡ ಶೈಲೆಯ ಪ್ರಭಾವ ಪ್ರಮಾಣಗಳನ್ನು ನಿರ್ಧರಿಸಲು ಗೋವೆಯ ಕದಂಬರ ಆಡಳಿತಕ್ಕೊಳಪಟ್ಟಿದ್ದ ಪ್ರದೇಶದ ಶಿಲ್ಪಗಳ ಪ್ರತ್ಯೇಕ ವಿಶ್ಲೇಷಣಾತ್ಮಕ ಅಧ್ಯಯದ ಅವಶ್ಯಕತೆಯನ್ನು ಎತ್ತಿ ತೋರಿಸುತ್ತದೆ.

---

4 ಡಾ. ರು. ಮ. ಷಡಕ್ಷರಯ್ಯ ಅವರು ಬೀದರ ಪ್ರದೇಶದ ಅನ್ವೇಷಣೆಯಲ್ಲಿ ಅನೇಕ ಹೊಸ ಮಾದರಿಯ ಪ್ರತಿಮೆಗಳನ್ನು ಬೆಳಕಿಗೆ ತಂದಿದ್ದಾರೆ. ಅವುಗಳಲ್ಲಿ ಒಂದರ ಪ್ರಭಾವಳಿ ಆದಿತ್ಯ, ಗ್ರಹಗಳ ಬದಲಾಗಿ ರಾಶಿ ಚಕ್ರದ ಚಿಕಣಿ ಶಿಲ್ಪ ಹೊಂದಿದೆ. ಕೆಲವು ಮನುಗಳ ಚಿಕಣಿ ಶಿಲ್ಪವನ್ನು ಸೂರ್ಯನ ಪಾದದ ಹತ್ತಿರ ತೋರಿಸಿವೆ. ಶೈಲಿಯ ದೃಷ್ಟಿಯಿಂದ ಇವೆಲ್ಲ ಮಾಳವ ಶಿಲ್ಪಗಳನ್ನು ನೆನಪಿಸುತ್ತವೆ.

5 Naik D. B., "Vishnu Sculpture in Goa Museum" in A. V. Narasimha Murthi B. K. Gururja Rao (ed), Rangavalli : Recent Researches in Indology (Sundeep Delhi, 1983), ಪುಟಗಳು 271-73, ಮತ್ತು ಚಿತ್ರ 81

6 ಅಜಮಿರಾದ ಸೂರ್ಯ ಶಿಲ್ಪಗಳಿಗೆ ಹೋಲಿಸಿ ನೋಡಿ. Gopinatha Rao T. A. ಅದೇ ಚಿತ್ರ XC

7 ಇವನು ಕಲಚುರಿ ಜೋಗಮನಿರಬೇಕು.

ರು.ಮ. ಷಡಕ್ಷರಯ್ಯ

# ಬೀದರ ಜಿಲ್ಲೆಯ ದೇವಿ ಶಿಲ್ಪಗಳು : ಒಂದು ಅಧ್ಯಯನ

**ಪೀಠಿಕೆ :** ದೇವಿ ಆರಾಧನೆ ಪ್ರಾಚೀನ ಕಾಲದಿಂದಲೂ ಕರ್ನಾಟಕ ವಿವಿಧೆಡೆ ನೆಲೆಯೂರಿದ್ದಿತು. ಬೀದರ ಜಿಲ್ಲೆಯಲ್ಲೂ ಈ ಆರಾಧನೆ ಪ್ರಚಲಿತದಲ್ಲಿದ್ದರೂ, ಅದರ ಶಿಲ್ಪಗಳ ಅಧ್ಯಯನ ನಡೆದಿಲ್ಲ. ಈ ಜಿಲ್ಲೆಯ ಐದು ತಾಲ್ಲೂಕುಗಳಾದ ಬೀದರ್, ಭಾಲ್ಕಿ, ಔರಾದ್, ಹುಮನಾಬಾದ್, ಮತ್ತು ಬಸವಕಲ್ಯಾಣಗಳ ಗ್ರಾಮಗಳಲ್ಲಿ ಕಂಡುಬಂದ ಕೇವಲ ದೇವಿ ದೇವಾಲಯ ಶಿಲ್ಪಗಳನ್ನು ಮಾತ್ರ ಇಲ್ಲಿ ಅಧ್ಯಯನ ಮಾಡಿರುವರು.

ಶಿಲ್ಪ-ಶಾಸನಗಳ ಆಕರಗಳ ಸಹಾಯದಿಂದ ಈ ಜಿಲ್ಲೆಯ ದೇವಿ ಆರಾಧನೆಯ ಪ್ರಾಚೀನತೆ, ಬೆಳವಣಿಗೆ, ದೇವಿ ಶಿಲ್ಪ-ದೇವಾಲಯಗಳ ಕೇಂದ್ರಗಳು, ಮತ್ತು ದೇವಿ ಶಿಲ್ಪಗಳ ನಮೂನೆ, ಮಹತ್ವವನ್ನು ಇಲ್ಲಿ ಪರಿಶೀಲಿಸಲಾಗಿದೆ.

ಈ ಜಿಲ್ಲೆಯ ಶಾಸನ ಮತ್ತು ಸಾಹಿತ್ಯದಿಂದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಪರಿಶೀಲಿಸಿದಾಗ ಶೈವ, ವೈಷ್ಣವ ಮತ್ತು ಜೈನ ಧರ್ಮಗಳಿಗೆ ಕ್ರಿ.ಶ. ೧೧-೧೨ನೇ ಶತಮಾನದಲ್ಲಿ ವಿಶೇಷ ಸ್ಥಾನ ಲಭಿಸಿತ್ತೆಂದು ತಿಳಿದು ಬರುತ್ತದೆ. ಈ ಕಾಲದಲ್ಲಿ ಆಳಿದ ಕಲ್ಯಾಣ ಚಾಲುಕ್ಯ ಅರಸ-ಅರಸಿಯರ ಕೊಡುಗೆ ಮಹತ್ತರವಾದುದು. ಇವರು ದೇವಿ ಆರಾಧನೆಗೆ ಬೀದರ ಜಿಲ್ಲೆಯಲ್ಲಿ ನೀಡಿದ ಕೊಡುಗೆಗಳು ಗಮನಾರ್ಹ.

ಈ ಭಾಗದ ದೇವಿ ಮಂದಿರಗಳು ಲಕ್ಷ್ಮೀ, ಮಹಾಲಕ್ಷ್ಮೀ, ಅಂಬಾಭವಾನಿ, ಚಂಡಿಕೇಶ್ವರಿ, ಚಳಕಮ್ಮ, ವೆಂಕಮ್ಮ, ಯಲ್ಲಮ್ಮ ಮುಂತಾದ ಹೆಸರುಗಳಿಂದ ಖ್ಯಾತಿಯನ್ನು ಗಳಿಸಿವೆ. ಕೆಲವು ಊರುಗಳು ತಮ್ಮ ಗ್ರಾಮದೇವತೆಗಳ ಹೆಸರುಗಳನ್ನು ಹೊಂದಿವೆ. ಈ ಜಿಲ್ಲೆಯಲ್ಲಿ ಭಾಲ್ಕಿ ತಾಲೂಕಿನ ಚಳಕಾಪುರದ ಚಳಕಮ್ಮ, ಹಲ್ಸಿ ತೂಗಾವಿಯ ಲಕ್ಷ್ಮೀ, ಅಂಬೆಸಂಗವಿಯ ಅಂಬೆ, ಲಖಣಗಾವಿಯ ಲಕ್ಕಾದೇವಿ, ಸಂಗಮದ ಲಕ್ಷ್ಮಿ, ಬೀದರ ತಾಲ್ಲೂಕಿನ ಅಳವಾಯಿಯ ಲಕ್ಷ್ಮೀ, ಬಸವಕಲ್ಯಾಣ ತಾಲೂಕಿನ ಚಂಡಕಾಪುರದ ಚಂಡಿಕಾದೇವಿ, ಗೊರ್ಟದ ಮಹಾಲಕ್ಷ್ಮೀ, ಹುಮನಾಬಾದ ತಾಲ್ಲೂಕಿನ ಹುಡಗಿಯ ವೆಂಕಮ್ಮ, ಹಳ್ಳಿಖೇಡದ ಅಂಬಾಭವಾನಿ, ಉಡಬಾಳದ ಯಲ್ಲಮ್ಮ ದೇವಿ ಮುಂತಾದವು ಇಂದು ಖ್ಯಾತಿ ಗಳಿಸಿವೆ.

ದೇವಿ ಶಿಲ್ಪಗಳ ಬಗ್ಗೆ ಅನೇಕ ಜನ ಜನಿತ ಕಥೆಗಳಿದ್ದು ಈ ಕಥೆಗಳು ಅಲ್ಲಿಯ ಶಿಲ್ಪದ ಸುತ್ತಲೂ ಹೆಣೆದ ಕಥೆಗಳಾಗಿರುವುವು. ಚಳಕಾಪುರದ ಚಳಕಮ್ಮನೇ ಶಬರಿಯೆಂದೂ ಆಕೆಯ ಕೋರಿಕೆಯಂತೆ ರಾಮ ಲಕ್ಷ್ಮಣ, ಹನುಮರು ಇಲ್ಲಿಗೆ ಬಂದು ಮೂರ್ತಿರೂಪದಲ್ಲಿ ನಿಂತಂತೆ ಹೇಳುತ್ತದೆ. ಚಳಕಮ್ಮನೆಂದು ಕರೆಯುವ ವಿಗ್ರಹವು ಮಹಿಷಮರ್ದಿನಿಯ ಶಿಲ್ಪವಾಗಿದೆ. ಈ ದೇವಿಯ ಹೆಸರಿನಲ್ಲಿ ಊರಿಗೆ ಚಳಕಾಪುರವೆಂದು ಬಂದಿದೆ.

* ಮುಖ್ಯಸ್ಥರು, ಕನ್ನಡ ಸಂಶೋಧನ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦೦೦೩.

ಇದೇ ರೀತಿ ಬಸವಕಲ್ಯಾಣ ತಾಲೂಕಿನ ಈಗಿನ ಚಂಡಕಾಪುರ ಗ್ರಾಮವು ಅಲ್ಲಿಯ ಚಂಡಿಕಾದೇವಿಯ ಹೆಸರಿನಿಂದ ಉಮಾಪುರವು ಉಮೆಯ ದೇಗುಲದಿಂದ ಬಂದಿರುವುದೆಂದು ಹೇಳುತ್ತಾರೆ. ಭಾಲ್ಕಿ ತಾಲ್ಲೂಕಿನ ಅಂಬೆಸಂಗವಿ ಅಲ್ಲಿಯ ಅಂಬೆ ದೇವತೆಯಿಂದ, ಲಖಣ ಗಾಂವ ಅಲ್ಲಿಯ ಲಕ್ಕ್ಮಾದೇವಿಯ ಹೆಸರುಗಳಿಂದ ಬಂದ ವೆಂದು ಹೇಳುತ್ತಾರೆ. ಹೀಗೆ ಇಲ್ಲಿಯ ಗ್ರಾಮದೇವತೆ ಗಳಿಗೂ ತನ್ನದೇ ಆದ ಜನಜನಿತ ಕಥೆಗಳಿವೆ. ಶೈವ, ವೈಷ್ಣವರ ದೇವತೆಗಳಲ್ಲದೆ ಜೈನರಲ್ಲಿಯ ಯಕ್ಷಿಣೀ ಆರಾಧನೆಯು ಈ ಪ್ರದೇಶದಲ್ಲೂ ನೆಲೆಯೂರಿದ್ದಿತು. ಈ ಜಿಲ್ಲೆಯ ಈ ಮೂರು ಧರ್ಮಗಳ ಶಿಲ್ಪ-ದೇವಾಲಯಗಳ ಅಧ್ಯಯನವು ಈ ರೀತಿ ಇದೆ.

ಬೀದರ ಜಿಲ್ಲೆಯಲ್ಲಿ ದೇವಿ ಹೆಸರಿನಲ್ಲಿದ್ದ ಪ್ರಾಚೀನ ದೇವಾಲಯಗಳು ಇಂದು ಕಂಡುಬರುವುದಿಲ್ಲ. ಆದರೆ ಈ ಕಾಲದ ಹಲವಾರು ದೇವಾಲಯಗಳ ಮೂಲ ಹೆಸರುಗಳು ಬದಲಾಗಿರುವುದನ್ನು ಅಲ್ಲಲ್ಲಿ ಕಾಣಬಹುದು. ಬಸವಕಲ್ಯಾಣ ತಾಲ್ಲೂಕಿನ ನಾರಾಯಣಪುರದ ಶಿವ ದೇವಾಲಯ ಮತ್ತು ಹುಮನಾಬಾದ ತಾಲ್ಲೂಕಿನ ಜಲಸಂಗಿಯ ಮಹದೇವ ದೇವಾಲಯಗಳ ಮೂಲ ಹೆಸರು ಈಗ ಬದಲಾದಂತೆ ಕಾಣುತ್ತವೆ. ಬಸವಕಲ್ಯಾಣ ನಗರದ[1] ಕ್ರಿ.ಶ. ೧೧೧೬ರ ಒಂದು ಶಾಸನದಲ್ಲಿ ದೇವಿಯ ದೇಗುಲದ ಉಲ್ಲೇಖ ಗಳಿವೆ. ನಾರಾಯಣಪುರದ[2] ಒಂದು ಶಾಸನದಲ್ಲಿ ಮಾತ್ರ ಮತ್ತೊಂದು ದೇವಿಯ ಹೆಸರು ಕಾಣುತ್ತದೆ.

ನಾರಾಯಣಪುರದ ಶಿವದೇವಾಲಯವೆಂದು ಕರೆಯುವ ಬಸವಕಲ್ಯಾಣ ತಾಲ್ಲೂಕಿನ ನಾರಾಯಣ ಪುರದ ಒಂದು ಮಂದಿರ ಮೂಲತಃ ಶಿವದೇಗುಲ ವಾಗಿತ್ತೇ ಎಂಬುದನ್ನು ಇಲ್ಲಿ ಪರಿಶೀಲಿಸಲಾಗಿದೆ. ಈ ಹಿಂದೆ ಈ ದೇವಾಲಯ ಮೂಲತಃ ದೇವಿ ದೇಗುಲ ವಾಗಿರಬಹುದೆಂದು ಒಬ್ಬ ವಿದ್ವಾಂಸರು[3] ಅಭಿಪ್ರಾಯ ಪಟ್ಟಿದ್ದರು. ಆದರೆ ಅವರು ಕಾರಣಗಳನ್ನು ಕೊಟ್ಟಿರುವುದಿಲ್ಲ.

ಈ ಗ್ರಾಮದ ಮಧ್ಯದಲ್ಲಿರುವ ಈ ದೇಗುಲವು ಪೂರ್ವಕ್ಕೆ ಮುಖ ಮಾಡಿದ್ದು ಶಿಥಿಲಗೊಂಡಿದೆ. ಹಾಗೂ ಅಲ್ಪ ಸ್ವಲ್ಪ ಬದಲಾವಣೆಯಾಗಿದೆ. ಎತ್ತರವಾದ ಅಧಿಷ್ಠಾನವಿದ್ದು, ಇದರ ತಳಪಾಯವು ಮೂಲತಃ ತ್ರಿಕೂಟ ಮಾದರಿಯಲ್ಲಿದೆ. ಉತ್ತರಕ್ಕೆ ಮುಖ ಮಾಡಿದ ಇದರ ಒಂದು ಗರ್ಭಗೃಹದ ಅಲ್ಪ ಭಾಗ ಮಾತ್ರ ಈಗ ಉಳಿದಿದೆ. ಈ ರೀತಿ ದಕ್ಷಿಣಕ್ಕೆ ಮುಖ ಮಾಡಿ ಗರ್ಭಗೃಹ ಸಂಪೂರ್ಣ ಶಿಥಿಲಗೊಂಡಿದ್ದು ಅಲ್ಲಿ ಗೋಡೆಯನ್ನು ನಂತರ ಕಟ್ಟಲಾಗಿದೆ. ಈ ಮಾರ್ಪಾಟಿನ ಕುರುಹನ್ನು ಅದರ ತಳಪಾಯದಲ್ಲಿ ಕಾಣಬಹುದು. ಉಳಿದಿರುವ ಭಾಗಗಳಲ್ಲಿ ಗರ್ಭಗೃಹ, ತೆರೆದ ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪಗಳಿವೆ.

ಗರ್ಭಗೃಹದಲ್ಲಿ ಶಿವಲಿಂಗವಿದ್ದು ಇದರ ಮೇಲೆ ಬ್ರಹ್ಮಸೂತ್ರವಿಲ್ಲ. ಇದರಿಂದ ಇದು ತದನಂತರ ಕಾಲದ್ದಾಗಿದೆ. ಆದರೆ ಪೀಠವು ಪ್ರಾಚೀನದ್ದಾಗಿದೆ. ಗರ್ಭಗೃಹದ ಬಾಗಿಲವಾಡದಲ್ಲಿ ಆರು ಶಾಖೆಗಳಿದ್ದು, ವೈಷ್ಣವ ದ್ವಾರಪಾಲಕರನ್ನು ಹೊಂದಿದೆ. ದ್ವಾರಪಾಲಕರ ಕೈಗಳಲ್ಲಿ ಚಕ್ರ ಮತ್ತು ಶಂಖಗಳು ಮೇಲಿನ ಕೈಗಳಲ್ಲಿದ್ದು ಕೆಳಗಿನ ಕೈಗಳು ಮುರಿದಿವೆ. ಲಲಾಟ ಬಿಂಬದಲ್ಲಿ ಲಕ್ಷ್ಮಿಯ ಬಿಂಬವಿದೆ. ಇದರ ಮೇಲಿನ ಉತ್ತರಾಂಗದಲ್ಲಿ ಸಾಲಾಗಿ ಒಂಬತ್ತು ಚಿಕಣಿ ಶಿಲ್ಪಗಳಿವೆ. ಈ ಶಿಲ್ಪಗಳು ಸಪ್ತಮಾತೃಕೆಯ ರದ್ದಾಗಿರುವುದು ಗಮನಾರ್ಹ. ಈ ಸಾಲಿನಲ್ಲಿ ಪ್ರತ್ಯೇಕ ವಿಮಾನ ಮಾದರಿಯ ಗೂಡುಗಳಿವೆ. ಈ ವಿಮಾನಗಳಲ್ಲಿ ಕೆಲವು ದೇವಿಯರನ್ನು ಮಧ್ಯ ತೋರಿಸಲಾಗಿದೆ. ಈ ಸಾಲಿನ ಮಧ್ಯದಲ್ಲಿರುವ ಶಿಲ್ಪವು ವೈಷ್ಣವೀಯದಾಗಿರುವುದು ವಿಶೇಷವೆನ್ನಬಹುದು. ಈ ಸಾಲಿನಲ್ಲಿ ವೀರಭದ್ರ ಮತ್ತು ಗಣೇಶರ ಮಧ್ಯ ಬ್ರಾಹ್ಮಿ, ಮಹೇಶ್ವರಿ, ಚಾಮುಂಡಿ,

1 ಕುಲಕರ್ಣಿ, ವಿ.ಎಸ್. ೧೯೭೯ : ಹಿಸ್ಟರಿಕಲ್ ಅಂಡ್ ಕಲ್ಚರಲ್ ಆಸ್ಪೆಕ್ಟ್ಸ್ ಅರೌಂಡ ಬಸವ ಕಲ್ಯಾಣ, ಪಿ.ಎಚ್.ಡಿ. ಥೀಸೀಸ್, ಪು, ೩೯೩ ಕ.ವಿ.ವಿ., ಧಾರವಾಡ

2 ಈ ಶಾಸನವು ಲೇಖಕರಿಗೆ ಇತ್ತೀಚಿಗೆ ಕಂಡುಬಂದಿದೆ.

3 ಜೇಮ್ಸ ಬರಜಸ್ : ೧೯೭೨ (ಎಡಿ) : ರಿಪೋರ್ಟ ಆನ್ ದಿ ಅಂಟಿಕ್ವೈಟೀಸ್ ಇನ್‌ದಿ ಬೀದರ್ ಅಂಡ್ ಔರಂಗಾಬಾದ್ ನ್ಯೂದೆಹಲಿ, ಪು. ೩೯-೪೧ (ಅರಲಿಯರ್ ೧೮೭೮-ಲಂಡನ್)

ವೈಷ್ಣವಿ, ವರಾಹಿ, ಇಂದ್ರಾಣಿ ಮತ್ತು ಕೌಮಾರಿಯ ರೆಂಬ ಏಳು ದೇವತೆಯರಿದ್ದಾರೆ.

ತೆರೆದ ಅಂತರಾಳದ ಮುಂದುಗಡೆ ಎರಡು ಉದ್ದ ಕಂಬಗಳಿದ್ದು ಇವುಗಳಲ್ಲಿ ಸುಂದರ ಮದನಿಕೆಯರ ಶಿಲ್ಪಗಳಿವೆ. ಮುಂದೆ ವಿಶಾಲ ಸಭಾಮಂಟಪವಿದೆ. ಈ ಮಂಟಪದ ಮಧ್ಯ ಭಾಗವು ವೃತ್ತಕಾರದಲ್ಲಿ ಸ್ವಲ್ಪ ಎತ್ತರವಾಗಿದ್ದು ಅದರ ಮೇಲೆ ನಾಲ್ಕು ಕಂಬಗಳಿವೆ. ಇದರ ಮುಚ್ಚಿಗೆಯಲ್ಲಿ ಕಮಲದ ಅಂಕಾರವಿದೆ. ಕಮಲದ ನಾಲ್ಕು ಮೂಲೆಗಳಲ್ಲಿ ಕೀರ್ತಿಮುಖಗಳಿವೆ. ಇವುಗಳ ಮಧ್ಯೆ ಗಣೇಶ, ಸರಸ್ವತಿ, ನೃತ್ಯಗಾರ್ತಿಯರು, ಚೌರಿ ಹಿಡಿದ ಹೆಂಗಸರು, ಮದ್ದಳೆಗಾರರು, ಲಕ್ಷ್ಮೀ, ನಾಟ್ಯ ಸರಸ್ವತಿಯರಿದ್ದಾರೆ.

ಈ ಸಭಾಮಂಟಪದ ಉತ್ತರದಲ್ಲಿದ್ದ ಗರ್ಭ ಗೃಹದ ಅಂತರಾಳಗಳ ತಳಪಾಯ ಮಾತ್ರ ಉಳಿದಿದೆ. ಬಾಗಿಲ ಸ್ಥಳದಲ್ಲಿ ಗೋಡೆಯನ್ನು ಕಟ್ಟಲಾಗಿದೆ. ದಕ್ಷಿಣದಲ್ಲಿ ಗರ್ಭಗೃಹ ಅಂತರಾಳ ಭಾಗವು ಈಗ ಉಗ್ರಾಣವಾಗಿದೆ. ಸಭಾಮಂಟಪದ ಮುಂದೆ ಒಂದು ಮುಖ ಮಂಟಪವಿದೆ. ಈ ಮಂಟಪದ ಬದಿಗಳಲ್ಲಿ ಕಟ್ಟೆಗಳಿವೆ. ಮುಖ ಮಂಟಪದ ಮುಂದುಗಡೆ ಪಾಟಣಿಕೆಗಳಿವೆ. ಇದರ ಬದಿಗಳಲ್ಲಿ ಹಸ್ತಿ ಹಸ್ತಗಳುಂಟು. ಆದರೆ ಈ ಹಸ್ತಿ ಹಸ್ತಗಳು ಮುರಿದ ಒಂದು ತೋರಣದ ಫಲಕಗಳಾಗಿವೆ. ಈ ಫಲಕಗಳಲ್ಲಿ ಮಕರ ಸವಾರರನ್ನು, ಸೇವಕರನ್ನು, ವಿಷ್ಣುವನ್ನು ಹೊತ್ತುನಿಂತ ಗರುಡ ಹಾಗೂ ಹಾರಗಳನ್ನು ಹಿಡಿದವರನ್ನು ಮತ್ತು ಅಷ್ಟ ದಿಕ್‌ಪಾಲಕರನ್ನು ತೋರಿಸಲಾಗಿದೆ.

ಈ ದೇವಾಲಯದ ಪೂರ್ವಕ್ಕೆ ಮುಖ ಮಾಡಿರುವ ಗರ್ಭಗೃಹದ ಹಿಂದಿನ ಗೋಡೆಯಲ್ಲಿ ದೇವಕೋಷ್ಠವಿದೆ. ಅದಕ್ಕೆ ಹೊಂದಿ ಬಾಗಿಲು ಚೌಕಟ್ಟುಯಿದೆ. ವೈಷ್ಣವ ದ್ವಾರಪಾಲಕರನ್ನು ಫಲಕಗಳಲ್ಲಿ ಮತ್ತು ಲಲಾಟ ಬಿಂಬದಲ್ಲಿ ಲಕ್ಷ್ಮಿಯನ್ನೂ ತೋರಿಸಲಾಗಿದೆ. ಸುತ್ತಲಿನ ಭಿತ್ತಿಯಲ್ಲಿ ಸುರ ಸುಂದರಿಯರಿರುವರು.

ಈ ದೇವಾಲಯದ ಮುಂದೆ ಒಂದು ಶಿಲ್ಪ ಫಲಕವಿದ್ದು, ಇದರಲ್ಲಿನ ಒಂಭತ್ತು ಹಂತಗಳಲ್ಲಿ ಪಂಚಾಯತನ ಗುಂಪಿಗೆ ಸೇರಿದ ಚಿಕಣಿ ಶಿಲ್ಪಗಳಿವೆ. ಇದರ ಮೇಲಿನ ಎರಡು ಸಾಲುಗಳಲ್ಲಿ (೮-೯) ಕ್ರಮವಾಗಿ ಏಳು ಮತ್ತು ಎಂಟು ಶಿವಲಿಂಗಗಳಿವೆ. ಎರಡನೇ ಲಿಂಗ ಸಾಲಿನಲ್ಲಿ ಎಡದಿಂದ ಎರಡು ಮತ್ತು ಮೂರನೇ ಲಿಂಗದ ಮೇಲೆ ಒಂದೊಂದು ನಿಂತ ನಂದಿ ಗಳಿವೆ. ಮೂರು ಮತ್ತು ನಾಲ್ಕನೇ ಸಾಲುಗಳಲ್ಲಿ (೬-೭) ವಿಷ್ಣುವಿನ ಬಿಂಬಗಳಿವೆ. ಚತುರ್ಭುಜ ಧಾರಿಯಾದ ಈತನು ಸಮಭಂಗದಲ್ಲಿ ಆಯುಧಗಳನ್ನು ಹಿಡಿದು ನಿಂತಿದ್ದಾನೆ. ಈ ಎರಡೂ ಸಾಲುಗಳಲ್ಲಿ ಎಂಟೆಂಟು ವಿಷ್ಣು ಬಿಂಬಗಳಿವೆ. ಇದರ ಕೆಳಗಡೆ (೫ನೇ ಸಾಲು) ಒಂದು ಸಾಲಿನಲ್ಲಿ ಏಳು ಸೂರ್ಯ ದೇವನ ಚಿತ್ರಗಳಿವೆ. ಸೂರ್ಯನು ಸಮಭಂಗದಲ್ಲಿದ್ದು ತನ್ನ ಕೈಗಳಲ್ಲಿ ಕಮಲಗಳನ್ನು ಹಿಡಿದಿದ್ದಾನೆ. ಸೂರ್ಯನ ಕೆಳಗಿನ ಎರಡು ಸಾಲುಗಳಲ್ಲಿ (೩-೪) ಬಲದಿಂದ (ಮೇಲಿನ ಸಾಲಿನಲ್ಲಿ) ವೀರಭದ್ರ ಮತ್ತು ನಾಲ್ಕು ದೇವತೆಯರು ಹಾಗೂ (ಇನ್ನೊಂದು ಸಾಲಿನಲ್ಲಿ) ಮೂರು ದೇವತೆಯರು ಮತ್ತು ಗಣೇಶ ಹಾಗೂ ಆಯುಧಗಳನ್ನು ಹಿಡಿದ ಸಪ್ತಮಾತೃಕಾ ಪರಿವಾರವಿದೆ. ಇದರ ಕೆಳಗಿನ ಎರಡು ಸಾಲುಗಳಲ್ಲಿ (೧-೨) ಕಮಲಗಳನ್ನು ಹಿಡಿದ ಸಮಭಂಗದಲ್ಲಿನ ಐದು ಲಕ್ಷ್ಮಿಯರು ಮೇಲಿನ ಸಾಲಿನಲ್ಲಿ ಮತ್ತು ಇವರ ಕೆಳಗೆ ಗಣೇಶನ ಐದು ಬಿಂಬಗಳಿವೆ. ಈ ಎರಡು ಸಾಲುಗಳ ಎಡಬದಿಗೆ ಭಕ್ತಳೊಬ್ಬಳು ಕೈಮುಗಿದ ಭಂಗಿಯಲ್ಲಿ ನಿಂತಿದ್ದು ಕೈಯಲ್ಲಿ ಒಂದು ವಸ್ತುವನ್ನು ಹಿಡಿದಿರುತ್ತಾಳೆ. ಈ ಶಿಲ್ಪ ಫಲಕದ ಮೇಲ್ಭಾಗ ಅರ್ಧ ವೃತ್ತಕಾರದಲ್ಲಿವೆ.

ಈ ಶಿಲ್ಪದಲ್ಲಿ ಒಟ್ಟಾರೆ ಶಿವ (ಲಿಂಗ), ವಿಷ್ಣು, ಗಣೇಶ, ಸೂರ್ಯ ಮತ್ತು ಶಕ್ತಿಯರು ಕಾಣುವುದರಿಂದ ಇದನ್ನು ಪಂಚಾಯತನ ಗುಂಪಿಗೆ ಸೇರಿಸಬಹುದಾಗಿದೆ. ಈ ಪ್ರಭಾವವು ಮಧ್ಯ ಭಾರತದಿಂದ ಬೀರಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಈ ದೇವಾಲಯದ ಅಧಿಷ್ಠಾನದ ಕೆಳಭಾಗದಲ್ಲಿ ಒಂದೇ ಸಾಲಿನಲ್ಲಿ ಚಿಕಣಿ. ಶಿಲ್ಪಗಳಿದ್ದು ಕೆಲವನ್ನು ಪ್ರತ್ಯೇಕ ವಿಮಾನದ ಮಧ್ಯ ತೋರಿಸಲಾಗಿದೆ. ಇವುಗಳಲ್ಲಿ ಲಕ್ಷ್ಮೀ, ಬುದ್ಧ, ಗರುಡ, ಗಣೇಶ, ಸೂರ್ಯ, ಯಕ್ಷರು, ಕುಬೇರ, ನೃತ್ಯಗಾರ್ತಿರು ಮುಖ್ಯರಾಗಿದ್ದಾರೆ.

ಇದರ ಸಭಾಮಂಟಪದಲ್ಲಿ ಭೈರವ, ವರಾಹ, ವಿಷ್ಣು, ಮುಂತಾದ ಶಿಲ್ಪಗಳಿವೆ. ಈ ದೇವಾಲಯದ ಎಡಬದಿಗೆ ಒಂದು ವಿಷ್ಣುವಿನ ದೇವಾಲಯವಿದ್ದು ಈ ಎರಡು ದೇವಾಲಯಗಳ ಬದಿಗೆ ಹಲವಾರು ಬಿಡಿ ಶಿಲ್ಪಗಳಿವೆ.

ಈ ಶಿವ ದೇವಾಲಯದ ಗರ್ಭಗೃಹದ ವೈಷ್ಣವ ದ್ವಾರಪಾಲಕರು ಹಾಗೂ ಭಿತ್ತಿಯಲ್ಲಿ ಲಕ್ಷ್ಮೀ, ಗರುಡ, ವಿಷ್ಣುವಿನ ಒಂದು ಅವತಾರವಾದ ಬುಧ, ಇತ್ಯಾದಿ ಶಿಲ್ಪಗಳಿರುವದರಿಂದ ಇದೊಂದು ಮೂಲತಃ ವೈಷ್ಣವ ದೇವಾಲಯವಾಗಿದ್ದಿರಬೇಕೆಂದು ಊಹಿಸಬಹುದು. ಇದರ ಗರ್ಭಗೃಹದ ಬಾಗಿಲ ಚೌಕಟ್ಟಿನ ಲಲಾಟಬಿಂಬ ದಲ್ಲಿ ಲಕ್ಷ್ಮೀ ಮತ್ತು ಉತ್ತರಾಂಗದಲ್ಲಿ ಸಪ್ತಮಾತೃಕೆ ಯರು ಹಾಗೂ ಈ ದೇವಾಲಯದ ಹೊರಗಡೆ ನಿಲ್ಲಿಸಿದ ಒಂದು ಶಿಲ್ಪದಲ್ಲಿ ಭಕ್ತಳೊಂದಿಗೆ ಹಾಗೂ ಸಪ್ತಮಾತೃಕೆ ಸೂರ್ಯ, ವಿಷ್ಣು, ಗಣೇಶ, ಮತ್ತು ಲಿಂಗವನ್ನು ಒಳಗೊಂಡ ಪಂಚಾಯತನ ಶಿಲ್ಪಗಳು ಕಾಣುವುದರಿಂದ ಇದು ಮೂಲತ: (ವೈಷ್ಣವ ಸಂಪ್ರದಾಯಕ್ಕೆ ಸೇರಿದ) ಪಂಚಾಯತನ ಗುಂಪಿಗೆ ಸೇರಿದ ದೇಗುಲವೆಂದು ಹೇಳ ಬಹುದು. ಲಲಾಟ ಬಿಂಬದ ಮಧ್ಯದಲ್ಲಿರುವ ದೇವತೆ ಲಕ್ಷ್ಮೀ ಹಾಗೂ ಉತ್ತರಾಂಗದಲ್ಲಿರುವ ಸಪ್ತಮಾತೃಕೆ ಯರ ಮಧ್ಯದ ದೇವತೆ ವೈಷ್ಣವಿಯಾಗಿರುವಳು. ಇಲ್ಲಿ ಲಕ್ಷ್ಮೀ ಮತ್ತು ವೈಷ್ಣವಿ ಹಾಗೂ ವೈಷ್ಣವ ದ್ವಾರ ಪಾಲಕರು, (ಇದರ ಬಿತ್ತಿಯಲ್ಲಿ) ವಿಷ್ಣುವಿನ ಅವತಾರದ ಕೆಲವು ಶಿಲ್ಪಗಳು ಕಾಣುವುದರಿಂದ ಇದೊಂದು ಮೂಲತಃ ಶಕ್ತಿ, ದೇಗುಲವಾಗಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಹಾಗೂ ಈ ದೇವಾಲಯವನ್ನು ಪಂಚಾಯತನ ಶಿಲ್ಪದಲ್ಲಿ ಕಾಣುವ ಒಬ್ಬ ಭಕ್ತ ಕಟ್ಟಿಸಿರ ಬಹುದೆಂದು ತರ್ಕಿಸಬಹುದು. ಏಕೆಂದರೆ ಶೈಲಿಯ ದೃಷ್ಟಿಯಿಂದ ದೇವಾಲಯ ಮತ್ತು ಶಿಲ್ಪಗಳು ಸು. ಕ್ರಿ.ಶ. ೧೧-೧೨ನೇ ಶತಮಾನದ್ದಾಗಿವೆ.

**ದುರಗನೋಕ್ಷ್ವರಿಯ ದೇಗುಲ**

ನಾರಾಯಣಪುರದ ಕೆರೆಯ ತೂಬಿನ ಹತ್ತಿರದ ಏರಿ ಮೇಲೆ ಇತ್ತೀಚಿನ ದೇವಿಯ ಮಂದಿರವಿದೆ. ಭವಾನಿ ಮಂದಿರವೆಂದು ಇದಕ್ಕೆ ಹೆಸರು. ಸು.ಕ್ರಿ.ಶ. ೧೨ನೇ ಶತಮಾನದ ದೇವಾಲಯದ ಕೆಲವು ಅವಶೇಷಗಳನ್ನು ಇಲ್ಲಿ ಸಂಗ್ರಹಿಸಿ ಇಡಲಾಗಿದೆ. ಇದರ ಹತ್ತಿರದ ಕೆರೆ ತೂಬಿನಲ್ಲಿ ಒಂದು ಚಾಮುಂಡಿಯ ಶಿಲ್ಪ ಹಾಗೂ ಇದರ ಪಕ್ಕ ಕ್ರಿ.ಶ. ೧೧೦೭ರ ಒಂದು ಕನ್ನಡ ಶಾಸನವು ಬೆಳಕಿಗೆ[4] ಬಂದಿವೆ. ಈ ಶಾಸನದ ಮೇಲೆ ನೃತ್ಯಭಂಗಿ ಯಲ್ಲಿ ತೋರಿಸಿದ ಚಾಮುಂಡಿಯ ಚಿತ್ರವಿದೆ. ಚತು ರ್ಭುಜಗಳನ್ನು ಹೊಂದಿದ ಈ ದೇವಿಯ ಕೈಗಳಲ್ಲಿ ಖಡ್ಗ, ಡಮರು, ತ್ರಿಶೂಲ ಮತ್ತು ಕಪಾಲಗಳಿವೆ. ವಸ್ತ್ರಾ ಭರಣಗಳಿಂದ ಈ ದೇವಿಯು ಅಲಂಕೃತಳಾಗಿದ್ದಾಳೆ. ಪಕ್ಕದಲ್ಲಿ ಸೂರ್ಯ, ಚಂದ್ರ, ಆಕಳು-ಕರುಗಳಿವೆ. ಈ ಫಲಕದಲ್ಲಿರುವ ಶಾಸನದಲ್ಲಿ ದುರಗನೋಕ್ಷ್ವರಿ ದೇವಿಯ ಉಲ್ಲೇಖವಿದೆ. ಈ ದೇವಿಯ ಪೂಜೆ ನಿಮಿತ್ತ ಹೂ ದೋಟವನ್ನು ಕಲ್ಯಾಣ ಚಾಲುಕ್ಯ ದೊರೆ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ (ಕ್ರಿ.ಶ. ೧೧೦೭) ಚಾಮುಣ್ಡಿ ಕೊಟವಿಯ ಗೊರವ ಮತ್ತು ಅಂಬಯ ಶ್ರೀ ಬಲ್ಲಹದೇವ ದತ್ತಿ ನೀಡಿದರೆಂದು ಕಾಣುತ್ತದೆ.

ಬಸವ ಕಲ್ಯಾಣ ತಾಲೂಕಿನಲ್ಲಿ ಚಣ್ಡಕಾಪುರ ವೆಂಬ ಗ್ರಾಮವಿದೆ. ಅಲ್ಲಿಯ ಚಂಡಿಕಾದೇವಿ ಹೆಸರು ಈ ಗ್ರಾಮಕ್ಕೆ ಬಂದಿರುವುದೆಂದು ಅಲ್ಲಿಯ ನಂಬಿಕೆ. ಇಲ್ಲಿ ಕಾಣುವ ಗೊರವ ಚಾಮುಣ್ಡಿ ಕೊಟವಿಯನಾಗಿ ದ್ದಾನೆ. ಇಲ್ಲಿ ಕಾಣುವ ನಾಮಾಂಕಿತಗಳಿಂದ ಚಣ್ಡಕಾ ಪುರದ ಮೂಲ ಹೆಸರು ಚಾಮುಣ್ಡಿ ಕೊಟವಿ ಇರ ಬಹುದು. ಇದಲ್ಲದೆ ಈ ಶಾಸನದಲ್ಲಿ ದತ್ತಿ ನೀಡಿದ ಬನದ ಮೇರೆಗಳನ್ನು ಹಾಗೂ ಈ ಧರ್ಮವನ್ನು ಪ್ರತಿ ಪಾಳಿಸಿದವನು ವೈಕುಂಠ ಸ್ಥಳವನ್ನು ಸೇರುವನೆಂದೂ, ಕೊನೆಯಲ್ಲಿ ಜಯಶ್ರೀ ಧರ್ಮ ಎಂದು ಉಲ್ಲೇಖಿಸಿರು ವುದು ಗಮನಾರ್ಹ. ಈ ದೇವಿಯ ಮೂಲ ಶಿಲ್ಪ, ದೇವಾಲಯವಿದ್ದ ಸ್ಥಳ, ದೇವಾಲಯದ ಅವಶೇಷಗಳು ಮತ್ತು ನಾರಾಯಣಪುರದ ಪ್ರಾಚೀನ ಇತಿಹಾಸವನ್ನು ಅವಲೋಕಿಸೋಣ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಾರಾಯಣ ಪುರವು ಒಂದು ಮಹತ್ವದ ವೈಷ್ಣವ ಕೇಂದ್ರವಾಗಿತ್ತೆಂದು

4 ಲೇಖಕರ ಅನ್ವೇಷಣೆ ಮತ್ತು ಅಭ್ಯಾಸದಲ್ಲಿ ತಿಳಿದು ಬಂದಿದೆ.

ತಿಳಿಯಲಾಗಿದೆ. ನಾರಾಯಣ ದೇವಸ್ಥಾನ ಕ್ರಿ.ಶ. ೧೧೧೬ರಲ್ಲಿ ಇದ್ದಿತೆಂದು ಬಸವ ಕಲ್ಯಾಣದ ಒಂದು ಶಾಸನದಿಂದ[5] ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯ ಅರಸ ಆರನೇ ವಿಕ್ರಮಾದಿತ್ಯನ ಆಸ್ಥಾನ ಕವಿಯಾಗಿದ್ದ ಬಿಲ್ಹಣನ ವಿಕ್ರಮಾಂಕದೇವ ಚರಿತೆಯಲ್ಲಿ ನಾರಾಯಣ ಪುರ ಕೆರೆಯ ಪರಿಸರವನ್ನು ಸೊಗಸಾಗಿ ವರ್ಣಿಸಿದ್ದಾನೆ. ಹಾಗೂ ಕೊಂಡಗುಳಿಯ ಒಂದು ಶಾಸನ[6]ದಿಂದ ಬಹುಶಃ ಈ ನಾರಾಯಣಪುರದ ಕೆರೆಯನ್ನು ೧೧ನೆಯ ಶತಮಾನದಲ್ಲಿ ಕಟ್ಟಿಸಿದರೆಂದು ಕಾಣುತ್ತದೆ. ಶಾಸನ ಗಳಲ್ಲಿ[7] ಈ ಗ್ರಾಮದ ಹೆಸರು ರಾಯ ನಾರಾಯಣಪುರ ವೆಂದೂ ಉಲ್ಲೇಖಗೊಂಡಿದೆ. ನಾರಾಯಣಪುರದ ಶಿವದೇವಾಲಯದ ಮುಂದಿರುವ ಕ್ರಿ.ಶ. ೧೧೩೨ರ ಒಂದು ಶಾಸನ[8]ವು ಈ ಗ್ರಾಮದ ಒಂದು ಹೊಲದಲ್ಲಿ ಇದ್ದುದ ದಾಗಿದ್ದು. ಇದರಲ್ಲಿ ಉತ್ತರೇಶ್ವರ ದೇವರ ಹಾಗೂ ರಾಯ ನಾರಾಯಣಪುರದ ಉಲ್ಲೇಖಗಳಿವೆ. ಈಗ ಈ ಗ್ರಾಮದಲ್ಲಿ ಶಿವದೇವಾಲಯ ಮತ್ತು ಅದರ ಪಕ್ಕ ದಲ್ಲಿ ಒಂದು ವಿಷ್ಣು ದೇವಾಲಯವಿದ್ದು ಇದರ ಹತ್ತಿರ ಘಟ್ಟಿವಾಳಯ್ಯ ಎಂಬ ಹೆಸರಿನ ಒಂದು ಶಿವ ದೇವಾ ಲಯವಿದೆ. ಹಾಗೂ ಈ ಗ್ರಾಮದ ಪೂರ್ವದಿಕ್ಕಿನಲ್ಲಿ ಹಾಳಾದ ಇನ್ನಿತರ ದೇವಾಲಯಗಳ ಅವಶೇಷಗಳಿವೆ. ಇನ್ನುಳಿದ ಶಿಲಾ ಶಾಸನಗಳು ಕ್ರಿ.ಶ. ೧೧ ರಿಂದ ೧೬ನೇ ಶತಮಾನಕ್ಕೆ ಸೇರಿದ್ದಾಗಿವೆ. ಈ ಶಾಸನಗಳಲ್ಲೂ ಇಲ್ಲಿಯ ದೇವಿ ದೇವಸ್ಥಾನದ ಉಲ್ಲೇಖ ಕಂಡು ಬರುವುದಿಲ್ಲ. ಈ ವಿವರಗಳಿಂದ ಕೇವಲ ಈ ಗ್ರಾಮದ ಕೆರೆ, ಶೈವ–ವೈಷ್ಣವ ದೇವಾಲಯಗಳ ಹೆಸರುಗಳು ಮಾತ್ರ ಗೊತ್ತಾ ಗುತ್ತವೆ. ಇಲ್ಲಿಯ ಶಿವ ದೇವಾಲಯ ಮೂಲತಃ ದೇವಿಯ ದೇಗುಲವೆಂಬುದು ನಾವು ಒಪ್ಪಿಕೊಂಡರೆ ಇಲ್ಲಿ ೧೧–೧೨ನೇ ಶತಮಾನದಲ್ಲಿ ಎರಡು ದೇವಿಯ ದೇಗುಲ ಗಳಿದ್ದವೆಂದು ಹೇಳಬಹುದು. ಹಾಗೂ ಶಾಸನ ದೊರೆತ ಸ್ಥಳದಲ್ಲಿಯೇ ದುರಗಪರಮೇಶ್ವರಿ ದೇವಾಲಯವಿದ್ದಿರ ಬೇಕು.

## ಗುರ್ಜರ ಮಲಯಮತಿ ಮಹಾದೇವಿಯ ದೇಗುಲ

ಬಸವ ಕಲ್ಯಾಣದ ಕ್ರಿ.ಶ. ೧೧೧೭ರ ಒಂದು ಶಾಸನದಲ್ಲಿ ಗೂರ್ಜರ ಮಲಯಮತಿ ಮಹಾದೇವಿ ದೇಗುಲದ ಉಲ್ಲೇಖವಿದೆ. ಈ ಶಾಸನವು ಈ ದೇಗುಲದ ಪಡುವಣ ಅಂದರೆ ಪೂರ್ವಕ್ಕೆ ನಾರಾಯಣ ದೇವಾಲಯ ವಿದ್ದಿತೆಂದೂ ಹೇಳುತ್ತವೆ. ಆದರೆ ಈ ಶಾಸನದ ಮೂಲ ಸ್ಥಳ ತಿಳಿದಿಲ್ಲ. ಇದರಲ್ಲಿ ನಾರಾಯಣಪುರದ ಉಲ್ಲೇಖವಿಲ್ಲ. ಆದುದರಿಂದ ಬಸವ ಕಲ್ಯಾಣದ ನಗರದ ಪರಿಸರದಲ್ಲಿ ಈ ಶಾಸನ ದೊರತಿರುವ ಸಾಧ್ಯತೆ ಹೆಚ್ಚು. ಈಗಾಗಲೇ ಆರನೇ ವಿಕ್ರಮಾದಿತ್ಯನ ಒಬ್ಬ ರಾಣಿಯಾಗಿದ್ದ ಮಲಯಮತಿ ಮಹದೇವಿಯು ಮಲಯವತಿ, ಮಲವತಿದೇವಿ, ಮಲಯಮತಿಯರಸಿ ಎಂದು ಶಾಸನಗಳಲ್ಲಿ ಕರೆಸಿಕೊಂಡಿರುವಳು.[9] ಪ್ರಥಮ ವಾಗಿ ಈಕೆ ಚಿಕ್ಕೇರೂರಿನ[10] ಕ್ರಿ.ಶ. ೧೦೯೪–೯೫ರಲ್ಲಿ ಕಾಣಿಸಿಕೊಳ್ಳುವಳು. ಕ್ರಿ.ಶ. ೧೧೦೭ ಗುಲಬರ್ಗಾ ಶಾಸನದಲ್ಲಿ,[11] ಕ್ರಿ.ಶ. ೧೧೧೧ ಅಲಂಪೂರ ಶಾಸನ ದಲ್ಲಿ,[12] ಕ್ರಿ.ಶ. ೧೧೧೬ ಧಾರವಾಡ ಶಾಸನ[13]ದಲ್ಲಿ ಕಾಣಿಸಿಕೊಂಡಿದ್ದಾಳೆ. ಇವಳು ಪಿರಿಯರಸಿ ಪಟ್ಟ ಮಹಾದೇವಿ ಮಲಯಮತಿ ಮಹದೇವಿ ಎಂದು ಧಾರವಾಡ ಶಾಸನದಲ್ಲಿ ಕರೆಸಿಕೊಂಡಿರುವಳು. ಇವಳ

---

5 ಕುಲಕರ್ಣಿ, ವಿ.ಎಸ್., ೧೯೭೬ ಅದೇ.

6 ಕಲಬುರ್ಗಿ ಎಂ.ಎಂ., ಕೊಂಡಗುಳಿ ಕೇಶಿರಾಜನ ಶಾಸನಗಳು

7 ಲೇಖಕರ ಅನ್ವೇಷಣೆಯ ಅಧ್ಯಯನದಲ್ಲೂ ಕಂಡು ಬಂದಿದೆ.

8 ಕುಲಕರ್ಣಿ ವಿ.ಎಸ್., ಅದೇ ಪುಟ ನಂ. ೪೩೨

9 ಚನ್ನಕ್ಕ ಎಲಿಗಾರ : ೧೯೮೭, ಪ್ರಾಚೀನ ಕರ್ನಾಟಕದ ರಾಣಿಯರು, ಪು. ೫೧, ಧಾರವಾಡ

10 ಬಿ.ಜಿ. ii, ಪು. ೮೩೫

11 ಎಪಿಜಿಎಸಿಎಸ್. ೧೭

12 ಎ ಆರ್ ಐ ಇ ೧೯೫೦-೫೧, ಎಪಿಪಿಬಿ. ನಂ. ೨೭

13 ಧಾರವಾಡ ತಾಲೂಕಿನ ಶಾಸನಗಳು, ೩೩

ಮಗಳನ್ನು ಮದುವೆಯಾದ ಕದಂಬ ಎರಡನೇ ಜಯಕೇಶಿಯ ವಿಷಯ ನರೇಂದ್ರ ಶಾಸನದಲ್ಲಿದೆ.[14] ಇವನು ಸೌರಾಷ್ಟ್ರದ ಸೋಮೇಶ್ವರ ದೇವರಿಗೆ ದತ್ತಿಯನ್ನು ಕ್ರಿ.ಶ. ೧೧೨೫ರಲ್ಲಿ ನೀಡಿರುವುದರಿಂದ[15] ಇವಳು ಸೌರಾಷ್ಟ್ರ ಅಂದರೆ ಗೂರ್ಜರ ದೇಶದವಳೆಂದು ಅಭಿಪ್ರಾಯ ಪಡಬಹುದಾಗಿದೆ. ಇದರಿಂದಲೇ ಇಲ್ಲಿ ಇವಳು ಮೂಲ ಹೆಸರು ಗೂರ್ಜರ ಮಲಯಮತಿ ಮಹದೇವಿಯಾಗಿರುವ ಸಾಧ್ಯತೆ ಇದೆ.

ಗೂರ್ಜರ ಮಲಯಮತಿ ಮಹಾದೇವಿಯು ಕ್ರಿ.ಶ. ೧೦೯೫ ರಿಂದ ಕ್ರಿ.ಶ. ೧೧೧೭ರವರೆಗೆ ಕಲ್ಯಾಣ ಚಾಲುಕ್ಯರ ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಹತ್ವದ ಸ್ಥಾನ ಗಳಿಸಿರುವುದು ತಿಳಿದ ಸಂಗತಿಯಾಗಿದೆ. ಆದರೆ ಈಕೆಯು ಕ್ರಿ.ಶ. ೧೧೭೫ರ ವರೆಗೆ ಇದ್ದಳೆಂದು ಡಾ. ಚನ್ನಕ್ಕ ಎಲಿಗಾರ ಅವರು[16] ಹೇಳಿದ್ದಾರೆ. ಹಾಗಾದಲ್ಲಿ ಈಕೆ ೮೦ ವರ್ಷಗಳಷ್ಟು ದೀರ್ಘಕಾಲ ಇದ್ದಳೆಂದು ಹೇಳಬೇಕಾಗುತ್ತದೆ. ಆದರೆ ಈಕೆಯು ಕ್ರಿ.ಶ. ೧೦೯೫ರಿಂದ ಕ್ರಿ.ಶ ೧೧೧೭ರವರೆಗೆ ಇದ್ದಳೆಂದು ಅಭಿಪ್ರಾಯ ಪಡುವುದು ಉಚಿತವೆನಿಸುತ್ತದೆ. ಈಕೆಯು ಕಟ್ಟಿಸಿದ ದೇವಾಲಯದ ಬಗ್ಗೆ ಅಥವಾ ಆ ದೇವಾಲಯದ ಅವಶೇಷಗಳನ್ನು ಇನ್ನೂ ಗುರುತಿಸಬೇಕಾಗಿದೆ.

ಜಿಲ್ಲೆಯಲ್ಲಿ ಅನೇಕ ಕಡೆ ಬಿಡಿ ಶಿಲ್ಪಗಳು, ಶಿಲ್ಪ ಫಲಕಗಳು ದೊರೆತಿದ್ದು ಅನೇಕ ಶಿಲ್ಪಗಳು, ದೇವಿ ದೇವಾಲಯಗಳು ಅಸ್ತಿತ್ವದಲ್ಲಿದ್ದುದನ್ನೂ ಸೂಚಿಸುತ್ತವೆ. ಅವುಗಳಲ್ಲಿ ಬಸವ ಕಲ್ಯಾಣದ ಗೋಸಾಯಿ ಗಲ್ಲಿಯ ಮಾರುತಿ ಮಂದಿರ ಹಿಂಭಾಗದ ಒಂದು ಮನೆಯ ಗೋಡೆಯಲ್ಲಿ ದೇವಿಯ ಸ್ತಂಭ ತೋರಣವಿರುವುದು ಗಮನೀಯ. ನಾರಾಯಣಪುರದ ಶಿವ ದೇವಸ್ಥಾನದಲ್ಲಿರುವ ಹಸ್ತಿ ಹಸ್ತದ ರೀತಿಯಲ್ಲಿ, ಶೈಲಿಯಲ್ಲಿ ಈ ಫಲಕವಿದೆ. ಈ ಫಲಕದ ಮಧ್ಯದಲ್ಲಿ ಲಕ್ಷ್ಮೀದೇವಿಯು ಎತ್ತರದ ಪೀಠದ ಮೇಲೆ ಪದ್ಮಾಸನದಲ್ಲಿದ್ದು ಕಮಲಗಳನ್ನು ತನ್ನ ದ್ವಿಭುಜಗಳ ಕೈಯಲ್ಲಿ ಹಿಡಿದಿರುತ್ತಾಳೆ. ಕೆಳಗೆ ಸಾಲಾಗಿ ಹಾರ ಹಿಡಿದು ಹಾರಾಡುವ ಭಂಗಿಯಲ್ಲಿನ ಅಪ್ಸರೆಯರು, ಬದಿಗಳಲ್ಲಿ ಚೌರಿ ಹಿಡಿದು ನಿಂತ ಸೇವಕಿಯರು ಹಾಗೂ ನೃತ್ಯಗಾರರು, ವಾದ್ಯ ಬಾರಿಸುವವರು ಇದ್ದಾರೆ. ಈ ಶಿಲ್ಪವು ಕ್ರಿ. ಶ. ೧೧-೧೨ನೇ ಶತಮಾನದ್ದಾಗಿದ್ದು ಶೈಲಿಯಲ್ಲಿ ಮಧ್ಯ ಭಾರತದ ಶಿಲ್ಪಗಳನ್ನು ಹೋಲುತ್ತದೆ.

ಇದರಿಂದ ಈ ಶಿಲ್ಪದ ಗಾತ್ರ, ವೈಶಿಷ್ಟ್ಯ ಕಾಲಮಾನ ಮತ್ತು ಇಲ್ಲಿರುವ ಈಗಿನ ಅಂಬಾ ಭವಾನಿ ಮಂದಿರಗಳ ಸ್ಥಳಗಳ ಸಾಮಿಪ್ಯದಿಂದ ಈ ಶಿಲ್ಪವು ಮೂಲತಃ ಒಂದು ದೇವಿ ದೇಗುಲದ ಮುಂದೆ ನೆಟ್ಟ ಸ್ತಂಭ ತೋರಣ ಇದಾಗಿರಬಹುದು.

ಈ ನಗರದ ಇನ್ನೊಂದು ಕಡೆ ಸ್ತಂಭತೋರಣದ ಭಿನ್ನ ಫಲಕವಿದೆ. ತ್ರಿಕೋನಾಕಾರದಲ್ಲಿರುವ ಈ ಫಲಕದಲ್ಲಿ ಪೂರ್ಣ ಕುಂಭದ ಮೇಲೆ ಪದ್ಮಗಳನ್ನು ಹಿಡಿದು ಪದ್ಮಾಸನದಲ್ಲಿ ಲಕ್ಷ್ಮೀ ಕುಳಿತಿರುವಳು. ಇವಳ ತೊಡೆಯ ಬದಿಗಳಲ್ಲಿ ಆನೆಗಳು ಕುಂಭಗಳನ್ನು ಸೊಂಡಿಲಲ್ಲಿ ಹಿಡಿದು ಎತ್ತಿ ನಿಂತಿವೆ. ಇದರಿಂದ ಈ ಫಲಕವು ಗಜಲಕ್ಷ್ಮಿಯ ಸ್ತಂಭ ಫಲಕವೆಂದು ಹೇಳಬಹುದು. ಸು. ಕ್ರಿ.ಶ. ೧೧-೧೨ನೇ ಶತಮಾನದ ಶಿಲ್ಪ ಈ ಮೇಲೆ ತಿಳಿಸಿದ ದೇಗುಲಕ್ಕೆ ಇದೂ ಸೇರಿರಬಹುದೆಂದು ತರ್ಕಿಸಬಹುದು.

ಬಸವ ಕಲ್ಯಾಣ ತಾಲ್ಲೂಕಿನ ಚಣ್ಣಕಾಪುರದ ಅಮೃತಗೊಂಡ ದೇವಾಲಯದ ಗೋಡೆಯ ಒಂದು ತೋರಣದಲ್ಲಿ ಫಲಕವಿದೆ. ಫಲಕದಲ್ಲಿ ಮಕರ ತೋರಣದ ಮಧ್ಯೆ ಮಹಿಷಾಸುರ ಮರ್ಧಿನಿಯನ್ನು ಬಹು ಆಕರ್ಷಣೀಯವಾಗಿ ತೋರಿಸಲಾಗಿದೆ. ಕ್ರಿ. ಶ. ೧೧-೧೨ನೇ ಶತಮಾನದ ದೇವಿಗೆ ಎಂಟು ಭುಜಗಳಿದ್ದು ವಿವಿಧ ಆಯುಧಗಳನ್ನೂ ಕೈಗಳಲ್ಲಿ ಹಿಡಿದು ಬಲಗಾಲಿನಲ್ಲಿ ಕೋಣನನ್ನು ಮೆಟ್ಟಿ ನಿಂತಿದ್ದಾಳೆ. ಕತ್ತರಿಸಿದ ಕೋಣದ ತಲೆಯಿಂದ ಹೊರಬಂದ ಸುರನನ್ನು ಸಂಹಾರ

14 ಅದೇ, ೩೯

15 ಅದೇ, ೫

16 ಚನ್ನಕ್ಕ ಎಲಿಗಾರ, ಅದೇ ಪು. ೬೫

ಮಾಡುತ್ತಿರುವಳು. ಇದು ಅಲ್ಲಿಯ ದೇವಿ ದೇಗುಲದ ತೋರಣ ಫಲಕವೆಂದು ಹೇಳಬಹುದು. ಈ ಗ್ರಾಮದಲ್ಲಿ ಇದಲ್ಲದೆ ಚಾಮುಂಡಿಯ ಶಿಲ್ಪವಿರುವುದನ್ನು ಸ್ಮರಿಸಬಹುದು.

ಹುಮನಾಬಾದ ತಾಲೂಕಿನ ಜಲಸಂಗಿ ಗ್ರಾಮದ ಮಹದೇವ ದೇವಾಲಯ ಮತ್ತು ಬಸವ ಕಲ್ಯಾಣ ತಾಲೂಕಿನ ಉಮಾಪುರದ ಉಮಾ-ದೇವಾಲಯಗಳು ದೇವಿಯ ದೇವಾಲಯಕ್ಕೆ ಸೇರಿದವಾಗಿವೆ. ಜಲಸಂಗಿಯ ಮಹದೇವ ದೇವಾಲಯದ ಗರ್ಭಗೃಹದ ಲಲಾಟಬಿಂಬದಲ್ಲಿ ಸರಸ್ವತಿ ಈ ದೇವಾಲಯದ ಬಿತ್ತಿಯಲ್ಲಿ ವಿವಿಧ ರೀತಿಯ ಸುರ ಸುಂದರಿಯರು, ಗಣೇಶ, ಚಾಮುಂಡಿ, ಸರಸ್ವತಿ, ನರಸಿಂಹ, ನಟರಾಜ (ದೇವಕೋಷ್ಟಕಗಳಲ್ಲಿ) ಇತ್ಯಾದಿ ಚಿತ್ರಗಳಿವೆ. ಒಬ್ಬ ಸುಂದರಿ ನಿಂತು ಲೇಖನಿಯಿಂದ ಶಿಲಾಶಾಸನ ಬರೆಯುತ್ತಿರುವುದು ಮತ್ತು ಈ ದೇಗುಲದ ಚಿತ್ರಗಳ ವೈಶಿಷ್ಟ್ಯದಿಂದ ಇದೊಂದು ಮೂಲತಃ ದೇವಿ ದೇವಾಲಯವಾಗಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

**ಶಿಲ್ಪಗಳು :** ಬೀದರ ಜಿಲ್ಲೆಯ (ಸಾಮಾನ್ಯವಾಗಿ) ಪ್ರತಿಯೊಂದು ಹಳ್ಳಿಯಲ್ಲೂ ದೇವಿ ಶಿಲ್ಪಗಳಿದ್ದು ಈ ಶಿಲ್ಪಗಳು ಸಾಮಾನ್ಯವಾಗಿ ಕಟ್ಟಿಗೆ ಮತ್ತು ಲೋಹದ ವಿಗ್ರಹಗಳಿದ್ದು ಇವು ಇತ್ತೀಚಿನ ಕಾಲದ್ದಾಗಿವೆ. ಉಳಿದವು ಶಿಲೆಯ ಶಿಲ್ಪಗಳಾಗಿವೆ. ಇವುಗಳಲ್ಲಿ ಮಹಿಷಾಸುರ ಮರ್ಧಿನಿ, ದುರ್ಗಾ, ಭೈರವಿ, ಚಾಮುಂಡಿ, ಕಾಳಿ, ಸರಸ್ವತಿ, ಮಹಾಲಕ್ಷ್ಮೀ ಮುಖ್ಯವಾದವು. ಇನ್ನುಳಿದವು ನಾಗಿನಿ, ಯಕ್ಷಿಯರ ಶಿಲ್ಪಗಳಾಗಿವೆ.

ಬಸವ ಕಲ್ಯಾಣ ತಾಲೂಕಿನ ಮೊರಖಂಡಿಯಲ್ಲಿರುವ ಸಪ್ತ ಮಾತೃಕೆಯರ ಮತ್ತು ಮಹಿಷಾಮರ್ಧಿನಿ ಶಿಲ್ಪಗಳು[17] ಅತ್ಯಂತ ಪ್ರಾಚೀನ. ಇವು ಸುಮಾರು ಕ್ರಿ.ಶ. ೬ನೇ ಶತಮಾನಕ್ಕೆ ಸೇರಿದ್ದಾಗಿವೆ. ಉಳಿದಂತೆ ಬಾಲ್ಕಿ ತಾಲೂಕಿನ ಬ್ಯಾಲಳ್ಳಿಯ ಮಾರುತಿ ಮಂದಿರ ಗೋಡೆಯ (ಮಹಿಷಾಸುರ ಮರ್ದಿನಿ) ಶಿಲ್ಪ ಕ್ರಿ. ಶ. ೯ನೇ ಶತಮಾನಕ್ಕೂ, ಬಸವಕಲ್ಯಾಣ ತಾಲ್ಲೂಕಿನ ಚಂಡಕಾಪುರದ ಮಾರುತಿ ಮಂದಿರ ಹಿಂದಿನ ಚಾಮುಂಡಿ (ರುಂಡ ಭಾಗ ಮುರಿದು ಕೆಳಗೆ ಬಿದ್ದಿದೆ), ಭಾಲ್ಕಿ (ಭಾಲ್ಕಿ ತಾ.) ಮತ್ತು ಹಳ್ಳಿಖೇಡ- (ಬಿ) (ಹುಮನಾಬಾದ ತಾ)ನ ಮಹಿಷಾಸುರಮರ್ಧಿನಿ ಶಿಲ್ಪಗಳು ಸು.ಕ್ರಿ.ಶ. ೧೦ನೇ ಶತಮಾನಕ್ಕೂ ಬಸವ ಕಲ್ಯಾಣ ತಾಲೂಕಿನ ಸಸ್ತಾಪುರ ದೇವಿ ಮಂದಿರದ ಮಹಿಷಾಸುರ ಮರ್ಧಿನಿ, ಬಸವಕಲ್ಯಾಣ ನಗರ ಮತ್ತು ಕೋಟೆಯಲ್ಲಿಯ ಪ್ರಾಚ್ಯ ವಸ್ತುಗಳ ಮ್ಯೂಜಿಯಂನಲ್ಲಿರುವ ಹಲವಾರು ದೇವಿ ಶಿಲ್ಪಗಳು ; ನಾರಾಯಣಪುರದ ಕೆಲವು ದೇವಿ ಶಿಲ್ಪಗಳು, ಮುಚ್ಚಳಂಬ (ರಾಮಲಿಂಗ ಗುಡಿ ಮುಂದೆ) ಹುಲಸೂರು, ಚಂಡಕಾಪುರ (ಇನ್ನಿತರ ದೇವಿ ಶಿಲ್ಪಗಳು) ಉಜ್ಜಳಾಂಬ, ಉಜ್ಜನಿ, ದನ್ನೂರ (ಬಿ) ಬೇಲೂರು, ಮಿರ್ಕಲ್, ಶಿವಪುರ, ಹಿಪ್ಪರಗಿ, ರಾಮೇಶ್ವರ, ನೀಲಕಂಟ, ಪರ್ತಾಪುರ, ಇತ್ಯಾದಿ ಗ್ರಾಮಗಳು ; ಭಾಲ್ಕಿ ತಾಲೂಕಿನ ಭಾಲ್ಕಿ ಅಂಬೆಸಂಗವಿ, ಮಾಸಿಮೋಡ, ಲಖಣಗಾಂ, ಬೀರಿ, ಚಳಕಾಪುರ, ಯಣ್ಣಕುರ, ಅಟ್ಟರಗಾ, ದನ್ನೂರ, ಕಣಜಿ, ತೂಗಾಂ (ಕಟ್ಟೆ), ಗುಂಜರಗಾ, ಮಾಸಿಮೋಡ, ಮೆಹಕೆರಾ, ಬೀದರ ತಾಲೂಕಿನ ಬೀದರ್, ಸಂಗೊಳಗಿ, ಖಿಣಿರಂಜೋಳ, ಆಲೆಂಬರ, ಹುಮನಾಬಾದ ತಾಲೂಕಿನ ಹುಮನಾಬಾದ್, ಮೂಡಬಿ, ಜಲಸಂಗಿ, ಹಿಲಾಲ್‌ಪುರ, ಘಾಜ್ ಬೋರಾಳ, ಹಳ್ಳಿಖೇಡ (ಬಿ), ಉಡಬಾಳ್, ಭೀಮಳಖೇಡ ; ಔರಾದ್ ತಾಲೂಕಿನ ಔರಾದ, ಇತ್ಯಾದಿ ಕಡೆಗಳಲ್ಲಿ ಒಂದಿಲ್ಲ ಒಂದು ದೇವಿ ಶಿಲ್ಪಗಳಿದ್ದು ಇವು ಸುಮಾರು ಕ್ರಿ.ಶ. ೧೧ರಿಂದ ಕ್ರಿ.ಶ. ೧೩ನೇ ಶತಮಾನಕ್ಕೆ ಸೇರಿದ್ದಾಗಿವೆ. ಪಾರ್ವತಿ ಅಥವಾ ಉಮೆಯು ಶಿವನ ಸಂಗಡ, ಲಕ್ಷ್ಮೀಯು ವಿಷ್ಣುವಿನ ಸಂಗಡ ಕುಳಿತ ಮತ್ತು ಸೀತೆಯು ರಾಮನ ಸಂಗಡ ನಿಂತ ಶಿಲ್ಪಗಳು ಅಲ್ಲಲ್ಲಿ ಕಾಣುತ್ತವೆ. ಬಸವ ಕಲ್ಯಾಣದ ಕೋಟೆಯಲ್ಲಿರುವ ಪ್ರಾಚ್ಯ ವಸ್ತುಗಳ ಮ್ಯೂಜಿಯಂನಲ್ಲಿರುವ (ಒಡೆದ) ಬೃಹದಾಕಾರದ ಚಾಮುಂಡಿ ಶಿಲ್ಪ ಮತ್ತು ಇಲ್ಲಿಯ ಪರಶುಕಟ್ಟೆಯ ಬದಿಗೆ ದೊರೆತ ಮತ್ತೊಂದು ದೊಡ್ಡ ದೇವಿ ಶಿಲ್ಪ (ಈಗ ದೆಹಲಿಯಲ್ಲಿರುವುದೆಂದು ಹೇಳಲಾಗಿದೆ)ಗಳು ಮಹತ್ವಾದ್ದಾಗಿವೆ. ಬೀದರ ಜಿಲ್ಲೆಯಲ್ಲಿ ಇಲ್ಲಿಯವರೆಗೆ

---

೧೭ ಷಡಕ್ಷರಯ್ಯ ಆರ್. ಎಂ. ೧೯೯೧ : ಬಹಿರಂಗ ಶುದ್ಧಿ, ಪು. ೧ ಬಸವಕಲ್ಯಾಣ

ಕಂಡು ಬಂದ ದೇವಿ ಶಿಲ್ಪಗಳು ಅಧ್ಯಯನ ಈ ರೀತಿಯಿದೆ.

ಬಸವಕಲ್ಯಾಣ ತಾಲೂಕಿನ ಮೊರಖಂಡಿಯ ಸಿದ್ದೇಶ್ವರ ದೇವಾಲಯದ ಅವರಣದಲ್ಲಿ ಬ್ರಾಹ್ಮಿ, ವೈಷ್ಣವಿ, ಇಂದ್ರಾಣಿ, ವಾರಾಹಿ ಶಿಲ್ಪಗಳಿದ್ದು, ಈ ಶಿಲ್ಪಗಳ ಪದ್ಮ ಪೀಠಗಳಲ್ಲಿ ಕ್ರಮವಾಗಿ ಆ ದೇವಿಯರ ಲಾಂಛನಗಳಾದ ಹಂಸ, ಗರುಡ, ಆನೆ, ಎಮ್ಮೆಯ ಶಿಲ್ಪ ಗಳನ್ನು ಬಿಡಿಸಿದೆ. ಈ ಶಿಲ್ಪಗಳೆಲ್ಲವೂ ಕ್ರಿ.ಶ.ಸು ೮ನೆಯ ಶತಮಾನಕ್ಕೆ ಸೇರಿದವುಗಳಾಗಿವೆ.

**ಚಾಮುಂಡಿ** : (ಕುಳಿತ ಭಂಗಿ) ಚಾಮುಂಡಿಯ ಕುಳಿತ ಮತ್ತು ನೃತ್ಯ ಭಂಗಿಯಶಿಲ್ಪಗಳಿದ್ದು ಈಕೆಯು ಅರ್ಧಪರ್ಯಂ ಕಾಸನ ದಲ್ಲಿ ಕುಳಿತ ಭಂಗಿ ಇದ್ದು ಚತುರ್ಭುಜಗಳನ್ನು ಹೊಂದಿದ ಕೆಲವು ಶಿಲ್ಪಗಳು ಮಾತ್ರ ಕಾಣಿಸಿ ಕೊಂಡಿವೆ ಬಸವ ಕಲ್ಯಾಣ, ಚಂಡಕಾಪುರ ನಾರಾಯಣಪುರ ಮತ್ತು ಮೊರಖಂಡಿ ಯಲ್ಲಿರುವ ಶಿಲ್ಪಗಳು ಬಹುಮುಖ್ಯವಾಗಿವೆ. ಚಾಮುಂ-ಡಿಯ ಶಿಲ್ಪವು ಮೊರಖಂಡಿಯ ಸಿದ್ದೇಶ್ವರ ದೇವಸ್ಥಾನದ ದಾರಿಬದಿಯಲ್ಲಿ ಹಾಗೂ ಈ ಊರ ಅಗಸಿಯ ಒಂದು ಗೂಡಿನಲ್ಲಿ ಕುಳಿತ ಭಂಗಿಯ ಶಿಲ್ಪಗಳಿವೆ. ಈ ಎರಡು ಶಿಲ್ಪಗಳ ಲಕ್ಷಣಗಳು ಒಂದೇಯಿವೆ. ದುರದೃಷ್ಟವಶಾತ್ ಒಂದರ ಎಡಕುಚ, ಮುಖ ಮತ್ತು ಕೆಳಗಿನ ಬಲಗೈ ಒಡೆದಿವೆ. ಇಲ್ಲಿ ತೋಳಲ್ಲಿ ಹಾವನ್ನು ಕಂಠಹಾರ, ಬಳೆ, ಪಟ್ಟಿ, ಯಜ್ಞೋಪವೀತದಂತೆ ಕೊರಳಲ್ಲಿ ನರ ಮುಂಡಗಳ ಹಾರ, ಗಂಟೆಗಳ ಕಂಠಹಾರ, ಕಡಗ ಇತ್ಯಾದಿ ಆಭರಣಗಳನ್ನು ಧರಿಸಿರುವಳು. ತಲೆಯ ಕೂದಲನ್ನು ಹಿಂದುಗಡೆಯಿಂದ ತಲೆ ಪಕ್ಕದಲ್ಲಿ ಚೆಲ್ಲಿ ಕೊಂಡಿರುವಳು. ಕೈಗಳಲ್ಲಿ ಹಾವು, ಡಮರು, ತ್ರಿಶೂಲ ಮತ್ತು ಕಪಾಲಗಳ್ನು ಹಿಡಿದಿರುವಳು. ಈಕೆಯ ವಾಹನ ಗೂಗೆಯು ತನ್ನ ಎಡಗಾಲಿನ ಕೆಳಗಿದೆ. ಬಲಗಾಲಿನ ಕೆಳಗೆ ಒಂದು ನರಮುಂಡವಿರುವುದು. ಕೆಳಗಿನ ಬಲಗೈಯಲ್ಲಿ ಹಿಡಿದ ಹಾವಿನ ದೇಹವು ಕಾಲು ಕೆಳಗಡೆ ಸುರುಳಿಯಾಗಿ ಹರಿದಿದೆ. ಶೈಲಿಯ ದೃಷ್ಟಿ ಯಿಂದ ಈ ಎರಡೂ ಶಿಲ್ಪಗಳು ಸಿದ್ದೇಶ್ವರ ದೇವಾಲ ಯದ ಬಳಿಯ ಶಿಲ್ಪಗಳನ್ನೇ ಹೋಲುತ್ತಿದ್ದು ಸುಮಾರು ಕ್ರಿ. ಶ. ೮ನೇ ಶತಮಾನಕ್ಕೆ ಸೇರುತ್ತದೆ.

ಚಂಡಕಾಪುರದ ಮಾರುತಿ ಮಂದಿರ ಹಿಂಬದಿಯಲ್ಲಿ ಕ್ರಿ. ಶ. ೧೧ನೆಯ ಶತಮಾನಕ್ಕೆ ಸೇರಿದ ಒಂದು ಒಡೆದ ಚಾಮುಂಡಿ ಶಿಲ್ಪವಿದ್ದು, ಈಕೆಯ ತಲೆ ಭುಜಗಳು, ಮುಂಡೆ ಇತ್ಯಾದಿ ಭಾಗಗಳು ಮುರಿದಿವೆ. ತಲೆಯಿಂದ ತೊಡೆಯ ವರೆಗಿನ ಭಾಗವು ದುಂಡು ಶಿಲ್ಪದಲ್ಲಿದೆ. ಈಕೆಯು ಬಲಗಾಲನ್ನು ಕೆಳಗಡೆ ಪ್ರೇತದ ಮೇಲೆ ಇಟ್ಟಿರುವಳು. ಎಡಗಾಲನ್ನು ಮಡಚಿರುವಳು (ಅರ್ಧ ಪರ್ಯಂಕಾಸನ). ಧರಿಸಿದ ನರಮುಂಡ ಮಾಲೆಯು ಎರಡೂ ಕಾಲಗಳ ಮೇಲೆ ಇಳಿಬಿಡಲಾಗಿದೆ. ಮಣ್ಣಿ ಮುತ್ತಿನ ಕಂಠಹಾರ, ಕುಚಹಾರ, ಪಟ್ಟಿ, ಕಡಗ ಇತ್ಯಾದಿ ಆಭರಣಗಳನ್ನು ಧರಿಸಿದವಳು. ಇದೇ ಭಂಗಿ ಯಲ್ಲಿ ಕುಳಿತ ಶಿಲ್ಪ ನಾರಾಯಣಪುರದ ಶಿವಮಂದಿರದ ಬದಿಗೆ ಮತ್ತು ಕೆರೆಯ ತೂಬಿನಲ್ಲಿವೆ. ಈ ಶಿಲ್ಪದ ರುಂಡಭಾಗ ಮತ್ತು ಕೈಗಳು (ಮೇಲಿನ) ಮುರಿದು ಹೋಗಿದ್ದು ದೇಹದ ಯಾವ ಭಾಗವೂ ದುಂಡು ಶಿಲ್ಪ ದಲ್ಲಿಲ್ಲ. ಇಲ್ಲಿಯ ಕೆರೆಯ ತೂಬಿನ ಹತ್ತಿರದ ಶಿಲ್ಪದಲ್ಲಿ ತೊಡೆಯ ಮೇಲಿನ ಭಾಗ ದುಂಡಾಗಿದೆ. ಈ ಶಿಲ್ಪಗಳು ಸು. ಕ್ರಿ. ಶ. ೧೧ನೇ ಶತಮಾನದ್ದಾಗಿವೆ.

ನೃತ್ಯಭಂಗಿಯಲ್ಲಿರುವ ಚಾಮುಂಡಿ ಶಿಲ್ಪಗಳು ಈ ಜಿಲ್ಲೆಯ ಹಲವಾರು ಗ್ರಾಮಗಳಲ್ಲಿದ್ದು ಇವನ್ನು ಎರಡು ಪ್ರಕಾರವಾಗಿ ವಿಂಗಡಿಸಬಹುದು. ಮೊದಲ ಪ್ರಕಾರದ ಶಿಲ್ಪಗಳು ಸಾಮಾನ್ಯವಾಗಿ ದೇವಾಲಯದ ಹೊರ ಗೋಡೆ ಅಥವಾ ಬಿತ್ತಿಯ ಗೂಡುಗಳ ಭಾಗಕ್ಕೆ ಸೇರಿ ದ್ದಾಗಿವೆ. ಎರಡನೆಯದು ಕೇವಲ ಆರಾಧನೆಗಾಗಿ ನಿರ್ಮಿಸಿದ್ದಾಗಿವೆ. ಮೊದಲನೆಯ ಪ್ರಕಾರದ ಶಿಲ್ಪಗಳು ಸಾಮಾನ್ಯವಾಗಿ ಚತುರಸ್ರಾಕಾರದಲ್ಲಿ ಎರಡನೆಯದರಲ್ಲಿ ಶಿಲ್ಪದ ಮೇಲಿನ ಭಾಗ ತ್ರಿಕೋನ ಅಥವಾ ಅರ್ಧ ವೃತ್ತಾಕಾರದಲ್ಲಿವೆ.

ಈಕೆಯನ್ನು ಶಿಲ್ಪದಲ್ಲಿ ನೃತ್ಯಭಂಗಿಯಲ್ಲಿ ಕೈ-ಕಾಲುಗಳು ಮತ್ತು ದೇಹಭಾಗವಿರುತ್ತದೆ. ಈಕೆಯ ಸಮಗ್ರ ದೇಹಾಂಗದಲ್ಲಿ ರಕ್ತ ಮಾಂಸ ಬತ್ತಿ ಹೋಗಿ ಕೇವಲ ಎಲಬು ಮೂಳೆಗಳು ಮತ್ತು ಜೋತಾಡುವ ಕುಚುಗಳನ್ನು ಪ್ರಧಾನವಾಗಿ ಬಿಡಿಸಿರುತ್ತಾರೆ. ಕೈಗಳು ನಾಲ್ಕು ಅಥವಾ ಅದಕ್ಕಿಂತ ಹೆಚ್ಚು. ಧರಿಸಿದ ರುಂಡ

ಮಾಲೆಯು ಈಕೆಯ ತೊಡೆ ಅಥವಾ ಕಾಲುಗಳ ಮಲೆ ಇಳಿಬಿದ್ದಿರುತ್ತದೆ. ನಾಲ್ಕಕ್ಕಿಂತ ಹೆಚ್ಚು ಕೈಗಳಿದ್ದರೆ ಎಡಗಡೆಯ ಒಂದು ಕೈ ಮಡಚಿ ಅದರ ಬೆರಳಿನ ತುದಿಯನ್ನು ತುಟಿಗೆ ಮುಟ್ಟಿಸುವ ರೀತಿಯಲ್ಲಿ ಇರುತ್ತದೆ. ಹಾಗೂ ಮಡಚಿದ ಕೈಯಲ್ಲಿ ಸಾಮಾನ್ಯವಾಗಿ ಕಟ್ವಾಂಗ ಹಿಡಿದಿರುವುದು ಈ ಭಾಗದಲ್ಲಿ ಕಂಡು ಬರುತ್ತದೆ. ಹೆಚ್ಚಾಗಿ ಪ್ರೇತದ ಮೇಲೆ ಕಾಲನ್ನಿಟ್ಟು ನೃತ್ಯಮಾಡುವ ಶಿಲ್ಪಗಳು ಕಾಣುತ್ತವೆ. ಕೆಲವೊಮ್ಮೆ ಪಾದ ಪೀಠದ ಮೇಲೆ ಪ್ರೇತವನ್ನು ತೋರಿಸಲಾಗಿದೆ. ಕೆಲವೊಮ್ಮೆ ಸ್ತನಗಳ ಮಧ್ಯ ಅಥವಾ ಹೊಟ್ಟೆಯ ಮೇಲೆ ಚೇಳು ಇರುತ್ತದೆ. ನೃತ್ಯ ಮಾಡುವ, ವಾದ್ಯ ಬಾರಿಸುವ ಇತ್ಯಾದಿ ರೀತಿಯ ಪೈಶಾಚಿಗಳು ಇವಳ ಕಾಲಿನ ಬದಿಯಲ್ಲಿ ತೋರಿಸಲಾಗಿದೆ. ಅರ್ಧಗಂಬಗಳ ಮಧ್ಯ ಈಕೆಯನ್ನು ಕೆಲವೊಮ್ಮೆ ತೋರಿಸಲಾಗಿದೆ. ಜಟಾಮಕುಟ, ಕಿವಿ ಓಲೆ, ಕಂಠಹಾರ, ಪಟ್ಟಿ, ಕಡಗ ಇತ್ಯಾದಿ ಆಭರಣಗಳನ್ನು ಧರಿಸಿರುವಳು. ಇಂತಹ ಲಕ್ಷಣಗಳನ್ನು ಈಕೆಯು ಇಲ್ಲಿಯ ಶಿಲ್ಪಗಳಲ್ಲಿ ಹೊಂದಿರುವುದು ಸಾಮಾನ್ಯ.

ಬಸವಕಲ್ಯಾಣ ನಗರದ ಕೋಟೆ ಒಳಗಡೆ ಬಹು ಮುಕ್ಕಾದ ಒಂದು ಸುಂದರ ಚಾಮುಂಡಿ ಶಿಲ್ಪವಿದೆ. ಲೇಖಕರು ಇದನ್ನು ಈಗಾಗಲೇ ಅಧ್ಯಯನ ಮಾಡಿರುವರು.[18] ಉಳಿದ ಭಾಗದಲ್ಲಿ ಮಲಗಿದ ಪ್ರೇತನ ಕಾಲನ್ನು ಬದಿಯಲ್ಲಿ ಮಂಡೆಯೂರಿ ಕುಳಿತ ಒಂದು ಪೈಶಾಚಿ ಮೇಲಕ್ಕೆ ಎತ್ತಿ ಹಿಡಿದಿದೆ. ಈ ಪ್ರದೇಶದ ಮೇಲೆ ದೇವಿಯು ನೃತ್ಯ ಮಾಡುತ್ತಿರುವಳು. ಇವಳ ಕಾಲುಗಳ ಬದಿಗಳಲ್ಲಿ ತಾಳ, ಡಮರು, ಕೊಳಲು, ಮದ್ದಳೆಗಳನ್ನು ಹಿಡಿದು ಬಾರಿಸುವ ವಾದ್ಯಮೇಳವಿದೆ. ಒಂದು ಪೈಶಾಚಿ ನೃತ್ಯ ಮಾಡುತ್ತಿದ್ದರೆ. ಮೂರು ಪೈಶಾಚಿಗಳು ವಿವಿಧ ಭಂಗಿಯಲ್ಲಿ ಕುಳಿತ–ನಿಂತ ಭಂಗಿಯಲ್ಲಿವೆ. ಪ್ರೇತದ ಮುಖದ ಬಲಗಡೆ ಸೇವಕ–ಸೇವಕಿಯರಿದ್ದಾರೆ. ಜಲಸಂಗಿಯ ಮಹದೇವ ದೇವಾಲಯದ ಭಿತ್ತಿಯಲ್ಲಿ (ಉತ್ತರ ದಿಕ್ಕು) ಈಕೆಯ ಒಂದು ಶಿಲ್ಪವಿದೆ. ಇಲ್ಲಿ ಈಕೆಯ ಬಲಬಾಗಿಲಿನ ಬದಿಗೆ ನಾಯಿಯಿರುವುದು ತನ್ನ ಎಂಟು ಕೈಗಳಲ್ಲಿ ಕಠಾರಿ, ತ್ರಿಶೂಲ, ಡಮರು, ಸರ್ಪ (ಬಲ–ಎಡಕೈಗಳಲ್ಲಿ) ಕಟ್ವಾಂಗ (ಈ ಮೇಲೆ ಹೇಳಿದಂತೆ ಈ ಕೈಯನ್ನು ಮಡಚಿರುವಳು), ನರಮುಂಡ (ಇದರ ತಲೆಯ ಕೂದಲನ್ನು ಮತ್ತು ಕಪಾಲಗಳನ್ನು ಬಲಗಡೆಯಿಂದ ಕ್ರಮವಾಗಿ ಹಿಡಿದಿರುವಳು). ಇಲ್ಲಿ ಪ್ರೇತ, ಚೇಳುಗಳನ್ನು ತೋರಿಸಿಲ್ಲ. ತಲೆಯ ಸುತ್ತಲೂ ಮೊಟ್ಟೆಯಾಕಾರದ ಪ್ರಭಾಮಂಡಲದ ಅಲಂಕಾರವಿದೆ. ಜಟಾಮಕುಟ, ಓಲೆ, ಕೊರಳ ಮತ್ತು ಕುಚಹಾರ, ಪಟ್ಟಿ, ವಸ್ತ್ರ, ರುಂಡಮಾಲೆ, ಕಡಗ, ಬಳೆ ಇತ್ಯಾದಿ ಧರಿಸಿದವಳು. ಬಸವಕಲ್ಯಾಣದ ಸದಾನಂದ ಮಠದ ಅಡುಗೆ ಮನೆ ಗೋಡೆಯಲ್ಲಿ ಒಂದು ಶಿಲ್ಪದಲ್ಲಿ ಈಕೆಯು ವಸ್ತ್ರವನ್ನೂ ಮೊಣಕಾಲುಗಳ ಮೇಲಿನವರೆಗೆ ಸೊಂಟಕ್ಕೆ ಬಿಗಿದಿರುವುದು ವಿಶೇಷ. ಕೆಳಗಿನ ಕೈಗಳು ಮುಂದಿವೆ. ಉಳಿದ ಮೇಲಿನ ಕೈಗಳಲ್ಲಿ ತ್ರಿಶೂಲ ಮತ್ತು ಕಟ್ವಾಂಗಗಳಿವೆ. ಅರ್ಧಗಂಬ ಮತ್ತು ಮಕರ ತೋರಣ ಮಧ್ಯ ಈಕೆಯನ್ನು ತೋರಿಸಲಾಗಿದೆ. ಕಾಲುಗಳ ಬದಿಗಳಲ್ಲಿ ವಾದ್ಯ ನೃತ್ಯ ಮಾಡುವ ಗಣಗಳಿವೆ. ಬಸವಕಲ್ಯಾಣದ ಕೋಟೆಯ ದ್ವಾರ ಬಾಗಿಲ ಬದಿಗೆ ಈಕೆಯ ಒಂದು ಶಿಲ್ಪವಿದೆ. ಇದೂ ಸಹ ದೇವಾಲಯದ ಗೋಡೆ ಭಾಗದ ಶಿಲ್ಪವಾಗಿದೆ. ಈಕೆಗೆ ಎಂಟು ಕೈಗಳಿವೆ. ಇಲ್ಲಿ ದೇವಿಯು ಪ್ರೇತದ ಮೇಲೆ ನಿಂತು ನೃತ್ಯ ಮಾಡುತ್ತಿರುವಳು. ಎಡಗಾಲನ್ನು ಮೇಲಕ್ಕೆ ಎತ್ತಿ ಅಡ್ಡವಾಗಿ ಹಿಡಿದಿರುವುದನ್ನು, ಬದಿಗಳಲ್ಲಿ ದುಂಡಾದ ಅರ್ಧಗಂಬಗಳನ್ನು ತೋರಿಸಿರುವುದು ವಿಶೇಷ.

ಶಿವಪುರದ ಶಿವದೇವಸ್ಥಾನದ ಹೊರಗಡೆ ಈಕೆಯ ಒಂದು ಶಿಲ್ಪವಿದೆ. ಈ ಶಿಲ್ಪವೂ ದೇವಾಸ್ಥನದ ಭಿತ್ತಿ ಭಾಗದ್ದಾಗಿದೆ. ಪ್ರೇತದ ಮೇಲೆ ನಿಂತ ನೃತ್ಯ ಮಾಡುತ್ತಿದ್ದು ಸೊಂಟಕ್ಕೆ ಗೆಜ್ಜೆಪಟ್ಟಿ ಕಟ್ಟಿರುವಳು. ಕುಚಗಳನ್ನು ನಾಗಗಳಿಂದ ಕಟ್ಟಿರುವಳು. ಆರು ಕೈಗಳನ್ನು ಹೊಂದಿದ ಈಕೆಯ ಹೊಟ್ಟೆಯ ಮೇಲೆ ಚೇಳನ್ನು ತೋರಿಸಲಾಗಿದೆ. ಕೈಗಳಲ್ಲಿ ಕಠಾರಿ, ತ್ರಿಶೂಲ, ಡಮರು, ಕಟ್ವಾಂಗ ಒಡೆದಿದೆ, ಕಪಾಲಗಳಿವೆ.

---

18 ಷಡಕ್ಷರಯ್ಯ ಆರ್. ಎಂ. ೧೯೯೩ : ಬಸವ ಕಲ್ಯಾಣದ ಶೈವ ಶಿಲ್ಪಗಳು ಒಂದು ಅಧ್ಯಯನ ಕರ್ನಾಟಕ ಭಾರತಿ, ಸಂ. ೨೪, ಸಂ. ೪ ಕ. ವಿ. ವಿ. ಧಾರವಾಡ.

ಉಮಾಪುರದ ಶಿಲ್ಪದಲ್ಲಿ ಈಕೆ ಪ್ರೇತದ ಮೇಲೆ ನಿಂತು ನೃತ್ಯ ಮಾಡುತ್ತಿರುವಳು. ತನ್ನ ಬಲಗಾಲನ್ನು ಮೇಲಕ್ಕೆ ಎತ್ತಿ ಅಡ್ಡವಾಗಿ ಹಿಡಿದಿದ್ದಾಳೆ ಇಲ್ಲಿ ತನ್ನ ಕೈಗಲ್ಲಿ ಅಭಯ (ಅಕ್ಷಮಾಲ), ಡಮರು, ತ್ರಿಶೂಲ ಮತ್ತು ಕಪಾಲಗಳನ್ನು ಹಿಡಿದಿರುವುದು ವಿಶೇಷ. ಇಂತಹದೇ ಇನ್ನೊಂದು ಶಿಲ್ಪದಲ್ಲಿ ಈಕೆಗೆ ಆರು ಕೈಗಳಿದ್ದು ಇಲ್ಲಿ ಹೊಟ್ಟೆಯ ಮೇಲೆ ಚೇಳನ್ನು ತೋರಿಸಲಾಗಿದೆ. ಪ್ರೇತವನ್ನು ತೋರಿಸಿಲ್ಲ. ಈ ಶಿಲ್ಪದಲ್ಲಿ ಪ್ರೇತನನ್ನು ತೋರಿಸಿಲ್ಲ. ತೊಡೆಗಳನ್ನು ಸರ್ಪದಿಂದ ಬಿಗಿದಿದ್ದು ಎಂಟು ಕೈಗಳನ್ನು ಹೊಂದಿದ್ದಾಳೆ. ಕಿವಿಯಲ್ಲಿ ನಾಗಗಳನ್ನು ಧರಿಸಿರುವುದು ವಿಶೇಷ. ಈ ಶಿಲ್ಪದ ಮೇಲ್ಭಾಗ ತ್ರಿಕೋನಾಕಾರದಲ್ಲಿದೆ. ನಾರಾಯಣಪುರದ ಒಂದು ಶಿಲ್ಪದಲ್ಲಿ ದೇವಿಗೆ ನಾಲ್ಕು ಕೈಗಳಿದ್ದು ಅಲ್ಲಿ ಪ್ರೇತನನ್ನು ಪಾದ ಪೀಠದಲ್ಲಿ ಪ್ರತ್ಯೇಕವಾಗಿ ತೋರಿಸಲಾಗಿದೆ. ಪೈಶಾಚಿಗಳು ಬದಿಗಳಲ್ಲಿವೆ.

ಚಂಡಕಾಪುರದ ಶಿಲ್ಪವೊಂದರಲ್ಲಿ ಚಾಮುಂಡಿಯ ಕೆಲವು ಹೊಸ ಅಂಶಗಳಿವೆ. ನೃತ್ಯ ಭಂಗಿಯಲ್ಲಿರುವ ದೇವಿಯ ಬದಿಗೆ ಅರ್ಧಗಂಭಗಳಿವೆ. ಈಕೆಗೂ ಎಂಟು ಕೈಗಳವೆ. ಬಲಗಾಲನ್ನು ಕಾಲಗಳ ಪೀಠದ ಮೇಲಿರುವ ಪ್ರೇತದ ಮೇಲಿಟ್ಟಿರುವಳು. ದೇವಿಯು ತನ್ನ ಎಡಗಾಲನ್ನು ನೃತ್ಯಭಂಗಿಯಲ್ಲಿ ಮೇಲಕ್ಕೆ ಎತ್ತಿ ಈ ಮೇಲಿನಂತೆ ಇದನ್ನು ಅಡ್ಡ ಮಡಚಿರುವಳು ಈ ಶಿಲ್ಪದಲ್ಲಿ ದೇವಿಯು ಸೊಂಟಕ್ಕೆ ಮತ್ತು ಕುಚಗಳಿಗೆ ನಾಗನನ್ನು ಕಟ್ಟಿರುವಳು.

ಹಳ್ಳಿಖೇಡ (ಬಿ) ನಗರದ ಒಂದು ಚಾಮುಂಡಿ ಶಿಲ್ಪದಲ್ಲಿ ಕೆಲವು ಲಕ್ಷಣಗಳು ವಿಶೇಷವೆನ್ನಿಸಿವೆ. ದೇವಿ ಬದಿಯಲ್ಲಿ ಕೆಲವು ಭಕ್ತರು ನೃತ್ಯ ಮಾಡುತ್ತಿರುವರು. ಇವರ ಕೈಗಳಲ್ಲಿ ಕತ್ತಿಗಳಿವೆ. ಪೀಠದ ಮೇಲೆ ಒಂದು ಚಿತ್ರ (ನರಿ ?) ಅಸ್ಪಷ್ಟವಿದೆ. ಮುಚ್ಚಳಂಬಿಯ ಚಾಮುಂಡಿ ಶಿಲ್ಪದಲ್ಲಿ ದೇವಿಯ ಬಲಬದಿಗೆ ಒಬ್ಬ ಸೇವಕ ಕುಳಿತಿದ್ದಾನೆ. ಮತ್ತು ಎಡಗಡೆ ಒಬ್ಬ ಸೇವಕ ನಿಂತಿರುವುದೂ ವಿಶೇಷವೆನಿಸಿವೆ.[19]

**ಮಹಾಲಕ್ಷ್ಮೀ :** ಮಹಾಲಕ್ಷ್ಮಿಯ ಶಿಲ್ಪಗಳು ಬಸವಕಲ್ಯಾಣ ತಾಲ್ಲೂಕಿನ ನೀಲಕಂಠ ಗ್ರಾಮದ ಮಾರುತಿ ಮಂದಿರದಲ್ಲಿ ಮತ್ತು ತ್ರಿಪುರಾಂತದ ಮಾರುತಿ ಮಂದಿರದಲ್ಲಿವೆ. ನೀಲಕಂಠದ ಶಿಲ್ಪ ೧೩ನೆಯ ಶತಮಾನದ್ದಾಗಿದ್ದು ದೇವಿಯು ಸಮಭಂಗದಲ್ಲಿ ನಿಂತಿದ್ದು ಈಕೆಗೆ ಚತುರ್ಭುಜಗಳಿವೆ. ಕೈಗಳಲ್ಲಿ ಫಲ, ಗದೆ, ಡಾಲು (ಖೇತಕ) ಮತ್ತು ಬಟ್ಟಲುಗಳನ್ನು ಕ್ರಮವಾಗಿ ಕೆಳಗಿನ ಬಲಕೈಯಿಂದ ಹಿಡಿದಿರುವಳು. ಅರ್ಧಗಂಬ–ತೋರಣಗಳಿಂದ ಸುತ್ತಲೂ ಅಲಂಕರಿಸಲಾಗಿದೆ. ಕಿರೀಟಮುಕುಟ, ಕುಂಡಲ, ಕಂಠಹಾರ, ಕಟಿಸೂತ್ರ, ವಸ್ತ್ರ, ಬಳೆ, ತೋಳುಬಂದಿ, ಸೊಂಟಪಟ್ಟಿ, ಕಡಗ ಇತ್ಯಾದಿ ವಸ್ತ್ರಾಭರಣ ಭೂಷಿತಳಾಗಿದ್ದಾಳೆ. ತ್ರಿಪುರಾಂತರದ ಮಾರುತಿ ಮಂದಿರದ ಗೋಡೆಯಲ್ಲಿನ ಶಿಲ್ಪ ೧೧ನೆಯ ಶತಮಾನದ್ದಾಗಿದ್ದು ಕೈಗಳಲ್ಲಿ ಫಲ ಪದ್ಮಗಳಿವೆ.

**ಸರಸ್ವತಿ :** ಹಲವಾರು ಸರಸ್ವತಿ ಶಿಲ್ಪಗಳು ಇಲ್ಲಿ ಕಂಡುಬಂದಿವೆ. ಈ ದೇವಿಯು ಸಾಮಾನ್ಯವಾಗಿ ಚತುರ್ಭುಜಳಾಗಿದ್ದು ಪದ್ಮಾಸನ ಅಥವಾ ಸವ್ಯಲಲಿತಾಸನದ ಭಂಗಿಯಲ್ಲಿರುವಳು. ಕೈಗಳಲ್ಲಿ ಅಕ್ಷಮಾಲ, ಪಾಶ, ಅಂಕುಶ ಮತ್ತು ಪುಸ್ತಕಗಳನ್ನು ಕ್ರಮವಾಗಿ ಕೆಳಗಿನ ಬಲಗೈಯಿಂದ ಹಿಡಿದಿರುವಳು. ಇವಳ ವಾಹನ ಹಂಸವನ್ನೂ ತೋರಿಸಲಾಗಿದೆ. ವಸ್ತ್ರಾಭರಣಗಳನ್ನು ಧರಿಸಿರುವಳು. ಈ ರೀತಿಯ ಸರಸ್ವತಿ ಶಿಲ್ಪಗಳು ಬಸವಕಲ್ಯಾಣ ತಾಲ್ಲೂಕಿನ ಪರ್ತಾಪುರ, ಕೌಡಿಹಾಳ್(ಎಸ್.) ಮುಂತಾದ ಸ್ಥಳಗಳಲ್ಲಿವೆ. ಪರ್ತಾಪುರದ ಶಿಲ್ಪದಲ್ಲಿ ದೇವಿಯ ಪೀಠದ ಒಂದು ಕಡೆ ಆಕೆಯ ವಾಹನ ಹಂಸವನ್ನು ಇನ್ನೊಂದು ಕಡೆ ಭಕ್ತರನ್ನು ತೋರಿಸಲಾಗಿದೆ. ದೇವಿಯು ಪದ್ಮಾಸನದಲ್ಲಿರುವಳು. ಇವಳ ಪೀಠವು ಸ್ವಲ್ಪ ಎತ್ತರವಾಗಿರುವುದು. ಮತ್ತು ಅರ್ಧಗಂಬಗಳ ಮೇಲೆ ಮಕರ ತೋರಣವಿದ್ದು ಇದರ ಮಧ್ಯ ದೇವಿಯನ್ನು ತೋರಿಸಲಾಗಿದೆ. ಇನ್ನೊಂದು ಶಿಲ್ಪದಲ್ಲಿ ದೇವಿಯು ಸವ್ಯಲಲಿತಾಸನದಲ್ಲಿ ಕುಳಿತಿರುವಳು. ಬಲಗಾಲನ್ನು ಕೆಳಗೆ ಓರೆಯಾಗಿ ಇಳಿಬಿಟ್ಟದ್ದು

19 ಷಡಕ್ಷರಯ್ಯ ಆರ್.ಎಂ. ೧೯೮೮ : ಆರ್ಕ್ಯಾಲಜಿ ಆಫ್ ಬೀದರ ಡಿಸ್ಟ್ರಿಕ್ ವಿತ್ ಸ್ಪೆಶಲ್ ರೆಫರೆನ್ಸ್ ಟು ಮಾಂಜ್ರಾ ವ್ಯಾಲೀಸ್, ಪಿ.ಎಚ್.ಡಿ. ಥೀಸೀಸ್, ಪು. ೨೮೯ ಕ.ವಿ.ವಿ. ಧಾರವಾಡ.

ಎಡಗಾಲನ್ನು ಮಡಚಿರುವಳು. ಕೈಗಳಲ್ಲಿ ಮೇಲೆ ತಿಳಿಸಿದ ಆಯುಧಗಳಿವೆ. ಇಲ್ಲಿ ಈಕೆಯ ವಾಹನ ಹಂಸವನ್ನು ಎಡಗಾಲಿನ ಕೆಳಗೆ ತೋರಿಸಲಾಗಿದೆ. ವಿವಿಧ ವಸ್ತ್ರಾಭರಣಗಳನ್ನು ಈಕೆಯು ಧರಿಸಿರುವಳು. ಜಲಸಂಗಿಯ ಮಹದೇವ ದೇಗುಲದ ಭಿತ್ತಿಯಲ್ಲಿರುವ ಒಂದು ಗೂಡಿನಲ್ಲಿ ಈಕೆಯ ಒಂದು ಶಿಲ್ಪವಿದೆ.

**ದುರ್ಗಾ :** ದುರ್ಗಾ ಶಿಲ್ಪಗಳು ಜಲಸಂಗಿಯ ಮಹದೇವ ದೇಗುಲದ ಗೋಡೆಯಲ್ಲಿರುವ ದೇವಿಯ ಸುತ್ತ ಅರ್ಧಗಂಬ ಮತ್ತು ಅವುಗಳ ಮೇಲೆ ವಿಮಾನ ಮತ್ತು ಬದಿಗಳಲ್ಲಿ ಮಕರ ಹಾಗೂ ಸುತ್ತಲೂ ಲತಾ ಬಳ್ಳಿಗಳಿಂದ ಅಲಂಕೃತಗೊಂಡಿವೆ ಸವ್ಯಲಲಿತಾಸನದಲ್ಲಿ ದೇವಿಯು ಕುಳಿತಿದ್ದು ಚತುರ್ಭುಜಳಾಗಿದ್ದಾಳೆ. ಈಕೆಯ ವಾಹನವನ್ನು ಕಾಲಿನ ಕೆಳಗೆ ತೋರಿಸಲಾಗಿದೆ. ಬಸವಕಲ್ಯಾಣ ತಾಲ್ಲೂಕಿನ ದನ್ನೂರಿ (ಆರ್)ನಲ್ಲಿ ದುರ್ಗೆಯ ಒಂದು ಶಿಲ್ಪವಿದೆ.

ಜಲಸಂಗಿಯ ಮಹದೇವ ದೇವಾಲಯದ ಸಭಾಮಂಟಪದ ಗೋಡೆಯಲ್ಲಿ ಈಕೆಯ ಒಂದು ಶಿಲ್ಪವನ್ನು ಕೂಡಿಸಲಾಗಿದೆ. ಕುಳಿತ ಲಲಿತಾಸನದಲ್ಲಿರುವ ಈಕೆಗೆ ಚತುರ್ಭುಜಗಳಿವೆ. ಅಕ್ಷಮಾಲೆ (ಅಭಯ), ತ್ರಿಶೂಲ, ನಾಗ ಮತ್ತು ಕಳಸಗಳನ್ನು ಹಿಡಿದಿರುವಳು. ಈಕೆಯ ಬದಿಗಳಲ್ಲಿ ಮೇಲಕ್ಕೆ ಎದ್ದು ನಿಂತ ಮಕರಗಳ ಬಾಯಿಂದ ಹೊರಟ ಮಣಿಮುತ್ತಿನ ಹಾರ ಹಾಗೂ ಇದರ ಮೇಲೆ ಸುರಳಿಯ ತೋರಣದ ಅಲಂಕಾರವಿದೆ. ಈ ತೋರಣದ ಮೇಲೆ (ಮಧ್ಯದಲ್ಲಿ) ಕೀರ್ತಿ ಮುಖವಿದೆ. ದೇವಿಯು ಪ್ರತ್ಯೇಕ ಪೀಠದ ಮೇಲೆ ಕುಳಿತಿರುವಳು.

**ಮಹಿಷಾಸುರಮರ್ಧಿನಿ :** ಮಹಿಷಾಸುರ ಮರ್ಧಿನಿ ಅಥವಾ ಮಹಿಷಮರ್ಧಿನಿ ಶಿಲ್ಪಗಳು ಈ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿವೆ. ಭಾಲ್ಕಿ, ಮಾಸಿಮೋಡ, ಚಳಕಾಪುರ, ಹಳಖೇಡ (ಬಿ), ಬ್ಯಾಲಳ್ಳಿ, ಕಣಜಿ, ಯಣ್ಣಿಕುರ, ಹಿಪ್ಪರಗಾ, ಆಟರಗಾ, ಬಸವಕಲ್ಯಾಣ, ನೀಲಕಂಠ, ಬೇಟಮೆಳಕುಂದಿ, ನಾರಾಯಣ ಪುರ, ಹಿಪ್ಪರಗಾ, ಶಿವಪುರ, ಪರ್ತಾಪುರ, ಮೊರಖಂಡಿ, ಸಸ್ತಾಪುರ, ಮಿರ್ಕಲ್, ಮುಚ್ಚಳಂಬಾ, ಹುಲಸೂರು, ಬೇಲೂರು ಇತ್ಯಾದಿ (ಬಸವಕಲ್ಯಾಣ ತಾಲ್ಲೂಕ) ; ಔರಾದ (ಔರಾದ ತಾಲ್ಲೂಕ) ; ಬೀದರ, ಅಲೆಂಬರ, ಸಂಗೊಳಗಿ, ಕಡವಾಡ, ಮೈಳ್ಳಿ, ಖಿಣಿರಂಜೋಳ (ಬೀದರ ತಾಲ್ಲೂಕ) ಇತ್ಯಾದಿ ಸ್ಥಳಗಳಲ್ಲಿ ಮಹಿಷಾಸುರ ಮರ್ಧಿನಿ ಶಿಲ್ಪಗಳಿವೆ.

ಈ ಶಿಲ್ಪದಲ್ಲಿ ಸಾಮಾನ್ಯವಾಗಿ ವಿವಿಧ ಆಯುಧಗಳನ್ನು ಹಿಡಿದ ದೇವಿಯು ತ್ರಿಶೂಲದ ತುದಿಯಿಂದ ಸುರನನ್ನು ಸಂಹಾರ ಮಾಡುವುದು, ಒಂದು ಕಾಲನ್ನು ಕೋಣದ ಮೇಲೆ ಮೆಟ್ಟಿರುವುದು ; ಮಲಗಿದ ಕೋಣದ ಶಿರದಿಂದ ಅಸುರ ಹೊರಬರುವುದು, ಅಸುರನು ಕೈಗಳಲ್ಲಿ ಖಡ್ಗ ಮತ್ತು ಡಾಲನ್ನು ಹಿಡಿದಿರುವುದು ದೇವಿಗೆ ನಾಲ್ಕು ಅಥವಾ ಆರು ಅಥವಾ ಎಂಟು ಕೈಗಳಿರುವುದು, ಮುಖ್ಯ ಲಕ್ಷಣಗಳಾಗಿವೆ.

ಈಕೆಯ ಪಾದದ ಬದಿಗೆ ಸಿಂಹವನ್ನು ತೋರಿಸಿದ ಶಿಲ್ಪಗಳು ಶಿವಪುರ, ಬಸವಕಲ್ಯಾಣ, ಹಾಲಳ್ಳಿ ಇತ್ಯಾದಿ ಕಡೆಗಳಲ್ಲಿವೆ. ಕೇವಲ ಕೋಣನ ತಲೆಯನ್ನು ಈಕೆಯ ಶಿಲ್ಪದ ಪಾದ ಪೀಠದಲ್ಲಿ ಪ್ರತ್ಯೇಕವಾಗಿ ತೋರಿಸಿದ ಶಿಲ್ಪಗಳು ಹಳ್ಳಿಖೇಡ (ಬಿ), ಶಿವಪುರ ಇತ್ಯಾದಿ ಕಡೆಗಳಲ್ಲಿವೆ. ದೇವಿಯು ಒಂದು ಕೈಯಿಂದ ಕೋಣದ ಬಾಲವನ್ನು ಹಿಡಿದು ಮೇಲಕ್ಕೆ ಎತ್ತಿರುವುದು, ಹಿಪ್ಪರಗಾ ಇತ್ಯಾದಿ ಕಡೆಗಳಲ್ಲಿ ಅಸುರನು ಕೋಣದ ಶಿರ ಅಥವಾ ಬಾಯಿಂದ ಹೊರ ಬರುವ ಅನೇಕ ಶಿಲ್ಪಗಳು ಇಲ್ಲಿ ಕಾಣುತ್ತವೆ. ಈಕೆಯ ಬದಿಗೆ ಗಣೇಶನನ್ನು ತೋರಿಸಿದ ಶಿಲ್ಪ ಬ್ಯಾಲಳ್ಳಿಯಲ್ಲಿರುವುದು ವಿಶೇಷವಾಗಿದೆ. ಕೆಲವು ಶಿಲ್ಪಗಳಲ್ಲಿ ಅರ್ಧಗಂಬ ತೋರಣದ ಮಧ್ಯೆ ದೇವಿಯನ್ನು ಬಿಡಿಸಿರುತ್ತಾರೆ. ದೇವಿಯ ಪಾದದ ಮುಂದೆ ಕೋಣದ ಮುಖವನ್ನು ಎಡ ಅಥವಾ ಬಲಕ್ಕೆ ತೋರಿಸಿರುವುದು ಕಂಡುಬರುತ್ತದೆ. ಈಕೆಯು ತನ್ನ ಎಡ ಅಥವಾ ಬಲಗಾಲನ್ನು ಕೋಣದ ಮೇಲೆ ಇಟ್ಟಿರುವುದು ಕಾಣುತ್ತದೆ.

ಬಸವಕಲ್ಯಾಣ ತಾಲ್ಲೂಕಿನ ಸಸ್ತಾಪುರದ ಶಕ್ತಿ ದೇವಾಲಯದ ಶಿಲ್ಪದಲ್ಲಿ ತನ್ನ ಬಲಗಾಲನ್ನು ಕೋಣದ ಮೇಲೆ ಮೆಟ್ಟಿರುವಳು. ಈಕೆಯ ಮೇಲಿನ ಬಲಗೈ ಬದಿಗೆ ಸೂರ್ಯನನ್ನು ಎಡಗಡೆ ಚಂದ್ರನನ್ನು ತೋರಿಸಿರುವುದು ಅಪರೂಪವೆನಿಸಿವೆ.

ಹಳೈಬೇಡ (ಬಿ) ಗ್ರಾಮದ ಒಂದು ಶಿಲ್ಪದಲ್ಲಿ ಕೆಲವು ಲಕ್ಷಣಗಳು ವಿಶೇಷವೆನಿಸಿವೆ.[20] ಕ್ರಿ.ಶ. ಸು. ೧೧ನೆಯ ಶತಮಾನಕ್ಕೆ ಸೇರುವ ಈ ದೇವಿಯ ಕೈಗಳಲ್ಲಿ ಬಲಗಡೆಯ ಎರಡು ಕೈಗಳು ಮುರಿದಿವೆ. ಕೆಳಗಿನ ಬಲಕೈಯಲ್ಲಿ ಹಿಡಿದ ತ್ರಿಶೂಲದ ತುದಿಯಿಂದ ನಿಂತ ಅಸುರನ ಬೆನ್ನಿಗೆ ಹಾಕಿದ್ದಾಳೆ. ಕೆಳಗಿನ ಎಡಗೈಯಿಂದ ಅಸುರನ ಬಲಗೈ ಹಿಡಿದಿರುವಳು. ಈ ಅಸುರನು ಕೆಳಗಡೆ (ದೇವಿಯ ಎಡಗಡೆ ಮುಖ ಮಾಡಿದ) ಕೋಣದ ಕುತ್ತಿಗೆಯಿಂದ ಹೊರಬಂದಿದ್ದಾನೆ. ಬಲಗಾಲನ್ನು ಕೋಣದ ಬೆನ್ನಿನ ಮೇಲೆ ಇಟ್ಟಿದ್ದಾಳೆ. ಬಲ ಬದಿಗೆ ಈಕೆಯ ವಾಹನ ಸಿಂಹವಿದೆ. ಇದರ ಪೀಠದಲ್ಲಿ ನಾಲಿಗೆಯನ್ನು ಹೊರಚಾಚಿದ ಕೋಣದ ತಲೆಯನ್ನು ತೋರಿಸಿರುವುದು ವಿಶೇಷವಾಗಿದೆ. ಅಸುರ ತನ್ನ ಬಲಗೈಯಲ್ಲಿ ಕತ್ತಿ ಹಿಡಿದು ಮೇಲಕ್ಕೆ ಎತ್ತಿದ್ದಾನೆ. ಕೋಣದ ಕುತ್ತಿಗೆಯಲ್ಲಿ ಗಂಟೆಗಳ ಸರಮಾಲೆಯಿದೆ.

ಬ್ಯಾಲಹಳ್ಳಿಯ ಮಹಿಷಾಸುರ ಮರ್ಧಿನಿಯ ಶಿಲ್ಪದಲ್ಲಿ ಕೆಲವು ಲಕ್ಷಣಗಳು ಗಮನೀಯ.[21] ಕ್ರಿ.ಶ. ಸು. ಒಂಬತ್ತನೆಯ ಶತಮಾನಕ್ಕೆ ಸೇರುವ ಚತುರ್ಭುಜ ಧಾರಿಯಾದ ಈಕೆಯು ಕೆಳಗಿನ ತನ್ನ ಬಲಗೈಯಲ್ಲಿ ಹಿಡಿದ ತ್ರಿಶೂಲದ ತುದಿಯಿಂದ ಅರ್ಧ ಮನುಷ್ಯ ಅರ್ಧ ಪ್ರಾಣಿ (ಕೋಣ ಮುಖ) ರೂಪದ ಮಹಿಷಾಸುರನಿಗೆ ಇರಿದಿದ್ದಾಳೆ. ಮೇಲಿನ ಕೈಗಳಲ್ಲಿ ಚಕ್ರ ಮತ್ತು ಶಂಖಗಳನ್ನು ಹಿಡಿದಿದ್ದಾಳೆ. ಕೆಳಗಿನ ಎಡಗೈಯನ್ನು ಸೊಂಟದ ಮೇಲಿಟ್ಟಿರುವಳು. ಬಲಗಾಲನ್ನು ಅಸುರನ ತಲೆಯ ಬಲ ಕೋಡಿನ ಮೇಲಿಟ್ಟಿದ್ದಾಳೆ. ಈಕೆಯ ವಾಹನ ಸಿಂಹವನ್ನೂ ಬಲಬದಿಯಲ್ಲಿ, ಮತ್ತು ಕುಳಿತ ದ್ವಿಭುಜ ಗಣಪತಿಯನ್ನೂ ಎಡಗಡೆ ತೋರಿಸಿರುವುದು ಮತ್ತು ಚಿಕ್ಕ ತ್ರಿಶೂಲ ತೋರಿಸಿರುವುದು ಅಪರೂಪದ್ದಾಗಿವೆ.

ಹಿಪ್ಪರಗಾ (ಬಸವಕಲ್ಯಾಣ ತಾಲ್ಲೂಕ) ಗ್ರಾಮದ ಈಕೆಯ ಒಂದು ಶಿಲ್ಪದಲ್ಲಿ ಅಸುರನ ಸಂಹಾರದ ಕೆಳಗೆ ಸಿಂಹವಿದೆ. ಈಕೆಗೆ ಎಂಟು ಕೈಗಳಿದ್ದು ಕೆಳಗಿನ ಕೈಯಲ್ಲಿ ಹಿಡಿದ ತ್ರಿಶೂಲದಿಂದ ಕೋಣನ ಹೊಟ್ಟೆಗೆ ತಿವಿಯುತ್ತಿರುವಳು. ಹಾಗೂ ಕೆಳಗಿನ ಎಡಗೈಯಿಂದ ಕೋಣದ ಬಾಲವನ್ನು ಎತ್ತಿ ಬಿಗಿಯಾಗಿ ಹಿಡಿದಿರುವುದು ವಿಶೇಷವಾಗಿದೆ. ಮಿರ್ಕಲ್ (ಬಸವ ಕಲ್ಯಾಣ ತಾಲ್ಲೂಕ)ನ ಈಕೆಯ ಒಂದು ಶಿಲ್ಪದಲ್ಲಿ ತನ್ನ ಎಡಗಾಲನ್ನು ಮಲಗಿ ಬಿದ್ದ ಅಸುರನ ತಲೆಯ ಮೇಲಿಟ್ಟಿರುವಳು ಮತ್ತು ಕೆಳಗಿನ (ಎಡ-ಬಲ) ಕೈಗಳಲ್ಲಿ ಹಿಡಿದ ತ್ರಿಶೂಲದ ತುದಿಯಿಂದ ಆಸುರಿನ ಹೊಟ್ಟೆಗೆ ತಿವಿದಿದ್ದಾಳೆ. ಮೇಲಿನ ಕೈಗಳಲ್ಲಿ ಖಡ್ಗ ಮತ್ತು ಶಂಖಗಳಿವೆ. ಬಲಗಾಲಿನ ಬದಿಗೆ ಸಿಂಹವಿದೆ. ಇದು ಸುಮಾರು ಕ್ರಿ.ಶ. ೧೧ನೇ ಶತಮಾನ, ಉಮಾಪುರ (ಬಸವ ಕಲ್ಯಾಣ ತಾಲ್ಲೂಕ)ದ ಈಕೆಯ ಒಂದು ಶಿಲ್ಪದಲ್ಲಿ ಕೋಣದ ಹೊಟ್ಟೆಯ ಮೇಲೆ ಬಲಗಾಲನ್ನು ಮೆಟ್ಟಿ ನಿಂತಿದ್ದಾಳೆ. ಕೋಣದ ಶಿರದಿಂದ ಹೊರ ಬಂದ (ಆಸುರನನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ಕೆಳಗಿನ ಎರಡೂ ಕೈಗಳಲ್ಲಿ (ಎಡ–ಬಲ) ಹಿಡಿದ ತ್ರಿಶೂಲದ ತುದಿಯಿಂದ ಸಂಹಾರ ಮಾಡುತ್ತಿರುವಳು. ಮೇಲಿನ ಎರಡು ಕೈಗಳಲ್ಲಿ ಖಡ್ಗ ಮತ್ತು ಡಾಲುಗಳಿವೆ. ಇಲ್ಲಿಯ ಇನ್ನೊಂದು ಈಕೆಯ ಶಿಲ್ಪದಲ್ಲಿ ತನ್ನ ಎಡಗಾಲನ್ನು ಕೋಣದ ಮೇಲಿಟ್ಟಿರುವಳು. ಕೆಳಗಿನ ಕೈಗಳಲ್ಲಿ (ಎಡ–ಬಲ) ಹಿಡಿದ ತ್ರಿಶೂಲದಿಂದ ಇರಿಯುತ್ತಿರುವಳು. ಇನ್ನೆರಡು ಕೈಗಳಲ್ಲಿ ಖಡ್ಗ ಮತ್ತು ಡಾಲುಗಳಿವೆ. ಶಿಲ್ಪಗಳು ಸಂಗೊಳಗಿ, ಖಿನಿರಂಜೋಳ (ಬೀದರ ತಾಲ್ಲೂಕ) ಕಣಜಿ (ಭಾಲ್ಕಿ ತಾಲ್ಲೂಕ) ಇತ್ಯಾದಿ ಗ್ರಾಮಗಳ ಶಿಲ್ಪಗಳಲ್ಲಿ ಈಕೆಗೆ ಎಂಟು ಕೈಗಳಿಗೆ ಯಣ್ಣೆಕುರ (ಭಾಲ್ಕಿ ತಾಲ್ಲೂಕ)ದ ಶಿಲ್ಪ ಇತ್ಯಾದಿಗಳಲ್ಲಿವೆ ಈಕೆಗೆ ಆರು ಕೈಗಳಿವೆ. ಭಾಲ್ಕಿ, ಕಣಜಿ, ಮಾಸಿಮೋಡು (ಭಾಲ್ಕಿ ತಾಲ್ಲೂಕ) ಹಳ್ಳಿಖೇಡ (ಬಿ) ಇತ್ಯಾದಿ ಗ್ರಾಮಗಳ ಈಕೆಯ ಶಿಲ್ಪಗಳಲ್ಲಿ ನಾಲ್ಕು ಕೈಗಳಿವೆ. ಇದಲ್ಲದೆ ಈಕೆಯ ಬದಿಗೆ ಸಿಂಹವನ್ನು ತೋರಿಸಿದ ಶಿಲ್ಪಗಳು ಬಸವಕಲ್ಯಾಣ, ಹುಲಸೂರು, (ಬಸವಕಲ್ಯಾಣ ತಾಲ್ಲೂಕು) ; ಸಂಗೊಳಗಿ (ಬೀದರ ತಾಲೂಕು), ಬ್ಯಾಲಹಳ್ಳಿ, ಭಾಲ್ಕಿ (ಭಾಲ್ಕಿ ತಾಲೂಕ)

20 ಅದೇ, ಪು. ೨೫೮

21 ಅದೇ, ಪು. ೨೫೬

ಮತ್ತು ಹಳ್ಳಿಖೇಡ (ಬಿ) ಹುಮನಾಬಾದ್ ತಾಲೂಕ) ಗಳಲ್ಲಿವೆ.

ಮೇಲೆ ವಿವರಿಸಿದ ಶಿಲ್ಪಗಳಿಗಿಂತ ಭಿನ್ನವಾದ ಮಹಿಷಮರ್ಧಿನಿ ಶಿಲ್ಪಗಳು ಈ ಜಿಲ್ಲೆಯಲ್ಲಿ ಕಾಣ ಬರುತ್ತವೆ. ಈ ಶಿಲ್ಪಗಳಲ್ಲಿ ಅಸುರನನ್ನು ಮನುಷ್ಯಾ ಕಾರದಲ್ಲಿ ತೋರಿಸದೆ ಕೋಣನ ರೂಪದಲ್ಲಿ ತೋರಿಸಿರು ವುದು ವಿಶೇಷ. ಬಸವಕಲ್ಯಾಣದ ಕೋಟೆ ಒಳಗೆ, ಭಾಲ್ಕಿಯಲ್ಲಿ ಹಾಗೂ ಮೊರಖಂಡಿಯ ಶಿಲ್ಪಗಳು ಮುಖ್ಯವೆನ್ನಬಹುದು. ಮೊರಖಂಡಿಯ ಸಿದ್ದೇಶ್ವರ ದೇವಾಲಯ ಹತ್ತಿರದ ಶಿಲ್ಪವು ಅತ್ಯಂತ ಪ್ರಾಚೀನ, (ಸು.ಕ್ರಿ.ಶ. ೮ನೇ ಶತಮಾನ). ಈ ಶಿಲ್ಪದಲ್ಲಿ ದೇವಿಯು ಅಷ್ಟಭುಜದಲ್ಲಿದ್ದಾಳೆ. ತನ್ನ ಎಡಗಾಲನ್ನು ಕೋಣದ ಮೇಲಿಟ್ಟು ಒಂದು ಎಡಗೈಯಿಂದ ಕೋಣನ ತಲೆ ಯನ್ನು ಹಿಂದಕ್ಕೆ ಬಗ್ಗಿಸಿ ಬಿಗಿಯಾಗಿ ಹಿಡಿದಿರುವಳು. ಬಲಗಡೆಯ ಒಂದು ಕೈಯಲ್ಲಿ ಹಿಡಿದ ತ್ರಿಶೂಲ ಮೇಲಿನ ತುದಿಯಿಂದ ಕೋಣದ ಶಿರಕ್ಕೆ ಇರಿಯುತ್ತಿರುವಳು. ಇನ್ನೊಂದು ಕೈಯಲ್ಲಿ ಹಿಡಿದ ಕತ್ತಿಯಿಂದ ಶಿರಕ್ಕೆ ಹಾಕಿರುವಳು. ಇನ್ನೆರಡು ಬಲಗೈಗಳಲ್ಲಿ ಬಾಣ ಮತ್ತು ಚಕ್ರಗಳಿವೆ. ಎಡಗಡೆಯ ಕೈಗಳಲ್ಲಿ ಶಂಖ, ಬಿಲ್ಲು, ಗುರಾಣಿಗಳಿವೆ. ದುರದೃಷ್ಟವಶಾತ್ ಈಕೆಯ ಮುಖ ಒಡೆದುಹೋಗಿದೆ. ಇದೇ ಬಗೆಯ ಲಕ್ಷಣವನ್ನು ಹೊಂದಿದ ಭಾಲ್ಕಿ, ಕಣಜಿ, ಬಸವಕಲ್ಯಾಣದ ಕೋಟೆ ಒಳಗಿನ ಶಿಲ್ಪಗಳು ಸು. ಕ್ರಿ.ಶ. ೧೧ನೇ ಶತಮಾನ ದ್ದಾಗಿವೆ. ಬಸವಕಲ್ಯಾಣ ಕೋಟೆಯ ಒಂದು ಶಿಲ್ಪ ದಲ್ಲಿ ಚತುರ್ಭುಜಧಾರಿಯಾದ ಈಕೆಯ ಕೈಗಳಲ್ಲಿ ತ್ರಿಶೂಲವನ್ನು ಹಿಡಿದು ಕೋಣನ ಶಿರಕ್ಕೆ ಅದರ ತುದಿಯಿಂದ ಇರಿಯುತ್ತಿರುವಳು. ಬಲಗಡೆಯ ಮೇಲಿನ ಕೈಯಲ್ಲಿ ಚಕ್ರವಿದೆ. ಎಡಗಡೆಯ ಮೇಲಿನ ಕೈಯಲ್ಲಿ ಶಂಖವಿದೆ. ಮತ್ತು ಕೆಳಗಿನ ಕೈಯಿಂದ ಕೋಣನ ಮುಖವನ್ನು ಒತ್ತಿ ಹಿಡಿದಿದ್ದಾಳೆ. ತನ್ನ ಎಡಗಾಲನ್ನು ಕೋಣದ ಕೋಡುಗಳ ಮೇಲೆ ಮೆಟ್ಟಿ ನಿಂತಿದ್ದಾಳೆ. ಶಿಲ್ಪಲಕ್ಷಣಗಳಿಂದ ಈ ಶಿಲ್ಪಗಳು ಸು. ಕ್ರಿ.ಶ. ೮ನೇ ಶತಮಾನದಿಂದ ೧೧ನೇ ಶತಮಾನಕ್ಕೆ ಶಿಲ್ಪಗಳು ಸೇರುತ್ತವೆ. ಬಸವಕಲ್ಯಾಣದ ನೀಲಕಂಠ, ಬೇಟ್ ಮೆಣಕುಂದದವು ಇದೇ ಲಕ್ಷಣವನ್ನು ಹೊಂದಿವೆ.

**ಕಾಳಿ :** ಈ ಜಿಲ್ಲೆಯ ಹಲವಾರು ಗ್ರಾಮದಲ್ಲಿ ಕಾಳಿಯ ಶಿಲ್ಪಗಳಿವೆ. ಇವುಗಳಲ್ಲಿ ಲಕಣಗಾಂ, ಅಂಬೆ ಸಂಗವಿ, ಮೆಹಕರ (ಭಾಲ್ಕಿ ತಾಲೂಕ), ಬಸವ ಕಲ್ಯಾಣ, ಖಂಡಾಳ (ಬಸವಕಲ್ಯಾಣ ತಾಲೂಕ) ಗ್ರಾಮದ ಶಿಲ್ಪಗಳು ಮುಖ್ಯವಾಗಿವೆ. ಸಾಮಾನ್ಯ ವಾಗಿ ಕಾಳಿಯು ಚತುರ್ಭುಜಧಾರಿಯಾಗಿದ್ದು ಪದ್ಮಾಸನ ದಲ್ಲಿ ಕುಳಿತಿರುವಳು. ಕೈಗಳಲ್ಲಿ ಖಡ್ಗ, ಡಮರು, ತ್ರಿಶೂಲ ಮತ್ತು ಕಪಾಲಗಳನ್ನು ಹಿಡಿದಿರುವಳು. ಬಸವಕಲ್ಯಾಣ ತಾಲೂಕಿನ ಖಂಡಾಲದ ಕ್ರಿ.ಶ. ೧೨ನೆಯ ಶತಮಾನದ ಒಂದು ಶಿಲ್ಪ ಬಹು ಸುಂದರ ವಾಗಿದೆ. ಬಸವ ಕಲ್ಯಾಣದ ಧರಮ ಪ್ರಕಾಶಗಲ್ಲಿ ಮತ್ತು ದುರಗಮ್ಮ ಮಂದಿರ, ದೇಶಪಾಂಡೆ ಗಲ್ಲಿಯ ಶ್ರೀ ಭವಾನಿ ಮಂದಿರ ಮತ್ತು ರಜಪೂತಗಲ್ಲಿಯ ಶಿಲ್ಪಗಳಲ್ಲಿ ಈಕೆಯು ಸವ್ಯಲಲಿತಾಸನದಲ್ಲಿ ಕುಳಿತಿರು ವುದನ್ನು ಕಾಣಬಹುದು.

**ಯಕ್ಷಿ ಶಿಲ್ಪಗಳು :** ಜೈನ ಧರ್ಮದಲ್ಲಿಯ ಒಂದಾದ ಯಾಪನೀಯ ಸಂಘ ಪ್ರಾಚೀನ ಕರ್ನಾಟಕ ದಲ್ಲೂ ಖ್ಯಾತಿಗಳಿಸಿತ್ತು. ಈ ಸಂಘದಲ್ಲಿ ಜನ ಸಾಮಾನ್ಯರಿಗೂ ಅದರಲ್ಲೂ ಹೆಂಗಸರಿಗೂ ಸ್ವತಂತ್ರ್ಯ ನೀಡಲಾಗಿತ್ತು. ಈ ಸಂಘದ ಸನ್ಯಾಸಿಗಳು ಯಕ್ಷಿಯರಾದ ಪದ್ಮಾವತಿ, ಜ್ವಾಲಮಾಲಿನಿಯ ಆರಾಧನೆಯ ಪ್ರಚಾರ ಮಾಡಿದರು. ತದನಂತರ ಕಾಲದಲ್ಲಿ ಈಕೆಯು ಜೈನಧರ್ಮದಲ್ಲಿ ಸ್ವತಂತ್ರ ದೇವತೆ ಯಾಗಿದ್ದಾಳೆ. ಬೀದರ ಜಿಲ್ಲೆಯಲ್ಲಿ ವಿವಿಧ ಯಕ್ಷಿಯರ ಶಿಲ್ಪಗಳಿವೆ.

ಭಾಲ್ಕಿ ತಾಲೂಕಿನ, ಭಾಲ್ಕಿ, ಲಖಣಗಾಂ ; ಬೀದರ ತಾಲೂಕಿನ ಅಲೆಂಬರ ಇನ್ನಿತರ ಗ್ರಾಮಗಳಲ್ಲಿ ಜೈನ ಯಕ್ಷಿಯರ ಶಿಲ್ಪಗಳಿವೆ. ಹಾಗೂ ಬಸವಕಲ್ಯಾಣ ತಾಲೂಕಿನ ಮಿರ್ಕಲ್ ಮತ್ತು ಉಮಾಪುರಗಳಲ್ಲಿ ಜೈನ ಯಕ್ಷಿ ಪದ್ಮಾವತಿಯ ಶಿಲ್ಪಗಳಿವೆ. ಬಸವ ಕಲ್ಯಾಣ ಕೋಟೆ ಒಳಗೆ ಜೈನ ಯಕ್ಷಿಯ ಶಿಲ್ಪದಲ್ಲಿ ಅಂಬಿಕ ನಿಂತ ಭಂಗಿಯಲ್ಲಿರುವಳು. ಭಾಲ್ಕಿಯ ಮಾರುತಿ ಕಟ್ಟೆ ಮುಂದಿನ ಶಿಲ್ಪದಲ್ಲಿ ಈಕೆಯು ಕುಳಿತ ಭಂಗಿಯಲ್ಲಿರು ವಳು. ಹಾಗೂ ಶಿವಪುರ ಮಾರುತಿ ಮಂದಿರದ ಮುಂದಿನ ತಾಯಿ-ಮಗುವಿನ ಶಿಲ್ಪ ಜೈನ ಯಕ್ಷಿ

ಅಂಬಿಕೆಯದಾಗಿದೆ. ಶೈಲಿಯ ದೃಷ್ಟಿಯಿಂದ ಈ ಶಿಲ್ಪಗಳು ಸು. ಕ್ರಿ.ಶ. ೧೧-೧೨ನೇ ಶತಮಾನಕ್ಕೆ ಸೇರುತ್ತವೆ.

ಒಂದು ಮರದ ಕೆಳಗೆ ವಾಮಲಲಿತಾಸನದಲ್ಲಿ ಪೀಠದ ಮೇಲೆ ಕುಳಿತ ಅಂಬಿಕಾ ಯಕ್ಷಿಯು ಭಾಲ್ಕಿಯ ಮಾರುತಿ ಕಟ್ಟೆಯಮುಂದೆಯಿದೆ.[22] ಈಕೆಯ ಪೀಠಕ್ಕೆ ಮಕರ ಪಟ್ಟಿಕೆಯಿದ್ದು ಅದಕ್ಕೆ ಒರಗಿಕೊಂಡು ಕೂಳಿತಿರುವಳು. ಎರಡು ಕೈಗಳಿದ್ದು ಬಲಗೈಯಲ್ಲಿ ಮಾವಿನ ಹಣ್ಣಿನ ಗೊಂಚಲವಿದೆ. ಎಡಗೈಯಲ್ಲಿ ಒಂದು ಮಗು ಇದೆ. ತೊಡೆಯ ಮೇಲೆ ಮಗುವನ್ನು ಕುಡಿಸುವ ಬದಲು ಕೈಯಲ್ಲಿ ಹಿಡಿದಿರುವುದು ವಿಶೇಷ. ಈಕೆಯ ಬದಿಗಳಲ್ಲಿ ಸೇವಕಿಯರು ನಿಂತಿರುವುದು ಮಹತ್ವದ್ದಾಗಿದೆ. ಜಿನನನ್ನು ಕಿರೀಟಮುಕುಟದ ಮೇಲೆ ತೋರಿಸಲಾಗಿದೆ. ಮತ್ತು ಬದಿಗಿನ ಗಿಡದಲ್ಲಿ ಅಪ್ಸರೆಯರನ್ನು ತೋರಿಸಿರುವರು. ಇವಳ ವಾಹನ ಸಿಂಹ ಬಲಗಡೆ ಕೆಳಗಿದೆ. ಶಿಲ್ಪ ಲಕ್ಷಣಗಳಿಂದ ಇದು ಸು. ಕ್ರಿ.ಶ. ೧೦ನೇ ಶತಮಾನದ್ದಾಗಿದೆ. ಶಿವಪುರದ ಮಾರುತಿ ಮಂದಿರದ ಮುಂದಿರುವ ೧೧ನೆಯ ಶತಮಾನದ ಶಿಲ್ಪದಲ್ಲಿ ತಾಯಿ ಮಗುವನ್ನು ತೊಡೆಯ ಮೇಲೆ ಕೂಡಿಸಿಕೊಂಡಿರುವಳು. ಬಸವ ಕಲ್ಯಾಣ ಕೋಟೆಯ ಒಳಗಿನ ಈಕೆಯ ಶಿಲ್ಪದಲ್ಲಿ ಒಂದು ಮರದ ಗೊಂಚಲ ಕೆಳಗೆ ಈಕೆಯು ನಿಂತಿರುವಳು (ತ್ರಿಭಂಗಿಯಲ್ಲಿ). ಬಲಗೈಯಲ್ಲಿ ಮಾವಿನ ಹಣ್ಣಿನ ಗೊಂಚಲು ಎಡಗೈ ನಿಂತ ಮಗುವಿನ ಮೇಲೆ ಇಟ್ಟಿದ್ದಾಳೆ. ಮಗು ಮತ್ತು ಸಿಂಹ ಬಲಗಾಲಿನ ಬದಿಯಲ್ಲಿವೆ. ಓಲೆ, ಕೊರಳ-ಕುಚಗಳಲ್ಲಿ ಹಾರ, ಸೊಂಟಕ್ಕೆ ಅವ್ಯಂಗ, ತೋಳಲ್ಲಿ ಪಟ್ಟಿ, ಕಡಗಗಳನ್ನು ಧರಿಸಿರುವಳು. ವಸ್ತ್ರವನ್ನು ಪಾದಗಳ ಮೇಲಿನ ವರೆಗೆ ಬಿಗಿಯಾಗಿ ಸುತ್ತಿ ಸೊಂಟಕ್ಕೆ ಕಟ್ಟಿರುವಳು. ತಲೆಯ ಸುತ್ತ ದುಂಡಾದ ಪ್ರಭಾಮಂಡಳವಿದೆ. ಧರಿಸಿದ ಅವ್ಯಂಗದ ಶೈಲಿಯು ಮಧ್ಯ ಭಾರತ ಶೈಲಿಯನ್ನು ಹೊಂದಿರುವುದು ಗಮನಾರ್ಹ.

ನಿರ್ಕಲ್ ಗ್ರಾಮದ (ದಕ್ಷಿಣದಲ್ಲಿ) ಒಂದು ಗದ್ದೆಯ ಚಿಕ್ಕ ಗುಡಿಯಲ್ಲಿ ಪದ್ಮಾವತಿ ಶಿಲ್ಪವಿದೆ. ಕಿರೀಟಮುಕುಟದ ಮೇಲೆ ಜಿನಬಿಂಬವಿದ್ದು ಓಲೆ, ಕೊರಳ-ಕುಚ ಹಾರ, ತೋಳಬಂದಿ, ಬಳೆ, ಮಣಿ ಮುತ್ತಿನ ಪಟ್ಟಿ, ಕಡಗ ಇತ್ಯಾದಿ ವಸ್ತ್ರಾಭರಣಗಳನ್ನು ಧರಿಸಿದ್ದಾಳೆ. ತಲೆಯ ಸುತ್ತಲೂ ದುಂಡಾದ ಪ್ರಭಾಮಂಡಲವಿದೆ. ಕುತ್ತಿಗೆ ಮತ್ತು ಸೊಂಟದ ಬದಿಗಳಲ್ಲಿ ತೂತುಗಳನ್ನು ಕೊರೆಯಲಾಗಿದೆ. ಈಕೆಯ ಆಸನದ ಪೀಠದಲ್ಲಿ (ಈಕೆಯ) ವಾಹನ ಕುಕ್ಕುಟಸರ್ಪವಿದೆ. ಈ ಪದ್ಮಾವತಿಯ ಶಿಲ್ಪದ ಮೇಲ್ಭಾಗ ಅರ್ಧ ವೃತ್ತಾಕಾರದಲ್ಲಿದೆ. ಶೈಲಿಯ ದೃಷ್ಟಿಯಿಂದ ಈ ಶಿಲ್ಪ ಸು. ಕ್ರಿ.ಶ. ೧೧ನೇ ಶತಮಾನದ್ದಾಗಿದೆ.

ಜೈನ ಶಿಲ್ಪಗಳಲ್ಲಿ ಸರಸ್ವತಿಯು ಸೃತದೇವಿಯಾಗಿ ಕಾಣಿಸಿಕೊಂಡಿರುವಳು. ಈಕೆಯ ಶಿಲ್ಪಗಳು ಆಲೆಂಬರ (ಬೀದರ ತಾಲೂಕ), ಲಕಣಗಾಂ ಭಾಲ್ಕಿ (ಭಾಲ್ಕಿ ತಾಲೂಕ) ಗಳಲ್ಲಿವೆ. ಈ ಶಿಲ್ಪಗಳಲ್ಲಿ ಚತುರ್ಭುಜಳಾದ ಈಕೆಯು ಸವ್ಯ ಲಲಿತಾಸನದಲ್ಲಿ ಕುಳಿತಿರುವಳು. ಕೈಗಳಲ್ಲಿ ಅಕ್ಷಮಾಲಾ (ಅಭಯ), ಪಾಶ, ಅಂಕುಶ ಮತ್ತು ಪುಸ್ತಕಗಳನ್ನು, ಕೆಳಗಡೆಯ ಬಲಗೈಯಿಂದ ಕ್ರಮವಾಗಿ, ಹಿಡಿದಿರುವಳು. ಈಕೆಯ ವಾಹನ ಹಂಸ ಪೀಠದಲ್ಲಿದೆ. ಕಿರೀಟ ಮುಕುಟದಲ್ಲಿ ಜಿನ ಬಿಂಬವಿದೆ.[23]

**ಉಪಸಂಹಾರ** : ಈ ಅಧ್ಯಯನದಿಂದ ದೇವಿ ಶಿಲ್ಪಗಳ ಪ್ರಾಚೀನತೆಯನ್ನು ಸುಮಾರು ಕ್ರಿ.ಶ. ೮ನೇ ಶತಮಾನಕ್ಕೆ ಕೊಂಡೊಯ್ಯಬಹುದು. ತದನಂತರ ಕ್ರಮೇಣ ಕ್ರಿ.ಶ. ೯ನೇ ಶತಮಾನದಿಂದ ಕ್ರಿ.ಶ. ೧೩ನೇ ಶತಮಾನದ ವರೆಗೆ ಇದು ಬೆಳೆದು ಬಂದಿತೆಂದು ಗೊತ್ತಾಗುತ್ತದೆ. ಈ ಜಿಲ್ಲೆಯಲ್ಲಿ ಬಸವ ಕಲ್ಯಾಣ, ನಾರಾಯಣಪುರ, ಜಲಸಂಗವಿ (?), ಚಂಡಕಾಪುರ, ಉಮಾಪುರ (?) ಇತ್ಯಾದಿ ಗ್ರಾಮಗಳಲ್ಲಿ ದೇವಿಯ ದೇಗುಲಗಳಿದ್ದವೆಂದು ಹೇಳಬಹುದು. ಅವರೆ ಮೊರಖಂಡಿಯಲ್ಲಿ ಪ್ರತ್ಯೇಕ ಸಪ್ತಮಾತೃಕೆಯರ ಶಿಲ್ಪಗಳಲ್ಲದೆ

---

22 ಅದೇ : ೧೯೮೦ ಟುಜೈನಾಸ್ಕಲ್ಪ್‌ಚರ್ಸ್ ಫ್ರಮ್ ಭಾಲ್ಕಿ : ಎನೋಟ್. ಕ್ಯೂ.ಜೆ.ಎಂ.ಎಸ್. ಸಂ.LXXI-ನಂ. ೧ ಮತ್ತು ೨, ಮಿಥಿಕ್ ಸೊಸೈಟಿ, ಬೆಂಗಳೂರು.

23 ಅದೇ : ೧೯೮೮ ಪ್ಲೇಟ್ ನಂ. ೧೫ ಬಿ.

ಇವುಗಳ ಸಮಕಾಲೀನಕ್ಕೆ ಸೇರಿದ ಎರಡು ಲಯಣಗಳು, ಗಣೇಶ ಇತ್ಯಾದಿ ಶಿಲ್ಪ ವಿಶೇಷಗಳಿರುವುದು ಗಮನೀಯ. ಕ್ರಿ.ಶ. ೧೧-೧೨ನೇ ಶತಮಾನದಲ್ಲಿ ಬಸವ ಕಲ್ಯಾಣದಲ್ಲಿ ಗೂರ್ಜರ ಮಲಯಮತಿ ಮಹಾದೇವಿಯ ದೇಗುಲವು ಈ ರಾಣಿಯ ಹೆಸರಿನ ದೇಗುಲವಾಗಿದ್ದುದು ವಿಶೇಷ ವೆನ್ನಬಹುದು. ಶಿಲ್ಪಗಳು ಇಲ್ಲಿ ಎರಡು ರೀತಿಯ ಶೈಲಿಗಳನ್ನು ವ್ಯಕ್ತಪಡಿಸುತ್ತವೆ. ಒಂದು ಸ್ಥಳೀಯ ವಾಗಿದೆ. ಇನ್ನೊಂದು ಮಧ್ಯ ಭಾರತದ ಶೈಲಿಯ ಪ್ರಭಾವ ನಾರಾಯಣಪುರ, ಬಸವಕಲ್ಯಾಣದ ಹಲವಾರು ಶಿಲ್ಪಾವಶೇಷಗಳಲ್ಲಿ ಬೀರಿರುವುದು ಕಂಡು ಬರುತ್ತದೆ. ಕೇವಲ ಶಾಸನ ಮತ್ತು ಶಿಲ್ಪಗಳ ಸೂಚನೆ ಯಿಂದ ಬಸವಕಲ್ಯಾಣ ಮತ್ತು ನಾರಾಯಣಪುರ ಗ್ರಾಮಗಳಲ್ಲಿದ್ದ ದೇವಿ ಮಂದಿರಗಳ ಸ್ಥಳಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಹಲವಾರು ಶಿಲ್ಪಗಳು ವೈವಿಧ್ಯಮಯವಾಗಿರುವುದನ್ನು ಕೆಲವುಗಳಲ್ಲಿ ವಿಶೇಷ ಲಕ್ಷಣಗಳಿರುವುದನ್ನು ಗುರುತಿಸಿದೆ. ಬೀದರ ಜಿಲ್ಲೆಯಲ್ಲಿ ಶೈವ, ವೈಷ್ಣವ ಮತ್ತು ಜೈನಧರ್ಮ ಗಳ ಶಿಲ್ಪಗಳಾದ ಸಪ್ತಮಾತೃಕೆಯರ (ಪುತ್ರೀಕ), ಮಹಾಲಕ್ಷ್ಮೀ, ಚಾಮುಂಡಿ, ಸರಸ್ವತಿ, ಮಹಿಷಾಸುರ ಮರ್ಧಿನಿ, ಮಹಿಷಮರ್ಧಿನಿ ದುರ್ಗಾ ಮತ್ತು ಯಕ್ಷಿಣಿಯರಾದ ಅಂಬಿಕಾ, ಪದ್ಮಾವತಿ ಮತ್ತು ಜೈನ ಶೃತದೇವಿಯಾದ ಸರಸ್ವತಿಯ ಶಿಲ್ಪಗಳು ಇಲ್ಲಿರುವುದನ್ನು ತಿಳಿಯಲಾಗಿದೆ. ಹಾಗೂ ಈ ಜಿಲ್ಲೆಯ ಹಲವಾರು ಸ್ಥಳಗಳು ದೇವಿಕೇಂದ್ರಗಳಾದ್ದವೆಂದು ತಿಳಿಯಲಾಗಿದೆ. ಇಂದು ಪ್ರತಿಯೊಂದು ಗ್ರಾಮಗಳಲ್ಲಿ ಲಕ್ಷ್ಮಿಗುಡಿಗಳು ಖ್ಯಾತಿಗಳಿಸಿರುವುದು ಕಂಡುಬರುತ್ತವೆ. ಮತ್ತು ಇನ್ನಿತರ ದೇವಿ ದೇಗುಲಗಳು ಖ್ಯಾತಿಗಳಿಸಿರುವುದು ತಿಳಿದು ಬರುತ್ತದೆ.

* ಕೃತಜ್ಞತೆಗಳು : ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ಬೀದರ ಜಿಲ್ಲೆಯಲ್ಲಿ ಅನ್ವೇಷಣೆ ಮಾಡಲು ಮತ್ತು ಸಾಮಾಗ್ರಿಗಳನ್ನು ಉಪಯೋಗಿಸಿ ಅಧ್ಯಯನ ಕೈಕೊಳ್ಳಲು ಪರವಾನಿಗೆ ನೀಡಿದ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎಸ್. ರಾಮೇಗೌಡ ಇವರಿಗೆ ಮತ್ತು ಕುಲಸಚಿವರಿಗೆ; ಬೀದರ ಜಿಲ್ಲೆಯ ಬಸವಕಲ್ಯಾಣ, ನಾರಾಯಣಪುರಗಳ ಪ್ರಾಚ್ಯ ಅವಶೇಷಗಳನ್ನು ಅಧ್ಯಯನ ಕೈಕೊಳ್ಳಲು ಪರವಾನಿಗೆ ನೀಡಿದ ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯದ ನಿರ್ದೇಶಕರಿಗೆ ಹಾಗೂ ಈ ಲೇಖನ ಬರೆಯಲು ಸಲಹೆ ಸೂಚನೆ ನೀಡಿದ ನನ್ನ ಗುರುಗಳಾದ ಡಾ. ಅ.ಸುಂದರ ಅವರಿಗೆ ನನ್ನ ಕೃತಜ್ಞತೆಗಳು,

ಆಳ್ಲ ಚಿರಂಜೀವಿ*

# ಯಮಸಂಧಿಯ ದೇವೀರಮ್ಮ

ಯಮಸಂಧಿ ಗ್ರಾಮವು ಹಾಸನ ಜಿಲ್ಲೆ ಬೇಲೂರು ತಾಲ್ಲೂಕಿನಲ್ಲಿದ್ದು ಬೇಲೂರಿನಿಂದ ಚಿಕ್ಕಮಗಳೂರಿಗೆ ಹೋಗುವ ಹೆದ್ದಾರಿಯಿಂದ ಎಡಗಡೆ ಸುಮಾರು ಹತ್ತು ಕಿ.ಮೀ. ದೂರದಲ್ಲಿದೆ. ಯಮಸಂಧಿ ಗ್ರಾಮಕ್ಕೂ ಕನ್ನಡದ ಮೊದಲನೆಯ ಶಾಸನ ದೊರೆತಿರುವ ಹಲ್ಮಿಡಿ ಗ್ರಾಮಕ್ಕೂ ನಡುವೆ ಯಗಚಿ ನದಿ ಹರಿಯುತ್ತದೆ.

ಹೊಯ್ಸಳ ವೀರಬಲ್ಲಾಳನ ಮಂತ್ರಿಯಾಗಿದ್ದ ತಂತ್ರಪಾಲಕ ಶಿಖಾಮಣಿ ಹೆಮ್ಮಾಡಿ (ಪೆಮ್ಮಾಡಿ) ಕ್ರಿ.ಶ. ೧೧೭೭ರಲ್ಲಿ ಯಮಸಂಧಿಯನ್ನು ಆ ಪ್ರಾಂತ್ಯದ ಮುಖ್ಯ ಸ್ಥಳವನ್ನಾಗಿ ಮಾಡಿಕೊಂಡು ಸಮೀಪದಲ್ಲಿರುವ ಕೂಡಲೂರಿನಲ್ಲಿ ಹರಿಹರೇಶ್ವರ ದೇವಾಲಯವನ್ನು ನಿರ್ಮಿಸಿದನೆಂದು ತಿಳಿಯುತ್ತದೆ. (ಬೇಲೂರು ೮೬)

ಯಮಸಂಧಿ ಗ್ರಾಮದಲ್ಲಿ ಒಂದು ಕಂದಕದ ಗೂಡಿನಲ್ಲಿರುವ ಪ್ರತಿಮೆಯನ್ನು ಅಲ್ಲಿನ ಜನರು 'ನೆಗ ಮುದ್ದಮ್ಮ' ಎಂದು ಕರೆಯುತ್ತಾರೆ. ಆದರೆ ವಾಸ್ತವ ವಾಗಿ ಇದು ಲಕ್ಷ್ಮಿಯ ಸಂಕೇತವಾಗಿರುವ ಶ್ರೀ ಫಲ ವನ್ನು ಹೊಂದಿರುವ ವಿಷ್ಣುವಿನ ಪ್ರತಿಮೆಯಾಗಿದೆ. ಇದರ ಬಳಿಯಲ್ಲಿಯೇ ಇರುವ ಹೊಯ್ಸಳರ ಪ್ರಾರಂಭದ ಕಾಲದ ಚಾಮುಂಡೇಶ್ವರಿ, ಗಣೇಶನ ಪ್ರತಿಮೆಗಳು ಸುಂದರವಾಗಿವೆ. ಈ ಊರಿನಲ್ಲಿ ಪ್ರಸಿದ್ಧವಾಗಿರುವ ವೀರಭದ್ರ ದೇವಾಲಯವು ಇದೇ ಕಾಲಕ್ಕೆ ಸೇರುತ್ತದೆ. ಊರಿನ ಆಚೆ ಇರುವ ದೊಡ್ಡ ಶಿಲಾಮಂಟಪ ವಿಜಯ ನಗರದ ಕಾಲದ್ದಾಗಿದೆ.

ನಾವು ಇಲ್ಲಿ ಯಮಸಂಧಿ ಗ್ರಾಮವನ್ನು ತಾಂತ್ರಿಕಾರಾಧನೆಯ ದೃಷ್ಟಿಯಿಂದ ಗಮನಿಸುವುದು ಉಚಿತವಾಗಿದೆ. ಇಲ್ಲಿ ಮಾರ್ಕಂಡೇಯ ಪುರಾಣದಲ್ಲಿ ಬರುವ ವೃಷ್ವಕ್ಸೇನನ ಸೈನ್ಯಕ್ಕೆ 'ಯಮಸಂಧಿ'[1] ಎಂಬ ಹೆಸರಿದೆ. ಊರಿನಾಚೆ ಇರುವ ಶೆಟ್ಟಿಕೆರೆಯ ಸಮೀಪ ದಲ್ಲಿ ಒಂದು ಸಣ್ಣ ದೇವಾಲಯದಲ್ಲಿ ಯೋಗಿನಿ ಸಂಪ್ರದಾಯವನ್ನು ಪ್ರತಿನಿಧಿಸುವ ಸುಮಾರು ಹನ್ನೊಂದನೆಯ ಶತಮಾನದ ಹೊಯ್ಸಳರ ಪ್ರಾರಂಭ ಕಾಲದ ಪ್ರತಿಮೆಗಳು ಕಂಡು ಬರುತ್ತವೆ. ಈ ದೇವಾಲ ಯದ ಹಿಂಬದಿಯನ್ನು ದೂರದಿಂದ ನೋಡುವವರಿಗೆ ಇದು ಒಂದು ಕೋನಾಕಾರದ ಮಣ್ಣಿನ ದಿಬ್ಬವಾಗಿ ಕಂಡು ಬರುತ್ತದೆ. ಇದರ ಸಮೀಪದಲ್ಲಿ ದೇವಾಲಯದ ಎರಡು ಪಾರ್ಶ್ವಗಳಲ್ಲಿ ಎರಡು ಕಲ್ಯಾಣಿಗಳು ನಿರ್ಮಾಣ ಗೊಂಡಿವೆ.

ಈ ದೇವಾಲಯ ವಿಸ್ತೀರ್ಣದಲ್ಲಿ ಸುಮಾರು ಆರು ಅಡಿ ಎತ್ತರ ಮತ್ತು ನಾಲ್ಕು ಅಡಿ ಅಗಲದ್ದಾಗಿದೆ. ಇದರ ದ್ವಾರ ಪೂರ್ವ ದಿಕ್ಕಿನಲ್ಲಿದೆ. ಒಳಗಡೆ ಮಧ್ಯದಲ್ಲಿ

* ನಂ. ೯೩೫, 'ಸಪ್ತಗಿರಿ' ಶ್ರೀನಗರ ಬಡಾವಣೆ ಬೆಂಗಳೂರು–೫೬೦೦೭೦

1 ಇದು ವಿದ್ಯಾಲಂಕಾರ ಪ್ರೊಫೆಸರ್. ಎಸ್.ಕೆ. ರಾಮಚಂದ್ರರಾವ್ ಅವರಿಂದ ಸಂಗ್ರಹಿಸಿದ ವಿಷಯವಾಗಿದೆ

ಪ್ರತಿಷ್ಠಿತವಾಗಿರುವ ಪ್ರಧಾನ ಮೂರ್ತಿಗೆ 'ದೇವೀರಮ್ಮ' ಎಂದೂ ಬಲಗಡೆ ಮುಂದಿನ ಮೂಲೆಯಲ್ಲಿರುವ ಮೂರ್ತಿಗೆ 'ಬಸಮ್ಮ' ಎಂದೂ ಅಲ್ಲಿನ ಜನರು ಕರೆಯುತ್ತಾರೆ. ಇವುಗಳ ಜೊತೆಯಲ್ಲಿ ಹೊರಗಿನಿಂದ ತಂದು ಇಟ್ಟಿರಬಹುದಾದ ನವಿಲು ವಾಹನನಾದ ಷಣ್ಮುಖ, ಗಣೇಶ, ಮೋಹಿನಿಯರ ಮೂರು ಪ್ರತಿಮೆಗಳು ಹಾಗೂ ನಾಗರ ಶಿಲ್ಪಗಳನ್ನು ಕಾಣಬಹುದಾಗಿದೆ.

ಇಲ್ಲಿನ ಒಂದು ಆಶ್ಚರ್ಯವೇನೆಂದರೆ ದೇವಾಲಯದಲ್ಲಿ ಗೌಣವಾಗಿ ಉತ್ತರಕ್ಕೆ ಮುಖ ಮಾಡಿ ನಿಂತಿರುವ ಬಸಮ್ಮನ ಪ್ರತಿಮೆಯಲ್ಲಿ ನಾಲ್ಕು ಕೈಗಳಿದ್ದು ಪೂರ್ವ ದಿಕ್ಕಿಗೆ ಮುಖ ಮಾಡಿಕೊಂಡು ನಿಂತಿರುವ ಪ್ರಧಾನ ಮೂರ್ತಿ ದೇವೀರಮ್ಮನಿಗೆ ಎರಡು ಕೈಗಳಿದ್ದು ಭಿನ್ನವಾಗಿರುತ್ತವೆ

ಬಸಮ್ಮನ ನಾಲ್ಕು ಕೈಗಳಲ್ಲಿ ಅದರ ಮೇಲು ಭಾಗದ ಬಲಗೈಯಲ್ಲಿ ಒಂದು ಚಕ್ರವಿದೆ. ಆದರ ಕೆಳ ಭಾಗದ ಬಲಗೈ ಮತ್ತು ಎಡಭಾಗದ ಮೇಲುಗೈ ಭಿನ್ನವಾಗಿದ್ದು ಕೆಳಭಾಗದ ಎಡಗೈಯಲ್ಲಿ ಒಂದು ಸರ್ಪದ ಕೆತ್ತನೆ ಕಂಡು ಬರುತ್ತದೆ. ಬಸಮ್ಮ ದೇವಿ ಒಂದು ಬಸವನ ಮೇಲೆ ಲಲಿತಾಸನದಲ್ಲಿ ಕುಳಿತಿದ್ದಾಳೆ. ಈಕೆಯ ಎಡಗಾಲಿನ ಬಳಿ ಗುಂಗುರು ಕೂದಲಿನ ಒಂದು ರುಂಡದ ಶಿಲ್ಪವಿದೆ. ಬಸವ ಶಿಲ್ಪದ ಹಿಂದುಗಡೆ ಒಂದು ಕೋಣನ ರುಂಡವಿದೆ.

ಪ್ರಧಾನ ಮೂರ್ತಿ ದೇವೀರಮ್ಮ ಒಂದು ಕೋಣನ ತಲೆಯ ಮೇಲೆ ಲಲಿತಾಸನದಲ್ಲಿ ಕುಳಿತಿದ್ದಾಳೆ. ಈಕೆಯ ಬಲಭಾಗದ ತೊಡೆ ಭಿನ್ನವಾಗಿದ್ದು ಇದರ ಖಂಡ ಶಿಲ್ಪ ಅಲ್ಲಿಯೇ ಬಿದ್ದಿದೆ. ಇದು ಒಂದು ಸಿಂಹಲಾಂಛನವಿರುವ ವೇದಿಕೆಯ ಮೇಲೆ ಪ್ರತಿಷ್ಠಿತವಾಗಿದೆ. ಇದರ ಎಡಗೈಯ ಮುಂದೋಳಿನಲ್ಲಿ ಇಪ್ಪತ್ತೊಂದು ಬಳೆಗಳಿವೆ. ದೇವಿ ಎಡಗೈಯಲ್ಲಿ ಒಂದು ಖಡ್ಗವನ್ನು ಮೇಲು ಮುಖವಾಗಿ ಹಿಡಿದಿರುವ ಕೆತ್ತನೆ ಇದೆ. ಇದರ ಬಲಗೈ ಮುರಿದಿದ್ದು ಇದರ ಭಿನ್ನವಾದ ಶಿಲ್ಪ ಎಲ್ಲಿಯೂ ಕಾಣುತ್ತಿಲ್ಲ. ಇದರ ಎಡಗಾಲಿನ ಬಳಿ ಸುಂದರವಾದ ಕೂದಲುಗಳುಳ್ಳ ಒಂದು ರುಂಡದ ಕೆತ್ತನೆ ಇದೆ. ದೇವೀರಮ್ಮನ ಪ್ರಭಾವಳಿಯಲ್ಲಿ ಸುಂದರವಾದ ನಾಗ ಬಂಧಗಳ ಕೆತ್ತನೆ ಇದೆ.

ದೇವೀರಮ್ಮ ಮತ್ತು ಬಸಮ್ಮನ ಪ್ರತಿಮೆಗಳಲ್ಲಿ ಕೆತ್ತಿರುವ ಸೊಂಟದ ಪಟ್ಟಿ, ತೋಳ ಬಂದಿ, ಅಗಲವಾದ ಕಂಠಾಭರಣ, ಇಳಿದು ಬಿದ್ದಿರುವ ಮಣಿ ಮಾಲೆ, ಕರ್ಣಾಭರಣ, ತಲೆಯ ಮೇಲೆ ಕಂಗೊಳಿಸುತ್ತಿರುವ ರುಂಡ ಮಾಲೆಗಳು, ಎರಡೂ ಭುಜಗಳ ಮೇಲೆ ಹರಡಿರುವ ಕೇಶರಾಶಿ, ಕರಂಡಮುಕುಟ, ಪ್ರಭಾ ಮಂಡಲ-ಇವು ಹೊಯ್ಸಳರ ಮಾದರಿಯಲ್ಲಿದ್ದು ಸುಂದರವಾಗಿ ಕಾಣುತ್ತವೆ.

ಈಸಣ್ಣ ದೇವಾಲಯದ ಹಿಂದುಗಡೆ ಎರಡು ಪಾರ್ಶ್ವಗಳಲ್ಲಿ ನಿರ್ಮಾಣವಾಗಿರುವ ಎರಡು ಕಲ್ಯಾಣಿಗಳನ್ನು ಗಮನಿಸಿದಾಗ ಈ ಎರಡು ದೇವತೆಗಳಿಗೂ ಭಿನ್ನವಾದ ಆರಾಧನಾ ಪದ್ಧತಿ ಆಚರಣೆಯಲ್ಲಿದ್ದಿತೆಂದು ತಿಳಿದು ಬರುತ್ತದೆ. ಆದರೆ ಪ್ರಧಾನಮೂರ್ತಿ ದೇವೀರಮ್ಮನ ಹಿಂದುಗಡೆ, ಕಲ್ಯಾಣಿಯೂ ಚಿಕ್ಕ ಗೌಣವಾಗಿ ನಿಂತಿರುವ ಬಸಮ್ಮನ ಮೂರ್ತಿಯ ಹಿಂದುಗಡೆ ದೊಡ್ಡ ಕಲ್ಯಾಣಿಯೂ ನಿರ್ಮಾಣವಾಗಿರುವುದು ಸಂಶೋಧನೆಯ ದೃಷ್ಟಿಯಿಂದ ಗಮನಿಸತಕ್ಕದ್ದಾಗಿದೆ.

ಬಸಮ್ಮನ ಪ್ರತಿಮೆಯ ಬಲಪಾರ್ಶ್ವದ ಮೇಲಿನ ಕೈಯಲ್ಲಿ ಚಕ್ರ, ಕೆಳಗಿನ ಕೈ ಅಭಯ ಹಸ್ತ ಹೊಂದಿದ್ದು ಅದರ ಎಡ ಪಾರ್ಶ್ವದ ಮೇಲಿನ ಕೈ ಕಟಕ ಮುದ್ರೆ ಮತ್ತು ಕೆಳಗಿನದು ನಾಗ ಪಾಶವನ್ನು ಹೊಂದಿರುವ ದುರ್ಗಾದೇವಿಯನ್ನು ಹೋಲುತ್ತದೆ[2]. ಇದರ ಬಲ ಭಾಗದ ಮೇಲಿನ ಕೈಯಲ್ಲಿ ಚಕ್ರ ಮತ್ತು ಎಡ ಭಾಗದ ಕೆಳಗಿನ ಕೈಯಲ್ಲಿ ನಾಗಪಾಶ ಮಾತ್ರ ಇದ್ದು ಉಳಿದ ಎರಡು ಕೈಗಳು ಬಹುಶಃ ಸಂಪ್ರದಾಯ ವಿರೋಧಿಗಳ ಕೈಗೆ ಸಿಕ್ಕಿ ಭಿನ್ನವಾಗಿರುವುದರಿಂದ ಇದನ್ನು ಇಂಥ ಹೆಸರಿನ ಪ್ರತಿಮೆಯೆಂದು ಸ್ಪಷ್ಟವಾಗಿ ಗುರುತಿಸುವುದಕ್ಕೆ ಕಷ್ಟವಾಗುತ್ತದೆ. ಆದರೂ ಇದರ ಮೇಲಿನ ಬಲಗೈ

2 T.A. Gopinatha Rao—*Elements of Hindu Iconography*. Vol. I. Part III P. No.341.

ಯಲ್ಲಿರುವ ಚಕ್ರವನ್ನು ಗಮನಿಸಿದರೆ ಇದು ಅರವತ್ತ-ನಾಲ್ಕು ಮಂದಿ ಯೋಗಿನಿಯರಲ್ಲಿ ಒಬ್ಬಳಾದ ವೈಷ್ಣವಿಯೆಂದು ಗುರುತಿಸಬಹುದು. ಒರಿಸ್ಸಾ ರಾಜ್ಯದ ಬೇರಾಘಾಟ್ ನಲ್ಲಿರುವ ದೇವಾಲಯದ ವೈಷ್ಣವಿ ಪ್ರತಿಮೆ ಶಾಕ್ತ ತಾಂತ್ರಿಕ ಸಂಪ್ರದಾಯಕ್ಕೆ ಸೇರಿದೆ. ಅದೇ ರಾಜ್ಯದ ಹೀರಾ ಪುರದ ದೇವಾಲಯದಲ್ಲಿರುವ ಒಬ್ಬ ಯೋಗಿನಿಯ ನಾಲ್ಕು ಕೈಗಳಲ್ಲಿ ಎರಡು ಕೈಗಳು ಮುರಿದಿದ್ದು ಉಳಿದವುಗಳಲ್ಲಿ ಅದರ ಎಡ ಪಾರ್ಶ್ವದಲ್ಲಿ ಮೇಲಿನ ಮತ್ತು ಕೆಳಗಿನ ಕೈಗಳಲ್ಲಿ ಕ್ರಮವಾಗಿ ನಾಗ ಪಾಶ ಮತ್ತು ಅಭಯ ಮುದ್ರೆ ಇರುವುದನ್ನು ಗಮನಿಸಬಹುದು. ಹೈದರಾಬಾದಿನ ಸಾಲಾರ್‌ಜಂಗ್ ವಸ್ತು ಸಂಗ್ರಾಹಾಲಯದಲ್ಲಿ ಇದೇ ಮಾದರಿಯ ವೈಷ್ಣವಿಯ ಪ್ರತಿಮೆಯನ್ನು ಕಾಣಬಹುದು. ಆದರೆ ಅದು ಬಸವನ ಮೇಲೆ ಕುಳಿತುಕೊಂಡಿರುವ ಭಂಗಿಯಲ್ಲಿ ಕಂಡುಬರುವುದಿಲ್ಲ. ಯಮಸಂಧಿಯ ಬಸಮ್ಮನ ಪ್ರತಿಮೆಯನ್ನು ಮೇಲೆ ಹೇಳಿದ ಲಕ್ಷಣಗಳಿಂದ ತೌಲನಿಕವಾಗಿ ಗಮನಿಸಿದರೆ ಇದು ಯೋಗಿನಿ ಸಂಪ್ರದಾಯಕ್ಕೆ ಸೇರಿದ ವೈಷ್ಣವಿ ಪ್ರತಿಮೆಯೆಂದು ತಿಳಿದು ಬರುತ್ತದೆ[3].

**ದೇವೀರಮ್ಮ :** ದೇವೀರಮ್ಮನ ಶಿಲ್ಪವು ಒರಿಸ್ಸಾ ರಾಜ್ಯದಲ್ಲಿರುವ ಹೀರಾಪುರದ ದೇವಾಲಯಗಳಲ್ಲಿ ನವ ಕಾತ್ಯಾಯಿನಿಯರ ಪ್ರತಿಮೆಗಳು ಮನುಷ್ಯನ ರುಂಡಗಳ ಮೇಲೆ ನಿಂತಿರುವ ಭಂಗಿಗಳಲ್ಲಿ ಕಂಡು ಬರುತ್ತವೆ. ಎರಡು ಕೈಗಳನ್ನು ಹೊಂದಿದ್ದು, ಇವುಗಳಲ್ಲಿ ಕಾತ್ಯಾಯಿನಿಯ ಪ್ರತಿಮೆಯೊಂದರ ಬಲಗೈಯಲ್ಲಿ ಒಂದು ಖಡ್ಗವಿದ್ದು ಅದರ ಎಡಗೈಯಲ್ಲಿ ಕಪಾಲ ಪಾತ್ರೆಯಿಂದ ರಕ್ತ ಪಾನ ಮಾಡುತ್ತಿರುವ ಕೆತ್ತನೆಗಳಿವೆ.

ಈ ಪ್ರತಿಮೆಗಳ ತಲೆಗಳ ಮೇಲೆ ನೆರಳಿಗೆಂದು ಕೊಡೆ ಹಾಗೂ ಕೆಲವು ಪ್ರತಿಮೆಗಳಲ್ಲಿ ತಮಟೆ ಬಾರಿಸುವ ಪುರುಷರ ಕೆತ್ತನೆಗಳೂ, ಈ ದೇವಿಯರ ಕಾಲುಗಳ ಕೆಳಗಡೆ ಪುರುಷರ ರುಂಡ ಗಳಿವೆ ಮತ್ತು ಇವುಗಳ ಎರಡು ಪಾರ್ಶ್ವಗಳಲ್ಲಿ ನರಿ ಮತ್ತು ನಾಯಿಗಳ ಕೆತ್ತನೆಗಳಿವೆ. ಈ ಕಾತ್ಯಾಯಿನಿಯರ ಮುಖಗಳಲ್ಲಿ ರೌದ್ರತಾ ಭಾವನೆ ಕಂಡು ಬರುತ್ತದೆ. ಆದರೆ ಈ ಎಲ್ಲಾ ದೇವಾಲಯಗಳಲ್ಲಿ ಯೋಗಿನಿಯರ ಮತ್ತು ಕಾತ್ಯಾನಿಯರ ಕೈಗಳು ತುಂಡಾಗಿ ಭಿನ್ನವಾಗಿದ್ದು ಇವು ಇಂಥ ಹೆಸರಿನ ಪ್ರತಿಮೆಗಳು ಎಂದು ಸ್ಪಷ್ಟವಾಗಿ ಗುರುತಿಸುವುದಕ್ಕೆ ಕಷ್ಟವಾಗುತ್ತದೆ.[4]

ಕರ್ನಾಟಕ ರಾಜ್ಯದ, ಯಮಸಂಧಿಯಲ್ಲಿರುವ ದೇವೀರಮ್ಮನ ಪ್ರತಿಮೆ ವಿನ್ಯಾಸದಲ್ಲಿ ಒರಿಸ್ಸಾ ರಾಜ್ಯದ ಕಾತ್ಯಾಯಿನಿಯರ ಶಿಲ್ಪಗಳಿಗಿಂತ ಹಲವು ವಿಷಯಗಳಲ್ಲಿ ಬೇರೆಯ ರೀತಿಯಲ್ಲಿ ವೈಶಿಷ್ಟ್ಯತೆಯನ್ನು ಪಡೆದಿದೆ. ಇಲ್ಲಿ ದೇವಿ ಒಂದು ಕೋಣನ ತಲೆಯ ಮೇಲೆ ಲಲಿತಾಸನದಲ್ಲಿ ಕುಳಿತಿರುವ ಭಂಗಿಯಲ್ಲಿದ್ದು ಇದರ ಎಡಗೈಯಲ್ಲಿ ಒಂದು ಖಡ್ಗದ ಕೆತ್ತನೆ ಇದೆ. ಇವಳ ಬಲಗೈ ಭಿನ್ನವಾಗಿದ್ದು ತುಂಡಾಗಿ ಬಿದ್ದಿರುವ ಬಲಭಾಗದ ತೊಡೆಯ ಮೇಲೆ ಇದರ ಮುಂದೋಳು ಅಂಟಿಕೊಂಡಿದೆ. ಈಗ ನಾಪತ್ತೆಯಾಗಿರುವ ಇವಳ ಬಲ ಅಂಗೈಯಲ್ಲಿ ಪಾನ ಮಾಡುತ್ತಿರುವ ಒಂದು ಕಪಾಲ ಪಾತ್ರೆ ಇದ್ದಿತೆಂದು ಈ ಶಿಲ್ಪದ ಸಾಂಪ್ರದಾಯಿಕ ಹಿನ್ನೆಲೆಯಿಂದ ತಿಳಿದು ಬರುತ್ತದೆ.

ದೇವಿರಮ್ಮನ ಎಡಗೈಯ ಮುಂದೋಳಿನಲ್ಲಿ ಪ್ರಾದೇಶಿಕ ಜಾನಪದ ಸಂಪ್ರದಾಯವನ್ನು ಪ್ರತಿಬಿಂಬಿಸುವ ಇಪ್ಪತ್ತೊಂದು ಬಳೆಗಳಿವೆ. ಇವು ಸಂಖ್ಯೆಯ ದೃಷ್ಟಿಯಿಂದ ತಾಂತ್ರಿಕ ಸಂಪ್ರದಾಯವನ್ನು ಆಚರಿಸುವ ಸಂಕೇತಗಳಾಗಿ ತೋರುತ್ತವೆ.

ಒರಿಸ್ಸಾ ರಾಜ್ಯದಲ್ಲಿರುವ ಕಾತ್ಯಾಯಿನಿ ಪ್ರತಿಮೆಗಳಲ್ಲಿ ಯೋಗಿನಿಯರ ಕೇಶ ಪಾಶ ತಲೆಯ ಹಿಂಭಾಗದ ಎಡಗಡೆ ಅಥವಾ ಬಲಗಡೆಯಲ್ಲಿ ತಿರುಗಿಕೊಂಡು ಇಳಿಬಿದ್ದಿರುತ್ತದೆ. ಯಮಸಂಧಿಯ ದೇವೀರಮ್ಮನ ತಲೆಯ ಕೇಶರಾಶಿಯನ್ನು ಅವಳ ಭುಜಗಳ ಎರಡು ಪಾರ್ಶ್ವಗಳಲ್ಲಿ ಸುಂದರವಾಗಿ ಬಿಡಿಸಲಾಗಿದೆ. ಈ ಎರಡೂ ರಾಜ್ಯಗಳ ಎರಡು ರೀತಿಯ ಕಾತ್ಯಾಯಿನಿಯರ ಪ್ರತಿಮೆಗಳ

3 H. C. DAS—*Tantricism* A Study of the Yogini cult—P No. 34

4 ಅದೇ. ಪುಟ. 46

ಕಾಲುಗಳ ಬಳಿ ಮಹಿಷಾಸುರನ ರುಂಡದ ಶಿಲ್ಪವನ್ನು ಸಮವಾಗಿ ಕಾಣಬಹುದು. ಈ ಎಲ್ಲಾ ಅಂಶಗಳನ್ನೂ ಗಣನೆಗೆ ತಂದು ಕೊಂಡರೆ ಯಮುಸಂಧಿಯಲ್ಲಿರುವ ದೇವೀರಮ್ಮನ ಪ್ರತಿಮೆ ದೇವಿ-ಕಾತ್ಯಾಯಿನಿಯದೆಂದು ನಿಸ್ಸಂದೇಹವಾಗಿ ಹೇಳಬಹುದು.

ಸಮಾಜದ ಕೆಳಸ್ತರ ವರ್ಗದ ಜನರು ವೇದೋತ್ತರ ಯುಗದಲ್ಲಿ ಒಂದು ಕಡೆ ದೀರ್ಘಕಾಲ ಹಿಡಿಯುವ ವೈದಿಕ ಯಜ್ಞಯಾಗಗಳು, ಇನ್ನೊಂದು ಉಪನಿಷತ್ತುಗಳು ಮೊದಲಾದ ದಾರ್ಶನಿಕ ಗ್ರಂಥಗಳ ಅಧ್ಯಯನ ನಡೆಸಿ ತಪಸ್ಸನ್ನಾಚರಿಸಿ ಆತ್ಮೋದ್ಧಾರ ಮಾಡಿಕೊಳ್ಳುವ ಶ್ರಮಸಾಧ್ಯವಾದ ಮಾರ್ಗ. ಇವೆರಡನ್ನೂ ಸ್ವಇಚ್ಛೆಯಿಂದ ಅಥವಾ ಸಾಮಾಜಿಕ ಪ್ರತಿಭಟನೆಗಳಿಂದ ಪಾಲಿಸುವುದಕ್ಕೆ ಸಾಧ್ಯವಾಗದೆ ತಾಂತ್ರಿಕ ಸಂಪ್ರದಾಯಕ್ಕೆ ಶರಣು ಹೋದರು. ಈ ಸಂಪ್ರದಾಯ ವೇದೋಪನಿಷತ್ತುಗಳ ಸಾರವನ್ನು, ಪುರಾಣಗಳಲ್ಲಿ ಬರುವ ಭಕ್ತಿ ಭಾವನೆಗಳನ್ನು ಪತಂಜಲಿಯ ಯೋಗ ಮಾರ್ಗವನ್ನು ಅಥರ್ವವೇದದಲ್ಲಿ ಬರುವ ಮಂತ್ರಗಳ ಭಾಗಗಳನ್ನು ಹಾಗೂ ಆಯಾಯಾ ಪ್ರಾದೇಶಿಕ ಜಾನಪದ ಸಂಪ್ರದಾಯಗಳನ್ನು ಗರ್ಭೀಕರಿಸಿಕೊಂಡು ಜನ ಸಾಮಾನ್ಯರಿಗೆ ಸಮಷ್ಟಿ ಸಂದೇಶವನ್ನು ನೀಡಿತು.[6]

ತಾಂತ್ರಿಕ ಸಂಪ್ರದಾಯಕ್ಕೆ ಸಂಬಂಧಿಸಿದ ಗ್ರಂಥಗಳು ಕ್ರಿ. ಶ. ೫೦೦ ರಿಂದ ೯೦೦ ವರೆಗೆ ರಚಿತವಾದ ಪುರಾಣೋಕ್ತಕಾಲಕ್ಕೆ ಸಂಬಂಧಿಸಿದುವಾಗಿವೆ[7]

ಯೋಗಿನಿ ಸಂಪ್ರದಾಯ ಕ್ರಿ.ಶ. ಎಂಟು ಅಥವಾ ಒಂಭತ್ತನೆಯ ಶತಮಾನದಲ್ಲಿ ಸಪ್ತ ಮಾತೃಕೆಯರು ಅಥವಾ ಅಷ್ಟಶಕ್ತಿ ದೇವತೆಗಳ ವಿಶೇಷ ಪ್ರಭಾವದಿಂದಾಗಿ ಹೆಚ್ಚಿನ ಮಾನ್ಯತೆಪಡೆಯಿತು.

ಯೋಗಿನಿಯರು ಪ್ರಾರಂಭದಲ್ಲಿ ಮಹಿಳೆಯರು ಅಥವಾ ಪೂಜಾರಿಣಿಯರಾಗಿದ್ದು ಕ್ರಮೇಣ ದೇವತೆಯರ ಆರಾಧನಾ ಸಂಪರ್ಕದಿಂದ ದೇವಾಂಶ ಸಂಭೂತರಾಗಿ ಮಾನ್ಯತೆ ಪಡೆದರು. ಸಪ್ತ ಅಥವಾ ಅಷ್ಟ ಮಾತೃಕೆಯರು ಸಂಖ್ಯಾಬಲ ದಿಂದ ಅರವತ್ತ ನಾಲ್ಕು ಅಥವಾ ಇನ್ನೂ ಹೆಚ್ಚು ಮಂದಿ ಯೋಗಿನಿಯರಾದದ್ದು ಹೀಗೆ ಒಂದು ವಾದವಿದೆ[8].

ಮಾರ್ಕಂಡೇಯ ಪುರಾಣ ಕ್ರಿ. ಶ. ಐದನೆಯ ಶತಮಾನದಲ್ಲಿ ರಚಿತವಾಗಿದ್ದು ಅದು ಈ ಅರವತ್ತ ನಾಲ್ಕು ಮಂದಿ ಯೋಗಿನಿಯರ ಮತ್ತು ಕಾತ್ಯಾಯಿನಿಯರ ಹೆಸರುಗಳನ್ನು ತಿಳಿಸುತ್ತದೆ. ಹೀಗೆಯೇ ಮತ್ಸ್ಯ ಪುರಾಣ,ಕಾಳಿಕಾಪುರಾಣ, ಮತ್ಸ್ಯೇಂದ್ರನಾಥನ ಕೌಲಾಯನ ನಿರ್ಣಯ, ಸ್ಕಂದ ಪುರಾಣ, ಚಂಡಿಪುರಾಣ, ದುರ್ಗಾಪೂಜಾಪದ್ಧತಿ ಮತ್ತು ಮಹಾಭಾಗವತಪುರಾಣ ಮೊದಲಾದ ಗ್ರಂಥಗಳಲ್ಲಿ ಈ ಯೋಗಿನಿಯರ ಮತ್ತು ನವ ಕಾತ್ಯಾಯಿನಿಯರ ಹೆಸುರಗಳು ಮತ್ತು ಅವರ ಆರಾಧನಾ ಪದ್ಧತಿಗಳು ವಿವರವಾಗಿ ನಿರೂಪಿಸಲಾಗಿದೆ.

ಕೃತಜ್ಞತೆಗಳು: ಯಮುಸಂಧಿಯರಾಮೇಗೌಡ, ಪದ್ಮೇಗೌಡ ಮತ್ತು ಕುಂಟುಬ ,ಛಾಯಾಚಿತ್ರಕಾರರಾದ ಅ.ಲ. ನರಸಿಂಹನ್ ಮತ್ತು ಶಿ. ರಾಜೇಂದ್ರ ಪ್ಪ ಪ್ರೊ॥ ಎಸ್. ಕೆ. ರಾಮುಚಂದ್ರರಾವ್ ಅವರಿಗೆ ಸಲ್ಲುತ್ತದೆ.

6 Pushpendukumar—*Sakti Cult In ancient India* P. 149

7 J. N. Farquhar—*An Outline of The Religious Literature of India*—P. 200

8 N. N. Bhattacharya—*Hisory of The Sakta Religion*—P. 104-105

**ಜ್ಯೋತ್ಸ್ನ ಕಾಮತ್***

# ಸಾಹಿತ್ಯ, ಶಿಲ್ಪ, ಚಿತ್ರಗಳಲ್ಲಿ ಮಂಚ

ಪಾಶ್ಚಾತ್ಯ ದೇಶಗಳಲ್ಲಿ ಚಳಿಯಲ್ಲಿಯೂ ಬೆಚ್ಚಗೆ ಮಲಗುವದಕ್ಕಾಗಿಯೇ, ಅನಾದಿಕಾಲದಿಂದಲೂ ಮಂಚದ ಪ್ರಕಾರಗಳನ್ನು ಬಳಸುತ್ತ ಬಂದಿದ್ದಾರೆ. ಉತ್ತರ ಭಾರತದವರೂ ಇದೇ ಕಾರಣಕ್ಕಾಗಿ ಮರದ ಮಂಚ, ಹೊರಸು (ಖಟಿಯಾ) ಬಳಕೆಯಲ್ಲಿ ತಂದರು. ದಕ್ಷಿಣ ಭಾರತದ ಸಮಶೀತೋಷ್ಣ ಮತ್ತು ಉಷ್ಣ ಹವಾಮಾನದಿಂದಾಗಿ ಜನಸಾಮಾನ್ಯರು ಮಂಚಕ್ಕೆ ಶರಣು ಹೋಗಬೇಕಾಗಿರಲಿಲ್ಲ. ಇಷ್ಟಾದರೂ ಸಿರಿವಂತಿಕೆಯ ಸಂಕೇತವಾಗಿ, ಹೆಚ್ಚಿನ ಸುಖಕ್ಕಾಗಿ, ಕರ್ನಾಟಕದಲ್ಲಿ ಶತಕಗಳಿಂದ ಅಸ್ತಿತ್ವದಲ್ಲಿರುವ ಮಂಚಗಳ ವೈವಿಧ್ಯಮಯತೆ ಬೆರಗು ಹುಟ್ಟಿಸುವಂತಹದು. ಕನ್ನಡ ಸಾಹಿತ್ಯ, ಶಾಸನ, ಶಿಲ್ಪ ಮತ್ತು ಚಿತ್ರಗಳಿಂದ ಈ ಲೇಖನಕ್ಕೆ ಬೇಕಾಗುವ ಮಾಹಿತಿ ಆಕರಾದಿಗಳನ್ನು ಪಡೆಯಲಾಗಿದೆ.

ಮಧ್ಯ ಯುಗದಲ್ಲಿಯೇ ಬಸವಣ್ಣನವರು "ಓಡೆತ್ತ ಬಲ್ಲುದು ಅವಲಕ್ಕಿಯ ಸವಿಯ, ಕೋಡಗವೆತ್ತ ಬಲ್ಲದು ಸೆಳೆ ಮಂಚದ ಸುಖವ!" ಎಂದು ಉದ್ಗರಿಸಿದ್ದರು. ಸೆಳೆ ಮಂಚದ ಸುಖ ಸವಿಯಲು ವಿಶೇಷ ಸಂಸ್ಕಾರದ ಅಗತ್ಯವಿದೆಯೆಂಬುದು ತಾತ್ಪರ್ಯ. ಚಾಲುಕ್ಯ ಭೂಪಾಲ ಮುಮ್ಮಡಿ ಸೋಮೇಶ್ವರನು (೧೧೨೬–೧೧೩೮ ಕ್ರಿ.ಶ.) ಮಾನಸೋಲ್ಲಾಸದಲ್ಲಿ ಅರಸರು ಮತ್ತು ಧನಿಕರು ಆ ಕಾಲದಲ್ಲಿ ಬಳಸುತ್ತಿದ್ದ ಹಲವಾರು ಮಂಚಗಳ ಪ್ರಕಾರಗಳ ವಿವರಗಳಿವೆ.[2] ನಂಜುಂಡನ ರಾಮನಾಥ ಚರಿತೆ (೧೬ನೇ ಶತಕ)ಯಲ್ಲಿ ರತ್ನಾಜಿಯ ಶಯ್ಯಾಗೃಹದಲ್ಲಿದ್ದ ಬೇರೆ ಬೇರೆ ಮಂಚಗಳ ಹೆಸರುಗಳನ್ನು ಕಾಣಬಹುದು. ಅಲ್ಲಿ ಚಪ್ಪರಮಂಚ, ಶಕುನಿ ಮಂಚ, ನಳನಳಿಸುವ ತೂಗುಮಂಚಗಳಿದ್ದವು.[3] 'ಭರತೇಶ ವೈಭವ' ಕಾವ್ಯದಲ್ಲಿ, ಬೆಳ್ಳಿ, ಬಂಗಾರ, ಲೋಹ, ಶ್ರೀಗಂಧ, ತೇಗು, ಮೊದಲಾದವನ್ನು ಮಂಚದ ರಚನೆಯಲ್ಲಿ ಬಳಸುತ್ತಿದ್ದ ಉಲ್ಲೇಖವಿದೆ.[4]

---

* ನಿರ್ದೇಶಕರು, ಆಕಾಶವಾಣಿ ನಿಲಯ, ಬೆಂಗಳೂರು ಕೇಂದ್ರ, ಬೆಂಗಳೂರು.

1 ಭಕ್ತಿ ಭಂಡಾರಿ ಬಸವೇಶ್ವರರ ವಚನಗಳು. ಸಂ : ಆರ್.ಸಿ. ಹಿರೇಮಠ—ಭಕ್ತಸ್ಥಲ ೯೭ನೇ ವಚನ ಪುಟ ೮೩

2 ಮಾನಸೋಲ್ಲಾಸ : ಸೋಮೇಶ್ವರ, ಸಂಪುಟ ii ಅಧ್ಯಾಯ ೯ ಮತ್ತು ೧೮ ಶಯ್ಯಾಭೋಗ ಪು. ೯೮-೯೯, ಪು. ೧೪೩-೧೪೪

3 ನಂಜುಂಡನ ರಾಮನಾಥ ಚರಿತೆ : ಭಾಗ ii ಅಧ್ಯಾಯ ೪೬ : ಪದ್ಯ ೪೮

ಸೆಳೆಮಂಚ ತುಪ್ಪುಳವಾಸಿನ ಚಪ್ಪರ ಮಂಚ
ಶಕುನಿ ಮಂಚ, ನಳನಳಿಸುವ ತೂಗುಮಂಚ
ತೊಳಪ ಕುರಾಡ ಮಂಚಗಳಾ ಸೆಜ್ಜೆಯ
ನಿಳಯದೊಳಗೆ ಕಣ್ಗೆಸೆದವು.

4 ಭರತೇಶ ವೈಭವ : ಶಯ್ಯಾಗೃಹ ಸಂಧಿ. ಪದ್ಯ. ೨೫-೨೬ "ಕಾಂಚನ ಮಂಚ, ಮಾಣಿಕ ಮಂಚ, ಶ್ರೀಗಂಧ ಮಂಚ, ಪೊಂಮಡಿ ಬೆಳ್ಳಿ ಮಂಚ, ಪಂಚರತ್ನ ಮಂಚ, ಚಪ್ಪರ ಮಂಚ, ಗುಜ್ಜರಿಗಾಲ ಮಂಚ, ಮೇಲುಪ್ಪರ ಮಂಚ, ಶಕನು ತೂಗುಮಂಚ, ಸೆಳೆಮಂಚ"

ಪಂಪನ ಕಾಲದಲ್ಲಿ ಲೋಹದ ಮಂಚಗಳೂ ಬಳಕೆಯಲ್ಲಿದ್ದವು.[5] ವಿದೇಶೀ ಪ್ರವಾಸಿಗರು ನಮ್ಮಲ್ಲಿದ್ದ ಮಂಚಗಳ ಪ್ರಕಾರಗಳನ್ನು ವಿಸ್ಮಯದಿಂದ ಗಮನಿಸಿ ವಿವರಗಳನ್ನು ಬರೆದಿಟ್ಟಿದ್ದಾರೆ. ಮಾರ್ಕೋಪೋಲೋ (೧೩ನೇ ಶತಕ) ಬೆತ್ತದಿಂದ ನಿರ್ಮಿಸಿದ ಒಂದು ತರಹದ ಮಂಚವನ್ನು ದಕ್ಷಿಣ ಪ್ರದೇಶದ ಜನ ಬಳಸುತ್ತಿದನ್ನು ಗಮನಿಸಿದ್ದ. ಇದು ಎಷ್ಟು ಚಮತ್ಕಾರಿತವಾಗಿರುತ್ತಿತ್ತೆಂದರೆ ನಿದ್ರೆ ಬಂದಾಗ ಕೇವಲ ದಾರ ಎಳೆದು ಮಂಚವನ್ನು ಮೇಲಕ್ಕೆ ಎತ್ತಿ ತೂಗಾಡುವಂತೆ ಮಾಡಿಕೊಳ್ಳಬಹುದಿತ್ತು.[6]

ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡ ದೇವಾಲಯಗಳಲ್ಲಿಯ ಶಿಲ್ಪಗಳಲ್ಲಿ ವಿವಿಧ ಪ್ರಕಾರದ ಮಂಚಗಳನ್ನು ಗುರುತಿಸಬಹುದು. ಬೇಸಿಗೆಯಲ್ಲಿ ತಂಗಾಳಿಗೆ, ಚಳಿಗಾಲದಲ್ಲಿ ಎಳೆ ಬಿಸಿಲಿಗೆ ಮೈಯೊಡ್ಡಲು ಬಳಸುವ, ತೀರ ಹಗುರವಾದ ಕಟ್ಟಿಗೆಯಿಂದ ನಿರ್ಮಿಸಿ, ಬಟ್ಟೆಯ ಪಟ್ಟಿಗಳಿಂದ (ಪಟ್ಟಿಕಾಭಿಃ ಸುಗುಂಫಿತಃ) ಹೆಣೆಯುತ್ತಿದ್ದರಿಂದ ಅವಶ್ಯವಿದ್ದಲ್ಲಿ ಅವನ್ನು ಸಾಗಿಸಲು ಬರುತ್ತಿತ್ತು. ಗುಜ್ಜರಿಗಾಲಿನ ಮಂಚ, ಒಂದೇ ಸ್ಥಳದಲ್ಲಿ ಸ್ಥಾಯಿಯಾಗಿ ಇರುತ್ತಿದ್ದು ದಪ್ಪ ಮುರುಟಿದ ಕಾಲುಗಳನ್ನು ಹೊಂದಿ ಗಟ್ಟಿಮುಟ್ಟಾಗಿದ್ದು ಇಡೀ ಪುಟ್ಟ ಸಂಸಾರವನ್ನೇ ಹೊರಬಲ್ಲುದಾಗಿತ್ತು. ಸೆಳೆಮಂಚ ಅಥವಾ ತೂಗುಮಂಚ, ಬೇರೆ ಬೇರೆ ಲೋಹಗಳಿಂದ ನವಿರಾಗಿ ರಚಿಸಿದ ಸ್ಪ್ರಿಂಗಿನ ಪುಟಿದ ಸುಖವನ್ನು ಹಲವೊಂದು ಸಲ ನೀಡುತ್ತಿತ್ತು. ಬೆತ್ತದ ಸೆಳೆ ಮಂಚಗಳೂ ಇದ್ದವು. ನವವಿವಾಹಿತರಿಗೆ ಸಂತೋಷ ನೀಡುವ ವರಮಂಚಗಳೂ ಇದ್ದವು. ಇವುಗಳ ಅಡಿಯಲ್ಲಿ ವೀಳ್ಯದ ಡಬ್ಬಿ, ಡವಕೆ, ಮಧುವಿನ ಹೂಜೆ, ನೀರಿನ ಚೊಂಬುಗಳನ್ನು ಗುರುತಿಸಬಹುದು. "ಲವ" ಮಂಚಕ್ಕೆ ಬೆತ್ತದ ಮೈ, ಚರ್ಮದ ಹೊದಿಕೆಯಿರುತ್ತಿತ್ತು. ಬಸವ ಪುರಾಣದಲ್ಲಿ ವಾರಾಂಗನೆಯ ಮನೆಯಲ್ಲಿ ಓರಣವಾಗಿ ಹೊಂದಿಸಿದ ಹಾಸುಮಂಚ, ಉಯ್ಯಲವಾಸುಮಣೆ, ತಲೆಗಿಂಬು, ಮೇಲ್ಮಡಿಗಳಿದ್ದ ಹಾಸು ಗದ್ದುಗೆಗಳಿದ್ದು, ಕುಂಚ-ಕಾಳಂಜಿ, ತೆರೆಗಿಂಡಿ, ತಂಬುಗೆ ಮುಂತಾದವನ್ನು ಜೋಡಿಸಿಡುತ್ತಿದ್ದ ವರ್ಣನೆಯಿದೆ.[7] ಅರಸರ, ಸಿರಿವಂತರ ಮನೆಗಳಲ್ಲಿ ಚಿನ್ನದ ಕೆಲಸ ಮಾಡಿದ ಮಂಚಗಳಿಗೆ ರೇಶ್ಮೆಯ ಮೇಲ್ಕಟ್ಟು ಇರುತ್ತಿತ್ತು. ಸಮುದ್ರದ ನೊರೆಯಂತೆ ಮನೋಹರವಾದ ಬೆಳ್ಳನೆಯ ರೇಶ್ಮೆಯ ಮೇಲ್ಹಾಸು ಹೊಂದಿದ ಹಂಸ ತೂಲಿಕಾತಲ್ಪವಿರುತ್ತಿತ್ತು.[8] ಸೋಮೇಶ್ವರನು, ಋತುಮಾನಕ್ಕನುಗುಣವಾಗಿ ವಿವಿಧ ಹಾಸಿಗೆಗಳನು ಬಳಸಬೇಕೆಂದು ಸೂಚಿಸಿದ್ದಾನೆ. ವಸಂತ ಕಾಲದಲ್ಲಿ ಹಂಸ ತೂಲಿಕೆಯದು, ಬೇಸಿಗೆಯಲ್ಲಿ ನೀರಿನ ಹಾಸಿಗೆ, ಮಳೆಗಾಲದಲ್ಲಿ ಹತ್ತಿಯದು, ಶರತ್ ಋತುವಿನಲ್ಲಿ ಹೂ, ಕೇಸರ ದೋಲಾಮಂಚ[9] ಗಳ ಹಾಸಿಗೆಗಳು ಉತ್ತಮವಾದವುಗಳು ಎಂದು ಅಭಿಪ್ರಾಯ ಪಟ್ಟಿದ್ದಾನೆ. ಶಿಲ್ಪಗಳಲ್ಲಿ ಅನೇಕ ಪ್ರಕಾರದ ಹಾಸಿಗೆಗಳನ್ನು ಗುರುತಿಸಬಹುದಾದರೂ ಅವುಗಳೊಳಗೆ ಏನು ತುಂಬಲಾಗಿದೆ ಎಂದು ನಿರ್ಧರಿಸಲಾಗುವದಿಲ್ಲ

ಮಂಚಗಳ ವಿನ್ಯಾಸ, ಹಾಸಿಗೆ-ಹೊದಿಕೆ, ಗದ್ದಿಗೆಗಳ ಅಂದ ಚಂದವನ್ನು ಆ ಕಾಲದ ವರ್ಣಚಿತ್ರಗಳಿಂದ ಅರಿಯಬಹುದಾಗಿದೆ. ಕುಶಲ ಕರ್ಮಿಗಳಿಂದ ಮಂಚದ ವಿವಿಧ ಭಾಗಗಳನ್ನು ಕುಸುರಿಗೆಲಸ ಮಾಡಿಸಿ ಅಲಂಕರಿಸುತ್ತಿದ್ದರು. ಅಲ್ಲದೇ ಆಕರ್ಷಕ ಬಣ್ಣಗಳಿಂದ ಸಿಂಗರಿಸುತ್ತಿದ್ದರು. ಬೇಡಿಕೆಗನುಗುಣವಾಗಿ ಏಳು ಪ್ರಕಾರದ ಹಾಸಿಗೆಗಳನ್ನು ತಯಾರಿಸುತ್ತಿದ್ದರು. ಹಿಂಜಿದ ಹತ್ತಿ, ಹಂಸದ ತುಪ್ಪುಳ, ಎಲೆ-ಚಿಗುರುಗಳು, ಕಮಲದಂತಹ ಮೃದು ಹೂಗಳು, ಹೂ ಕೇಸರಗಳು, ಬಳಕೆಯಲ್ಲಿದ್ದವು. 'ತೋಯಶಯ್ಯೆ'ಯನ್ನು ಚರ್ಮದ ಚೀಲದಲ್ಲಿ ನೀರು ತುಂಬಿ ಸೋರದಂತೆ ಭದ್ರಪಡಿಸುತ್ತಿದ್ದರು. ಹದಗೊಳಿಸಿದ ಚರ್ಮದ ಮೇಲ್ಹಾಸುಗಳ ಮೇಲೆ ಚಿನ್ನ, ಬೆಳ್ಳಿ ಕಸೂತಿಯಿದ್ದು ಇದರಲ್ಲಿ ಭಾರತೀಯರ ನೈಪುಣ್ಯವನ್ನು ಇನ್ನಾವ ದೇಶವೂ ಪಡೆದಿಲ್ಲವೆಂದು

---

5 ಪಂಪನ ಆದಿಪುರಾಣ : ಹನ್ನೊಂದನೆ ಸಂಧಿ. ಪದ್ಯ ೭೬

6 ಪ್ರವಾಸಿ ಕಂಡ ಇಂಡಿಯ : ಸಂ. ii ಪು. ೩೧ ಹಾಗೂ ೪೩

7 ಭೀಮಕವಿಯ ಬಸವ ಪುರಾಣ : ಕಾಂಡ ೩ ಸಂಧಿ ೧೨ ಪದ್ಯ ೫-೧೬

8 ಆದಿಪುರಾಣ ಸಂಧಿ ೫ ಪದ್ಯ ೨೩ ; ನೇಮಿನಾಥ ಪುರಾಣ ಸಂಧಿ ೪ ಪದ್ಯ ೫೫

9 ಮಾನಸ ಸೋಲ್ಲಾಸ ಸಂ. ii ಅಧ್ಯಾಯ ೧೮ ಪದ್ಯ ೯೩

ಮಾರ್ಕೊಪೋಲೊ ಉದ್ಗರಿಸಿದ್ದಾನೆ.[10] ಸೋಫಾ ಅಥವಾ ಸೆಟ್ಟಿಗಳನ್ನು ಹೋಲುವ ಗದ್ದಿಗಳು ವರ್ತುಲ, ಲಂಬ ವರ್ತುಲ, ಚಪ್ಪಟೆಯಾಕಾರದವು ಇದ್ದು ರೇಶ್ಮೆಯ ಹೊದಿಕೆಯ ಆಸನಗಳನ್ನು ಹೊಂದಿರುತ್ತಿದ್ದವು. ಚಿತ್ತಾರದ ಅಂದ ಚಂದದ ಬಟ್ಟೆಗಳನ್ನು ಹಾಸುತ್ತಿದ್ದರು. ದಿಂಬುಗಳಿಗೆ ಮುತ್ತು ರತ್ನಗಳನ್ನು ಜೋಡಿಸುವ ಪರಿಪಾಠವೂ ಉಳ್ಳವರ ಮನೆಯಲ್ಲಿತ್ತು.

ಆದಿಲ್‌ಶಾಹಿಗಳ ಆಳಿಕೆಯಲ್ಲಿ ರಚಿತವಾದ ದಕ್ಕನೀ ಶೈಲಿಯ ಚಿಕಣಿ ಚಿತ್ರಗಳಲ್ಲಿ ಸುಂದರ ಯುವತಿಯೋರ್ವಳು ಮಂಚದ ಮೇಲೆ ಪವಡಿಸಿರುವುದನ್ನು ಚಿತ್ರಿಸಲಾಗಿದೆ. ಎರಡು ತಲೆದಿಂಬುಗಳ ಮೇಲೆ ತಲೆಯಿಟ್ಟು ಮೆತ್ತಗಿನ ಹಾಸಿಗೆಯ ಮೇಲೆ ವಿರಮಿಸುತ್ತಿದ್ದಾಳೆ. ಮಂಚದ ಅಡಿಯಲ್ಲಿ ಹಣ್ಣು ಹಂಪಲುಗಳ ತಟ್ಟೆ, ಸುರೆಯ ಪಾತ್ರೆಗಳಿವೆ. ಬೆಕ್ಕೊಂದು ಯಜಮಾನಿಯನ್ನು ಎಚ್ಚರಿಸುವಂತೆ ಮ್ಯಾಂವ್ ಗುಡುತ್ತಿದ್ದರೆ, ಅದರ ಮರಿ ತಾಯಿಯ ಆಶ್ರಯ ಪಡೆಯಲು ಬರುತ್ತಿರುವಂತೆ ಚಿತ್ರಿಸಲಾಗಿದೆ. ಶ್ರವಣಬೆಳ್ಗೊಳದ ಜೈನ ಮಠದ ಭಿತ್ತಿ ಚಿತ್ರಗಳಲ್ಲಿ ಚಕ್ರವರ್ತಿ ಅರವಿಂದ ಎತ್ತರವಾದ ಮಂಚದ ಮೇಲೆ ವಿರಮಿಸುತ್ತಿದ್ದಾನೆ. ಹಾಸಿಗೆಯ ಮೇಲೆ ಕುಸುರಿ ಕೆಲಸದ ಮೇಲ್ಹಾಸನ್ನು ತೋರಿಸಲಾಗಿದೆ. ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ (೧೭೯೪–೧೮೬೮) ರಚಿತವಾದ ಸೌಗಂಧಿಕಾ ಪರಿಣಯ ಕಲ್ಲಚ್ಚಿನ ಗ್ರಂಥದಲ್ಲಿ, ಅರಸ–ಅರಸಿಯರು ವಿವಿಧ ಪ್ರಕಾರದ ಮಂಚಗಳಲ್ಲಿ ಪವಡಿಸಿದ್ದನ್ನು ಚಿತ್ರಿಸಲಾಗಿದೆ. ಚಪ್ಪರ ಮಂಚವನ್ನು ಹಾಸಿಗೆ, ದಿಂಬುಗಳನ್ನು ಚಿತ್ತಾರಗಳಿಂದ ಅಲಂಕರಿಸಲಾಗಿದೆಯಲ್ಲದೇ ಚಪ್ಪರದಿಂದ ಅಲಂಕೃತ ತೆರೆಗಳನ್ನು ಇಳಿಬಿಡಲಾಗಿದೆ. ಇನ್ನೊಂದು ಚಿತ್ರದಲ್ಲಿ ಉದ್ದವಿಲ್ಲದ ಮಂಚಕ್ಕೆ ದಪ್ಪವಾದ ಹಾಸಿಗೆಯನ್ನು ಜೋಡಿಸಲಾಗಿದೆ. ಬಹುಶಃ ಚಿಕ್ಕ ವಯಸ್ಸಿನ ರಾಜ ದಂಪತಿಗಳು ಮೈಗಂಟೆ ಕುಳಿತುಕೊಳ್ಳುವ ಸಲುವಾಗಿ ಇಂಥ ಮಂಚಗಳನ್ನು ಬಳಸುತ್ತಿದ್ದಿರಬೇಕು. ಸುಮಾರು ಇದೇ ಕಾಲಕ್ಕೆ ರಚಿತವಾದ ಸಚಿತ್ರ "ಶ್ರೀ ತತ್ವನಿಧಿ" ಹಸ್ತಪ್ರತಿಯಲ್ಲಿ ಅನೇಕಾನೇಕ ಮಂಚಗಳ ಅಡಿಯಲ್ಲಿ ಹಲವಾರು ಪರಿಕರಗಳನ್ನು ಗುರುತಿಸಬಹುದು. ತೂಗು ಮಂಚಗಳಂತೂ ತುಂಬ ಜನಪ್ರಿಯವಾಗಿದ್ದವು.

ಸೀಬಿಯ ನರಸಿಂಹಸ್ವಾಮಿ ದೇವಾಲಯದ ಮುಚ್ಚಿಗೆಯಲ್ಲಿರುವ ರತಿಕ್ರೀಡೆಯ ಭಿತ್ತಿ ಚಿತ್ರಗಳಲ್ಲಿಯೂ ಅನೇಕ ವಿಧದ ಮಂಚಗಳನ್ನು ಗುರುತಿಸಬಹುದು. ಕಾಮಿನಿಯೋರ್ವಳು ಪವಡಿಸಿದ ತೂಗು ಮಂಚವನ್ನು ಜೋಕಾಲಿಯಂತೆ ತೂಗಿಸಿಕೊಳ್ಳಬಹುದು.

ನವನವೀನ ಡಿಝ್ಯಾನ್‌ಗಳ ಫರ್ನಿಚರ್ ಹೊಂದುವ ಹವ್ಯಾಸವುಳ್ಳ ಅತ್ಯಾಧುನಿಕರು ಇಂಥ ಕಲಾತ್ಮಕವಾದ ಕುಸುರಿ ಕೆಲಸದ ಮಂಚಗಳನ್ನು ತಿರುಗಿ ಬಳಕೆಯಲ್ಲಿ ತಂದರೆ ಅವುಗಳಿಗೆ ಅಪಾರ ಬೇಡಿಕೆ ಬರುವದು ಖಂಡಿತ.

---

10 ಪ್ರ.ಇ. ಸಂ. ii ಪು. ೪೨

ಹನುಮಂತರೆಡ್ಡಿ. ವೈ.*

# ಶ್ರೀ ಪಂಚಮುಖೀ ವೀರಭದ್ರೇಶ್ವರ

ಬಳ್ಳಾರಿಯಿಂದ ವಾಯುವ್ಯ ದಿಕ್ಕಿಗೆ 30 ಕಿ.ಮೀ. ದೂರದಲ್ಲಿ **ಕುರುಗೋಡು** ಪಟ್ಟಣವಿದೆ. ಇದು ಐತಿಹಾಸಿಕ ಪ್ರಸಿದ್ಧ ಸ್ಥಳ. ಕ್ರಿ. ಶ. ೧೦ನೇ ಶತಮಾನ ದಿಂದ ೧೨ ನೇ ಶತಮಾನದವರೆಗೆ **'ಬಲ್ಲಕುಂದೆ ೩೦೦'** ನಾಡಿನ ರಾಜಧಾನಿಯಾಗಿ ಇದು ಮೆರೆದಿದೆ. ಆ ಕಾಲ ದಲ್ಲಿ ನಿರ್ಮಿಸಲ್ಪಟ್ಟ, ಕಲ್ಯಾಣಿ ಚಾಲುಕ್ಯ ಶೈಲಿಯ ಹಲವಾರು ದೇವಸ್ಥಾನಗಳು, ತ್ರಿಕೂಟ ಮಂದಿರಗಳು ಮತ್ತು ಜೈನ ಬಸದಿಗಳೂ ಈಗಲೂ ಇಲ್ಲಿ ಕಂಡು ಬರುತ್ತಿವೆ. ಇವುಗಳಲ್ಲಿ **'ಪಂಚಮುಖೀ ವೀರಭದ್ರೇಶ್ವರ',** ದೇವಸ್ಥಾನ ಬಹಳ ಅಪೂರ್ವವಾದದ್ದು ಮತ್ತು ಮಹತ್ವ ಪೂರ್ಣವಾದದ್ದು.

ಪ್ರಸ್ತುತ ಕುರುಗೋಡು ಪಟ್ಟಣದಿಂದ ಸುಮಾರು ಅರ್ಧ ಕಿ. ಮೀ. ದೂರದಲ್ಲಿ ವಾಯುವ್ಯ ದಿಕ್ಕಿನಲ್ಲಿ ಹಬ್ಬಿರುವ ಬೆಟ್ಟದ ಮಧ್ಯದಲ್ಲಿ ಸುಮಾರು ೧೦೦ ಅಡಿ ಎತ್ತರದಲ್ಲಿ ಈ 'ಪಂಚಮುಖೀ ವೀರಭದ್ರೇಶ್ವರ' ದೇವ ಸ್ಥಾನವಿದೆ. ಇದು ಮೂಲತಃ ಒಂದು 'ಶಿವಾಲಯ' ವಾಗಿದ್ದು, ಕಾಲಾನಂತರದಲ್ಲಿ ಅದು ಹಾಳಾಗಿ, ಗರ್ಭ ಗೃಹದ ಹೊರತಾಗಿ, ಉಳಿದ ಭಾಗ ಈ ಶತಮಾನದ ಆದಿಭಾಗದಲ್ಲಿ ಜೀರ್ಣೋದ್ಧಾರಗೊಂಡಿದೆ. ಇದು ಪೂರ್ವಾಭಿಮುಖವಾಗಿದ್ದು, ಉತ್ತರ ಮತ್ತು ದಕ್ಷಿಣಕ್ಕೆ ಪ್ರವೇಶ ದ್ವಾರಗಳೂ ಇವೆ. ಮೂರು ಅಂಕಣದ ಸಭಾಮಂಟಪದ ಮಧ್ಯದಲ್ಲಿ ೩ ಅಡಿ ಎತ್ತರವುಳ್ಳ 'ಬಸವಣ್ಣನ' ಶಿಲಾಮೂರ್ತಿ ಇದ್ದು, ವೀರಭದ್ರನ ಮೂರ್ತಿಗೆ ಅಭಿಮುಖವಾಗಿದೆ. ಸಭಾಮಂಟಪಕ್ಕೆ ಹೊಂದಿಕೊಂಡು ಇರುವ ೮'×೮' ಚೌಕಾಕಾರದ ಗರ್ಭಗೃಹದಲ್ಲಿ ಸ್ವಾಭಾವಿಕವಾಗಿದ್ದ ಬಂಡೆಯನ್ನೇ ಸಮತಟ್ಟಾಗಿ ಕೆತ್ತಿ ಅದರ ಮಧ್ಯ ಭಾಗದಲ್ಲಿ ೩' ವ್ಯಾಸದ ದುಂಡಾದ ಪಾಣಿಪೀಠದ ಮಧ್ಯದಲ್ಲಿ ಸ್ಥಾಪಿತ ವಾಗಿದ್ದ ಶಿವಲಿಂಗದ ಸ್ಥಾನದಲ್ಲಿ, ತದನಂತರದಲ್ಲಿ ಪಂಚಮುಖಗಳುಳ್ಳ ವೀರಭದ್ರನ ಮೂರ್ತಿಯನ್ನು ಸ್ಥಾಪಿಸಲಾಗಿದೆ ಎಂದು ಪರಿಶೀಲನೆಯಿಂದ ತಿಳಿದು ಬರುತ್ತದೆ.

ಈ ವೀರಭದ್ರನ ಮೂರ್ತಿಯು ೩'-೯" ಎತ್ತರ ವಾಗಿದ್ದು, ಬಲಗಾಲನ್ನು ನೇರವಾಗಿ, ಎಡಗಾಲನ್ನು ಎಡಕ್ಕೆ ಸ್ವಲ್ಪ ಓರೆಯಾಗಿ ಇಟ್ಟಂಥ ನಿಂತ ಭಂಗಿಯಲ್ಲಿದೆ. (ಆಲೀಢಭಂಗಿ), ಸಾಮಾನ್ಯವಾಗಿ ಎಲ್ಲಕಡೆಯಲ್ಲಿಯೂ, ವೀರಭದ್ರನಿಗೆ ಏಕಮುಖವಿದ್ದು, ಇಲ್ಲಿರುವ ಈ ಮೂರ್ತಿಗೆ ಗಂಭೀರವಾದ **'ಐದು ಮುಖಗಳೂ' 'ಹನ್ನೆರಡು ಕೈಗಳೂ'** ಇರುವುದು **ಬಹಳ ಅಪರೂಪ ವಾಗಿದೆ.** ಪ್ರತಿ ಮುಖದ ಹಣೆಯ ಮಧ್ಯದಲ್ಲಿ ಹಣೆಗಣ್ಣು (ಮೂರನೆ ಕಣ್ಣು) ಮತ್ತು ಕೋರೆ ಮೀಸೆಗಳಿವೆ. ಎಲ್ಲಾ ೫ ತಲೆಗಳ ಮೇಲೆ ಅಲಂಕಾರ ಯುಕ್ತವಾದ ಕಿರೀಟಗಳಿವೆ. ಆದರೆ ಮಧ್ಯದ ತಲೆಯ ಮೇಲೆ ಧರಿಸಿ ರುವ ಕಿರೀಟದ ಮುಂಭಾಗದ ಮಧ್ಯದಲ್ಲಿ ಅಲಂಕಾರದ ದೊಂದಿಗೆ ಶಿವಲಿಂಗದ ಮುದ್ರೆಯಿದೆ. ಕೊರಳಲ್ಲಿ ಕರಡಿಗೆ (ಲಿಂಗದಕಾಯಿ) ಮತ್ತು ಬೇರೆ ಬೇರೆ ಆಳತೆಯ

* ಮುಖ್ಯೋಪಾಧ್ಯಾಯರು, ಜಿಲ್ಲಾ ಪರಿಷತ್ ಬಾಲಕಿಯರ ಪ್ರೌಢಶಾಲೆ, ಕುರುಗೋಡು.

ಮೂರು ತರಹದ ರುದ್ರಾಕ್ಷಿಯ ಮಾಲೆಗಳೂ ಧರಿಸಲ್ಪಟ್ಟವೆ. ಕಿವಿಯಲ್ಲಿ 'ಕರ್ಣಕುಂಡಲ' ದಂತಹ ಆಭರಣಗಳಿಂದ ಅಲಂಕೃತ ವಾಗಿವೆ. ಎಡಭುಜದ ಮೇಲಿನಿಂದ ಸೊಂಟದ ಬಲಬದಿಯ ವರೆಗೆ ಜನಿವಾರ? ಓರೆಯಾಗಿ ಜೋತು ಬಿದ್ದಿದೆ. ಭುಜಗಳು 'ಭುಜಕೀರ್ತಿ' ಮಾದರಿಯ ಆಭರಣಗಳಿಂದ ಅಲಂಕರಿಸಲ್ಪಟ್ಟಿವೆ.

ಈ ರುದ್ರಗಂಭೀರ ಮೂರ್ತಿಗೆ ಹನ್ನೆರಡು ಹಸ್ತಗಳಿದ್ದು, ದಕ್ಷ ಸಂಹಾರಕ್ಕೆ ಹೊರಟ ಸಂದರ್ಭದಲ್ಲಿ ಧರಿಸಿದಂತೆ ಅನೇಕ ತರದ ಆಯುಧಗಳನ್ನು ಧರಿಸಲಾಗಿದೆ. ಬಲಗಡೆಯ ಆರು ಹಸ್ತಗಳಲ್ಲಿ ಮೇಲಿನಿಂದ ಕೆಳಕ್ಕೆ ಕ್ರಮವಾಗಿ, ೧) ತ್ರಿಶೂಲ ೨) ಬಾಣ ೩) ಜಿಂಕೆ ಆಕಾರದ ಆಯುಧ (ಮೃಗಾಂಕ) ೪) ಕಠಾರಿ ೫) ಉದ್ದವಾದ ಖಡ್ಗ ೬) ಖೇಟಕ ಅಥವಾ ಕೈಗತ್ತಿ (ಇಬ್ಬದಿಯಲ್ಲಿ ಹರಿತವಾಗಿದ್ದು 'S' ಆಕಾರದಲ್ಲಿ ಅಂಕುಡೊಂಕಾಗಿದೆ) ಧರಿಸಲ್ಪಟ್ಟಿವೆ.

ಎಡಭಾಗದ ಹಸ್ತಗಳಲ್ಲಿ ಮೇಲಿನಿಂದ ಕೆಳಕ್ಕೆ ಕ್ರಮವಾಗಿ ೧) ಡಮರು, ೨) ಬಿಲ್ಲು, ೩) ಡಾಲು, (ದುಂಡಾಕಾರದ ಮತ್ತು ಹಿಡಿಕೆಯುಳ್ಳ ಚಿಕ್ಕ ಗುರಾಣಿಯಂಥ ಆಯುಧ), ೪) ಗುರಾಣಿ (ದೊಡ್ಡದಾದ ಆಯತಾಕಾರದ ಹಿಂಬದಿಯಲ್ಲಿ ಹಿಡಿಕೆಯುಳ್ಳದ್ದು), ೫) ಐದನೇ ಹಸ್ತ ಮೊಣಕೈ ಬಾಗಿಸಿ ಎಡತೊಡೆಯ ಮೇಲೆ ಇಡಲಾಗಿದೆ, ೬) ಆರನೇ ಹಸ್ತ ಅಭಯ ಹಸ್ತದ ಮುದ್ರೆಯುಳ್ಳದಾಗಿದೆ.

ಈ ಮೂರ್ತಿಯು ನಡುವಿನ ವೀರಗಾಸೆಯನ್ನು ಧರಿಸಿದ್ದು, ಬಲತೊಡೆಯ ಮೇಲೆ ಚಿಕ್ಕದಾದ ಚೂರಿ (ನೇತಾಡುತ್ತಿದೆ) ಇಳಿಬಿದ್ದಿದೆ. ಎರಡು ತೊಡೆಗಳ ಮುಂಭಾಗದಲ್ಲಿ (ವೀರಗಾಸೆಯ ಸ್ವಲ್ಪ ಕೆಳಗಡೆ) ಐದು ರುಂಡಮಾಲೆಯು ಆಭರಣದಂತೆ ಧರಿಸಲಾಗಿದೆ. ಬಲ ತೊಡೆಯ ಮೇಲೆ ಒಂದು ಜಂಗನ್ನು ಧರಿಸಿದ್ದು, ಬಲ ಮೊಣಕಾಲಿನ ಕೆಳಗೆ ಕಾಲಿಗೆ ಸುತ್ತಿರುವ ನಾಗಾಭರಣವಿದೆ. ಎಡ ಮೊಣಕಾಲಿನ ಮೇಲೆಯೂ ಒಂದು ಜಂಗನ್ನು ಧರಿಸಲಾಗಿದೆ. ಎರಡೂ ಪಾದಗಳಲ್ಲಿ ದಪ್ಪದಾದ ಹಾವುಗೆ ಗಳನ್ನು ಮೆಟ್ಟನಿಂತಿರುವಂತಿದೆ. ಮೂರ್ತಿಯನ್ನು ಖಂಡಿಸಿರುವ ಶಿಲಾ ಫಲಕದ ಮೇಲ್ಭಾಗದಲ್ಲಿ ಅರ್ಧ ಚಂದ್ರಾಕೃತಿಯಲ್ಲಿ ಪ್ರಭಾವಳಿಯ ತರಹದ ರಚನೆಯಿದೆ. ಈ ಮೂರ್ತಿಯ ಬಲ ಮೊಣಕಾಲ ಬದಿಯಲ್ಲಿ ಸುಮಾರು ಒಂದು ಅಡಿ ಎತ್ತರದ ಟಗರಿನ ತಲೆಯನಿಂತ ಭಂಗಿಯಲ್ಲಿರುವ 'ದಕ್ಷನ' ಮೂರ್ತಿಯಿದೆ.

ಇದೆಲ್ಲಕ್ಕಿಂತಲೂ ಹೆಚ್ಚಿನ ವಿಶೇಷವೆಂದರೆ, ಈ ವೀರಭದ್ರನ ಮೂರ್ತಿಯನ್ನು ಒಂದು ಶಿಲಾ ಶಾಸನವನ್ನು ಮೊದಲು ಖಂಡಿಸಲಾಗಿದ್ದ ಕರಿಕಲ್ಲಿನ ಶಿಲಾ ಫಲಕದಲ್ಲಿ ನಿರ್ಮಿಸಲಾಗಿದೆ. ಶಿಲಾಫಲಕದ ಮುಂಭಾಗದಲ್ಲಿ ಈ ಮೂರ್ತಿಯನ್ನು ಕೆತ್ತಿದ್ದು, ಹಿಂಭಾಗದಲ್ಲಿ ಈಗಲೂ ಶಾಸನದ ಭಾಗವು ಉಳಿದಿದೆ. ಆದರೆ ಶಾಸನದ ಸಾಲುಗಳನ್ನು ಓದಲು ಬಾರದಂತೆ ಉಳಿಯಿಂದ ಅಳಿಸಲಾಗಿದೆ. ಪರಿಶೀಲಿಸಿ ನೋಡಲಾಗಿ ಇದು ಸುಮಾರು ೧೨-೧೩ನೇ ಶತಮಾನಕ್ಕೆ ಸೇರಿದ ಕನ್ನಡ ಲಿಪಿಯನ್ನು ಹೋಲುವ ಒಂದು ಶಾಸನವಾಗಿರಬಹುದೆಂದು ಊಹಿಸಲಾಗಿದೆ. ಈ ತರಹದ ಪಂಚಮುಖವುಳ್ಳ ೧೨ ಹಸ್ತಗಳಿರುವ ವೀರಭದ್ರನ ಶಿಲಾಮೂರ್ತಿ ನಮ್ಮ ದೇಶದಲ್ಲಿಯೇ ಬಹಳ ಅಪೂರ್ವವಾದುದೆಂದು ತಿಳಿಯಲಾಗಿದೆ.

ಕಲ್ಲನಗೌಡ ತಿಪ್ಪನಗೌಡ ಪಾಟೀಲ*

# ನಾಗೇಂದ್ರಗಡದ ಕೋಟೆಯ ಅವಶೇಷಗಳು

ನಾಗೇಂದ್ರಗಡವು ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಚಿಕ್ಕ ಗ್ರಾಮವಾಗಿದ್ದು ಇದು ರೋಣದಿಂದ ಪೂರ್ವಕ್ಕೆ ಮುವತ್ತು ಕಿಲೋಮೀಟರ ಅಂತರದಲ್ಲಿ ಕಳಕ ಮಲ್ಲೇಶ್ವರ ಗುಡ್ಡಕ್ಕೆ ಹೊಂದಿಕೊಂಡು ಬಿಳಿಗೋದಿ ಬಣ್ಣದ ಕಲ್ಲಿನಿಂದ ತುಂಬಿದೆ. ಊರಿಗೆ ಹೊಂದಿಕೊಂಡಂತೆ ಚಿಕ್ಕ ಗುಡ್ಡದ ಮೇಲೆ ಕೋಟೆ ಇದೆ. ಗುಡ್ಡದ ಮೇಲ್ಗಡೆ ವಿಶಾಲವಾದ ಬಯಲು ಇದೆ. ಪುರಾತನ ನಾಗೇಂದ್ರನ ಮೂರ್ತಿ ಇದ್ದು ವೇದ ಕಾಲದಲ್ಲಿ ನಾಗ ಅಗ್ನಿ ಮುನಿ ತಪಸ್ಸು ಮಾಡಿದ. ಹಾಗೂ ಸಹಸ್ರ ಸಿದ್ಧ ಪುರುಷರಿಗೆ ಬೋಜನ ಮಾಡಿಸಿದ ಪುಣ್ಯ ಕ್ಷೇತ್ರವಿದೆಂದು ಪ್ರತೀತಿ ಇದೆ.

ನಂತರ ಮರಾಠಾ, ಛತ್ರ ಪತಿ ಶಿವಾಜಿ ದಕ್ಷಿಣ ಮುಖವಾಗಿ ಉತ್ತರ ಕರ್ನಾಟಕಕ್ಕೆ ಬಂದು ಗಜೇಂದ್ರಗಡಕ್ಕೆ ದಂಡಿನೊಂದಿಗೆ ಬಂದು ಮುತ್ತಿಗೆ ಹಾಕಿ ತನ್ನ ಸ್ವಾಧೀನ ಪಡಿಸಿಕೊಂಡನು. (ಕ್ರಿ. ಶ. ೧೬೭೭ರಲ್ಲಿ) ಮುಂದೆ ತನಗೆ ಬೇಕಾದ ಅಂತಪುರವನ್ನು ಹಾಗೂ ಗುಪ್ತ ಖಜಾನೆಯನ್ನು ಮಾಡಿಸಲು ಈ ನಾಗಪ್ಪನ ಗುಡ್ಡವನ್ನೆ ಆಯ್ಕೆ ಮಾಡಿದನು. ಹದಿನೈದು ಎಕರೆ ಬೈಲು ಜಾಗೆಯಲ್ಲಿ ಸುತ್ತಲೂ ಇಪ್ಪತ್ತು ಅಡಿ ಎತ್ತರವಾದ ಐದು ಅಡಿ ಅಗಲವಾಗಿ ಕೋಟೆಯ ಗೋಡೆಯನ್ನು ಕಟ್ಟಿ, ಪೂರ್ವಾಭಿಮುಖವಾಗಿ ದ್ವಾರವನ್ನು ಇಡಿಸಿದ. ಒಳಗಡೆ ಕಾವಲುಗಾರರಿಗೆ ಅಂಕಣ ಕಟ್ಟಿಗಳನ್ನು ನಂತರ ಚಿಕ್ಕಕಮಾನು ಆಕಾರವುಳ್ಳ ಪ್ರವೇಶ ದ್ವಾರವನ್ನು ದೊಡ್ಡ ಬುರುಜು (ಹುಡೆ), ಮದ್ದಿನ ಮನೆ ನೀರಿನ ಹೊಂಡದ ಮಧ್ಯ ಭಾಗದಲ್ಲಿ ಗುಪ್ತ ಖಜಾನೆ ; ಆದರ ಮೇಲೆ ದುರ್ಗಾ ಮಾತೆಯ ಗುಡಿಯನ್ನು ಕಟ್ಟಿಸಿದ. ನಾಗಪ್ಪನ ಗುಡಿ ಪಶ್ಚಿಮಕ್ಕೆ ಚಿಕ್ಕ ಗುಪ್ತ ದ್ವಾರವಿದೆ. ಕೋಟೆ ಕಟ್ಟಿದ್ದಕ್ಕಾಗಲಿ ಅಥವಾ ಇತರೆ ವಿವರಗಳಿಗೆ ಸಂಬಂದಿಸಿದಂತೆ ಯಾವ ದಾಖಲೆಗಳೂ ಇಲ್ಲ. ಕೋಟೆಯ ಬಹು ಭಾಗ ಈಗ ಬಿದ್ದು ಹೋಗಿದೆ. ದ್ವಾರದ ಬಾಗಿಲ ಚವುಕಟ್ಟಿನಲ್ಲಿ ಸೂರ್ಯ ಅರ್ಧ ಚಂದ್ರ ಹಾಗೂ ಮಧ್ಯೆ ಹೂವಿನ ಅಲಂಕಾರವಿದ್ದು ಕೋಟೆಯ ದ್ವಾರ ಭದ್ರವಾಗಿರುತ್ತದೆ. ಕಾಡು ಗಲ್ಲಿನ ಪಾವುಟಿಗೆಗಳು ಇದ್ದು, ಕೋಟೆ ಹೊರ ಭಾಗದಲ್ಲಿ ಮಾರುತಿಯ ಶಿಲಾ ವಿಗ್ರಹವಿದೆ. ದ್ವಾರದ ಮುಂದೆ ದೊಡ್ಡ ಬುರುಜು ಇದೆ. ಇದು ಈಗ ಶಿಥಿಲವಾಗಿದೆ. ಈ ಗುಡ್ಡವು ಮೊದಲು ನಾಗ್ನಿ ಮರಡಿ ಎಂದು ರೂಡಿಯಲ್ಲಿದ್ದು ನಾಗಪ್ಪನ ಗುಡ್ಡವಾಗಿ ಮುಂದೆ ನಾಗೇಂದ್ರಗಢವಾಗಿದ್ದಿರಬೇಕು. ಸಮೀಪದಲ್ಲಿ ಕಾಲ ಕಾಲೇಶ್ವರ ದೇವಸ್ಥಾನವಿದ್ದು ಇಲ್ಲಿ ಕೂಡ ಅನೇಕ ಸಿದ್ಧರ ಗವಿಗಳು ಇವೆ.

ಇತ್ತೀಚಿಗೆ ಜನರು ನಿಧಿ ದೊರೆಯುವುದೆಂಬ ನಂಬಿಕೆಯಿಂದ ಈ ಕೋಟೆಯ ಅನೇಕ ಭಾಗಗಳನ್ನು ಬೀಳಿಸಿರುತ್ತಾರೆ. ಹೀಗಾಗಿ ಈ ಕೋಟೆ ಬಹುಬೇಗ ಶಿಥಿಲಾವಸ್ಥೆಗೆ ಒಳಗಾಗುತ್ತಿದೆ.

* ಬೆಳಧಡಿ, ಗದಗ ತಾಲೂಕು, ಧಾರವಾಡ ಜಿಲ್ಲೆ

**ಕೆಳದಿ ಗುಂಡಾಜೋಯಿಸ್***

# ಇಟಲಿಯ ಪುರಾತತ್ವ ಭಂಡಾರದಲ್ಲಿ ಕೆಳದಿ ಇತಿಹಾಸದ ಚಾರಿತ್ರಿಕ ದಾಖಲೆಗಳು

ಕ್ರಿ.ಶ. ೧೫೧೪ರಿಂದ ೧೫೪೬ರವರೆಗೆ ಕೆಳದಿಯನ್ನಾಳಿದ ಸದಾಶಿವನಾಯಕನ ಕಾಲದಲ್ಲಿ ಇಕ್ಕೇರಿಯು ರಾಜ್ಯದ ದ್ವಿತೀಯ ರಾಜಧಾನಿಯಾಯಿತು. ಈತನ ಅನಂತರ ದೊಡ್ಡ ಸಂಕಣ್ಣನಿಂದ ೧೬೪೫ರ ವೀರಭದ್ರ ನಾಯಕನವರೆಗೆ ಇಕ್ಕೇರಿಯಿಂದಲೇ ಆಡಳಿತವು ಜರುಗಿತು. ೧೫೮೬ರಿಂದ ೧೬೨೯ರವರೆಗೆ ಆಳಿದ ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ರಾಜ್ಯವು ಉನ್ನತ ಸ್ಥಿತಿಯನ್ನು ಕಂಡಿತು. ಪೋರ್ಚುಗೀಸರೇ ಮುಂತಾದ ವಿದೇಶೀಯರೊಂದಿಗೆ ವ್ಯಾಪಾರೋದ್ಯಮದಲ್ಲಿ ಕೆಳದಿಯು ಉಚ್ಛ್ರಾಯ ಸ್ಥಿತಿಗೇರಿತು. ೬-೧೧-೧೬೨೩ರಂದು ಪೋರ್ಚುಗೀಸ್ ನಿಯೋಗವೊಂದು ರಾಜಧಾನಿಯಲ್ಲಿ ಹಿರಿಯ ವೆಂಕಟಪ್ಪ ನಾಯಕನನ್ನು ಭೇಟಿಯಾಯಿತು. ಈ ನಿಯೋಗದಲ್ಲಿ ಇಟಾಲಿಯನ್ ಪ್ರವಾಸಿ ಪಿಯತ್ರೋ ಡೆಲ್ಲ ವಲ್ಲೆಯೂ ಪ್ರಮುಖ ಪಾತ್ರ ವಹಿಸಿದನು. ಕೆಳದಿ ರಾಜಧಾನಿಯ ಘಟನಾವಳಿಗಳನ್ನು ಕುರಿತಂತೆ ಡೆಲ್ಲವಲ್ಲೆಯು ಯಥಾವತ್ತಾಗಿ ಚಿತ್ರಿಸಿ ಪ್ರವಾಸಿ ಕಥನವನ್ನು ರಚಿಸಿದ್ದು ಕುತೂಹಲಕರ ಅಂಶಗಳಿಂದ ಕೂಡಿದೆ.

**ಡೆಲ್ಲವಲ್ಲೆಯ ಪ್ರವಾಸೀ ಕಥನ :** ಪಿಯತ್ರೋ ಡೆಲ್ಲವಲ್ಲೆಯ ಪ್ರವಾಸೀ ಕಥನ ನೇಪಲ್ಸಿನಲ್ಲಿದ್ದ ಸ್ಕಿಪಾನೋ ಎಂಬ ಪ್ರಾಧ್ಯಾಪಕನಿಗೆ ಬರೆದ ಪತ್ರಗಳ ರೂಪದಲ್ಲಿವೆ. ಕಣ್ಣಿಗೆ ಗೋಚರವಾದದ್ದನ್ನೆಲ್ಲಾ ಬಹು ಸೂಕ್ಷ್ಮವಾಗಿ ಅರಿತು ಚಾಚೂ ತಪ್ಪದೆ ಸ್ಮರಣೆಗೆ ತಂದುಕೊಂಡು ಬರೆದಿರುವುದು ಗಮನಾರ್ಹವಾದುದು. ಈತನಿಗೆ ಪೌರ್ವಾತ್ಯ ಭಾಷೆಗಳು ಅದರಲ್ಲಿಯೂ ತುರ್ಕಿ, ಪರ್ಷಿಯನ್ ಮತ್ತು ಅರೇಬಿಯನ್ ಭಾಷೆಗಳು ಚೆನ್ನಾಗಿ ಬರುತ್ತಿದ್ದುದು ಬಹಳ ಅನುಕೂಲವಾಯಿತು. ಡೆಲ್ಲವಲ್ಲೆಗೆ ಗ್ರೀಕ್ ಮತ್ತು ಲ್ಯಾಟಿನ್ ಸಾಹಿತ್ಯದ ಪರಿಚಯವೂ ಇತ್ತೆಂದು ಕಂಡು ಬರುತ್ತದೆ. ಗಿಬ್ಬನ್ (Gibbon ೧೭೩೭-೯೪) ಎಂಬ ಇತಿಹಾಸಕಾರನು ಪಿಯತ್ರೋನ ಪರ್ಷಿಯಾ ಪ್ರವಾಸವನ್ನು ಕುರಿತು "ಈತನಿಗಿಂತ ಚೆನ್ನಾಗಿ ಪರ್ಷಿಯ ದೇಶವನ್ನು ವರ್ಣಿಸಿದವನು ಬೇರೊಬ್ಬನಿಲ್ಲ" ಎಂದಿರುವನು. ಸೌದೆ (Sauthey 1774-1843)ಯೂ ಈತನನ್ನು ಅತ್ಯುತ್ತಮನಾದ ಪ್ರವಾಸಿಯೆಂದು ಶ್ಲಾಘಿಸಿದ್ದಾನೆ. ಇಂಡಿಯಾಕ್ಕೆ ಹೋದ ಪ್ರವಾಸಿಗಳಲ್ಲಿ ಪಿಯಾತ್ರೋನಷ್ಟು ಸೊಗಸಾಗಿ ಜಾಣ್ಮೆ ಹಾಗೂ ನಿಖರತೆ ಮತ್ತು ವಿಸ್ತರಣೆಯಲ್ಲಿ ವರ್ಣಿಸಿದವರಿಲ್ಲವೆಂದು ಸರ್ ಹೆನ್ರಿಯೂಲ್ ಪ್ರಶಂಸಿಸಿದ್ದಾನೆ. ಡೆಲ್ಲವಲ್ಲೆಯು ತುರ್ಕಿ, ಪರ್ಷಿಯಾ ಮತ್ತು ಇಂಡಿಯಾ ಎಂದು ಮೂರು ವಿಭಾಗಗಳಾಗಿ ತನ್ನ ಪ್ರವಾಸ ಕಥನವನ್ನು ವಿಂಗಡಿಸಿದ. ಇಂಡಿಯಾ ಪ್ರವಾಸಿ ಕಥನವು ಪಿಯತ್ರೋ ಇಂಡಿಯಾದಿಂದ ಬರೆದ ಎಂಟು ಪತ್ರಗಳಲ್ಲಿ ಸೇರಿಕೊಂಡಿದೆ. ಈ ಎಂಟು ಪತ್ರಗಳನ್ನು ಬರೆದ ಸ್ಥಳ ಮತ್ತು ದಿನಾಂಕಗಳು ಈ ರೀತಿ ಇವೆ.

---

* ಕೆಳದಿ, ಸಾಗರ ತಾಲೂಕು

| | |
|---|---|
| ೧ನೆಯ ಪತ್ರ ಸೂರತ್ತಿನಿಂದ | ೨೨-೩-೧೬೨೩ |
| ೨ನೆಯ ಪತ್ರ ಗೋವೆಯಿಂದ | ೨೭-೪-೧೬೨೩ |
| ೩ನೆಯ ಪತ್ರ ಗೋವೆಯಿಂದ | ೧೦-೧೦-೧೬೨೩ |
| ೪ನೆಯ ಪತ್ರ ಹೊನ್ನಾವರದಿಂದ | ೩೦-೧೦-೧೬೨೩ |
| ೫ನೆಯ ಪತ್ರ ಕೆಳದಿ ರಾಜಧಾನಿ ಇಕ್ಕೇರಿಯಿಂದ | ೨೨-೧೧-೧೬೨೩ |
| ೬ನೆಯ ಪತ್ರ ಮಂಗಳೂರಿನಿಂದ | ೯-೧೨-೧೬೨೩ |
| ೭ನೆಯ ಪತ್ರ ಗೋವೆಯಿಂದ | ೩೧-೧-೧೬೨೪ |
| ೮ನೆಯ ಪತ್ರ ಗೋವೆಯಿಂದ | ೪-೯-೧೬೨೪ |

ಪ್ರಿಯತ್ರೋ ಬದುಕಿದಾಗ ಪ್ರಕಟನಾದುದು ಪರ್ಷಿಯಾ ಪ್ರವಾಸ ಕಥನ ಮಾತ್ರ. ಉಳಿದೆರಡು ಭಾಗಗಳು ಆತನ ಮರಣಾನಂತರ ಅವನ ಮಕ್ಕಳು ವಹಿಸಿದ ಆಸಕ್ತಿಯ ಕಾರಣವಾಗಿ ಪ್ರಕಟಗೊಂಡವು. ೧೬೫೦–೫೮ರಲ್ಲಿ ಇಟಾಲಿಯನ್ ಭಾಷೆಯಲ್ಲಿ ಪ್ರಕಟವಾದ ಡೆಲ್ಲವೆಲ್ಲೆಯ "ವಿಯಜ್ಜಿ" *೧೬೬೨–೬೪ರಲ್ಲಿ ಫ್ರೆಂಚ್ ಭಾಷೆಗೂ ೧೬೬೪–೬೫ರಲ್ಲಿ ಡಚ್ ಭಾಷೆಗೂ ಮತ್ತು ೧೬೭೪ ರಲ್ಲಿ ಜರ್ಮನ್ ಭಾಷೆಗೂ ಅನುವಾದಗೊಂಡಿತು. ಇಂಗ್ಲೀಷ್ ಭಾಷೆಯಲ್ಲಿ ೧೬೬೪ರಲ್ಲಿ ಇಂಡಿಯಾಕ್ಕೆ ಸಂಬಂಧಿಸಿದ ಪ್ರವಾಸಿ ಕಥನ ಪ್ರಕಟವಾಯಿತು. ೧೮೯೨ ರಲ್ಲಿ ಇಂಡಿಯಾಕ್ಕೆ ಸಂಬಂಧಿಸಿದ "ವಿಯಜ್ಜಿ" (Travelogues Account) ಯನ್ನು ಹಕ್ಲೂಯತ್ ಸೊಸೈಟಿ ಎರಡು ಸಂಪುಟದಲ್ಲಿ ಪ್ರಕಟಿಸಿತು.

## ಪಿಯತ್ರೋ ಡೆಲ್ಲ ವಲ್ಲೆ

ಪಿಯತ್ರೋ ಡೆಲ್ಲ ವಲ್ಲೆ ೧೫೮೬ರ ಏಪ್ರಿಲ್‌ನಲ್ಲಿ ರೋಮ್‌ನಲ್ಲಿ ಜನಿಸಿದನೆಂದು ಕಂಡುಬರುತ್ತದೆ. ಈತನ ತಂದೆ ಪೊಂಪಿಯೋ ಡೆಲ್ಲ ವಲ್ಲೆ ; ತಾಯಿ ಜೊವನ್ನಿ ಅಲ್ಬೆರಿಸಿ. ರೋಮ್‌ನಲ್ಲಿ ಹೆಸರಾಂತ ಮನೆತನಕ್ಕೆ ಸೇರಿದವನೆಂದೂ, ಈ ವಂಶೀಕರು ಕಾರ್ಡಿನೆಲ್ ಆಗಿದ್ದರೆಂದೂ ತಿಳಿದುಬರುತ್ತದೆ. ರೋಮ್‌ನ ಉಮೋರಿಸ್ತಿಯ ಆಕಾದೆಮಿ (Academy of Umoristie) ಯಲ್ಲಿ ಈತನು ಸದಸ್ಯನಾಗಿದ್ದನು.

ಪೋಪರಿಗೂ ವೆನೀಸಿಯನರಿಗೂ ಉಂಟಾದ ಘರ್ಷಣೆಯ ಸಂದರ್ಭದಲ್ಲಿ ಪಿಯತ್ರೋ ಸೈನ್ಯಕ್ಕೆ ಸೇರಿದನು. ಈತನು ಬೆಯತ್ರೀಚೆ ಬೊರಾಚ್ಛ (Beatrice Boraccio ) ಳನ್ನು ಪ್ರೇಮಿಸಿ ವಿಫಲನಾದನು. ಇವನಿಗೆ ಪೆಲ್ಲೆಗ್ರಿನೋ (Pelligrino) ಎಂಬ ಹೆಸರಿದ್ದಿತು. ಈತನ ಸ್ನೇಹಿತ ಸಿನೋರ್ ಮಾರಿಯೋ ಸ್ಕಿಪಾನೋ (Synor Mario Schipano) ವಿನ ಸಲಹೆಯಂತೆ ೧೬-೪-೧೬೧೪ ರಲ್ಲಿ ಪೌರ್ವಾತ್ಯ ದೇಶಗಳ ಪ್ರವಾಸ ಕೈಗೊಂಡು ವೆನಿಸಿನಿಂದ ಹಡಗಿನಲ್ಲಿ ಹೊರಟು ಕಾನ್ಸ್ಟಾಂಟಿನೋಪಲ್ಲಿಗೆ ಹೋದನು. ೧೬೧೫ರ ಸೆಪ್ಟಂಬರ್‌ನರೆಗೂ ಅಲ್ಲಿದ್ದು, ಅಲ್ಲಿಂದ ಏಷ್ಯಾಮೈನರ್ ಈಜಿಪ್ಟ್, ಮೌಂಟ್ ಸಿನಾಯ್ (Mount Sinai) ಪ್ಯಾಲೆಸ್ಟೈನ್, ಜೆರೂಸಲೆಂ, ದಮಾಸ್ಕಸ್, ಅಲೆಪ್ಪೊ, ಬಾಗ್ದಾದ್, ಬೇಬಿಲೋನಿಯಾಗಳಿಗೆ ಭೇಟಿಯಿತ್ತು, ಬಾಗ್ದಾದ್‌ನಲ್ಲಿ ಮಾನ್ನೈ ಜಿಯೊರಿಡಾ (Mannai Giorida) ಎಂಬ ನೆಸ್ಟೋರಿಯನ್ ಕ್ರೈಸ್ತಳನ್ನು (Nestorian Cristain) ವಿವಾಹವಾದನು.

ಪರ್ಷಿಯಾ ಮತ್ತು ತುರ್ಕಿಯ ಯುದ್ಧದ ನಂತರ ಡೆಲ್ಲವೆಲ್ಲೆಯು ಪತ್ನಿಯೊಡಗೂಡಿ ೧–೧೦–೧೬೨೧ ರಂದು ಪೆರ್ಸೆ ಪೋಲಿಸ್ (Perse polis) ಮತ್ತು ಷಿರಾಜ್‌ನಗರಗಳ ಅವಶೇಷಗಳನ್ನು ವೀಕ್ಷಿಸಿದನು, ೩೦–೧೨–೧೬೨೨ ರಂದು ಮುದ್ದಿನ ಮಡದಿ ಮಾನ್ನೈ ಹೋರ್ಮಸ್ ಬಳಿ ತುಂಬಿದ ಹೆರಿಗೆಯ ಕಾರಣ ಕಾಲವಾದಳು. ಪತ್ನಿಯ ಪಾರ್ಥಿವ ಶರೀರವನ್ನು ಸ್ವದೇಶದಲ್ಲಿಯೇ ಸಮಾಧಿ ಮಾಡುವ ಉದ್ದೇಶದಿಂದ ಅದಕ್ಕೆ ಸುಗಂಧ ದ್ರವ್ಯ ಲೇಪಿಸಿ ಒಂದು ಪೆಟ್ಟಿಗೆಯಲ್ಲಿರಿಸಿ

*Viaggi > Viaggio ಪ್ರವಾಸಕಥನ ; ಇಟಲಿ ಭಾಷೆಯಲ್ಲಿ ಹಸ್ತ ಪ್ರತಿಯಲ್ಲಿರುವುದು

ತನ್ನೊಂದಿಗೆ ತೆಗೆದುಕೊಂಡು ಹೊರಟನು. ಸತ್ತ ಮಡದಿಯ ಆಶ್ರಯದಲ್ಲಿದ್ದ ಮಾರಿಯಾ ತಿನಾತಿನ್ ದಿ ಜೀಬಾ (Maria Tinatin diziba) ಎಂಬ ಜಾರ್ಜಿಯನ್ ಯುವತಿಯನ್ನು ಜೊತೆಯಲ್ಲಿರಿಸಿಕೊಂಡು ಹೊರಟನು, ಆಗ ಇಟಲಿಗೆ ಹಿಂದಿರುಗಲು ಹಡಗಿನಲ್ಲಿ ಇಂಡಿಯಾ ಸಮುದ್ರ ತೀರಕ್ಕೆ ಬಂದು, ದಕ್ಷಿಣಕ್ಕೆ ಸಮುದ್ರಯಾನ ಮಾಡಿ, ಗುಡ್ ಹೋಪ್ ಭೂಶಿರ ಬಳಸಿಕೊಂಡು ಹೋಗಬೇಕಾಗಿತ್ತು. ಈ ಕಾರಣದಿಂದ ಹೆಂಡತಿಯ ಶವ ಸಹಿತ ೧೬-೧೧-೧೬೨೩ ರಲ್ಲಿ ಇಂಡಿಯಾಕ್ಕೆ ಹಡಗಿನಲ್ಲಿ ಪಯಣಿಸಿದನು.

೧೦-೨-೧೬೨೩ ರಂದು ಹಡಗಿನಿಂದ ಸೂರತ್ತಿನಲ್ಲಿಳಿದು ಅಲ್ಲಿಂದ ಹೊರಟು ಗೋವಾ, ಹೊನ್ನಾವರ, ಇಕ್ಕೇರಿ, ಬಾರ್ಸೆಲೋರ್ (ಬಸರೂರು), ಮಂಗಳೂರು, ಉಲ್ಲಾಳ, ಮನೇಲಿ, ಕ್ಯಾಲಿಕಟ್ಟಿಗೆ ಹೋಗಿ ಅನಂತರ ಗೋವಾಕ್ಕೆ ಮರಳಿದನು. ೧೬-೧೧-೧೬೨೪ ರಲ್ಲಿ ಹಡಗಿನಲ್ಲಿ ಮಸ್ಕತ್, ಕಾರವನ್, ಅಲೆಪ್ಪೊ, ಸೈಪ್ರಸ್, ಮಾಲ್ಟಾ, ಮತ್ತು ಸಿಸಿಲಿಗಳ ಮುಖಾಂತರ ೫-೨-೧೬೨೬ ರಂದು ನೇಪಲ್ಸನ್ನು ತಲುಪಿ ೨೮-೩-೧೬೨೬ ರಂದು ರೋಮ್ ತಲುಪಿದನು. ತನ್ನೊಂದಿಗೆ ತಂದಿದ್ದ ಮಡದಿಯ ಶವವನ್ನು ತನ್ನ ಮನೆತನಕ್ಕೆ ವಿಾಸಲಾದ ಚರ್ಚ್ ಆವರಣದಲ್ಲಿ ಸಮಾಧಿ ಮಾಡಿ, ತನ್ನ ಆಸೆಯನ್ನು ಕೈಗೂಡಿಸಿಕೊಂಡನು. ಹಾಗೆಯೇ ತನ್ನೊಂದಿಗೆ ವಿಪುಲ ಪ್ರವಾಸಿ ಕಥನವಲ್ಲದೆ ಅಪೂರ್ವ ವಸ್ತು ಸಾಮಗ್ರಿಗಳನ್ನೂ ಇಟಲಿಯಲ್ಲಿರುವ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಶೇಖರಿಸಿದನು. ಇಟಲಿಯ "ತ್ರಿಯೇಸ್ತೆ"ದಲ್ಲಿರುವ ಪಿಯತ್ರೋವಿನ ಸಂಗ್ರಹಗಳನ್ನು ಈಗಲೂ ಕಾಣಬಹುದು.

## ಇಕ್ಕೇರಿಯಲ್ಲಿ ಡೆಲ್ಲವಲ್ಲೆ ಕಂಡ ಸತೀಸಹಗಮನ

ಪಿಯತ್ರೋ ಡೆಲ್ಲವಲ್ಲೆಯು ಕೆಳದಿ ರಾಜಧಾನಿ ಇಕ್ಕೇರಿಯಲ್ಲಿ ಅಡ್ಡಾಡುತ್ತಿದ್ದಾಗ ತಾನು ಕಣ್ಣಾರೆ ಕಂಡು ಅನುಭವಿಸಿದ ಸತೀ ಸಹಗಮನವನ್ನು ಹೃದಯಂಗಮವಾಗಿ ವರ್ಣಿಸಿದ್ದಾನೆ. ಅವನ ಮಾತಿನಲ್ಲಿ ಕಂಡಂತೆಯೇ ಕನ್ನಡ ಭಾಷಾಂತರವೀರೀತಿ ಇದೆ.

ರಾತ್ರಿ ಹಿಂದಿರುಗುವಾಗ ಇಕ್ಕೇರಿ ನಗರದಲ್ಲಿ ಗಂಡನನ್ನು ಕಳೆದುಕೊಂಡ ಹೆಂಗಸೊಬ್ಬಳು ಬೆಂಕಿಯಲ್ಲಿ ಬೀಳಲು ಸಿದ್ಧತೆ ಮಾಡಿಕೊಳ್ಳುತ್ತಿರುವುದನ್ನು ಕಂಡೆವು; ಇಂಡಿಯಾದ ಅನೇಕ ಹೆಂಗಸರು ಈ ಪದ್ಧತಿ ಆಚರಿಸುತ್ತಾರೆ. ಆಕೆ ಕುದುರೆಯ ಮೇಲೆ ಕುಳಿತಿದ್ದಳು. ಮುಖ ಮುಚ್ಚಿಕೊಂಡಿರಲಿಲ್ಲ. ಆಕೆಯ ಒಂದು ಕೈಯಲ್ಲಿ ನಿಂಬೇಹಣ್ಣು, ಇನ್ನೊಂದು ಕೈಯಲ್ಲಿ ಕನ್ನಡಿ. ಅವು ಏತಕ್ಕೆ ಎಂದು ನನಗೆ ಗೊತ್ತಾಗಲಿಲ್ಲ. ಆಕೆ ಗೋಳೋ ಎಂದು ಅಳುತ್ತಾ ಕನ್ನಡಿಯಲ್ಲಿ ನೋಡುತ್ತಿದ್ದಳು. ಇನ್ನೂ ಏನೇನೋ ಹಾಡು ಮತ್ತು ಮಾತು ಗೀತು ಸಾಗುತ್ತಿತ್ತು. ಆದರೆ ಅವು ನನಗೆ ಗೊತ್ತಾಗಲಿಲ್ಲ. ಪ್ರಪಂಚವನ್ನು ಬೀಳ್ಕೊಡುವ ಒಂದು ವಿಧದ ಮಾತುಗಳೆಂದು ಜನರು ಹೇಳಿದರು. ಅಂತೂ ಅವಳ ದುಃಖ ಹೇಳತೀರದು. ಭಾಷೆ ಗೊತ್ತಾಗದ ನಮಗೂ ಅವಳ ದುಃಖದ ಮಾತು ಕೇಳಿ ಕನಿಕರವಾಗುತ್ತಿತ್ತು. ಆಕೆಯನ್ನು ಹಿಂಬಾಲಿಸಿ ಅನೇಕ ಜನ ಹೆಂಗಸರೂ ಗಂಡಸರೂ ನಡೆದುಕೊಂಡು ಹೋಗುತ್ತಿದ್ದರು. ಬಹುಶಃ ಅವರು ಆಕೆಯ ಸಂಬಂಧಿಗಳಿರಬೇಕು. ಆಕೆಯ ಮೇಲೆ ದೊಡ್ಡದೊಂದು ಛತ್ರಿ ಹಿಡಿದಿದ್ದರು. ಛತ್ರಿ ಹಿಡಿಸಿಕೊಳ್ಳುವುದು ಇಂಡಿಯಾದಲ್ಲಿ ದೊಡ್ಡ ಮನುಷ್ಯರ ಲಕ್ಷಣ. ಆಕೆಯ ಮುಂದೆ ವಾದ್ಯಗಳನ್ನು (drums) ಬಾರಿಸುತ್ತಿದ್ದರು. ಆ ವಾದ್ಯಗಳ ಗತ್ತಿಗೆ ತಕ್ಕಂತೆ ಹೆಂಗಸು ದನಿ ಕೊಟ್ಟು ದುಃಖದ ಹಾಡು ಹಾಡುತ್ತಿದ್ದಳು. ಆದರೆ ಆಕೆಯ ದನಿಯಲ್ಲಿ ಉದ್ವೇಗವಿರಲಿಲ್ಲ. ಶಾಂತಚಿತ್ತಳಾಗಿ, ಕಣ್ಣಲ್ಲಿ ನೀರಿಲ್ಲದೆ ತನ್ನ ಗತಿಗಿಂತ ಹೆಚ್ಚಾಗಿ ತನ್ನ ಸತ್ತ ಗಂಡನ ಬಗ್ಗೆ ಆಕೆ ಯೋಚಿಸುತ್ತಿರುವಂತೆ ಕಂಡಳು. ಈ ಸತಿಪದ್ಧತಿ ಬಹಳ ಕ್ರೂರ ಹಾಗೂ ಅನಾಗರಿಕವಾದದ್ದು ನಿಜ. ಆದರೆ ಹೆಂಗಸರ ಈ ಪಾತಿವ್ರತ್ಯ ಹಾಗೂ ಸತೀತ್ವ ಬಹಳ ಮೆಚ್ಚತಕ್ಕದ್ದು. ಈ ರೀತಿ ನಗರದೊಳಗೆ ಎಷ್ಟು ದಿನಗಳು ಮೆರವಣಿಗೆ ಮಾಡುತ್ತಾರೆ ಎಂದು ನನಗೆ ಗೊತ್ತಾಗಲಿಲ್ಲ. ಅನಂತರ ಒಂದು ದಿನ ಊರ ಹೊರಗಡೆ ಚಿತೆಯಲ್ಲಿ ಬಿದ್ದು ತನ್ನ

ಪ್ರಾಣ ಸಮರ್ಪಣೆ ಮಾಡಿಕೊಳ್ಳುತ್ತಾಳೆಂದು ಗೊತ್ತಾಯಿತು. ಯಾವತ್ತು ಇದು ನಡೆಯುವುದೆಂದು ಗೊತ್ತಾದರೆ ಅಲ್ಲಿಗೆ ಹೋಗಿ ಅಲ್ಲಿ ಇದ್ದು ಆಕೆಯ ಅಮರ ಪ್ರೇಮಕ್ಕೆ ನನ್ನ ಗೌರವವನ್ನು ಅರ್ಪಿಸಿ ಬರುವೆ.

* * * *

ನವೆಂಬರ್ ೧೬ನೆಯ ತಾರೀಕು ಬೆಂಕಿಯಲ್ಲಿ ಬಿದ್ದು ಸಾಯುವಳೆಂದು ಹೇಳಿದ ಹೆಂಗಸನ್ನು ಹೋಗಿ ನೋಡಿದೆ. ಆಕೆ ಅಂಗಳದಲ್ಲಿ ಕುಳಿತಿದ್ದಳು. ವಾದ್ಯಗಳನ್ನು ಬಾರಿಸುತ್ತಿದ್ದರು. ಅಪ್ಪಟ ಬಿಳಿ ಬಟ್ಟೆ ತೊಟ್ಟಿದ್ದಳು. ಚಿನ್ನದ ಆಭರಣ ಧರಿಸಿದ್ದಳು. ತಲೆಯ ತುಂಬ ಹೂ ಮುಡಿದಿದ್ದಳು. ನೋಡಲು ಅವು ಕಿರಣದಂತೆ ಕಾಣುತ್ತಿದ್ದವು. ಒಟ್ಟನಲ್ಲಿ ಆಕೆ ಮದುವೆಯ ಹೆಣ್ಣಿನಂತೆ ಇದ್ದಳು. ಕೈಯಲ್ಲಿ ನಿಂಬೆಹಣ್ಣು ಹಿಡಿದಿದ್ದಳು. ಮದುವೆಯ ಹೆಣ್ಣು ಎಷ್ಟು ಸಂತಸದಲ್ಲಿರಬಹುದೋ ಅಷ್ಟು ಹರ್ಷದಿಂದಿದ್ದಳು. ಆಕೆ ಗೆಳತಿಯರೊಂದಿಗೆ ನಗುತ್ತ ಸರಸ ಸಲ್ಲಾಪದಲ್ಲಿ ತೊಡಗಿದ್ದಳು.

ಅಲ್ಲಿ ನಿಂತಿದ್ದ ನನ್ನನ್ನು ಕಂಡ ಆಕೆ ಮತ್ತು ಆಕೆಯ ಅಕ್ಕ ಪಕ್ಕದವರು ನಾನೊಬ್ಬ ಪರದೇಶಿ ಎಂದು ಭಾವಿಸಿದ್ದರು. ನನ್ನ ಬಳಿಗೆ ಬಂದು ಕೆಲವರು ಮಾತನಾಡಿದರು. ನನ್ನ ದುಭಾಷಿಯ ಮೂಲಕ ನಾನವರಿಗೆ "ನಾನೊಬ್ಬ ಪರದೇಶಿ. ನನ್ನ ದೇಶ ಇಲ್ಲಿಂದ ಬಹಳ ದೂರ, ಇಂಡಿಯಾದಲ್ಲಿ ಗಂಡ ಸತ್ತಾಗ ಹೆಂಡತಿಯರು ಸತಿಯನ್ನು ಆಚರಿಸುತ್ತಾರೆಂದು ಕೇಳಿದ್ದೆ. ಈಗ ಅದನ್ನು ಕಣ್ಣಾರೆ ನೋಡಿದೆ ಎಂದು ನನ್ನ ದೇಶದವರಿಗೆ ಹೇಳುತ್ತೇನೆ" ಎಂದು ಹೇಳಿದೆ.

ಇದನ್ನು ಕೇಳಿ ಅವರಿಗೆ ಬಹಳ ಸಂತೋಷವಾಯಿತು. ಸತಿಯಾಗಲು ಸಿದ್ಧಳಾಗಿದ್ದ ಆಕೆಯೇ ಎದ್ದು ಬಂದು ನನ್ನೊಡನೆ ಮಾತನಾಡಿದಳು. ಬಹಳ ಹೊತ್ತು ನಾವಿಬ್ಬರೂ ಮಾತನಾಡಿದೆವು. ಆಕೆ ತನ್ನ ಹೆಸರು ಗಿಯಕ್ಕಮ (Giaccama) ಎಂದೂ, 'ತೆರ್ಲೆಂಗಾ' (Terlenga) ಜಾತಿಗೆ ಸೇರಿದವಳೆಂದೂ, ಮತ್ತು ಗಂಡ ದೋಣಿ ಬಾರಿಸುವ ಕೆಲಸ ಮಾಡುತ್ತಿದ್ದನೆಂದೂ ಹೇಳಿದಳು. ಇದನ್ನು ಕೇಳಿ ನನಗೆ ಮತ್ತಷ್ಟು ಆಶ್ಚರ್ಯವಾಯಿತು. ಕೀಳು ವರ್ಗದ ಜನರಲ್ಲಿಯೂ ಎಂತಹ ಮಹಾತ್ಯಾಗ !

ಈಕೆಯ ಗಂಡ ಸತ್ತು ಹತ್ತೊಂಬತ್ತು ದಿನಗಳಾಗಿದ್ದವು. ಈಕೆಯಲ್ಲದೆ ಸತ್ತ ಗಂಡನಿಗೆ ಇಬ್ಬರು ಹಿರಿಯ ಹೆಂಡತಿಯರಿದ್ದರು. ಆ ಇಬ್ಬರು ಹೆಂಡತಿಯರೂ ನಾವು ಮಾತನಾಡುವಾಗ ಅಲ್ಲಿಗೆ ಬಂದಿದ್ದರು. ಹೆಚ್ಚು ಮಕ್ಕಳಿದ್ದ ಅವರು ಸಾಯಲುಇಷ್ಟಪಡಲಿಲ್ಲವಂತೆ. ಗಿಯಕ್ಕಮನಿಗೆ ಆರೇಳು ವರ್ಷದ ಒಂದು ಗಂಡು ಮಗು ಮತ್ತು ಒಂದು ಚಿಕ್ಕ ಹೆಣ್ಣು ಮಗು ಇದ್ದುವು. ಆ ಮಕ್ಕಳನ್ನು ಆಕೆ ತೋರಿಸಿದಳು. ಅಂಥ ಚಿಕ್ಕ ಮಕ್ಕಳನ್ನು ಬಿಟ್ಟು ತಾನು ತನ್ನ ಗಂಡನನ್ನು ಹಿಂಬಾಲಿಸುತ್ತಿದ್ದೇನೆಂದು ಹೇಳಿದಳು. "ಮಕ್ಕಳನ್ನು ಅನಾಥರನ್ನಾಗಿ ಮಾಡಿ ಸಾಯುವುದು ಬೇಡ" ಎಂದು ನಾನು ಹೇಳಿದೆ. ಮಕ್ಕಳನ್ನು ತನ್ನ ಸೋದರಮಾವ ಕಾಪಾಡಿಕೊಳ್ಳುತ್ತಾನೆಂದು ಆಕೆ ತಿಳಿಸಿದಳು. ಆ ಸೋದರಮಾವನೂ ಅಲ್ಲಿಯೇ ಇದ್ದು ತನ್ನ ಸೊಸೆ ಮಾಡುತ್ತಿರುವುದು ತನಗೆ ಬಹಳ ಸಂತೋಷವಾದ ವಿಚಾರವೆಂದು ಆತ ಖುಷಿಯಾಗಿ ಮಾತನಾಡಿದ. ತನ್ನ ಸೊಸೆಯ (ನಾದಿನಿಯೆ ?) ಮಕ್ಕಳನ್ನು ಆಕೆಯ ವಾರಗಿತ್ತಿಯರೂ ನೋಡಿಕೊಳ್ಳುವರು ಎಂದಾತ ಹೇಳಿದ. ಮಕ್ಕಳೆಂದರೆ ಹೆಂಗಸಿಗೆ ಆಸೆಯಷ್ಟೆ. "ಆ ಮಕ್ಕಳನ್ನು ಅನಾಥರನ್ನಾಗಿ ಮಾಡಬೇಡಿ" ಎಂದು ಹೇಳಿ ನಾನು ಆಕೆಯ ಮನಸ್ಸು ತಿರುಗಿಸಲು ಪ್ರಯತ್ನಪಟ್ಟೆ, ಆದರೆ ನಾನು ಹೇಳಿದ್ದೆಲ್ಲ ವ್ಯರ್ಥವಾಯಿತು. ಸಾವೆಂದರೆ ಸಾಸಿವೆ ಕಾಳಿಗಿಂತ ಕಡೆ ಎನ್ನುವಂತೆ ಆಕೆ ಮಾತನಾಡಿದಳು. ಅವರಿವರ ಮಾತಿಗೆ ಕಟ್ಟುಬಿದ್ದು ತಾನು ಸಾಯುತ್ತಿಲ್ಲವೆಂದೂ, ತನ್ನ ಆತ್ಮ ಸಂತೋಷದಿಂದ ಹಾಗೆ ಮಾಡುತ್ತಿರುವೆನೆಂದೂ ಆಕೆ ತಿಳಿಸಿದಳು. ಇಂಥ ವೇಳೆ ಬಲತ್ಕಾರ ಮಾಡುವುದುಂಟೇ ಎಂದು ಅಲ್ಲಿದ್ದವರನ್ನು ಕೇಳಿದೆ. ಅವರು ಸಾಮಾನ್ಯವಾಗಿ ಹಾಗೆ ಮಾಡುವುದಿಲ್ಲ, ಎಲ್ಲೋ ಕೆಲವು ವೇಳೆ ದೊಡ್ಡ ಮನೆತನದ ಕಿರಿಯ ವಯಸ್ಸಿನ ಹೆಂಡತಿ ಸತಿಯಾಗಲು ಒಪ್ಪದಿದ್ದು, ಆಕೆ ಮತ್ತೆ ಮದುವೆಯಾಗಿ ಕುಲಕ್ಕೆ ಕಳಂಕ ತರದಿರಲೆಂದು ಆಕೆಯನ್ನು ಬಲಾತ್ಕಾರ ಮಾಡುವುದುಂಟೆಂದು ಹೇಳಿದರು. ಇದು ನಿಜವಾಗಿಯೂ ಬಹಳ ಕ್ರೂರವಾದ ಆಚರಣೆ ಎನಿಸಿತು, ನನಗೆ. ಆದರೆ ಗಿಯಕಮ್ಮ ತನ್ನ ಸಂತೋಷದಿಂದ ಬಲಿದಾನ

ಮಾಡಿಕೊಳ್ಳುತ್ತಿದ್ದೇನೆಂದೂ, ಅದರಿಂದ ತನಗೂ ತನ್ನ ಮನೆತನಕ್ಕೂ ಕೀರ್ತಿ ಬರುವುದೆಂದೂ ಹೇಳಿದಳು.

"ಆಭರಣಗಳಿಂದಲೂ, ಹೂವುಗಳಿಂದಲೂ ಏಕೆ ಅಲಂಕಾರ ಮಾಡಿಕೊಂಡಿರುವೆ" ಎಂದಾಕೆಯನ್ನು ಕೇಳಿದೆ.

ಅದಕ್ಕೆ ಆಕೆ 'ಮಾಸ್ತಿ'ಯನ್ನು ಮೆಚ್ಚಿಸುವುದಕ್ಕಾಗಿ ಹಾಗೆ ಮಾಡಿಕೊಳ್ಳಬೇಕೆಂದು ಹೇಳಿದಳು. ಸತಿಯಾಗುವ ಹೆಂಗಸನ್ನು 'ಮಾಸ್ತಿ' ಎಂದು ಕರೆಯುತ್ತಾರೆ. ಮಹಾಸತಿಯಾಗುವುದು ಬಹು ಸಂತೋಷದ ವಿಚಾರ, ಹೀಗಿರುವಾಗ ಉಟ್ಟು ತೊಟ್ಟು ಆನಂದ ಪಡುವುದು ಸರಿ ಎಂದಳು ಆಕೆ. ಸತಿಯಾಗದ ಹೆಂಗಸರು ತಲೆ ಬೋಳಿಸಿಕೊಂಡು ಸಾಯುವವರಿಗೆ ವ್ಯಸನದಲ್ಲಿ ಕಾಲ ತಳ್ಳಬೇಕು.

ತನ್ನನ್ನು ಕಾಣಲು ಬಂದದ್ದು ಆಕೆಗೆ ಬಹಳ ಗೌರವ ಮಾಡಿದಂತೆ ಎಂದು ಗಿಯಕಮ್ಮ ನನ್ನನ್ನು ಹೊಗಳಿದಳು. ತನ್ನ ಕೀರ್ತಿ ದೂರ ದೇಶಕ್ಕೂ ಮುಟ್ಟುವುದೆಂದು ಕೇಳಿ ಆಕೆ ಹಿಗ್ಗಿದಳು. ತಾನು ಚಿತೆಯನ್ನೇರುವ ಮುನ್ನ ಆಕೆ ನನ್ನ ಬಿಡಾರಕ್ಕೆ ಬಂದು, ಇಲ್ಲಿಯ ಪದ್ಧತಿಯಂತೆ ಚಿತೆಗೆ ಬೇಕಾದ ಸೌದೆ ಕೊಳ್ಳಲು ನನ್ನಿಂದ ಭಿಕ್ಷೆ ಬೇಡುವುದಾಗಿಯೂ, ಅದನ್ನು ಕೊಡುವ ಕೃಪೆ ಮಾಡಬೇಕಾಗಿಯೂ ಹೇಳಿದಳು, ಹಾಗೆ ಮಾಡಿದರೆ ನನಗೆ ತುಂಬಾ ಗೌರವ ಮಾಡಿದಂತಾಗುವುದೆಂದೂ ಸಂತೋಷವಾಗಿ ಏನಾದರೂ ಕೊಡುವೆನೆಂದು ನಾನು ಹೇಳಿದೆ ಆಕೆ ಸಾಯುವುದು ನನಗೆ ಸುತರಾಂ ಇಷ್ಟವಿರಲಿಲ್ಲ. ಸಾಧ್ಯವಿದ್ದರೆ ಅದನ್ನು ತಪ್ಪಿಸುತ್ತಿದ್ದೆ. ಆದರೆ ಅದು ಸಾಧ್ಯವಿಲ್ಲದ್ದರಿಂದ ಬೇರೆ ರೀತಿಯಲ್ಲಿ ಆಕೆಯ ಮನಸ್ಸಂತೋಷಪಡಿಸಲು ನಿರ್ಧರಿಸಿದೆ. ಆಕೆಯ ಹೆಸರು ಈ ಪ್ರಪಂಚದಲ್ಲಿ ಚಿರಸ್ಥಾಯಿಯಾಗಿರುವಂತೆ ನನ್ನ ಲೇಖನಿಯಿಂದ ಶಕ್ತಿ ಮೀರಿ ಚಿತ್ರಿಸುವೆನೆಂದು ಆಕೆಗೆ ಭರವಸೆ ನೀಡಿದೆ.

ಈರೀತಿ ಆಕೆಯಿಂದ ಬೀಳ್ಕೊಂಡು ದುಗುಡ ಮನಸ್ಸಿನಿಂದ ಮನೆಗೆ ಬಂದೆ. ಸಾಯಲು ನಿರ್ಧರಿಸಿದ್ದ ಆಕೆಗಿಂತ ನನಗೇ ಬಹಳ ದುಃಖವಾಗಿತ್ತು. ಸ್ತ್ರೀಯರ ಬಗ್ಗೆ ಇಷ್ಟು ನಿರ್ದಯವಾದ ಈ ಪದ್ಧತಿಯನ್ನು ಮನಸ್ಸಿನಲ್ಲಿಯೇ ಶಪಿಸಿದೆ. ಗಿಯಕಮ್ಮನಿಗೆ ಮೂವತ್ತು ವರ್ಷ ವಯಸ್ಸು. ಹೆಚ್ಚು ಕಡಮೆ ಕಪ್ಪುಬಣ್ಣದ, ಎತ್ತರದ ನಿಲುವಿನ, ಸರ್ವಾಂಗ ಸುಂದರಳಾದ ಆ ಹೆಣ್ಣಿಗೆ ಇದೋ ನನ್ನ ಕಾವ್ಯ ರೂಪದ ಗೌರವ ಕಾಣಿಕೆ.*

**ಇಟಲಿಯ ತ್ರಿಯೇಸ್ತೆ ಭಾಂಡಾಗಾರದಲ್ಲಿನ ಹಸ್ತಪ್ರತಿಗಳು**

ಪ್ರಿಯತ್ರೋ ಡೆಲ್ಲವಲ್ಲೆ, ಮಾನ್ಯೆ (auto biography), ಗಿಯಕ್ಕಮನನ್ನು ಕುರಿತು ಪ್ರಿಯತ್ರೋವಿನ ಕವಿತೆ (Sonnet), ಇಕ್ಕೇರಿ ಅಘೋರೇಶ್ವರ ದೇವಾಲಯದ ನಕ್ಷೆ ಹಾಗೂ ವಿವರಣೆಗಳನ್ನೊಳಗೊಂಡ ಮೂಲ ಸಾಮಗ್ರಿಗಳು ಇಟಲಿ ಭಾಷೆಯಲ್ಲಿದ್ದು ತ್ರಿಯೇಸ್ತೆ ಪುರಾತತ್ವ ಭಾಂಡಾಗಾರದಲ್ಲಿ ಸುರಕ್ಷಿತವಾಗಿ ಶೇಖರಿಸಲ್ಪಟ್ಟಿವೆ. ಡಾ. ಆಲ್ವಾರಿಸ್‌ರವರೇ ಅಭಿಪ್ರಾಯಪಟ್ಟಂತೆ ಕರ್ನಾಟಕವಲ್ಲದೆ ವಿಶೇಷವಾಗಿ ಕೆಳದಿ ಇತಿಹಾಸಕ್ಕೆ ಸಂಬಂಧಿಸಿದ ಮೂಲ ಆಕರಗಳು ಅಪಾರವಾಗಿ ಇಟಲಿ ಭಾಷೆಯಲ್ಲಿದ್ದು ಇವುಗಳ ಅಧ್ಯಯನ ಹಾಗೂ ಸಂಶೋಧನೆ ಕೈಗೊಳ್ಳುವುದು ಅಗತ್ಯವಾಗಿದೆ. ಡೆಲ್ಲವಲ್ಲೆಯು ಕವನ ಅಘೋರೇಶ್ವರ ದೇವಾಲಯದ ನಕ್ಷೆ ಹಾಗೂ ವಿವರಗಳನ್ನು ಈಗ ಇಟಲಿಯಲ್ಲಿ ಗಣಿತ ಶಾಸ್ತ್ರದಲ್ಲಿ ಸಂಶೋಧನೆ ಕೈಗೊಂಡಿರುವ ಸಂಶೋಧಕ ಡಾ. ಅರವಿಂದ್ ಶ್ರಮವಹಿಸಿ ಇವುಗಳನ್ನು ನನಗೆ ದೊರಕಿಸಿಕೊಟ್ಟಿರುವುದಕ್ಕೆ ಅತ್ಯಂತ ಕೃತಜ್ಞತೆ ಸಲ್ಲಿಸುವೆನು. ಡೆಲ್ಲವಲ್ಲೆ ಗಿಯಕ್ಕಮ+ನನ್ನು ಕುರಿತು ರಚಿಸಿದ ಕವಿತೆ (Sonet) ಕೈಬರಹದಲ್ಲಿದ್ದು ಅವುಗಳ ಜೆರಾಕ್ಸ್ ಪ್ರತಿ ಅನುಬಂಧದಲ್ಲಿ ನೀಡಲಾಗಿದೆ.

ಪಿಯತ್ರೋ ಡೆಲ್ಲವಲ್ಲೆಯ ಕುರಿತು ಇಟಲಿಯ ತ್ರಿಯೇಸ್ತೆ ಪುರಾತತ್ವ ಭಾಂಡಾಗಾರದಲ್ಲಿ ಈ ಕೆಳಕಂಡಂತೆ ಹಸ್ತಪ್ರತಿಗಳು ಕಂಡುಬಂದಿವೆ.

---

* ಈ ಕಾವ್ಯವೇ ನನಗೆ ಇಟಲಿಯ ತ್ರಿಯೇಸ್ತೆ ಪುರಾತತ್ವ ಭಂಡಾರವಲ್ಲಿ ಲಭಿಸಿದ್ದು. ಅನುಬಂಧ ನೋಡಿರಿ.
* ಇದು 'ಜಾನಕಮ್ಮ' ಅಥವ 'ಗಿರಿಜಮ್ಮ' ಇರಬಹುದೇ ?

1) *Tavlao* I Pietro Dalla Valle (Autograph) Ritratto di pietro Della Valle (da F Ranalli, vite di nomini illustri romain Firenze 1838)

2) *Tavola* XXI Ritratto di sitti maant (da G. Rocchi-Funerals della signora sitti maani Gioerida Della Valle, Roma 1627)

3) *Tavola* XXXI, XXXII Description of Ikkeri, Capital of Keladi.

4) *Tavola* XXII Sonetti Della "Corona Gloeridla" (autografi Bibl vaticana cod, Ottob lat 3384)

5) *Tavola* VI Pagina autograta di P. D. V. Con plantina di untemplo Indiano (Bibl Vaticana cod Ottob lat 3382)

ತವೋಲ XXII ರಲ್ಲಿ ಕಂಡು ಬಂದಂತೆ ಪಿಯ ತ್ರೋವಿನ ಸ್ವಹಸ್ತಾಕ್ಷರ ಕವಿತೆಯು ೭ ರಿಂದ ೧೩ ರವರೆಗೆ ಇದ್ದುದು ಕಂಡು ಬರುತ್ತದೆ. ಇದು ಜೆರಾಕ್ಸ್ ಪ್ರತಿಯಾಗಿರುವುದರಿಂದ ಹಾಗೂ ಇಟಲಿ ಭಾಷೆಯಲ್ಲಿ ರುವುದರಿಂದ ಓದುವುದು ಹಾಗೂ ಅರ್ಥೈಸುವುದು ಕಠಿಣವಾಗಿದೆ.

ತವೋಲ XI ರಲ್ಲಿರುವ ಹಸ್ತಪ್ರತಿಯಲ್ಲಿ ಡೆಲ್ಲ ವಲ್ಲೆಯು ಕಣ್ಣಾರೆ ನೋಡಿ ಸಿದ್ಧಪಡಿಸಿದ ಇಕ್ಕೇರಿ ಅಘೋರೇಶ್ವರ ದೇವಾಲಯ ನಕ್ಷೆಯು ಗಮನಾರ್ಹ ವಾದುದು. ಈತನು ನಿರೂಪಿಸಿದ ಇಕ್ಕೇರಿ ದೇವಾಲ ಯದ ಮುಂಭಾಗದಲ್ಲಿರುವ ಉಭಯ ಪಾರ್ಶ್ವದ ಪ್ರಾಕಾರಗಳು, ನವರಂಗ, ಗರ್ಭಗೃಹ, ಸುಖನಾಸಿಯ ಹೋಲಿಕೆ ಗಳನ್ನು ವಸ್ತುನಿಷ್ಟವಾಗಿ ಈಗಲೂ ಇಕ್ಕೇರಿ ಯಲ್ಲಿ ಸೂಕ್ಷ್ಮವಾಗಿ ಕಂಡು ಕೊಳ್ಳಬಹುದಾಗಿದೆ.

**ಉಪಸಂಹಾರ**

ದಕ್ಷಿಣ ಭಾರತದ ಚರಿತ್ರೆಗೆ ವಿಶೇಷವಾಗಿ ಕೆಳದಿ ಇತಿಹಾಸದ ಮೂಲ ಆಕರ ಸಾಮಗ್ರಿಗಳು ವಿದೇಶದ ಪುರಾತತ್ವ ಭಾಂಡಾಗಾರದಲ್ಲಿ ವಿಪುಲವಾಗಿವೆ. ಇವು ಗಳನ್ನು ಘನೀಕೃತ ಚರಿತ್ರೆಗೆ ಬಳಸಿಕೊಳ್ಳದಿದ್ದಲ್ಲಿ ಅಪೂರ್ಣವೆಂದೇ ಹೇಳಬಹುದು. ಈ ಕುರಿತು ತಜ್ಞ ಸಂಶೋಧಕರು ಗಮನ ಹರಿಸಿ ಕೊನೆಯ ಪಕ್ಷ ಸೂಚೀ (Calalogue) ಸಿದ್ಧಪಡಿಸುವುದು ಆವಶ್ಯಕ. ಈ ದಿಶೆಯಲ್ಲಿ ಇಟಲಿಯ ತ್ರಿಯೇಸ್ತೇ ಹಾಗೂ ಇತರ ಗ್ರಂಥ ಭಂಡಾರಗಳಲ್ಲಿ ಲಭಿಸುವ ಕರ್ನಾಟಕ ಹಾಗೂ ಕೆಳದಿ ಇತಿಹಾಸದ ಆಕರ ಸಾಮಗ್ರಿಗಳ ಅಧ್ಯಯನಾದಿ ಸಮೀಕ್ಷೆ ಕೈಗೊಂಡು ಮುಂದಿನ ಪೀಳಿಗೆಗೆ ಹಾಗೂ ಘನೀಕೃತ ಇತಿಹಾಸ ರಚನೆಗೆ ಮಾರ್ಗ ಸೂಚಿಯಾಗುವಂತೆ ಲಭಿಸಲು ಸರಕಾರ, ಕೆಳದಿ ಸಂಶೋಧನಾಲಯ ಮತ್ತು ವಿಶ್ವವಿದ್ಯಾಲಯಗಳು ಯೋಜನೆಯನ್ನು ರೂಪಿಸಿ ಇನ್ನಾದರೂ ತಡಮಾಡದೇ ಕಾರ್ಯಪ್ರವೃತ್ತರಾಗು ವುದು ಸೂಕ್ತವೆಂದು ಒತ್ತಿ ಹೇಳಬೇಕಾಗಿಲ್ಲವಷ್ಟೆ?

(ಈ ಲೇಖನ ಸಿದ್ಧ ಪಡಿಸಲು ನೆರವಾದ ಡಾ॥ ಅರವಿಂದ, ಡಾ ವೆಂಕಟೇಶ್ ಶ್ರೀ ಕಲ್ಲಾಪುರ್ ಮತ್ತು ಮೈಸೂರಿನ ಉದಯ ಕುಮಾರ್, ರಾಘವೇಂದ್ರರಾವ್ ಅವರಿಗೆ ಕೃತಜ್ಞತೆ ಸಲ್ಲುತ್ತದೆ)

ಚೆನ್ನಾಂಬಿಕಾ ಪಾವಟಿ*

# ಹಂಡೆ ಪಾಳೆಯಗಾರರು : ಒಂದು ವಿಶ್ಲೇಷಣೆ

ಕೀರ್ತಿವೆತ್ತು ಬದುಕಿ ಬಾಳಿದ ವಿಜಯನಗರ ಪಾಳೆಯಗಾರರಲ್ಲಿ ಹಂಡೆ ಮನೆತನವೂ ಒಂದು. ವಿಜಯನಗರದ ಅಚ್ಯುತರಾಯ, ಕೃಷ್ಣದೇವರಾಯ, ಆದಿಲಶಹ, ಟೀಪೂ ಕೊನೆಗೆ ಕರ್ನಲ್ ಮನ್ರೋ ಗಹಗನ್ ಎಂಬ ಆಂಗ್ಲ ಅಧಿಕಾರಿಗಳ ಕಾಲದವರೆಗೆ ಅಧಿಕಾರ ಮುಂದುವರೆಸಿಕೊಂಡು ಹೋದ ಮನೆತನ ವಿದು. ಕರ್ನಾಟಕದ ಬಳ್ಳಾರಿ, ಕುರಗೋಡು, ರಾಯಚೂರುಗಳಲ್ಲಿ ಕೆಲಕಾಲ ಬಾಳಿ ಬದುಕಿ ಕಾಲಾಂತರದಲ್ಲಿ ಆಂಧ್ರದ ಅನಂತಪುರವನ್ನು ತನ್ನ ಆಳ್ವಿಕೆಯ ಕೇಂದ್ರವನ್ನಾಗಿಸಿಕೊಂಡಿತು.

ಹಂಡೆ ಅನಂತಪುರ ಕೈಫಿಯತ್ತು ತಿಳಿಸುವಂತೆ ನಿಜಾಂಪುರದೇಶದಲ್ಲಿರುವ ಬಾಗವಾಡಿ ವಿಭಾಗದ ಮುತ್ತಿಗೆ ಮತ್ತು ವಡವಡಿನೆ ಗ್ರಾಮಗಳಲ್ಲಿದ್ದ ಈ ಮನೆತನದ ಮೂಲಪುರುಷ ಲಕ್ಕಿನಾಯಕನೆಂಬುವವನು. ಅವನಿಗೆ ಬಾಲದ ಹನುಮಪ್ಪನಾಯಕ ಮತ್ತು ಬಳಗ ನಾಯಕ ಎಂಬ ಇಬ್ಬರು ಮಕ್ಕಳು. ಬಾಲದ ಹನುಮಪ್ಪನಾಯಕ ಹೆಚ್ಚು ಪ್ರಖ್ಯಾತಿ ಪಡೆದ ನಂತರ ಅವನ ವಂಶಜರು ಬಳ್ಳಾರಿ ಅನಂತಪುರದೆಡೆಗೆ ನಡೆದಾಗ, ಬಳಗನಾಯಕನ ವಂಶಜರು ಮೂಲ ಸ್ಥಳದಲ್ಲಿಯೆ ಉಳಿದರು. ಇವರ ಇತಿಹಾಸದ ಪ್ರಮುಖ ಆಕರಗಳಲ್ಲಿ ಬಳ್ಳಾರಿ ಹಾಗು ಕುರಗೋಡು ಕೈಫಿಯತ್ತು ಮುಖ್ಯವಾದವು. ಮೂಲ ತೆಲುಗು ಕೃತಿಯನ್ನು 'wars of the Rajas' ಹೆಸರಿನಲ್ಲಿ ಇಂಗ್ಲೀಷಿಗೆ ತರ್ಜುಮೆ ಮಾಡಿದವರು ಚಾರ್ಲ್ಸ್ ಫಿಲಿಪ್ ಬ್ರೌನ್ ಅವರು. ಇವುಗಳಲ್ಲದೆ ಹಂಡೆ ಮನೆತನದ ಗುರುಪೀಠವೆನಿಸಿದ ಶ್ರೀ ಶೈಲದ ನಿಡುಮಾಮಿಡಿ ಪೀಠದ ಅನೇಕ ಜಗದ್ಗುರುಗಳ ಇತಿಹಾಸದೊಂದಿಗೆ ಇವರ ಚರಿತ್ರೆ ಹೆಣೆದುಕೊಂಡಿದೆ. ಹಂಡೆ ಮನೆತನದ ಸಮಕಾಲೀನ ತೆಲುಗು ಕೃತಿ ಪುಲ್ಲಕವಿ ವಿರಚಿತ 'ಶ್ರೀ ಶೈಲ ಪಂಡಿತಾರಾಧ್ಯ ಚರಿತೆ', ಸಿರಿಪಿ ಆಂಜನೇಯಲು ವಿರಚಿತ 'ಕರಿಬಸವ ಸ್ವಾಮಿ' ಕಾವ್ಯ, ನಾಗಸಂದ್ರಂ ವಾಸುದೇವರಾವ್ ವಿರಚಿತ 'ಅನಂತಪುರ ಮಂಡಲ ಚರಿತ್ರ ಕಥಲು', 'ಶ್ರೀ ಶೈಲಪೀಠ ದರ್ಶನ' ವೆಂಬ ಹೊಸಗನ್ನಡ ಕೃತಿ ಈ ಮನೆತನದ ಬಗೆಗೆ ತುಂಡು ತುಂಡು ವಿಷಯ ತಿಳಿಸುವ ಆಕರಗಳು. ಇತ್ತೀಚೆಗೆ ಸಂಶೋಧನ ತರಂಗದಲ್ಲಿ (ಸಂ IV ಸಂಚಿ ೪-೫ ಪು. ೧೦ ೧೯೮೧) ತರೀಕೆರೆಯ ಪ್ರಾಧ್ಯಾಪಕ ಟಿ. ಶಂಭುಲಿಂಗಪ್ಪ ಅವರ 'ತಾಮ್ರಶಾಸನದಲ್ಲಿ ಹಂಡೆ ಪಾಳೆಯಗಾರರು ಎಂಬ ಲೇಖನ ಬರೆದಿದ್ದಾರೆ.

ಕಳೆದ ಬಾರಿ ಗದಗಿನಲ್ಲಿ ಜರುಗಿದ ಕರ್ನಾಟಕ ಇತಿಹಾಸ ಅಕಾಡೆಮಿ ವಿಚಾರ ಸಂಕಿರಣದಲ್ಲಿ 'ಬಂಕಾಪುರದಲ್ಲಿ ಹಂಡೆ ಪಾಳೆಯಗಾರರು', ಚಿತ್ರದುರ್ಗದ ವಿಚಾರ ಸಂಕಿರಣದಲ್ಲಿ 'ಹಂಡೆ ಪಾಳೆಯಗಾರರ ಮೇಲೆ ಹೊಸಬೆಳಕು' ಲೇಖನಗಳನ್ನು ಮಂಡಿಸಿದ್ದೆ. ಪ್ರಸ್ತುತ ಲೇಖನವು ದೊರೆತ ಕೆಲ ಕೈಫಿಯತ್ತು, ಬ್ರೌನ್ ವಿರಚಿತ 'wars of the Rajas'ಕೃತಿ ಹಾಗೂ 'ತಾಮ್ರ ಶಾಸನದಲ್ಲಿ ಹಂಡೆ ಪಾಳೆಯಗಾರರು' ಎಂಬ ಲೇಖನಗಳನ್ನು ಕುರಿತು ಮಾಡಿರುವ ವಿಶ್ಲೇಷಣೆಯಾಗಿದೆ.

---

* ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ-೫೮೦೦೦೩

ವೀರಶೈವ ಧರ್ಮದ ಪ್ರಭಾವದ ತೆಕ್ಕೆಗೆ ಸಿಕ್ಕಿದ ಹಂಡೆ ಪಾಳೆಯಗಾರರು ಸೊನ್ನಲಾಪುರದ ಸಿದ್ಧರಾಮನ ಭಕ್ತರು. ಸಿದ್ಧರಾಮನ ಹೊರತಾಗಿ ಬೇರೆ ಯಾವುದೇ ಸಂತರನ್ನು ಆರಾಧಿಸುವುದಿಲ್ಲ ಶಿವನಿಗೆ ಅರ್ಪಿಸದ ಮುನ್ನ ನೀರನ್ನೂ ಸಹ ಕುಡಿಯುವವರಲ್ಲ' ಎಂದು ಅನಂತಪುರ ಕೈಫಿಯತ್ತು ತಿಳಿಸಿದರೆ, ಶ್ರೀ ಶೈಲದ ನಿಡುಮಾಮಿಡಿ ಕರಿಬಸವಸ್ವಾಮಿಗಳು, ಮರಿಕರಿಬಸವಸ್ವಾಮಿಗಳ ಕೃಪಾಶೀರ್ವಾದದಿಂದ ಬದುಕಿ ಬಾಳಿದ ಮನೆತನವೆಂದು ತೆಲುಗು ಕಾವ್ಯಗಳ ಹೇಳಿಕೆ. ಇದೇ ಮನೆತನದ ರಾಮಪ್ಪ ನಾಯಕನ ಗುರು ತೋಂಟದ ಸಿದ್ದಲಿಂಗೇಶ್ವರ ಸಂಪ್ರದಾಯದ ವಿರಕ್ತಮಠದ ನೀಲಕಂಠ ಸ್ವಾಮಿಗಳು ಎಂದು ಹಸ್ತಪ್ರತಿ ಪ್ರಶಸ್ತಿಯಲ್ಲಿ ತಿಳಿಸಲಾಗಿದೆ.

ಕೈಫಿಯತ್ತುಗಳಲ್ಲಿ ದೊರೆಯುವ ಈ ಮನೆತನದ ವಂಶಾವಳಿಗೂ ಬ್ರೌನ್ ವಿರಚಿತ ಕೃತಿಯಲ್ಲಿ ದೊರೆಯುವ ವಂಶಾವಳಿಗೂ ಸಾಕಷ್ಟು ಭಿನ್ನತೆಗಳಿವೆ. ಮೂಲ ಪುರುಷ ಲಖ್ಖನಾಯಕನ ನಂತರ ಹೆಚ್ಚು ಪ್ರಸಿದ್ಧಿಗೆ ಬಂದವನು ಬಾಲದ ಹನುಮಪ್ಪನಾಯಕ. ಇವರಿಬ್ಬರಲ್ಲಿ ಮುಖ್ಯವಾದುದು ತಂದೆ ಮಕ್ಕಳ ಸಂಬಂಧ. ಕೈಫಿಯತ್ತುಗಳು ಈ ಹನುಮಪ್ಪ ನಾಯಕನಿಗೆ ಅಂಕುಶರಾಯ, ದೇವಪ್ಪನಾಯಕ, ನಿಚ್ಚಮದುವಣಿಗ ಲಿಂಗರಾಮಪ್ಪನಾಯಕ, ಹಿರೇಮಲ್ಲಪ್ಪನಾಯಕ, ಚಿಕ್ಕಮಲ್ಲಪ್ಪನಾಯಕರನ್ನು ಮಕ್ಕಳೆಂದು ಹೆಸರಿಸಿವೆ. ಬ್ರೌನ್ ಕೃತಿಯಲ್ಲಿ ಬಾಲದ ಹನುಮಪ್ಪನಾಯಕನ ಮಗ ಹಂಪನಾಯಕ ಆತನ ಮಗ ಮಲಕಪ್ಪನಾಯಕ ಹಾಗೂ ಅವನ ಪಟ್ಟದರಾಣಿ ಸಿದ್ಧರಾಮಮ್ಮನಿಗೆ ದೇವಪ್ಪನಾಯಡು, ಚಿನ್ನರಾಮಪ್ಪನಾಯಡು, ನಿಕ್ಕ ಮದಲಿಂಗಪ್ಪನಾಯಡು ಮತ್ತು ಹಂಪನಾಯಡು ಎಂಬ ನಾಲ್ಕು ಜನ ಮಕ್ಕಳನ್ನು ಸೂಚಿಸಿದೆ. ಈ ಭಿನ್ನತೆಯಲ್ಲಿ ಮುಖ್ಯವಾದುದು ಮೊದಲನೆಯ ಅಂಕುಶರಾಯನನ್ನು ಬ್ರೌನ್ ಅವರು ಕೈ ಬಿಟ್ಟದ್ದು. ಬಾಲದ ಹನುಮಪ್ಪನ ಮಕ್ಕಳೆಂದು ಗುರುತಿಸಲಾದವರು ಅವನ ಮರಿ ಮಕ್ಕಳಾಗಿಯೂ, ಮಲಕಪ್ಪನಾಯಕನ ಮಕ್ಕಳನ್ನಾಗಿಯೂ ಗುರುತಿಸಿದ್ದು ಕಂಡು ಬರುತ್ತದೆ.

ಈ ಭಿನ್ನತೆಯನ್ನು ಗುರುತಿಸಿದರೆ ಅಂಕುಶ ರಾಯನ ಮುಂದಿನ ತಲೆ ಮಾರಿನವರು ಈ ಭಾಗದಲ್ಲಿಯೆ ಆಳಿದ್ದು ಗೋಚರವಾಗುತ್ತದೆ. 'ಬಹುಧರ್ಮಿಷ್ಟ' ನೆನಿಸಿದ ಅಂಕುಶರಾಯನಿಗೆ ಬಳ್ಳಾರಿ, ಬಂಕಾಪುರಗಳ ವಿಭಾಗಗಳ ವ್ಯವಸ್ಥೆ ವಹಿಸಿ ಕೊಟ್ಟಿದ್ದರು. ಇವನ ವಂಶಸ್ಥರಾದ ಸಿದ್ದಪ್ಪನಾಯಕ, ಪ್ರಸನ್ನಪ್ಪನಾಯಕ ರೆಂಬ ಸೋದರರು ಬಂಕಾಪುರ ಸೀಮೆಯಲ್ಲಿ ಅಧಿಕಾರ ಮುಂದುವರೆಸಿಕೊಂಡು ಹೋಗಿರುವರು.

ಬಾಲದ ಹನುಮಪ್ಪನ ಮೊಮ್ಮಗ ಮಲಕಪ್ಪ ನಾಯಡು. ವಿಜಯನಗರದ ರಾಮರಾಯ ತುರ್ಕರನ್ನು ಎದುರಿಸಲು ಸಮರ್ಥನಾಗದೆ ಹೋಗಲು ಈ ಮಲಕಪ್ಪ ಮುಸ್ಲಿಮರ ಆಶ್ರಯ ಪಡೆದು, ಶಿಸ್ತಿನಿಂದ ದುಡಿದು ಮಂಚಿ ದೇಶದಲ್ಲಿಯ ಬುಕ್ಕಪಟ್ಟಣ ಮತ್ತು ಅನಂತ ಗ್ರಾಮಗಳನ್ನು ಕಾಣಿಕೆಯಾಗಿ ಪಡೆದಿದ್ದನಲ್ಲದೆ ಪಾದಶಿಹ ವಜೀರ್ (Royal minister) ಎಂಬ ಬಿರುದು ಪಡೆದಿದ್ದ.

ಬುಕ್ಕರಾಯನ ಸಮುದ್ರದಲ್ಲಿ ನೆಲೆನಿಂತ ಮಲಕಪ್ಪ ನಾಯಡು ಗಂಡು ಸಂತಾನವಿಲ್ಲದ್ದರಿಂದ ಅನಂತ ಸಂಗ್ರಾಮದ ಎಲ್ಲರೆಡ್ಡಿಯ ಅನುಮತಿ ಮೇರೆಗೆ ಅಲ್ಲಿಯೆ ಒಂದು ಅರಮನೆ ಕಟ್ಟಿಸಿ ವಾಸಿಸಲು ಆರಂಭಿಸಿದ ನಂತರ ಆ ಹಳ್ಳಿಯನ್ನೇ ಹಂಡೆ ಅನಂತಪುರವೆಂದು ಕರೆಯ ಲಾಯಿತು. ಜೀವನ ಜೋಕಾಲಿಯ ಗಂಗೆ ಗೌರಿ ಸಂವಾದದಲ್ಲಿ ಈ ಮಲಕನಾಯಕನ ಗುಣಾವಳಿ ಸ್ತುತಿಸಿದ ಹಾಡು ಗಬ್ಬವಿದೆ.

ಹಂಡೆಮಲುಕಗೊಡೆಯ ಕೇಳು ಎಲೆ ತಂಗಿ | ಆತ
ಉಂಡ ಮನೆಗೆ ಎರಡ ಬಗೆಯನೆಲೆ ತಂಗಿ
ಉಂಡು ನಾವು ಸುಖದೊಳೆಲೆ ತಂಗಿ ! ಶಿವನ
ಕೊಂಡಾಡುವ ಜಗಳ ಬೇಡ ಎಲೆ ತಂಗಿ ||

ಎಂಬುದಿದೆ.

ಇದರ ಕರ್ತೃ ಶಿವಗಂಗೆಯ ಹಿರಿಯ ಸಿಂಹಾಸನದ ಸಂಗನೇಶ್ವರನ ಕರ ಕಮಲ ಸಂಜಾತ ತರುಳಚರಪತಿ. ಈ ಕವಿಗೆ ಮಲಕಪ್ಪನ ಆಶ್ರಯ ದೊರೆತಿರಬೇಕು. 'ಉಂಡ ಮನೆಗೆ ಎರಡ ಬಗೆಯ' ಎಂಬುದು ಆತನ ವ್ಯಕ್ತಿತ್ವದ ಪರಿಚಯ ಮಾಡಿಸಿದೆ.

ಈ ಮನೆತನದ ದೇವಪ್ಪನಾಯಡು ಕುಂದರ್ಪಿ ನಾಂದೇಲವನ್ನೂ, ಚಿನ್ನರಾಮಪ್ಪ ಬಳ್ಳಾರಿ, ಕುರ ಗೋಡನ್ನೂ, ನಿಚ್ಚ ಮದುವಣಿಗ ಲಿಂಗರಾಯಪ್ಪ ನಾಯಕ ಅನಂತಪುರ, ಧರ್ಮಾವರ, ಕಂಡುಪ ಕಣಿ ಕಲ್ಲನ್ನೂ, ಹಂಪನಾಯಡು ಅನಂತಪುರ ಬುಕ್ಕಪಟ್ಟಣ ಗಳ ಅಧಿಕಾರ ನೋಡಿಕೊಂಡಿರುವರು. ಈ ವಂಶದ ಪ್ರಸನ್ನಪ್ಪ ೧೬೯೭ರಲ್ಲಿ ಪಟ್ಟಕ್ಕೆ ಬಂದ. ಈ ವೇಳೆಗೆ ವಸಂತಮ್ಮ ಮತ್ತು ಲಕ್ಕಮ್ಮ ಎಂಬ ವೇಶ್ಯಾಂಗನೆಯರು ತಾಡಿಮರಿಯಿಂದ ಅನಂತಪುರಕ್ಕೆ ಬಂದರು. ಪ್ರಸನ್ನಪ್ಪ ವಸಂತಮ್ಮನಿಗೆ ಮೋಹಗೊಂಡು ಅವಳಿಗೊಂದು ಅರಮನೆ ಕಟ್ಟಿಸಿದ್ದ. ಆದರೆ ದುರ್ಬುದ್ಧಿಯ ಲಕ್ಕಮ್ಮನ ಮಾತಿಗೆ ಕಟ್ಟು ಬಿದ್ದು ವಸಂತಮ್ಮ ತನ್ನಲ್ಲಿ ತುಂಬು ವಿಶ್ವಾಸವಿರಿಸಿಕೊಂಡಿದ್ದ ಪ್ರಸನ್ನಪ್ಪನನ್ನು ಮೋಸ ಮಾಡಿ ಓಡಿ ಹೋಗಲು ಪ್ರಯತ್ನಿಸಿದಳು. ತನ್ನ ಅಕ್ಕನಿಗೆ 'ಸ್ವಲ್ಪ ಸೈನ್ಯ ಸಹಾಯಕ್ಕೆ ತೆಗೆದುಕೊಂಡು ಅನಂತಪುರದ ಕೆರೆಯ ಬದಿಯ ದೇವರಕೊಂಡಕ್ಕೆ ಬಾ' ಎಂದು ತಿಳಿಸಿ ಪ್ರಸನ್ನಪ್ಪನಿಗೆ 'ನನ್ನ ಅಕ್ಕ ವೆಂಕಟೇಶ್ವರನ ದರ್ಶನಕ್ಕೆ ದೇವರಕೊಂಡಕ್ಕೆ ಬಂದಿದ್ದು ಅವಳನ್ನು ನೋಡಿಕೊಂಡು ಬರುವೆ' ಎಂದು ತಿಳಿಸಲು ಆತ ಹೊರಡಲು ಒಡಂಬಟ್ಟ. ಅವಳು ತುಸು ದೂರ ಹೋಗುವದರೊಳಗೆ ಮನದಲ್ಲಿ ಏನೋ ಅನುಮಾನ ಹುಟ್ಟಿ ಅವಳನ್ನು ಹಿಂದಕ್ಕೆ ಕರೆಯಿಸಿ ಬೆಳಿಗ್ಗೆ ಹೋಗಲು ಸೂಚಿಸಿದ. ಆದರೆ ಮರಳಿ ಬಂದ ವಸಂತಮ್ಮ ದೊರೆ ಮಲಗಿದ್ದುದನ್ನು ಕಂಡು ತನ್ನ ಒಳಸಂಚು ರಾಜನಿಗೆ ತಿಳಿದಿದೆ ಎಂದು ಬಗೆದು ಮುಂದಿನ ಭವಿಷ್ಯಕ್ಕೆ ಹೆದರಿ ಅರ್ಧ ರಾತ್ರಿಯಲ್ಲಿ ಚೂರಿಯಿಂದ ಪ್ರಸನ್ನಪ್ಪನನ್ನು ಇರಿದು ಕೊಂದಳು. ಈ ಸುದ್ದಿ ಬುಕ್ಕಪಟ್ಟಣದಲ್ಲಿರುವ ಪ್ರಸನ್ನಪ್ಪನ ತಮ್ಮ ಪವಾಡಪ್ಪನಿಗೆ ತಲುಪಲು ಆತ ವ್ಯಥಿತನಾಗಿ ಅನಂತಪುರಕ್ಕೆ ಬಂದು ಆಡಳಿತದ ಜವಾಬ್ದಾರಿಯನ್ನು ಹೊತ್ತನು.

ಕ್ರಿ.ಶ. ೧೭೨೦ರ ವೇಳೆಗೆ ಅನಂತಪುರವು ಕಡಪ ನವಾಬರ ಆಡಳಿತಕ್ಕೆ ಒಳಪಟ್ಟಿತು. ಪವಾಡಪ್ಪನ ಆಸ್ಥಾನದಲ್ಲಿದ್ದ ರಾಮಜಿ ಎಂಬ ಅಧಿಕಾರಿ ನವಾಬನ ಪ್ರಭಾವಕ್ಕೆ ಒಳಗಾಗಿ ರಾಜ್ಯವನ್ನು ನವಾಬರಿಗೆ ವಹಿಸಿ ಕೊಡಲು ಯೋಜಿಸಿದ. ರಾಮಾಜೀ ಪ್ರೇರಣೆಯಂತೆ ನವಾಬ ಕೆಲ ಸೈನ್ಯ ಕಳಿಸಿದ. ಸೇನಾನಿಗಳು ಪವಾಡಪ್ಪನನ್ನು ಬಂಧಿಸಿದರು. ಮುಂದೆ ನವಾಬನ ಸೈನ್ಯಕ್ಕೂ ಪವಾಡಪ್ಪನ ಸೈನ್ಯಕ್ಕೂ ಹೋರಾಟವಾಗಿ ನವಾಬನ ಬಹು ಸಂಖ್ಯೆಯ ಸೈನಿಕರು ಹತರಾದರು. ಪವಾಡಪ್ಪ ರಾಮಜಿಯನ್ನು ಸ್ವಾಮಿ ದ್ರೋಹಿ ಎಂದು ಘೋಷಿಸಿ ಅವನ ನಾಲಿಗೆಯನ್ನು ಕತ್ತರಿಸಿದ. ಈ ಅಂಗ ಹೀನತೆ ಯಿಂದ ಯಾವ ಅರ್ಥವಿಲ್ಲವೆಂದರಿತು ರಾಮಜಿ ತನ್ನ ನಾಲಿಗೆಯನ್ನು ಬುಡ ಸಹಿತ ಕತ್ತರಿಸಿಕೊಂಡು ಪ್ರಾಣ ಬಿಟ್ಟ. ಈ ಕ್ರೂರ ಕೊಲೆಯಿಂದ ತಿಂಡಿ ತೀರ್ಥ ತ್ಯಜಿಸಿದ ಪವಾಡಪ್ಪ ಪಾಪ ಪರಿಹಾರಾರ್ಥವಾಗಿ ಗೋಕರ್ಣ ಸಂದರ್ಶನ ಮಾಡಲು ಹೊರಟ. ಅನಂತಪುರ ದಿಂದ ತುಸು ದೂರದಲ್ಲಿ ಪೆದ್ದಂಪಳೆಯೆಂಬಲ್ಲಿ ತನ್ನ ಕುತ್ತಿಗೆಯನ್ನು ತಾನೇ ಹಿಸುಕಿಕೊಂಡು ಪ್ರಾಣ ತ್ಯಾಗ ಮಾಡಿದ. ಕ್ರಿ.ಶ. ೧೭೩೭ರಲ್ಲಿ ಮರಣ ಹೊಂದಿದ ಪವಾಡಪ್ಪನನ್ನು ಅನಂತ ಸಾಗರದ ಹೊಸ ಟ್ಯಾಂಕಿನ ಪಶ್ಚಿಮಕ್ಕಿರುವ ನಿಡುಮಾಮಿಡಿ ಸ್ವಾಮಿಯ ಮಠದಲ್ಲಿ ಅಂತ್ಯಕ್ರಿಯೆ ಜರುಗಿಸಿ ಸಮಾಧಿ ಮಾಡಲಾಯಿತು.

ಪ್ರಸನ್ನಪ್ಪ ನಾಯಡುನ ಮಗ ರಾಮಪ್ಪನಾಯಡು ಸಮೀಪದಲ್ಲಿರದ್ದರಿಂದ ಪವಾಡಪ್ಪ ನಾಯಡುನ ಮಗ ಸಿದ್ದಪ್ಪನಾಯಡುವಿಗೆ ೧೭೩೮ರಲ್ಲಿ ಪಟ್ಟಗಟ್ಟಲಾಯಿತು. ಈತ ತುಂಬ ದುರ್ಮಾರ್ಗಿಯಾಗಿದ್ದ. ಆತನ ಕಾಟ ತಡೆಯಲಾರದೆ ಜನ ಹೊಸೂರಿನಲ್ಲಿದ್ದ ರಾಮಪ್ಪನನ್ನು ಕರೆತಂದರು. ರಾಮಪ್ಪನ ಆಗಮನದ ಸುದ್ದಿ ಕೇಳಿ ಬೊಕ್ಕಸದ ಧನಕನಕವನ್ನೆಲ್ಲ ತೆಗೆದುಕೊಂಡು ಸಿದ್ದಪ್ಪ ನಾಯಡು ಊರು ಬಿಟ್ಟ. ರಾಮಪ್ಪ ಅನಂತಪುರಕ್ಕೆ ಬಂದು ತಾನೇ ಅಧಿಪತಿಯಾದ. ಈ ವೇಳೆಗೆ ರಾಮವಲ್ಲಭ ರಾಜ್ಯ ಮದಾಂಧನಾಗಿದ್ದ. ಈತನ ಗುರುಗಳಾದ ಶ್ರೀ ಶೈಲ ಪೀಠದ ಜಗದ್ಗುರು ಮರಿಕರಿಬಸವರಾಜೇಂದ್ರ ದೇಸಿಕೇಂದ್ರ ಶಿವಾಚಾರ್ಯರಿಗೆ ದುರ್ಭಾಷೆಗಳನ್ನಾಡಿ ಮನ ನೋಯಿಸಿದ ಫಲವಾಗಿ ಅವನ ಬಂಧುಗಳೇ ಅವನನ್ನು ೧೭೫೮ರಲ್ಲಿ ಬಳ್ಳಾರಿಯಲ್ಲಿ ಕೊಂದರು.

ಮುಂದೆ ಬಳ್ಳಾರಿ ರಾಮಪ್ಪನೆಂಬವನು ಅನಂತ ಪುರದ ಒಡೆಯ ಸಿದ್ದಪ್ಪ ಮತ್ತು ಅವನ ಅಳಿಯ ಬಸಪ್ಪ ರನ್ನು ಬಂಧಿಸಿ ಬಳ್ಳಾರಿ ಗುಡ್ಡದ ಮೇಲಿರಿಸಿದನು. ರಾಮಪ್ಪನ ವಿಧವೆ ಹೆಂಡಿರು ಇತರ ಹೆಣ್ಣುಮಕ್ಕಳನ್ನು ಅನಂತಪುರದ ಮನೆಯಲ್ಲಿರಿಸಿ ಆ ಮನೆತನ ಎಲ್ಲ ಗಂಡು

ಮಕ್ಕಳನ್ನು ನಾಶಪಡಿಸಿದನು. ಬೊಕ್ಕಸ, ಆಯುಧ, ಯುದ್ಧ ಸಾಮಗ್ರಿ ಇತರ ಸಂಪತ್ತನ್ನು ಬಳ್ಳಾರಿಗೆ ರವಾನಿಸಿದನು. ೪ ತಿಂಗಳುಗಳಿಂದ ಬಂಧಿತರಾದ ಈ ಈರ್ವರು ಬಂಧಿಖಾನೆಯ ಅಧಿಕಾರಿಗಳಿಂದ ಜೀವದಾನ ಪಡೆದು ಹಿರೇಹಾಳುಗ್ರಾಮಕ್ಕೆ ಬಂದರು. ಅಲ್ಲಿ ಬಲಿಜಾ ಜಾತಿಯ ಮನುಷ್ಯನೊಬ್ಬ ಇವರಿಬ್ಬರಿಗೆ ಆಶ್ರಯವಿತ್ತು ಮರಾಠಾ ಮುಖ್ಯಸ್ಥನಾದ ಮರಾರಿ ರಾವನ ಅಮೀನ ನಾದ ಶಿವಪ್ಪನಿಗೆ ಇವರನ್ನು ಒಪ್ಪಿಸಿದ.

ಕ್ರಿ. ಶ. ೧೭೭೫ರ ವೇಳೆಗೆ ಶ್ರೀರಂಗಪಟ್ಟಣ ವನ್ನಾಳುತ್ತಿದ್ದ ಟೀಪೂವಿನಿಂದ ಈ ಪಾಳೆಯಗಾರಿಕೆ ಸಂಪೂರ್ಣ ನಾಶವಾಯಿತು. ಕೊನೆಯ ಪಾಳೆಯಗಾರ ಸಿದ್ದಪ್ಪನಾಯಡುಗೆ ಶ್ರೀರಂಗಪಟ್ಟಣದಲ್ಲಿ ತಿಂಗಳಿಗೆ ಎರಡುನೂರು ಕಂಠಿರಾಯ ಪಗೋಡಾ ನಾಣ್ಯಗಳ ಸಂಬಳದ ಮೇಲೆ ಎರಡು ಸಾವಿರ ಕೆಲಸಗಾರರನ್ನು ನೋಡಿಕೊಳ್ಳುವ ಕೆಲಸಕ್ಕೆ ನಿಯಮಿಸಿ ಅದಕ್ಕೆ ಬೇಕಾದ ಅಧಿಕಾರ ಕೊಟ್ಟು. ಮೈಸೂರಿನ ಪಕ್ಕದಲ್ಲಿ ನಸರಾಬಾದ ಕಟ್ಟುವಂತೆ ನೇಮಿಸಿದ. ಕಾಲಾಂತರದಲ್ಲಿ ಇಂಗ್ಲೀಷರ ಆಳ್ವಿಕೆ ಒಳಪಟ್ಟ ಈ ಮನೆತನ ಕರ್ನಲ್ ಮನ್ರೋ, ಟ್ರೀವರ್ಸ ಗಹಗನ್ ಮುಂತಾದ ಅಧಿಕಾರಿಗಳು ಇವರ ಮೇಲ್ವಿಚಾರಣೆ ಕೈಕೊಂಡರು. ಮುಂದೆ ಈ ಮನೆತನಕ್ಕೆ ವಾರಸುದಾರರಿಲ್ಲದಂತಾಗಲು ಹಿಂದೆ ಈ ವಂಶದ ಕೆಲ ಮನೆತನಗಳು ವಿಜಾಪುರದಲ್ಲಿದ್ದವು. ಆ ಮನೆತನದ ಒಬ್ಬ ತರುಣನನ್ನು ತಂದು ವಾರಸುದಾರನನ್ನಾಗಿ ಪಟ್ಟ ಗಟ್ಟಲು ಮನ್ರೋನ ಒಪ್ಪಿಗೆ ಪಡೆದರು. ಬಳಗ ನಾಯಕನ ಪರಿವಾರದ ಸಿದ್ದರಾಮಪ್ಪ ಎಂಬ ಬಾಲಕ ನನ್ನು ಆರಿಸಿ ಕರೆದುಕೊಂಡು ಬಂದರು. ಅವನಿಗೆ ಮಾಶಾಸನವನ್ನು ಕೊಡುವದರ ಮೂಲಕ ಆಂಗ್ಲ ಅಧಿಕಾರಿಗಳು ಈ ಮನೆತನವನ್ನು ಉಳಿಸಿಕೊಂಡು ಬಂದರು.

'ತಾಮ್ರ ಶಾಸನದಲ್ಲಿ ಹಂಡೆ ಪಾಳೆಯಗಾರರು' ಲೇಖನ ಬರೆದ ಟಿ. ಶಂಭುಲಿಂಗಪ್ಪ ಅವರು 'ಹಂಡೆ ಪಾಳೆಯಗಾರರ ಮನೆತನ ಕೇವಲ ವಿಜಯನಗರ ಅರಸರ ಕಾಲದ್ದಲ್ಲ. ಹಂಡೆಯ ಪಾಳೆಯಗಾರರು ಅದ ಕ್ಕಿಂತ ಪೂರ್ವದಲ್ಲಿ ಎಂದರೆ ಹೊಯ್ಸಳರ ಕಾಲದಲ್ಲಿಯೇ ಅಸ್ತಿತ್ವದಲ್ಲಿದ್ದರು. ಹೊಯ್ಸಳರ ನಿಷ್ಠಾವಂತ ಸೇವಕ ರಾಗಿದ್ದರು. ಮೇಲಾಗಿ ರಾವುತರು. ಹೊಯ್ಸಳರ ಪರ ವಾಗಿ ಯುದ್ಧಗಳಲ್ಲಿ ಗೆದ್ದು ಬಿರುದು ಬಾವಲಿಗಳನ್ನು ಪಡೆಯುತ್ತಿದ್ದರು ಎಂದು ಹೇಳುತ್ತ ಅದಕ್ಕೆ ನಿದರ್ಶನ ವಾಗಿ ಒಂದು ತಾಮ್ರ ಶಾಸನದಲ್ಲಿಯ ವಿಷಯ ವಿವರಿಸಿರುವರು. ಮುಮ್ಮಡಿ ದಳವಾಯಿ ರಂಗರಾವುತ ನೆಂಬುವನು ಬಾರಕೂರ ಯುದ್ಧವೊಂದರಲ್ಲಿ ಗೆದ್ದು ಬಂದು ಎರಡನೆಯ ವೀರಬಲ್ಲಾಳನಿಂದ ಬಿರುದು ಬಾವಲಿಗಳನ್ನು ಪಡೆದುದರ ನಿಜಾಂಶಕ್ಕೆ ಇಂಬು ದೊರೆಯುತ್ತಿದೆ. ಅಷ್ಟೇ ಅಲ್ಲ ಇವರ ಮೂಲ ನಿವಾಸ ವಿಜಯನಗರ ಅರಸರ ಕಾಲದ್ದಾಗಲಿ ಇಲ್ಲವೇ ವಿಜಾಪುರ ಜಿಲ್ಲೆಯ ಮುತ್ತಗಿ ಗ್ರಾಮವಾಗಲಿ ಅಲ್ಲ, ಅದಕ್ಕೆ ಸಾಕ್ಷಿ ಯಾಗಿ ದೊರೆತ ಈ ತಾಮ್ರಶಾಸನ ೧೧೯೪ಳಕ್ಕೆ ಸಂಬಂಧಿ ಸಿದ್ದು, ರಂಗರಾವುತ ಬಾರಕೂರು ಯುದ್ಧದಲ್ಲಿ ಗೆದ್ದು ಬಂದುದರಿಂದ ಅವನ ಪರಾಕ್ರಮಕ್ಕೆ ಮೆಚ್ಚಿ ಅವನ ಇಚ್ಛೆಯಂತೆ ಒಂದು ದೇವಾಲಯ ಹಾಗೂ ನಾಲ್ಕು ಹಳ್ಳಿಗಳನ್ನು ಅವನಿಗೆ ಉಂಬಳಿಯಾಗಿ ಕೊಟ್ಟಿರುವ ದತ್ತಿ ಶಾಸನವಿದು ಎಂದು ತಿಳಿಸಿರುವರು. ಶಾಸನದಲ್ಲಿ ಉಕ್ತವಾದ ಶ್ರೀ ರಂಗನಾಥ ದೇವಾಲಯ ಬೆಟ್ಟದ ಮೇಲೆ ಪೂರ್ವಕ್ಕೆ ಅಭಿಮುಖವಾಗಿ ಗುಡದಳ್ಳಿಯ ಸಮೀಪದಲ್ಲಿ ಈಗಲೂ ರಾರಾಜಿಸುತ್ತದೆ. ಈಗಲೂ ಶ್ರೀ ರಂಗನಾಥ ಸ್ವಾಮಿಯ ಪೂಜಾರಿಗಳು ದೇವರ ಜಾತ್ರೆಯಲ್ಲಿ ಶಾಸನದಲ್ಲಿ ಉಕ್ತವಾದ ಗಂಟೆ, ಸರ್ಪಿಣಿ ನಂಟಿ, ಮುಂತಾದವುಗಳ ಉಪಯೋಗವಾಗುತ್ತಿರು ವುದು ಇಂದಿಗೂ ಕಾಣಬಹುದು. ಈಗಲೂ ಉದ್ದವಾದ ಈಟಿ, ಭರ್ಜಿ, ಖಡ್ಗ ಇತ್ಯಾದಿ ಉಪಕರಣಗಳನ್ನು ಕಾಣ ಬಹುದು. ಈ ವಿವರಣೆಯನ್ನು ನೀಡಿದ ಶ್ರೀಯುತರು ಈ ಕಾರಣಗಳಿಂದ ಇದು ನಿಜ ಶಾಸನವೆನ್ನ ಬಹುದೇನೋ ? ವಸ್ತು ವಾಸ್ತವದ್ದಾಗಿದೆ ; ಶಾಸನ ಕೂಟವೇನೋ ? ಸಂಶೋಧಕರು ನಿರ್ಧರಿಸಲಿ ಎಂಬ ಸಂಶಯವನ್ನೆತ್ತಿರುವರು. ಜೊತೆಗೆ ಈ ತಾಮ್ರಶಾಸನ ವೀಕ್ಷಿಸಿದ ಶ್ರೀ ಸೀತಾರಾಮ ಜಹಗೀರದಾರರು ಕೃತಕ ವೆಂದು ತಿಳಿಸಿರುವರು. ಈ ಹಿನ್ನೆಲೆಯಲ್ಲಿ ಹಂಡೆ ಪಾಳೆಯಗಾರರ ಮೂಲವನ್ನು ಹೊಯ್ಸಳ ಕಾಲಕ್ಕೆ ಒಯ್ಯಬೇಕಾದರೆ ಇನ್ನೂ ಕೆಲ ದಾಖಲಾತಿಗಳ ಆವಶ್ಯ ಕತೆ ಇದೆ. ಅಲ್ಲಿಯವರೆಗೆ ಈಗ ದೊರೆತ ಕೈಫಿಯತ್ತು, ತೆಲುಗು ಕೃತಿಗಳ ಆಧಾರದ ಮೇಲೆ ಈ ಮನೆತನವನ್ನು ವಿಜಯನಗರ ಕಾಲಕ್ಕೆ ನಿಗದಿಗೊಳಿಸುವುದು ಸೂಕ್ತ.

ಎಂ. ಚಿದಾನಂದಮೂರ್ತಿ*

# ಮುರಿಗೆಯ ಶಾಂತವೀರರ ಜೊತೆ ಶಿವಾಜಿ ಭೇಟಿ

ವೀರಶೈವ ಧರ್ಮದ ಇತಿಹಾಸದಲ್ಲಿ ಹದಿನೇಳನೇ ಶತಮಾನದ ಕೊನೆ ಹದಿನೆಂಟನೇ ಶತಮಾನದ ಆದಿ ಕಾಲದಲ್ಲಿ ಕಾಣಿಸಿಕೊಂಡ ಐದು "ಸಮಯ"[1] ಭೇದಗಳಲ್ಲಿ (ಕೆಂಪಿನ ಸಮಯ, ಕುಮಾರ ಸಮಯ, ಸಂಪಾದನಾ ಸಮಯ, ಚೀಲಾಳ ಸಮಯ ಮತ್ತು ಮುರಿಗಾ ಸಮಯ) ಪ್ರಮುಖವಾದುದು. ಮುರಿಗೆ (ಗಾ) ಸಮಯ, ಮುರಿಗೆ ಸಮಯದ ಹೆಸರಿಗೆ ಕಾರಣಕರ್ತರಾದ ಮುರಿಗಾ ಶಾಂತವೀರ ದೇಶಿಕೇಂದ್ರರ ಬದುಕಿನ ಸಂಕ್ಷಿಪ್ತ ಚಿತ್ರಣವನ್ನು (ಲಿಂಗೈಕ್ಯ : ೭–೫–೧೭೦೩) ಅವರ ಶಿಷ್ಯ ಇಮ್ಮಡಿ ಮುರಿಗಾ ಗುರುಸಿದ್ಧರು ಕೊಟ್ಟಿದ್ದಾರೆ. "ಮುರಿಗಾ ತಾರಾವಳಿ"[2] ಎಂಬ ಇಪ್ಪತ್ತೇಳು ಪದಗಳಿರುವ ಗುರುಸಿದ್ಧರ ಕೃತಿಯು ಮುರಿಗೆಯ ಶಾಂತವೀರರು ಒಬ್ಬ "ಜಂಗಮ"ರಾಗಿ ಲೋಕ ಸಂಚಾರವನ್ನು ಮಾಡಿ ಅಂತಿಮವಾಗಿ ಚಿತ್ರದುರ್ಗಕ್ಕೆ ಬಂದು ನೆಲಸಿದುದನ್ನು ವಿವರಿಸುತ್ತದೆ. ಅವರು (ಶಾಂತವೀರರು) ತೋಂಟದ ಸಿದ್ಧಲಿಂಗಯತಿಗಳ (ಕ್ರಿ.ಶ. ೧೫೪೦) "ಜಂಗಮ" ಪರಂಪರೆಯನ್ನು ಮುಂದುವರಿಸಿದ ಕಟ್ಟಿಗೇ ಹಳ್ಳಿ ಸಿದ್ಧಲಿಂಗ ಸ್ವಾಮಿಗಳ ಶಿಷ್ಯರು, ಶಾಂತವೀರರು ಮೈಸೂರು, ಭಾಗ್ಯನಗರ (ಗೋಲ್ಕೊಂಡ–ಹೈದರಾಬಾದ್), "ಸುಲೇಗಾವಿ", (ಬೆಳಗಾವಿ ಜಿಲ್ಲೆ) ಗದಗ (ಧಾರವಾಡ ಜಿಲ್ಲೆ) ಸೋದೆ (ಉತ್ತರ ಕನ್ನಡ ಜಿಲ್ಲೆ) ಈ ಊರುಗಳಿಗೆ ಭೇಟಿ ಕೊಟ್ಟು ಭಕ್ತರನ್ನು ಅನುಗ್ರಹಿಸುತ್ತಾರೆ. ಅವರು ಸೋದೆಯಲ್ಲಿದ್ದಾಗ ಚಿತ್ರದುರ್ಗದ ಪಾಳೇಗಾರ ಕಸ್ತೂರಿ ಭರಮಪ್ಪ ನಾಯಕನು ಚಿತ್ರದುರ್ಗಕ್ಕೆ ಆಹ್ವಾನಿಸುತ್ತಾನೆ. ಆ ಆಹ್ವಾನವನ್ನು ಒಪ್ಪಿದ ಶಾಂತವೀರರು ಗುತ್ತೊಳಲು (ಧಾರವಾಡ ಜಿಲ್ಲೆ ಹಾವೇರಿ ತಾಲೂಕಿನ ಗುತ್ತಲು), ಹಾವನೂರು,

* ನಂ. ೬/ಎ, ಮಿಂಚು, ೪ನೆಯ ಅಡ್ಡರಸ್ತೆ, ೧೧ನೆಯ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-೫೬೦ ೦೪೦

1 "ಸಮಯ"ವೆಂದರೆ ಒಪ್ಪಿತ ವ್ಯವಸ್ಥೆ, ರೂಢಿಬದ್ಧ ಕಾನೂನು, ಎಲ್ಲರೂ ಒಪ್ಪಿರುವ ನಿಯಮ ಅಥವಾ ಕಟ್ಟು ಪಾಡು. ಜಾತಿ, ಮತ ಎಂದೂ ಆಗಬಹುದು. ಚಿತ್ರದುರ್ಗದ ಶ್ರೀ ಚಿನ್ಮೂಲಾದ್ರಿ ಮಠವು "ಮುರಿಗಾ ಸಮಯ"ಕ್ಕೆ ಸೇರಿದ್ದು. ಮುರಿಗಾ ಶಾಂತವೀರರ ಐವರು ಶಿಷ್ಯರಲ್ಲಿ (ಕೆಂಪಯ್ಯ, ಕುಮಾರಯ್ಯ, 'ಸಂಪಾದನೆ' ಎಂಬ ವಿಶೇಷಣದ ಒಬ್ಬ, ಚೀಲಾಳಯ್ಯ, ಗುರುಸಿದ್ದಯ್ಯ) ಭಿನ್ನಾಭಿಪ್ರಾಯಗಳು ಮೂಡಿ ಮೊದಲ ನಾಲ್ವರು ವಿರಕ್ತ ಸಂಪ್ರದಾಯದ ಅವರ ಹೆಸರಿನ "ಸಮಯ"ಗಳಿಗೆ ಕಾರಣಕರ್ತರಾದರೆಂದೂ, ಚಿತ್ರದುರ್ಗದ ಮಠ ಸ್ಥಾಪಕರಾದ ಮುರಿಗಾ ಶಾಂತವೀರರ ಶಿಷ್ಯ 'ಮುರಿಗಾ' ಗುರುಸಿದ್ಧರು ಗುರುಗಳ ಬಳಿಕ ಅಲ್ಲಿನ ಪೀಠಕ್ಕೆ ಅಧಿಕಾರಿಗಳಾಗಿ 'ಮುರಿಗಾ' ಸಮಯಕ್ಕೆ ಕಾರಣರಾದರೆಂದೂ ಹೇಳಲಾಗಿದೆ.

2 "ತಾರೆ"ಗಳು ಇಪ್ಪತ್ತೇಳು—"ತಾರಾವಳಿ" ಎಂಬುದು ಇಪ್ಪತ್ತೇಳು "ಪದ"ಗಳ ಗುಚ್ಛವಾಗಿರುವ ಒಂದು ಬಗೆಯ ಹಿಂದಿನ ಸಾಹಿತ್ಯ ಪ್ರಕಾರ. ತಾರಾವಳಿಗಳ ಮುಖ್ಯ ವಸ್ತು ಮಹಾಪುರುಷರ ಸ್ತೋತ್ರ ಗುಣ ಸಾಧನ ; ಅಥವಾ ಜಾತ್ರೆಯಂತಹ ಧಾರ್ಮಿಕ ಘಟನೆಗಳ ವರ್ಣನೆ. ಐತಿಹಾಸಿಕ ಅಧ್ಯಯನಗಳಿಗೆ ತಾರಾವಳಿಗಳು ಚಿನ್ನದ ಗಣಿಗಳಿದ್ದಂತೆ. ಶ್ರೀ ಎಂ.ಎಸ್. ಬಸವರಾಜಯ್ಯನವರು ಮೂರು ಸಂಪುಟಗಳಲ್ಲಿ ಇಪ್ಪತ್ತೊಂದು ತಾರಾವಳಿಗಳನ್ನು (ಶಿವ ಧರ್ಮಗ್ರಂಥಮಾಲಾ, ತಿಪಟೂರು) ಪ್ರಕಟಿಸಿದ್ದಾರೆ. "ಮುರಿಗೆ ತಾರಾವಳಿ"ಯು ಒಂದನೇ ಸಂಪುಟದಲ್ಲಿದೆ.

ಲಕ್ಷ್ಮೇಶ್ವರಗಳಿಗೆ (ಅದೇ ಜಿಲ್ಲೆ) ಭೇಟಿ ಕೊಟ್ಟು ತುಂಗಭದ್ರೆಯನ್ನು ದಾಟಿ ಬೇತೂರು, ಅಣಜಿ ಮೂಲಕ ಕಳ್ಳಹುಣಿಸೆ ಗ್ರಾಮಕ್ಕೆ (ಈಗಿನ ಲಕ್ಷ್ಮೀ ಸಾಗರ. ಈ ಮೂರು ಚಿತ್ರದುರ್ಗ ಜಿಲ್ಲೆಯಲ್ಲಿವೆ) ಬರುತ್ತಾರೆ. ಭರಮಪ್ಪ ನಾಯಕನು ಕಳ್ಳಹುಣಿಸೆಯಲ್ಲಿ ಅವರನ್ನು ಭಕ್ತಿಯಿಂದ ಸ್ವಾಗತಿಸಿ ಚಿತ್ರದುರ್ಗಕ್ಕೆ ಕರೆದೊಯ್ದು ಬೆಟ್ಟದ ಮೇಲೆ ತಾನು ನಿರ್ಮಿಸಿದ್ದ ವಿಶಾಲವಾದ ಮಠದಲ್ಲಿ ನೆಲಸಲು ಕೇಳಿಕೊಂಡನು. ಬೆಟ್ಟದ ಮೇಲಿನ ಮಠವೇ ಚಿತ್ರದುರ್ಗದ "ಮುರಿಗಾ" ಸಂಸ್ಥಾನದ ಮೂಲಸ್ಥಳ. ಮುರಿಗಾ ಶಾಂತವೀರರೇ ಮುರಿಗಾ ಮಠದ (ಮುರುಘಾ ಮಠದ) ಮೂಲ ಪ್ರವರ್ತಕರು. ಕೆಲವು ಕಾಲದ ಬಳಿಕ ಮುರಿಗಾ ಶಾಂತವೀರರು ಅಲ್ಲೇ ಲಿಂಗೈಕ್ಯರಾದರು. (ಕ್ರಿ.ಶ. ೧೭೦೩). ಅವರ ಬಳಿಕ ಅವರ ಶಿಷ್ಯ ಇಮ್ಮಡಿ ಮುರಿಗಾ ಗುರುಸಿದ್ಧರು ಚಿತ್ರದುರ್ಗದ ಮುರುಘಾ ಮಠದ ಉತ್ತರಾಧಿಕಾರಿಗಳಾದರು, (ಇವರು ಲಿಂಗೈಕ್ಯರಾದುದು ಶಿವಮೊಗ್ಗ ಜಿಲ್ಲೆಯ ಆನಂದಪುರದಲ್ಲಿ—ಅಲ್ಲೂ ಒಂದು ಮುರುಘಾ ಮಠವಿದೆ.)[3]

ಮೇಲೆ ನೋಡಿದಂತೆ, ಮುರಿಗಾ ಶಾಂತವೀರರು ಭಾಗ್ಯ ನಗರದ (ಗೋಲ್ಕೊಂಡ – ಹೈದರಾಬಾದ್) ಕುತುಬ್ ಶಾ ಪಾದಶಾಹಿಯ ಆನೆಯ ರೋಗವನ್ನು ಗುಣಪಡಿಸಿ ಆತನ ಗೌರವವನ್ನು ಸ್ವೀಕರಿಸಿ "ಸುಲಿಗಾವಿ"ಗೆ ಬರುತ್ತಾರೆ. ಶಾಂತವೀರರ ಪ್ರವಾಸದ ದಾರಿಯನ್ನು ಗಮನಿಸಿದರೆ ಆ "ಸುಲಿಗಾವಿ"ಯು ಬಹುಶಃ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಈಗಿನ "ಸುಲಗಾವ್" ಎಂಬ ಹೆಸರಿನ ಊರೇ ಇರಬೇಕು. ಸುಲಿಗಾವಿಯಿಂದ (ಸುಲಗಾವ್) ಅವರನ್ನು ಭಕ್ತರು ಗದುಗಿಗೆ ಕರೆದುಕೊಂಡು ಹೋಗುತ್ತಿರುವಾಗ ದಾರಿಯಲ್ಲಿ ಶಿವಾಜಿಯ ಸೈನಿಕರು ಆ ಭಕ್ತ ಸಮೂಹವನ್ನು ಹೆದರಿಸಿ ಅವರನ್ನು ಸುಲಿಯಲು ಯತ್ನಿಸುತ್ತಾರೆ. ಆಗ ಮುರಿಗಾ ಶಾಂತವೀರರು ಶಿವಾಜಿಯನ್ನು ಕರೆಯಿಸಿ ಆತನಿಗೆ ಕಮಲವನ್ನಿತ್ತು ಆಶೀರ್ವದಿಸಿ ಎಲ್ಲವನ್ನೂ ಶಾಂತಗೊಳಿಸುತ್ತಾರೆ. ಅವರ ಪ್ರಯಾಣವು ನಿರ್ವಿಘ್ನವಾಗಿ ಮುಂದುವರಿಯುತ್ತದೆ.[4]

ಈ ಘಟನೆ ನಡೆದುದು ಕ್ರಿ. ಶ. ೧೬೭೭ರಲ್ಲಿ ಊಹಿಸಲು ಪ್ರಬಲವಾದ ಕಾರಣಗಳಿವೆ. ಆ ವರ್ಷ ನಡೆದ ಒಂದು ಯುದ್ಧವು ಕರ್ನಾಟಕದ ಚರಿತ್ರೆಯಲ್ಲಿ ಅವಿಸ್ಮರಣೀಯವಾದದು. ಶಿವಾಜಿ ಮಹಾರಾಜನು ದಕ್ಷಿಣ ಭಾರತದಲ್ಲಿ ಕರ್ನಾಟಕ, ರಾಯಲಸೀಮೆ, ತಮಿಳು ನಾಡುಗಳ ಮೇಲೆ ದಂಡೆತ್ತಿ ಹೋದನು. ಮೈಸೂರಿನ ದೊರೆ ಚಿಕ್ಕ ವೀರ ರಾಜ ಒಡೆಯರ ಜೊತೆ ಯುದ್ಧ ನಡೆಯಿತು. ಕೆಳದಿಯ ರಾಣಿ ಚನ್ನಮ್ಮಾಜಿಯಿಂದ ಕಪ್ಪ ವಸೂಲಿಮಾಡಿದನು[5] ಅಲ್ಲಿಂದ ಶಿವಾಜಿಯು ಹಂಪೆಗೆ ಹೋಗಿ ಅಲ್ಲಿ ಭಗ್ನ ಗೊಂಡಿದ್ದ ದೇವಾಲಯ

---

3 ಡಾ. ಎಸ್. ವಿದ್ಯಾಶಂಕರರು "ಇಮ್ಮಡಿ ಮುರಿಗಾ ಗುರುಸಿದ್ಧ ಶಿವಯೋಗಿಯ ಕೃತಿಗಳ"ಲ್ಲಿಯೂ (ಸಂಪುಟ I ಬೃಹನ್ಮಠ ಸಂಸ್ಥಾನ, ಚಿತ್ರದುರ್ಗ) "ಮುರಿಗೆ ತಾರಾವಳಿ"ಯನ್ನು ಪ್ರಕಟಿಸಿದ್ದಾರೆ. ಮುರಿಗೆ ಶಾಂತವೀರ ಸ್ವಾಮಿಗಳ ಹೆಸರಿನ ಪೂರ್ವಾರ್ಧದ ವಿಶೇಷಣವು "ಮುರಿಗೆ"ಯೇ ಹೊರತು "ಮುರುಘಾ" ಅಲ್ಲ. ಶಾಂತವೀರ ಸ್ವಾಮಿಗಳು ತಲೆಗೆ ಮುರಿಗೆ ಮಾಡಿದ ವಸ್ತ್ರವನ್ನು ಸುತ್ತುತ್ತಿದ್ದುದರಿಂದ ಅವರು ಮುರಿಗೆ ಶಾಂತವೀರರಾದರೆಂದು ಪ್ರಸಿದ್ಧರಾದರು ಎಂಬ ಮಹಾದೇವ ಕವಿಯ ಸೂಚನೆಯು (ಮೇಲಿನ ಸಂಪುಟ: ಪ್ರಸ್ತಾವನೆ ಪು. xxii) ಗಮನಾರ್ಹ. "ಮುರಿಗೆ" ವಿಶೇಷಣಕ್ಕೆ ಅದೇ ಕಾರಣ, ತಮಿಳಿನ "ಮುರುಗನ್" (=ಷಣ್ಮುಖ) ವಿನದಲ್ಲಿ "ರು" ಇರುವುದನ್ನು "ಮುರಿಗೆ"ಯಲ್ಲಿ "ರಿ" ಇರುವುದನ್ನೂ ಗಮನಿಸಬೇಕು. "ಮುರಿಗೆ"ಯು "ಮುರುಗ" ಆಗಬಹುದು—ಮೊದಲ ಅಕ್ಷರದ "ಉ" ಸ್ವರವು ಎರಡನೆಯ "ಇ" ಸ್ವರವನ್ನು "ಉ" ಆಗಿ ಪರಿವರ್ತಿಸಬಹುದು. ಆದರೆ "ಮುರುಗ"ವು "ಮುರಿಗೆ" ಆಗಲು ಸಾಧ್ಯವಿಲ್ಲ. ಆ ಕಾರಣ "ಮುರಿಗೆ" ಶಬ್ದಕ್ಕೂ ತಮಿಳು "ಮುರಗನ್ ಶಬ್ದಕ್ಕೂ ಪದ ಸಾಮ್ಯ ಬಿಟ್ಟರೆ ಯಾವುದೇ ಸಂಬಂಧವೂ ಇಲ್ಲ. ಮುರಿಗಾ ಮಠದ ಹಸ್ತಪ್ರತಿಗಳಲ್ಲೆಲ್ಲ "ಮುರಿಗಾ" ರೂಪವೇ ಇದೆ. (ಶ್ರೀ ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿ ಸೂಚಿ. ಸಂಪುಟ I ಸಂ: ಎಸ್. ಶಿವಣ್ಣ, ಚಿತ್ರದುರ್ಗ ೧೯೯೧ ಪು. ೩೭೪, ೩೭೯, ೩೪೧ ಇತ್ಯಾದಿ)

4 ಇಮ್ಮಡಿ ಮುರಿಗಾ ಗುರುಸಿದ್ಧ ಶಿವಯೋಗಿಗಳ ಕೃತಿಗಳು, ಪು. ೨೪೧

5 ಮುಂದೆ ಅದೇ ರಾಣಿಯು ಶಿವಾಜಿಯ ಮಗ ರಾಜಾರಾಮನು ಔರಂಗಜೇಬನ ದಾಳಿಯಿಂದ ಸಂತ್ರಸ್ತವಾಗಿ ಓಡಿ ಬಂದಾಗ ಅವನಿಗೆ ರಕ್ಷಣೆಯನ್ನು ನೀಡಿ ಔದಾರ್ಯವನ್ನು ಮೆರೆದಳು

ಗಳನ್ನು ಕಂಡು ಮುಮ್ಮಲ ಮರುಗಿದನು[6]. ವಿರೂಪಾಕ್ಷ ದೇವಾಲಯ, ಸುಂದರ ನದಿಯ ತಾಣ ಇವುಗಳಿಗೆ ಮನಸೋತ ಶಿವಾಜಿಯನ್ನು ಅಲ್ಲಿನ ಸ್ಥಳೀಕ ಜನ ಅಲ್ಲೇ ನೆಲಸಬೇಕೆಂದು ಒತ್ತಾಯಿಸಿದರು, ಆಗ ಶಿವಾಜಿಯು "ನಾನು ರಾಜಧಾನಿಗೆ ಹೋಗಿ ಸಿಂಭಾಜಿಯನ್ನು ರಾಜನನ್ನಾಗಿ ಮಾಡಿ **ರಾಜರಾಮನನ್ನು ಕರ್ನಾಟಕ ದಲ್ಲಿಟ್ಟು**[7] ನನ್ನ ಕೊನೆಯ ದಿನಗಳನ್ನು ತುಂಗಭದ್ರಾ ಸ್ನಾನ ಮತ್ತು ವಿರೂಪಾಕ್ಷ ದರ್ಶನಗಳಲ್ಲಿ ಕಳೆಯುತ್ತೇನೆ" ಎಂದು ಮಾತು ಕೊಡುತ್ತಾನೆ. ಹಂಪಿಯಿಂದ ಹೊರಟ ಶಿವಾಜಿಯು ಧಾರಾವಾಡದ ಬಳಿಯ ಯಾದವಾಡದಲ್ಲಿ ಬೀಡು ಬಿಡುತ್ತಾನೆ. ಯಾದವಾಡವು ಆಗ ಬೆಳವಡಿ ಪ್ರಾಂತ್ಯಕ್ಕೆ (ಬೆಳಗಾವ್ ಜಿಲ್ಲೆಯ ಬೈಲ ಹೊಂಗಲ ತಾಲೂಕು) ಸೇರಿತ್ತು. ಶಿವಾಜಿಯ ಸೇನೆಯಲ್ಲಿ ಐವತ್ತು ಸಾವಿರ ಸೈನಿಕರಿದ್ದರು. ಬೆಳವಡಿಯ ದೊರೆ ಈಶ ಪ್ರಭುವಿಗೆ ಶಿವಾಜಿಯನ್ನು ಸತ್ಕರಿಸುವ ಅಪೇಕ್ಷೆಯಿತ್ತು. ಅಷ್ಟರಲ್ಲಿ ಶಿವಾಜಿಯ ಸೈನಿಕರು ಬೆಳವಡಿಯ ಪ್ರಜೆಗಳ ದನಗಳನ್ನು ಹೊಡೆದುಕೊಂಡು ಹೋದರು. ಬೆಳವಡಿಯ ಪ್ರತಿನಿಧಿಯಾಗಿ ದಳವಾಯಿ ಸಿದ್ಧನಗೌಡ ಪಾಟೀಲನು ಶಿವಾಜಿಯ ಜೊತೆ ಸಂಧಾನಮಾಡಲು ಹೋದಾಗ ಶಿವಾಜಿಯ ಸೈನಿಕರು ಅವನನ್ನು ಅಪಮಾನಗೊಳಿಸಿದರು ಈಶಪ್ರಭು ಅನಿವಾರ್ಯವಾಗಿ ಯುದ್ಧಕ್ಕೆ ಅಣಿಯಾದನು. ಅವನ ಪತ್ನಿ ಮಲ್ಲಮ್ಮನು ತಾನು ತನ್ನ ಸ್ತ್ರೀ ಸೈನ್ಯವನ್ನು ತೆಗೆದುಕೊಂಡು ಯುದ್ಧಕ್ಕೆ ಹೋಗುವುದಾಗಿ ಹೇಳಿದಳು. ಅವಳ ಬಳಿ ಎರಡು ಸಾವಿರ ಸ್ತ್ರೀಯರ ಒಂದು ಸೈನ್ಯ ವಿತ್ತು. ಬೆಳವಡಿಯ ಸ್ತ್ರೀಸೈನ್ಯಕ್ಕೂ ಮರಾಠರ ಸೈನ್ಯಕ್ಕೂ ಯುದ್ಧವಾಗಿ ಮರಾಠರು ಸೋತರು. ಮರಾಠಲ್ಲಿ ಹತ್ತು ಹನ್ನೆರಡು ಜನ ಸತ್ತರು. ಮಲ್ಲಮ್ಮ ಪ್ರಜೆಗಳ ದನಗಳನ್ನು ಹಿಂದಿರುಗಿಸಿದಾಗ ಬೆಳವಡಿಯಲ್ಲಿ ವಿಜಯೋತ್ಸವ ನಡೆಯಿತು. ಸೋತ ಶಿವಾಜಿಗೆ ಕೋಪ ಬಂದು ಸೈನ್ಯವು ಬೆಳವಡಿಯನ್ನು ಸುತ್ತುವರಿ ಯಲು ಆಜ್ಞಾಪಿಸಿದನು. ಆಗ ನಡೆದ ಯುದ್ಧದಲ್ಲಿ ಈಶಪ್ರಭು ಗಾಯಗೊಂಡು ಕೆಳಗುರುಳಿದನು. ಮಲ್ಲಮ್ಮ ತನ್ನ ಸೇನೆಯೊಂದಿಗೆ ಬಂದು ಮರಾಠರನ್ನು ಓಡಿಸಿ ದಳು. ಮಲ್ಲಮನ ಕಡೆಯ ಶಾಂತಯ್ಯ ಎಂಬ ಬೆಳ ವಡಿಯ ಸರದಾರನು ಸನ್ಯಾಸಿಯ ವೇಷದಲ್ಲಿ ಬಂದು ಶಿವಾಜಿಗೆ ಜಗದಂಬೆಯೇ ಆಗಿರುವ ದ್ಯಾಮವ್ವ ಎಂಬ ದೇವತೆಯನ್ನು ನೀನು ಅರ್ಚಿಸಿದರೆ ಮಲ್ಲಮ್ಮನನ್ನು ಸೋಲಿಸಬಹುದೆಂದು ಆಸೆದೋರಿ ಉಪಾಯದಿಂದ ರಾತ್ರಿ ದ್ಯಾಮವ್ವನ ಗುಡಿಗೆ ಕರೆದೊಯ್ದನು. ಆ ರಾತ್ರಿ ಮಲ್ಲಮ್ಮ ಶಿವಾಜಿಯನ್ನು ದಾರಿಯಲ್ಲಿ ಅಡ್ಡಗಟ್ಟಿ ಮರಾಠ ಸರದಾರನನ್ನು ಕತ್ತಿಯಿಂದ ಹೊಡೆದಳು. ಶಿವಾಜಿಯು ಹೆದರಿ ಜಗದಂಬೆಯೇ ಹೆಣ್ಣು ರೂಪದಲ್ಲಿ ಬಂದಿದ್ದಾಳೆ ಎಂದು ಭ್ರಮಿಸಿ ಅವಳನ್ನು ಸ್ತೋತ್ರ ಮಾಡಿದನು. "ನಾನು ಜಗದಂಬೆ ಅಲ್ಲ, ಬೆಳವಡಿಯ ಮಲ್ಲಮ್ಮ. ನನ್ನ ಗಂಡನನ್ನು ಕೊಂದೆ, ಈಗ ನನ್ನ ಜೊತೆ ಹೋರಾಡು" ಎಂದು ಸವಾಲು ಹಾಕಿದಳು. ಅವಳು ಮಲ್ಲಮ್ಮನೆಂದು ತಿಳಿದ ಶಿವಾಜಿಯು ಕ್ಷಮೆ ಬೇಡಿದನು. ಇಬ್ಬರಿಗೂ ರಾಜಿಯಾಗುವಷ್ಟರಲ್ಲಿ ಮರಾಠ ಸೈನಿಕರು ಬೆಳವಡಿಯನ್ನು ಮುತ್ತಿದ್ದರು. ಮಲ್ಲಮ್ಮ ಕೋಟೆಗೆ ಹಿಂತಿರುಗಿ ಅವರನ್ನು ಓಡಿಸಿದಳು. ಶಿವಾಜಿಯೇ ಸ್ವತಃ ಬಂದು ಯುದ್ಧವನ್ನು ನಿಲ್ಲಿಸಲು ಆಜ್ಞೆ ಮಾಡಿ, ಮತ್ತೆ ಮಲ್ಲಮ್ಮನನ್ನು ಭೇಟಿ ಮಾಡಿದನು. ಹೂಲಿ ಗುರುಗಳು ಅವರಿಗೆ ರಾಜಿಮಾಡಿ ಅವರಿಬ್ಬರೂ ಸ್ನೇಹಿತ ರಾಗಿರುವಂತೆ, ಕಷ್ಟ ಕಾಲದಲ್ಲಿ ಪರಸ್ಪರರಿಗೆ ಸಹಾಯ ಮಾಡುವಂತೆ ಹೇಳಿ ಹರಸಿದರು.

---

6 ವಿಜಯನಗರ ಸಾಮ್ರಾಜ್ಯವು ನಾಶವಾದದು ಕ್ರಿ. ಶ. ೧೫೬೫ ರಲ್ಲಿ, ರಕ್ಕತಂಗಡಿ ಯುದ್ಧದಲ್ಲಿ ಎಂಬುದನ್ನು ಎಲ್ಲರೂ ಬಲ್ಲರು. ಹಂಪಿಯು ವಿಜಯನಗರ ಸಾಮ್ರಾಜ್ಯದ ರಾಜಧಾನಿ. ವಿಜಯನಗರ ಸಾಮ್ರಾಜ್ಯದ ಉದಯವಾದುದೇ ಸನಾತನ ಸಂಸ್ಕೃತಿಯ ರಕ್ಷಣೆಗಾಗಿ. ತಾನೂ ಅಂತಹ ಸಂಸ್ಕೃತಿ ರಕ್ಷಣೆಗೆ ತನ್ನ ಬಾಳನ್ನು ಮೀಸಲಿಡಬೇಕೆಂಬ ಶಿವಾಜಿಯ ಸಂಕಲ್ಪ ವನ್ನು ಹಂಪಿಯ ಅವನ ಭೇಟಿಯು ಇನ್ನೂ ದೃಢಗೊಳಿಸಿರಬೇಕು. ಹಂಪಿಯು ನಿಶ್ಚಿತವಾಗಿಯೂ ಶಿವಾಜಿಗೆ ಉತ್ತೇಜನ ಪ್ರಚೋದನೆಗಳನ್ನು ನೀಡಿದೆ.

7 ರಾಜಾರಾಮನು ಮುಂದೆ ಕೊಲ್ಲಾಪುರದ ಒಡೆಯನಾದನು. ಹದಿನೇಳನೇಯಶತಮಾನದ ಶಿವಾಜಿಯಪ್ರಕಾರ ಕೊಲ್ಲಾಪುರವು ಕರ್ನಾಟಕದಲ್ಲಿತ್ತು. (ಈಗ ಅದು ಮಹಾರಾಷ್ಟ್ರಕ್ಕೆ ಸೇರಿದೆ!) ಕೊಲ್ಲಾಪುರ ಜಿಲ್ಲೆಯ ಎಲ್ಲ ಶಾಸನಗಳೂ ಕನ್ನಡದಲ್ಲೆ ಇರುವುದು ಅದು ಹಿಂದೆ ಕರ್ನಾಟಕವೇ ಆಗಿತ್ತು ಎಂಬುದಕ್ಕೆ ವಿವಾದಾತೀತ ಸಾಕ್ಷಿಗಳು.

ಮೇಲಿನ ನಿರೂಪಣೆ "ಶಿವಾಜಿ ಮಲ್ಲಮ್ಮಾಜಿ ಸಮರೋತ್ಸವ" ಎಂಬ ಕನ್ನಡ ಲಿಪಿಯಲ್ಲಿರುವ ಮರಾಠಿ ಭಾಷೆಯ ಕೃತಿಯಲ್ಲಿ ದೊರಕುತ್ತದೆ. ಅದನ್ನು ಬರಸಿದವಳು ಶಿವಾಜಿಯ ಮಗ ರಾಜಾರಾಮನ ಹೆಂಡತಿ, ಕೊಲ್ಹಾಪುರದರಾಣಿ ತಾರಾಬಾಯಿ–ಅವಳು ತಾನೇ ಬೆಳವಡಿ ಮಲ್ಲಮ್ಮನನ್ನು ಕರೆಸಿ ಗೌರವಿಸುತ್ತಾಳೆ. ಎಂದರೆ "ಶಿವಾಜಿ ಮಲ್ಲಮಾಜಿ ಸಮರೋತ್ಸವವು" ಶಿವಾಜಿಯ ಮರಣದ (ಕ್ರಿ.ಶ. ೧೬೮೦) ಸ್ವಲ್ಪ ಕಾಲದಲ್ಲೇ, ಬೆಳವಡಿ ಮಲ್ಲಮನ ಜೀತವಿದ ಅವಧಿಯಲ್ಲೇ, ಶಿವಾಜಿಯ ಸೊಸೆಯ ಪ್ರೇರಣೆಯಿಂದ ರಚಿತವಾದ ಮತ್ತು ಅವಳಿಂದಲೇ ಬಹುಮಾನಿತವಾದ ಕೃತಿ. ಕರ್ನಾಟಕದ ಬೆಳವಡಿ ಮಲ್ಲಮ್ಮನಿಂದ ಶಿವಾಜಿಯು ಭಂಗಿತನಾದ ಸಂಗತಿಯು ಒಂದು ಐತಿಹಾಸಿಕ ಸತ್ಯ, ಅಲ್ಲದೆ, ಶಿವಾಜಿಯ ಸಮಕಾಲೀನ ಇಂಗ್ಲೀಷರ ವರದಿಯೂ ಅದನ್ನೇ ಪೋಷಿಸುತ್ತದೆ. ಆ ವರದಿ ಹೇಳುತ್ತದೆ—"He (Shivaj) has suffered more disgrace than ever he did from all power of the moghul or Deccan; he who hath conquered so many kingdoms is not able to reduce this woman Desai"[8]

ತಾರಾಬಾಯಿ ಕೊಲ್ಹಾಪುರದಲ್ಲಿ ಆಳಿದ್ದು ಕ್ರಿ.ಶ. ೧೭೦೦–೧೭೧೪ಳರಲ್ಲಿ ಶಿವಾಜಿಯು ಕಣ್ಮುಚ್ಚಿದ್ದು ಕ್ರಿ.ಶ. ೧೬೮೦ರಲ್ಲಿ. ಶಿವಾಜಿಯ ಕರ್ನಾಟಕ ದಂಡಯಾತ್ರೆಯು ಕ್ರಿ.ಶ. ೧೬೭೬ರಲ್ಲಿ ಆರಂಭವಾಗಿ ಕ್ರಿ.ಶ. ೧೬೭೮ರಲ್ಲಿ ಮುಕ್ತಾಯಗೊಂಡಿತು. ಮಲ್ಲಮ ಶಿವಾಜಿಯರ ಸಮರ ನಡೆದುದು ಕ್ರಿ.ಶ. ೧೬೭೮ರಲ್ಲಿ.[9]

"ಮುರಿಗೆ ತಾರಾವಳಿ"ಯಲ್ಲಿ ಉಲ್ಲೇಖವಾಗಿರುವ ಮುರಿಗೆ ಶಾಂತವೀರರು ಮತ್ತು ಶಿವಾಜಿಯರ ಭೇಟಿ ನಡೆದುದು. ಕ್ರಿ. ಶ. ೧೬೭೮ ರಲ್ಲಿ ಎಂದು ಸುಲಭವಾಗಿ ಊಹಿಸಬಹುದು ಏಕೆಂದರೆ, ಆ ವರ್ಷ ಮುರಿಗೆ ಶಾಂತವೀರರು ಇದ್ದ ಬೆಳಗಾವಿಯ ಪ್ರದೇಶದಲ್ಲಿ ಶಿವಾಜಿ ತನ್ನ ಸೈನ್ಯ ಸಮೇತನಾಗಿ ಕೆಲವು ಕಾಲ ಇದ್ದನು; ಅಷ್ಟೇ ಅಲ್ಲ, ಅವನ ಸೈನ್ಯವು, ಅದೇ ಬೆಳಗಾವಿ ಜಿಲ್ಲೆಯ ಜನರನು ಹಿಂಸಿಸಿ ಪಶುಸಂಪತ್ತನ್ನು ಅಪಹರಿಸಿತ್ತು ಬೆಳವಡಿ ಮಲ್ಲಮ್ಮನಿಗೂ ಶಿವಾಜಿಗೂ ನಡೆದ ಯುದ್ಧದ ಸಮಯದಲ್ಲಿಯೇ[10] (ಕ್ರಿ. ಶ. ೧೬೭೮) ಮುರಿಗೆ ಶಾಂತವೀರರು ಸೂಲಿಗಾವಿಯಿಂದ ಗದಗಿಗೆ ಭಕ್ತರ ಸಮೇತ ಹೋಗುವಾಗ ಶಿವಾಜಿಯ ಸೈನಿಕರ ಉಪಟಳಕ್ಕೆ ಸಿಲುಕಿದ್ದರೆಂದು ಊಹಿಸಲವಕಾಶವಿದೆ. ಹೀಗೆ "ಮುರಿಗೆ ತಾರಾವಳಿ"ಯು ಶಿವಾಜಿಯ ಕರ್ನಾಟಕ ಧಾಳಿಗೆ ಇನ್ನೊಂದು ಹೊಸ ಸಾಕ್ಷಿಯಾಗಿ ನಿಲ್ಲುತ್ತದೆ. ಇಮ್ಮಡಿ ಮುರಿಗಾ ಶಾಂತವೀರರು ಶಿವಾಜಿಯ ಗೌರವವನ್ನು ಸಂಪಾದಿಸುವಷ್ಟು ಹಿರಿಯರಾಗಿದ್ದರು; ದೊಡ್ಡವರನ್ನು ಗೌರವಿಸುವ ಬುದ್ಧಿಯನ್ನು ಶಿವಾಜಿಯು ಬೆಳಸಿಕೊಂಡಿದ್ದನು. ಮುರಿಗೆ ಶಾಂತವೀರರಂತಹ ಮಹಾತ್ಮರಿಂದ ಆರಂಭವಾಗುವ ಪರಂಪರೆಯ ಬಗ್ಗೆ ಚಿತ್ರದುರ್ಗದ ಮಹಾಸಂಸ್ಥಾನಕ್ಕೆ ಹೆಮ್ಮೆಯಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

---

8 ಮಲ್ಲಮ್ಮ ಶಿವಾಜಿಯರ ವಿಷಯಕವಾದ ಮೇಲಿನ ಇಡೀ ನಿರೂಪಣೆಯ ಆಕರ ಜಿ. ಎಸ್. ದೀಕ್ಷಿತ್ : ಶಿವಾಜಿ—ಮಲ್ಲಮಾಜಿ ಸಮರೋತ್ಸವ ಕೃತಿ ಪರಿಶೀಲನೆ ಸಂಶೋಧನ. (ಡಾ|| ಎಂ. ಚಿದಾನಂದಮೂರ್ತಿ ಅಭಿನಂದನ ಗ್ರಂಥ ಬೆಂಗಳೂರು ೧೯೯೧ ಸಂ : ಲಕ್ಷ್ಮಣ ತೆಲಗಾವಿ) ಪು. ೬೮೪-೬೯೨.

9 ಅದೇ.

10 ಚಿತ್ರದುರ್ಗದ ಮುರುಘಾ ಮಠದ ಹಸ್ತಪ್ರತಿಗಳ ಎರಡು ಪುಷ್ಪಿಕೆಗಳಲ್ಲಿ "ಸೂಲಿಗಾವಿ" ಉಲ್ಲೇಖ ಬರುವುದು ಸ್ವಾರಸ್ಯವಾಗಿದೆ. "ಸ್ವಸ್ತಿಸಮಸ್ತ ಪ್ರಶಸ್ತಿ ನಿಹಿತ ಶಾಲಿವಾಹನ ಸಖದ ವರ್ಷ ೧೬೦೭ನೆಯ ಕೊಡಗನೂರು ಮಠದಲ್ಲೂ ಅಖಿಳ ಜಗ ದುರಿತವಸವಾದ ಸುಲೇಗಾವಿಯ, ಮಹತ್ತೇಶ್ವರನ ಶ್ರೀಪಾದಕಮಲಭೃಂಗನಾಗಿ ಒಪ್ಪಿಸಲ್ಪಟ್ಟ ರುದ್ರಮುನಿ ದೇವರು ವಂಬತ್ತು ತಾಸುತ್ತಿನ ಅಮೃತಗಳಿಗೆಯಲ್ಲಿ ಬರೆದ ಕಥಾಸಾಗರ ಸಮಾಪ್ತಿ. ಈ ಮುರಿಗ್ಯಾ ಜಗದ್ಗುರು" ಈ ಹಸ್ತಪ್ರತಿ ಉತ್ತರದ ಬಸವಲಿಂಗದೇವನ "ಉಚಿತ ಕಥೆಗಳು" ಹಸ್ತಪ್ರತಿಯು ಕ್ರಿ. ಶ. ೧೬೮೫ ರಲ್ಲಿ (ಶಾಲಿವಾಹನ ೧೬೦೭) ಸುಲೇಗಾವಿಯ "ಮಹತ್ತೇಶ್ವರನ" ಭಕ್ತ ರುದ್ರಮುನಿಯಿಂದ ಲಿಖಿತನಾಗಿರುವುದು ಸ್ವಾರಸ್ಯವಾಗಿದೆ.

— (ಟಿಪ್ಪಣಿಯು ಮುಂದಿನ ಪುಟಕ್ಕೆ ಮುಂದುವರಿದಿದೆ.)

ಮಹತ್ತೇಶ್ವರನು ಸುಲಿಗಾವಿಯ ಒಬ್ಬ ವೀರಶೈವ ಗುರುವಾಗಿರುವಂತಿದೆ. ಹಸ್ತಪ್ರತಿಯ ಅಂತ್ಯದ "ಶ್ರೀ ಮುರಿಗ್ಯಾ ಜಗದ್ಗುರು" ನಿಶ್ಚಿತವಾಗಿಯೂ ಮುರಿಗೆಯ ಶಾಂತವೀರರೇ. ಅವರ ಕಾಲದಲ್ಲೇ ಹಸ್ತ ಪ್ರತಿಯು ಸಿದ್ಧವಾಗಿರುವುದು ಗಮನಿಸಬೇಕಾದ ಸಂಗತಿ. ಮಹತ್ತೇಶ್ವರನು ಸೂಲಿಗಾವಿಗೆ ಮುರಿಗೆ ಶಾಂತವೀರರು ಭೇಟಿ ಕೊಟ್ಟಾಗ ಶಾಂತವೀರರಿಂದ ಉಪದೇಶಪಡೆದ ಅವರ ಶಿಷ್ಯನಾಗಿರಲೂ ಸಾಧ್ಯ. ಮಹತ್ತೇಶ್ವರನ ಶಿಷ್ಯ ರುದ್ರ ಮುನಿದೇವನು ಕೊಡಗನೂರು ಮಠದಲ್ಲಿ ಹಸ್ತಪ್ರತಿಯನ್ನು ಬರೆದಿದ್ದರೂ, ತನ್ನ ಗುರುವಿನ ಜೊತೆ (ಮಹತ್ತೇಶ್ವರನ ಜೊತೆ) ತನ್ನ ಗುರುವಿನ ಗುರುವನ್ನೂ (ಮುರಿಗೆ ಶಾಂತವೀರರನ್ನೂ) ಸ್ಮರಿಸಿದ್ದಾನೆ ಎಂದು ಊಹಿಸಲು ಅವಕಾಶವಿದೆ. "ಬಾಗವಾಡ ಮಠದ ಚರಂತಿ ಹಿರೇರಾದ ಕರಿಬಸವಪ್ಪನವರು ರಕ್ಷಿಸಿದಂಥ ಅಂದಪ್ಪನವರ ಶಿಷ್ಯನಾದ ಬಸವಲಿಂಗಮುರಿದೇವರಿಗೆ ಸುಲಿಗಾವಿ ಬಸವಲಿಂಗಪ್ಪನವರು ಬರಕೊಟ್ಟ ಬಸವಪುರಾಣದ ವಸ್ತುಕದ ನುಡಿ ಸಮಾಪ್ತ." ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿ ಸೂಚಿ ಸಂ. ಪುಟ. ೧. ಸಂ. ಎಸ್. ಶಿವಣ್ಣ, ಚಿತ್ರದುರ್ಗ, ೧೯೯೧. ಪು.೩೮೦, ೩೯೧ ಬಸವಪುರಾಣದ ಪುಸ್ತಕ ಎಂದರೆ ವೃಷಭೇಂದ್ರವಿಜಯ ಕಾವ್ಯ "ಬಾಗವಾಡಿ" ಬಹುಶಃ ಬೆಳಗಾವಿ ತಾಲೂಕಿನ ಬಾಗವಾಡಿ..

ಎಚ್.ಎಸ್. ಗೋಪಾಲರಾವ್*

# ವಕೀಲ ರಾಮಪ್ಪನ ಕೈಫಿಯತ್ತು

ಪ್ರಖ್ಯಾತ ಶಾಸನತಜ್ಞರಾಗಿದ್ದ ನನ್ನ ಬಂಧು ಶ್ರೀ ನೆಲಮಂಗಲ ಲಕ್ಷ್ಮೀನಾರಾಯಣರಾಯರ ಪ್ರವಾಸಕಾಲದ ಟಿಪ್ಪಣಿಗಳ ನಡುವೆ ದೊರೆತ ವಕೀಲ ರಾಮಪ್ಪ ಎಂಬುವವನು ಬರೆದ ಕೈಫಿಯತ್ತೊಂದರ ನಕಲಿನ ಕೆಲವು ಹಾಳೆಗಳು, ನನ್ನ ಕುತೂಹಲ ಕೆರಳಿಸಿದುವು. ಅಧ್ಯಯನ ಆರಂಭಿಸಿದಾಗ ಅವು ಮುಮ್ಮಡಿ ಕೃಷ್ಣರಾಜ ಒಡೆಯರು. ಮತ್ತು ಆಗಿನ ಬ್ರಿಟಿಷ್ ರೆಸಿಡೆಂಟ್ ಅಧಿಕಾರಿಗಳ ನಡುವಿನ ಸಂಬಂಧಗಳ ಸೂಕ್ಷ್ಮ ಪರಿಚಯ ಮಾಡಿಕೊಡುವುದು ಅರಿವಿಗೆ ಬಂದು, ವಕೀಲ ರಾಮಪ್ಪನ ಬಗೆಗೆ ಮಾಹಿತಿ ಸಂಗ್ರಹಿಸತೊಡಗಿದೆ. ತಿತಾ.. ಶರ್ಮರು ತಮ್ಮ 'ವಿಚಾರ ಕರ್ನಾಟಕ'ದಲ್ಲಿ ದಿವಾನ್ ಪೂರ್ಣಯ್ಯನವರು ರಾಮಯ್ಯ ಎಂಬ ವ್ಯಕ್ತಿಗೆ ಬರೆದ ಎರಡು ಪತ್ರಗಳನ್ನು ಪ್ರಕಟಿಸಿ .ಉಪಕಾರ ಮಾಡಿದ್ದಾರೆ. ದಿವಾನ್ ಪೂರ್ಣಯ್ಯನವರ ನಂಬಿಕೆಯ ವ್ಯಕ್ತಿಯಾಗಿದ್ದ ರಾಮಯ್ಯನು ಮೈಸೂರು ಒಡೆಯರ ಪರವಾಗಿ ಬ್ರಿಟಿಷ್ ರೆಸಿಡೆಂಟ್ ಅಧಿಕಾರಿಗಳ ಜೊತೆಗೆ ವ್ಯವಹರಿಸುತ್ತಿದ್ದವನು. ಅದಕ್ಕಾಗಿಯೇ ತರಬೇತಾದವನು. ಎರಡೂ ಕಡೆಯವರ ಹುಕುಂ ಮತ್ತು ಜವಾಬುಗಳನ್ನು ವಿನಿಮಯ ಮಾಡುತ್ತಿದ್ದ ಸಂಪರ್ಕಾಧಿಕಾರಿ ಎಂದೂ ಭಾವಿಸಲು ಅವಕಾಶಗಳಿವೆ.

ದೊರೆತಿರುವ ಕೈಫಿಯತ್ತಿನ ನಕಲಿನಲ್ಲಿ ೫೬ ಹಾಳೆಗಳಿವೆ (೧೧೨ ಪುಟಗಳು ½ ಪುಲ್‌ಸ್ಕೇಪ್ ಹಾಳೆಯನ್ನು ಉದ್ದುದ್ದವಾಗಿ ಅರ್ಧಕ್ಕೆ ಮಡಿಸಿ ನಕಲು ಮಾಡಲಾಗಿದೆ. ಪ್ರತಿಪುಟದ ಆರಂಭದಲ್ಲೂ 'ಶ್ರೀ ಆಂಜನೇಯ' ಎಂದೂ, ಬಲ ಅಂಚಿನ ಮೇಲ್ಮೂಲೆಯಲ್ಲಿ ಬುಕ್ ನಂ ಮತ್ತು ಹಾಳೆಯ ಸಂಖ್ಯೆಯನ್ನು ಬರೆಯಲಾಗಿದೆ. ಕೆಲವು ಪುಸ್ತಕಗಳ ಮತ್ತು ಹಾಳೆಗಳ ನಕಲು ಪ್ರತಿಯಿಲ್ಲ. ನಕಲಿನ ಪುಟಗಳಿಗೂ ಅನುಕ್ರಮ ಸಂಖ್ಯೆಯನ್ನು ಹಾಕಿಲ್ಲ. ಬಹುತೇಕ ಮೂಲ ಪ್ರತಿಯು ಹಲವು ಪುಸ್ತಕಗಳಲ್ಲಿದ್ದು. ಅದನ್ನು ನಕಲು ಮಾಡಿದ ವ್ಯಕ್ತಿಯು ಮೂಲ ಪ್ರತಿಯ ಪುಸ್ತಕಗಳ ಸಂಖ್ಯೆ ಮತ್ತು ಹಾಳೆಗಳ ಸಂಖ್ಯೆಯನ್ನೇ ನಕಲಿನಲ್ಲೂ ನಮೂದಿಸಿರುವಂತಿದೆ. ಕೆಲವು ಪುಸ್ತಕಗಳು ಮತ್ತು ಹಾಳೆಗಳ ಸಂಖ್ಯೆ ನಕಲಿನ ಪ್ರತಿಯಲ್ಲಿ ಇಲ್ಲದಿರುವುದರಿಂದ ಇದೊಂದು ಅಪೂರ್ಣ ದಾಖಲೆ ಎಂದೇ ಪರಿಗಣಿಸಬೇಕಾಗಿದೆ. ವಕೀಲ ರಾಮಪ್ಪನ ಕೈಫಿಯತ್ತಿನ ಮೂಲ ಪ್ರತಿ ಸದ್ಯಕ್ಕೆ ಲಭ್ಯವಿಲ್ಲ. ದೊರಕಿರುವ ನಕಲನ್ನು ಪ್ರತಿ ಮಾಡಿದವರು ಯಾರು ಎಂಬುದಾಗಲೀ, ಈ ನಕಲು ಶ್ರೀ ಲಕ್ಷ್ಮೀನಾರಾಯಣರಾಯರ ವಶಕ್ಕೆ ಹೇಗೆ ಬಂದಿತೆಂಬುದಾಗಲೀ ಸದ್ಯಕ್ಕೆ ಅಸ್ಪಷ್ಟವಾಗಿದೆ. ಅಸ್ಪಷ್ಟತೆ ಹಾಗೂ ಅಪೂರ್ಣತೆಗಳೇನೇ ಇದ್ದರೂ ದೊರತಿರುವ ವಕೀಲ ರಾಮಪ್ಪನ ಕೈಫಿಯತ್ತು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಕೆಲವು ಸೂಕ್ಷ್ಮವಿಷಯಗಳ ಬಗೆಗೆ ಮಹತ್ವದ ಮಾಹಿತಿಯನ್ನೊದಗಿಸುತ್ತದೆ. ಆಯಾ ದಿನಗಳ ವಿವರಗಳನ್ನು ದಿನಾಂಕ ಸಹಿತ ದಾಖಲಿಸಿರುವುದರಿಂದ ಕೈಫಿಯತ್ತಿನ ಮಹತ್ವ ಮತ್ತಷ್ಟು ಹೆಚ್ಚಿದೆ.

ತಿ.ತಾ. ಶರ್ಮರು 'ವಿಚಾರ ಕರ್ನಾಟಕ' ದಲ್ಲಿ(ಪು. ೨೬೪–೨೬೮) ದಿವಾನ್ ಪೂರ್ಣಯ್ಯನವರು

• ಸ್ವಸ್ತಿ ಶ್ರೀಸ್ಕಂದ, ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ ೫೬೨ ೧೨೩

ನಾಯಕ ರಾಮಯ್ಯನಿಗೆ ಬರೆದಿದ್ದ ನಾಲ್ಕು ಪತ್ರಗಳನ್ನು ಪ್ರಕಟಿಸಿದ್ದಾರೆ. ಪ್ರಸ್ತಾವನೆಯಾಗಿ ಅವರು ಬರೆದಿರುವ ಕೆಳಗಿನ ಸಾಲುಗಳು ನಾಯಕ ರಾಮಯ್ಯನ ಪರಿಚಯ ಮಾಡುತ್ತವೆ.

'ಪೂರ್ಣಯ್ಯನವರು ಸರ್ ಜಾನ್ ಮಾಲ್ಕಂ ಬಳಿ ಚಾಕರಿಗಾಗಿ ನೇಮಿಸಿದ್ದ ನಾಯಕ ರಾಮಯ್ಯ ಪ್ರತಿ ದಿನವೂ ತನ್ನ ಯಜಮಾನರಿಗೆ ಪತ್ರ ಬರೆಯುತ್ತಿದ್ದ. ಆ ಪತ್ರಗಳೊಂದೊಂದಕ್ಕೂ ಪೂರ್ಣಯ್ಯನವರು ಉತ್ತರ ಕೊಡುತ್ತಿದ್ದರು ಮೇಲೆ ಉಲ್ಲೇಖಿಸಿದ ಪತ್ರಗಳು ಕ್ರಿ.ಶ. ೧೮೦೫ನೆಯ ಇಸವಿಗೆ ಸೇರಿವೆ. ನಮಗೆ ದೊರೆತಿರುವ ಕೈಫಿಯತ್ತಿನ ೩ನೆಯ ಭಾಗದಲ್ಲಿ ವಕೀಲ ರಾಮಪ್ಪನ ಪೂರ್ವಚರಿತ್ರೆಯೂ ದೊರೆತಿದೆ. ಅದರ ಪ್ರಕಾರ ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ರಾಜರ ಬಳಿ ಸವಾಲ್-ಜವಾಬ್ ಮಾಡಿ ತರಬೇಕು ಪಡೆದ ರಾಮಪ್ಪನು ಕ್ರಿ.ಶ. ೧೮೦೫ರಲ್ಲಿ ಜೆನರಲ್ ಜಾನ್ ಮಾಲ್ಕಂ ಜೊತೆಗೆ ಪುಣೆಯಲ್ಲಿ ಮೊಕ್ಕಾಂ ಮಾಡಿದ್ದ. ಜಾನ್ ಮಾಲ್ಕಂಗೆ ಪ್ರೀತಿ, ವಿಶ್ವಾಸದ ನಂಬುಗೆಯ ವ್ಯಕ್ತಿಯಾಗಿದ್ದ. ಆ ಕಾರಣದಿಂದಲೇ ಮಾಲ್ಕಂ ತನ್ನ ಸ್ವಂತ ವಸ್ತುಗಳ ಜವಾಬ್ದಾರಿಯನ್ನೂ ರಾಮಪ್ಪನಿಗೆ ನೀಡಿ, ಅವುಗಳನ್ನು ಮೈಸೂರಿಗೆ ತಲುಪಿಸುವಂತೆ ಆಜ್ಞೆ ಮಾಡಿದ್ದ. ಅಲ್ಲದೆ ರಾಮಪ್ಪನ ಬಗ್ಗೆ ಒಳ್ಳೆಯ ಮಾತುಗಳನ್ನು ಬರೆದು ದಿವಾನ್ ಪೂರ್ಣಯ್ಯನವರಿಗೆ ಶಿಫಾರ್ಸು ಪತ್ರ ನೀಡಿದ್ದ. ಬಹುಶಃ ಇದೇ ಶಿಫಾರ್ಸಿನ ಕಾರಣ ನಾಯಕ ರಾಮಯ್ಯನು ಮೈಸೂರಿನ ಒಡೆಯರು ಮತ್ತು ಬ್ರಿಟಿಷ್ ರೆಸಿಡೆಂಟ್ ಅಧಿಕಾರಿಗಳ ಜೊತೆಗೆ ಜವಾಬು-ಸವಾಲ್ ಮಾಡುವ ಕೆಲಸಕ್ಕೆ ನೇಮಕಗೊಂಡು ವಕೀಲ ರಾಮಪ್ಪನಾಗಿರಬಹುದು.

ನಮಗೆ ದೊರೆತಿರುವ ವಕೀಲ ರಾಮಪ್ಪನ ಕೈಫಿಯತ್‌ನಲ್ಲಿ ಮೂರು ಭಾಗಗಳಿವೆ. ನಾಲ್ಕು ಪುಟಗಳ ಮೊದಲ ಭಾಗವು ೧೭೯೯ರ ಜುಲೈ ೮ನೆಯ ತಾರೀಕು 'ಮಹಾರಾಜ ಕೃಷ್ಣರಾಜ ಒಡೆಯರಿಗೂ ಯಿಂಗ್ರೇಜಿ ಕುಂಪಣಿ ಸರಕಾರದ ಬಹದರವರಿಗೆ, ಶಾಸ್ವಿತ ಆಗಿ ಸ್ನೇಹವೃದ್ಧಿ ಆಗುವ ಬಗ್ಗೆ ಆದ ಕರಾರುನಾಮೆಯ ನಕಲು ಪ್ರತಿಯಾಗಿದೆ. ಶ್ರೀರಂಗ ಪಟ್ಟಣದ ಸಮೀಪ ನಜರ್‌ಬಾದ್‌ನಲ್ಲಿ ೮-೭-೧೭೯೯ ಎಂದು ಯಿಂಗ್ರೇಜಿ ಮತ್ತು ಪಾರ್ಸಿ ಭಾಷೆಗಳಲ್ಲಿ ಮೊದಲು ಸಿದ್ಧವಾದ ಕರಾರುನಾಮೆಗೆ ಮೈಸೂರಿನ ಪರವಾಗಿ ಸಹಿ ಮಾಡಿದವರು ಲಕ್ಷ್ಮಿ ಅಮ್ಮನವರು ಮತ್ತು ಮಹಾರಾಜ ಕೃಷ್ಣಒಡೆಯರು. ಕರಾರುನಾಮೆ ಸಿದ್ಧವಾದಾಗ ಹಾಜರಿದ್ದ ಬ್ರಿಟಿಷ್ ಅಧಿಕಾರಿಗಳೆಂದರೆ ಲೆಫ್ಟಿನೆಂಟ್ ಜನರಲ್ ಜಾರ್ಜ್ ಹ್ಯಾರಿಸ್, ಕರ್ನಲ್ ಆರ್ಥರ್ ವೆಲ್ಲೆಸ್ಲಿ, ಹೆನ್ರಿ ವಿಲ್ಲೆಸ್ಲಿ, ಲೆಫ್ಟಿನೆಂಟ್ ಕರ್ನಲ್ ಕಿರ್ಕ್ ಪ್ಯಾಟ್ರಿಕ್ ಮತ್ತು ಲೆಫ್ಟಿನೆಂಟ್ ಕರ್ನಲ್ ಬ್ಯಾರಿ ಕ್ಲೋಸ್. ಕರಾರುನಾಮೆಗೆ ಗೌರ್ನರ್ ಜನರಲ್‌ರ ದಸ್ತಖತ್ತು ಮಾಡಿಸಿಕೊಡುತ್ತೇವೆಂಬ ಆಶ್ವಾಸನೆಯು ಬ್ರಿಟಿಷ್ ಅಧಿಕಾರಿಗಳಿಂದ ಮಹಾರಾಜ ಕೃಷ್ಣರಾಜ ಒಡೆಯರಿಗೆ ದೊರೆಯಿತು. ೧೬ ಕಲಂಗಳ ಈ ಕರಾರು ನಾಮೆಯ ಇಂಗ್ಲಿಷ್ ಪಾಠವು ಹಯವದನರಾಯರ Hitory of Mysore ನ ೩ನೆಯ ಭಾಗದಲ್ಲಿ ಅಚ್ಚಾಗಿದೆ. ದೊರೆತಿರುವ ಕರಾರುನಾಮೆಯ ನಕಲು ಪ್ರತಿಯು ಮೂಲ ಆಂಗ್ಲ ಅಥವಾ ಪಾರ್ಸಿ ಭಾಷೆಗಳ ಕನ್ನಡ ಅನುವಾದ ಎಂದು ಊಹಿಸಬಹುದಾಗಿದೆ. ಆದರೆ ಅನುವಾದ ಭಾಷಾಸ್ವರೂಪವು ೧೮ನೆಯ ಶತಮಾನದ ಅಂತ್ಯದ ಕನ್ನಡ ಭಾಷಾ ಸ್ವರೂಪ (ಗದ್ಯ ಪ್ರಕಾರ)ಕ್ಕೆ ಹೊಂದುವುದರಿಂದ, ಅನುವಾದ ಕಾರ್ಯವು ಮೂಲ ಕರಾರುನಾಮೆಯು ಸಿದ್ಧವಾದ ಸಮಯದಲ್ಲೆ ಆಗಿದೆ ಎಂದು ಭಾವಿಸಬಹುದು. ಕರಾರುನಾಮೆಯ ವಿವರಗಳು ಈಗಾಗಲೇ ಪ್ರಕಟವಾಗಿರುವುದರಿಂದ, ಕೈಫಿಯತ್ತಿನ ಮೊದಲ ಭಾಗದ ವಿವರಣೆಯ ಕಾರ್ಯವು ಅನವಶ್ಯಕವಾಗಿದೆ.

ಕೈಫಿಯತ್ತಿನ ಎರಡನೆಯ ಭಾಗವು ಅತ್ಯಂತ ವಿಶೇಷ ಗಮನ ಸೆಳೆಯುತ್ತದೆ. ಈ ಭಾಗವೇ ದೊರೆತಿರುವ ಕೈಫಿಯತ್‌ನ ಮುಖ್ಯಭಾಗ ೯೨ ಪುಟಗಳಲ್ಲಿ ಪ್ರತಿಯಾಗಿರುವ ಈ ಭಾಗವು ವಕೀಲ ರಾಮಪ್ಪನು ೧೮೧೩ ಫೆಬ್ರವರಿ ೬ ರಿಂದ ೧೮೧೫ರ ಏಪ್ರಿಲ್ ೮ರ ವರೆಗೆ ಹಲವಾರು ದಿನಗಳು ನಡೆಸಿದ ಜವಾಬು-ಸವಾಲಿನ ವಿವರಗಳನ್ನು ಒಳಗೊಂಡಿದೆ. ಆದರೆ ರಾಮಪ್ಪನು ಮಹಾರಾಜರು ಮತ್ತು ರೆಸಿಡೆಂಟರ (ಕೋಲ್) ಮಧ್ಯವರ್ತಿಯಾಗಿ ಕೆಲಸ ಮಾಡಿದ್ದು ೧೧-೧೨-೧೮೧೨ ರಿಂದ ೧೮-೫-೧೮೧೫ರ ವರೆಗೆ

ದೊರೆತಿರುವ ನಕಲಿನ ಮೂರನೆಯ ಭಾಗದಲ್ಲಿ ತಿಳಿದು ಬರುವಂತೆ ರಾಮಪ್ಪನ ಕೆಲಸ ಖಾಯಂ ಆದದ್ದು ೧೯.೧೨.೧೮೧೨ರಂದು. ಆ ಮೊದಲು ಅವನು ನಡೆಸಿದ್ದದ್ದು ಒಂದೇ ಒಂದು ಸಾಧಾರಣ ಜವಾಬು ಸವಾಲ್. ೧೯.೧೨.೮೨ರಿಂದ ೧೮.೪.೧೮೧೪ರವರೆಗೆ ರಾಮಪ್ಪ ನಡೆಸಿದ ಜವಾಬು ಸವಾಲ್‌ಗಳ ಸಂಖ್ಯೆ ೧೪೧ ಆದರೆ ನಮಗೆ ಎಲ್ಲಾ ಜವಾಬು ಸವಾಲ್‌ಗಳ ಮಾಹಿತಿಯೂ ದೊರೆತಿಲ್ಲ.

ಮೂರನೆಯ ಭಾಗದಲ್ಲಿ ೧೮೩೧ರ ಅಕ್ಟೋಬರ್ ೧೦, ೧೪ ಮತ್ತು ೧೯, ೧೮೩೨ರ ಮೇ ತಿಂಗಳ ೯ ಮತ್ತು ೧೮೩೩ ಜೂನ್ ತಿಂಗಳ ೨೨, ೨೪ ಮತ್ತು ಜುಲೈ ೨ ಮತ್ತು ೩ನೆಯ ತಾರೀಕುಗಳಂದು ರಾಮಪ್ಪನು ಸ್ವಗತದಂತೆ ಬರೆದುಕೊಂಡಿರುವ ವಿವರಗಳಿವೆ. ಬಹುತೇಕ ಆ ಸಂದರ್ಭದಲ್ಲಿ ರಾಮಪ್ಪನು ಬ್ರಿಟಿಷ್ ಅಧಿಕಾರಿಗಳಿಂದ ತನಿಖೆಯನ್ನು ಎದುರಿಸುತ್ತಿದ್ದನೆಂದು ಭಾವಿಸಲು ಅವಕಾಶಗಳಿವೆ.

ಕೈಫಿಯತ್‌ನ ಎರಡನೆಯ ಭಾಗದಲ್ಲಿ ವ್ಯಕ್ತವಾಗುವ ಮಹಾರಾಜರು ಮತ್ತು ರೆಸಿಡೆಂಟರ ನಡುವಿನ ಆಡಳಿತಾತ್ಮಕ ಸಂಬಂಧವನ್ನು ಕುರಿತು ಲಭ್ಯವಿರುವ ಮಾಹಿತಿಯನ್ನು ಮಾತ್ರ ಪ್ರಸ್ತಾಪಿಸಲು ಇಚ್ಛಿಸಿದ್ದೇನೆ. ಈಗಾಗಲೇ ತಿಳಿಸಿರುವಂತೆ ಕೈಫಿಯತ್‌ನ ಕೆಲವು ಹಾಳೆಗಳು ಲಭ್ಯವಿಲ್ಲವಾದರೂ, ಲಭ್ಯವಿರುವ ಮಾಹಿತಿಯೇ ಅರಸರು ಮತ್ತು ರೆಸಿಡೆಂಟರ ನಡುವಿನ ಸಂಬಂಧಗಳ ಸೂಕ್ಷ್ಮ ಪರಿಚಯ ಮಾಡಿಕೊಡುತ್ತವೆ.

೪–೫–೧೭೯೯ರಂದು ಟಿಪ್ಪುವು ಮೃತನಾದ ನಂತರ ೮–೭–೧೭೯೯ರಂದು ಇಂಗ್ಲಿಷ್ ಸರ್ಕಾರದವರಿಗೂ,ಮೈಸೂರು ಮಹಾರಾಜರವರ ಕಡೆಯವರಿಗೂ ಆದ ಕರಾರಿನ ಪ್ರಕಾರ ದೇಶದ ರಕ್ಷಣಾರ್ಥ ಬ್ರಿಟಿಷ್ ಸರ್ಕಾರವು ಸೇನೆಯನ್ನು ಒದಗಿಸಬೇಕು. ಬ್ರಿಟಿಷ್ ಸರ್ಕಾರದ ಪರವಾಗಿ ರೆಸಿಡೆಂಟ್ ಎಂಬ ಅಧಿಕಾರಿಯು ಮಹಾರಾಜರಿಗೆ ಆಡಳಿತ ವಿಷಯಗಳಲ್ಲಿ ಸಲಹೆ–ಸೂಚನೆಗಳನ್ನು ಕೊಡತಕ್ಕದ್ದು. ರೆಸಿಡೆಂಟನು ಶ್ರೀರಂಗ ಪಟ್ಟಣದಲ್ಲೇ ಇರುತ್ತಿದ್ದ ; ಶ್ರೀರಂಗಪಟ್ಟಣವು ಬ್ರಿಟಿಷರ ವಶದಲ್ಲೇ ಉಳಿಯಿತು. ಮಹಾರಾಜರು ಮೈಸೂರಿನಲ್ಲೇ ಇರುತ್ತಿದ್ದರು. ಮಹಾರಾಜರು ಶ್ರೀರಂಗಪಟ್ಟಣಕ್ಕೆ ಹೋಗುವುದನ್ನು ಮೊದಲೇ ತಿಳಿಸಿ, ರೆಸಿಡೆಂಟರ ಅನುಮತಿಯನ್ನು ಪಡೆಯ ಬೇಕಾಗಿತ್ತು. ರೆಸಿಡೆಂಟ್ ಕೂಡಾ ನೇರವಾಗಿ ಅನುಮತಿಯನ್ನು ನೀಡಲು ಅವಕಾಶಗಳಿರಲಿಲ್ಲ. ಮಹಾರಾಜರ ಅನುಮತಿ ಕೋರಿಕೆಯ ಪತ್ರವನ್ನು ಮದರಾಸ್‌ಗೆ ಕಳುಹಿಸಿ, ಅಲ್ಲಿಂದ ಅಪ್ಪಣೆಯನ್ನು ತರಿಸಿಕೊಳ್ಳಬೇಕಾಗಿತ್ತು. ಈ ಸಂಬಂಧ ರಾಮಪ್ಪನ ಕೈಫಿಯತ್‌ನಲ್ಲಿ ೧೮೧೩ರ ಫೆಬ್ರವರಿ ೬ರ ಬರವಣಿಗೆ ಉಲ್ಲೇಖನಾರ್ಹವಾಗಿದೆ.

ಹುಜೂರರು ಶ್ರೀರಂಗಪಟ್ಟಣಕ್ಕೆ ಬರುವುದನ್ನು ಕಂಪೆನಿಯ ನಿಯಮದ ಪ್ರಕಾರ ತಿಳಿಸಬೇಕಾಗಿತ್ತು ; ಆ ವಿಷಯವನ್ನು ಮದರಾಸಿನ ಲಾಟ್ ಸಾಹೇಬನಿಗೆ ಬರೆದು ಒಪ್ಪಿಗೆಯನ್ನು ತರಿಸಿಕೊಳ್ಳಬಹುದಾಗಿತ್ತು ಎಂಬ ಆಕ್ಷೇಪಣೆಯೊಂದಿಗೆ, ಮಹಾರಾಜರಿಗೆ ವಿಶೇಷವಾದ ಮೆಹರ್ಬಾನಗಿ ಮಾಡುವವನಂತೆ ಕೋಲ್ ಸಾಹೇಬನು ಮಹಾರಾಜರು ಪರಿವಾರ ಸಮೇತ ಶ್ರೀರಂಗ ಪಟ್ಟಣಕ್ಕೆ ಬರಲು ಅನುಮತಿ ನೀಡುತ್ತಾನೆ. ಅನುಮತಿಯು ರಾಜ ಪರಿವಾರದಲ್ಲಿ ಇಂತಿಂತಹವರು ಮಾತ್ರವೇ ಬರಬೇಕು ಎಂಬ ಸೂಚನೆಯನ್ನೂ ಒಳಗೊಂಡಿರುತ್ತದೆ. ಕೋಲ್ ಅಪೇಕ್ಷಿಸದವರು ರಾಜ ಪರಿವಾರದ ಜೊತೆಗಿದ್ದರೆ, ಅವನು ರಾಜರ ಜೊತೆಗೆ ಬರುವುದಿಲ್ಲ ಎಂಬ ಬೆದರಿಕೆಯನ್ನೂ ಹಾಕಲಾಗಿದೆ. ಮಹಾರಾಜರು ಸಲ್ಲಿಸುವ ಕಾರ್ಯಕ್ರಮ ಪಟ್ಟಿಯ ಪ್ರಕಾರ, ಅವರು ಸಂಜೆ ೪ಕ್ಕೆ ಮೈಸೂರಿನಿಂದ ಹೊರಟು ೫½ಗೆ ಶ್ರೀರಂಗಪಟ್ಟಣವನ್ನು ತಲುಪಿ, ಬೆಂಗಳೂರು ಬಾಗಿಲಲ್ಲಿ ನಗರವನ್ನು ಪ್ರವೇಶಿಸಿ, ಖಾಸಾ ದೇವಡಿ (ಅರಮನೆ ?) ಯಲ್ಲಿ ಉಳಿದುಕೊಂಡು, ರಾತ್ರಿ ೧೦ ಘಳಿಗೆಗೆ ದೇವಸ್ಥಾನಕ್ಕೆ ಹೋಗುವುದು ಮತ್ತು ನಾರನೆಯ ದಿನ ಬೆಳಿಗ್ಗೆ ಮತ್ತೆ ದೇವಸ್ಥಾನಕ್ಕೆ ಹೋಗಿ ಬಂದು, ಮೈಸೂರಿಗೆ ಹಿಂದಿರುಗುವುದೆಂದು ತೀರ್ಮಾನವಾಗಿರುತ್ತದೆ. ತಮ್ಮ ಕಡೆಯವರು ಗಾಂಜಾ, ತಂಬಾಕು ಮುಂತಾದ್ದನ್ನು ತೆಗೆದುಕೊಂಡು ಹೋಗದ ಮೇರೆಗೆ ಹುಕುಂ ಮಾಡಿರುವುದನ್ನೂ ತಿಳಿಸುವ ಮಹಾರಾಜರು ಶ್ರೀರಂಗಪಟ್ಟಣದಲ್ಲಿ ದೇವಡಿಯ ಬಳಿ ಹೊಳೆ ಬಾಗಿಲನ್ನು ರಾತ್ರಿ ೧೨ ಘಂಟೆಯವರೆವಿಗೂ ತೆಗೆಸಿಡಲು ರೆಸಿಡೆಂಟನಿಗೆ ಮನವಿ ಮಾಡುತ್ತಾರೆ. ರೆಸಿಡೆಂಟ್ ಕೋಲ್‌ನಿಗೆ ತಮ್ಮಿಂದ ತೊಂದರೆ (ತಪ್ಪು) ಆಗುತ್ತಿದೆ

ಯೆಂಬ ಸಂಕೋಚ ಮಹಾರಾಜರಿಗೆ ; ಆದರೆ ಕೋಲ್ ಸಾಹೇಬನು ರಾಜರ ಅಪ್ಪಣೆಯಂತೆ ನಡೆಯುವುದೇ ತನಗೆ ಖುಷಿ ಎಂದು ಹೇಳುತ್ತಾ, ಮೈಸೂರಿನಿಂದ ಹೊರಟ ಮಹಾರಾಜರನ್ನೂ ವೀರನಗೆರೆಯ ಅರಮನೆಯಲ್ಲಿ ಎದುರುಗೊಂಡು ಜೊತೆಯಲ್ಲೇ ಶ್ರೀರಂಗಪಟ್ಟಣಕ್ಕೆ ಬರುವುದಾಗಿ ತಿಳಿಸುತ್ತಾನೆ.

—ಉಲ್ಲೇಖಿತ ಸಂಗತಿಯಿಂದ ತಮ್ಮದೇ ಸಂಸ್ಥಾನದ, ಆದರೆ ಕಂಪೆನಿಯ ವಶವಾಗಿದ್ದ ಶ್ರೀರಂಗಪಟ್ಟಣಕ್ಕೆ ಹೋಗುವುದಕ್ಕೂ, ಅಲ್ಲಿನ ಕಾರ್ಯಕ್ರಮಗಳ ಏರ್ಪಾಡಿಗೂ ಮಹಾರಾಜರು ಕಂಪೆನಿಯ ರೆಸಿಡೆಂಟನ ಅನುಮತಿ ಪಡೆಯಬೇಕಾದ ವಿಪರ್ಯಾಸವನ್ನು ಗುರುತಿಸಬಹುದು.

ಫೆಬ್ರವರಿ ೬ ರ ವರದಿಯು ನಲ್ಲಪ್ಪನ ದರಿಯಾಪ್ತಿಯ ವಿಷಯ ಕುರಿತೂ ಪ್ರಸ್ತಾಪಿಸಿದೆ. ಇದೇ ವಿಷಯವು ಫೆಬ್ರವರಿ ೯, ೧೨, ೧೩ ಮತ್ತು ೨೪ನೆಯ ದಿನಾಂಕಗಳ ವರದಿಯಲ್ಲೂ ಪ್ರಸ್ತಾಪಿತವಾಗಿದೆ. ಈ ನಲ್ಲಪ್ಪ ಯಾರು ಎನ್ನುವುದು ಖಚಿತವಾಗಿ ತಿಳಿಯುವುದಿಲ್ಲ. ಆದರೆ ಅವನು ತುಂಟತನ ಮಾಡುತ್ತಿದ್ದವನು ಎಂದು ತಿಳಿಯಬಹುದಾಗಿದೆ. ಅವನ ಬಗ್ಗೆ ಕೃಷ್ಣರಾಯ ಮತ್ತು ಸುಬ್ಬರಾಯ ಎಂಬಿಬ್ಬರೂ ತಿಳಿದಿದ್ದಂತೆ ತೋರುತ್ತದೆ. ಆ ಇಬ್ಬರ ಕೈಫಿಯತ್ತನ್ನು ರಾಮಪ್ಪ ಪ್ರಸ್ತಾಪಿಸಿದ್ದಾನೆ. ಇಲ್ಲಿ ಕೈಫಿಯತ್ತಿಗೆ ವರದಿ (information) ಎಂಬ ಅರ್ಥವೇ ಲಭ್ಯವಾಗಿದೆ. ನಲ್ಲಪ್ಪನಂತಹವರ ತುಂಟತನಗಳಿಂದ ಮಹಾರಾಜರು ಮತ್ತು ಅಧಿಕಾರಿಗಳಿಗೂ 'ಬದನಾಮೆ' (ಕೆಟ್ಟ ಹೆಸರು) ಎಂಬುದು ಮಹಾರಾಜರ ಅಭಿಪ್ರಾಯ. ತುಂಟತನ ರುಜು ಆದರೂ, ಅದನ್ನು ಒಪ್ಪದ ತುಂಟರನ್ನು ಪಾರೇ (ಪಹರೆ) ದಲ್ಲಿಟ್ಟು ಕೊರಡೆ ಹೊಡೆಸಿ ಕೇಳಬೇಕು ಮತ್ತು ಅಂತಹವರಿಗೆ ಶಿಕ್ಷೆ ವಿಧಿಸಬೇಕು ಎಂಬ ಅಭಿಪ್ರಾಯ ಮಹಾರಾಜರದಾದರೆ, ನಲ್ಲಪ್ಪನಂತಹವರಿಗೆ ಕೊರಡೆ ಹಾಕಿಸುವ ಬದಲು ಗಲ್ಲಿಗೆ ಹಾಕಬೇಕು ಎಂಬುದು ಕೋಲ್ ಸಾಹೇಬನ ಅಭಿಪ್ರಾಯ. ಇಂತಹ ಸಂದರ್ಭಗಳಲ್ಲಿ ಆಗ್ಗೆ ೧೮ ವರ್ಷ ವಯಸ್ಸಿನ ಮಹಾರಾಜರ ತಾಳ್ಮೆ ಮತ್ತು ಕೋಲ್ ಸಾಹೇಬನ ತಾಳ್ಮೆಗೆಟ್ಟ ನಿರ್ಧಾರಗಳ ಪರಿಚಯವಾಗುತ್ತದೆ. ನಲ್ಲಪ್ಪನ ಬಗೆಗೆ ಸುಬ್ಬರಾಯ ಬರೆಸಿದ ಕೈಫಿಯತ್ತು, ಬಾಬರಲ್ಲಿ ಖಾನರ ಸಂಗಡ ಅದನ್ನು ದಸಖತ್ತು ಮಾಡಿಸಿ ತರ ಹೇಳಿದ್ದು–ಇತ್ಯಾದಿ ವಿವರಗಳು ಈ ಕೈಫಿಯತ್ತಿನಲ್ಲಿ ದೊರೆಯುತ್ತವೆ. ಇದೇ ಸಂದರ್ಭದಲ್ಲಿ ರೆಸಿಡೆಂಟ್ ಸಾಹೇಬನು ೫೦೦ ವರಹದೊಳಗಿನ ವ್ಯಾಜ್ಯಗಳನ್ನು ದರಿಯಾಪ್ತಿ ಮಾಡಬಹುದೆಂದು ಮಹಾರಾಜರು ತಿಳಿಸುತ್ತಾರೆ. ರೆಸಿಡೆಂಟನು ಮಹಾರಾಜರ ಕಛೇರಿಯ ಕಾರ್ಯಾವಧಿಯ ಸಮಯವನ್ನು ನಿರ್ಧರಿಸುತ್ತಾನೆ. ಇಂತಹ ಉಲ್ಲೇಖಗಳಿಂದ ಕಂಪೆನಿಯು ರೆಸಿಡೆಂಟ್ ದೇಶೀಯ ಆಡಳಿತದಲ್ಲಿ ಹೇಗೆ ನಿರ್ಬಂಧಗಳನ್ನು ವಿಧಿಸುತ್ತಿದ್ದ ಎಂಬುದು ವಿಶದವಾಗುತ್ತದೆ.

ಚಾಮರಾಜ ಒಡೆಯರ್ ಅವರ ದಹನವಾದದ್ದು ಶ್ರೀರಂಗಪಟ್ಟಣದಲ್ಲಿ. ದಹನವಾದ ಸ್ಥಳದಲ್ಲಿ ಒಂದು ದೇವಸ್ಥಾನ ಕಟ್ಟಲೂ ಸಹ ಮಹಾರಾಜರು ಕಂಪೆನಿಯ ಅನುಮತಿ ಬೇಡುತ್ತಾರೆ. ಅದಕ್ಕೆ ಎಷ್ಟು ಗಜ ಭೂಮಿ ಬೇಕು ಎಂದು ತಿಳಿಸಿದರೆ ಜನರಲ್ ರಡಿಲ್ ಸಾಹೇಬನಿಗೆ ಪತ್ರ ಬರೆದು ಉತ್ತರ ತರಿಸಿಕೊಳ್ಳುವುದಕ್ಕಾಗಿ ಕೋಲ್ ತಿಳಿಸುತ್ತಾನೆ.

ಕೋಲ್ ಸಾಹೇಬ ಒಮ್ಮೆ ಊರಿನಲ್ಲಿಲ್ಲದಿದ್ದಾಗ ಅವನ ತಮ್ಮ ಸಾಲೋಮನ್, ನಂಜನಗೂಡಿಗೆ ಬಂದ ಮಹಾರಾಜರ ಜನರಿಗೆ ತೊಂದರೆ ಕೊಟ್ಟಿದ್ದರ ದಾಖಲೆಯೂ ಈ ಕೈಫಿಯತ್ತಿನಲ್ಲಿದೆ.

ಮಹಾರಾಜರು ಯಾವ ಯಾವ ಅಧಿಕಾರಿಗಳೊಡನೆ ನಿಕಟವಾಗಿ ವ್ಯವಹರಿಸಬಹುದು ಎಂಬುದರ ಸೂಚನೆಯನ್ನೂ ಕೋಲ್ ಸಾಹೇಬ ನೀಡಿದ್ದಾನೆ. ಮೀರ್ ಮಹಮ್ಮದ್, ದಿವಾನ್ ರಾಮರಾಯ, ಬಾಬರಲ್ಲೀ ಖಾನ್, ಅಣ್ಣಾಜಿರಾವ್, ಬಾರಗಿರ ರಾಮರಾವ್ ಮುಂತಾದ ದೊಡ್ಡ ಮನುಷ್ಯರ ಸಮೀಪದಲ್ಲಿಟ್ಟುಕೊಂಡು ಕಡಿಮೆ ಜನರೊಡನೆ ಸಂಪರ್ಕ ಕಡಿಮೆ ಮಾಡಿಕೊಳ್ಳಲು ಕೋಲ್ ಮಹಾರಾಜರಿಗೆ ಸಲಹೆ ನೀಡಿದ್ದಾನೆ. 'ಮೊದಲಿಗೆ ಜನರು ಇಲ್ಲದ್ದು ಸಲ್ಲದ್ದು ಹೇಳುತ್ತಾ ಇದ್ದರು. ಈಗ ಅವರ ಬುದ್ಧಿ ಗೊತ್ತಾಗುತ್ತಿದೆ. ಜನರ ಮಾತಿನಿಂದ ಬುದ್ಧಿ ವಿಕಾರವಾಗುತ್ತದೆ.

ದಿಲ್ ಸಾಪ್ ಆಗಿರಬೇಕು'–ಎಂಬುದು ಅದೇ ಸಂದರ್ಭ ದಲ್ಲಿ ಮಹಾರಾಜರ ಮಾತಾಗಿದೆ.

ಗುರುಗಳ ಕಡೆಯವರು ಮೂಗೂರು ನಂಜಪ್ಪಾಜಿ ಎಂಬುವವನ ವಿರುದ್ಧ ದೂರು ನೀಡಿದ್ದನ್ನು ಅವನ ದೋಸ್ತರು ವಿರೋಧಿಸುವ ಮತ್ತು ದೊಡ್ಡ ಮನುಷ್ಯರಿಗೆಲ್ಲಾ ಬೇಕಾದ ಒಬ್ಬ ಹೆಂಗಸು ಧಣೀರಿಗೆ (ಮಹಾರಾಜರಿಗೆ) ಆಡಬಾರದಂಥ ಮಾತು ಆಡಿದವಳು ಕ್ಷುದ್ರ ಮಾಡಿಯಾಳೆಂಬ ಅನುಮಾನವನ್ನು ಕೋಲ್ ವ್ಯಕ್ತಪಡಿಸುವ ವಿವರಗಳೂ ಇಲ್ಲಿವೆ.

೬-೮-೧೮೧೩ರ ದಾಖಲೆಯ ಪ್ರಕಾರ, ತಾನು ಮಹಾರಾಜರಿಗೆ ಶಿಪಾರ್ಸು ಮಾಡಿದ ಅಧಿಕಾರಿಗಳಲ್ಲಿ ಒಬ್ಬನಾದ ಮೀರ್ ಮಹಮ್ಮದನ ಬಗ್ಗೆ ಊರಿನ ಜನ ಆಡುವ ಮಾತುಗಳ ಬಗ್ಗೆ ಕೋಲ್ ರಾಮಯ್ಯನನ್ನು ಪ್ರಶ್ನಿಸುತ್ತಾನೆ. ಆಗ ರಾಮಯ್ಯ ನೀಡಿದ ಉತ್ತರ ಹೀಗೆ ದಾಖಲಾಗಿದೆ. 'ನನ್ನ ವಿಚಾರ ಮೊದಲೆ ತಿಳಿಸಿಯಿರುವುದು ಸರಿಯಷ್ಟೆ? ಉಭಯ ಸರಕಾರದ ದೋಸ್ತಿಯು ಶಾಸ್ವಿತ ಆಗಿ ದಿನೇ ದಿನೇ ತರಕಿ ಆಗಬೇಕೆಂಬ ಅಭಿಲಾಷೆ ಮಂದೇ ನನಿಗೆ ಹೊರ್ರು ಜನರ ನಡತೆಗಳು ತಿಳಿದು ಯಿದ್ದಾಗ್ಯೂ ಚುಕಲಿ ಮಾತು ನನ್ನ ಬಾಯಿಂದ ಆಡತಕ್ಕದಲ್ಲವೆಂಬುದಾಗಿ ಮೊದಲೇ ನಾನು ಹೇಳಿಕೊಂಡು ಯಿದ್ದೆನು. ಈಗಲೂ ಅದೇ ಮಾತು ಕ್ಕರ್ಪೆಯೇ. ಉಭಯ ಸರಕಾರದ ಹುಕುಂ ಅಮಲು ಏನು ಯಿದ್ದಾಗ್ಯೂ ನನ್ನ ಬುದ್ಧಿಗೆ ತೋಚಿದ್ದರಲ್ಲಿ ವಂಚನೆಯಿಲ್ಲದಂತೆ ನನ್ನ ಯಿಮಾನಿನಿಂದ ನಡಿದುಕೊಳ್ಳುವಂಥಾದ್ದೇ ಹೊರ್ರು ಮೇಲಾದ ಜನದ ವಿದ್ಯಮಾನಗಳಿಗೆ ದುರನಡತೆ ವಿಚಾರಕ್ಕೆ ನಾನು ಶಾಮೀಲು ಆಗುವನಲ್ಲ. ಉಭಯ ಸರಕಾರದ ಕೀರ್ತಿ ಒಂದು ಯಿತಪಾಕಿಯಿಂದ ಯಾವ ಜನರು ನಡೆಯುತ್ತಾ ಯಿಧಾರೋ ಆ ಕೆಲ್ಸದ ಜನರಲ್ಲಿ ಯಿತಪಾಕಿನಿಂದ ನಡೆಯುವುದೇ ಸರಿ ಎಂಬುದಾಗಿಯೂ ನನ್ನಿಂದ ಉಭಯ ಸರಕಾರದಲ್ಲಿಯೂ ಬೇಜಾ ನಡತೆ ವಿರೋಧ ಹುಟ್ಟುವಂಥಾ ಮಾತುಗಳು ಬಂದಂಥಾದ್ದು ಉಭಯ ಕಡಿಗೂ ತಿಳಿದಲ್ಲಿ ತಾವು ಶಿಕ್ಷೆ ಮಾಡ ಕೆಲ್ಸವಿಲ್ಲ ನನ್ನ ಶಿಕ್ಷೆ ನಾನೇ ಮಾಡಿಕೊಳ್ಳುತ್ತಾಯಿಧೇನೆ. ಮೇಲಾದ ವಿದ್ಯಮಾನ ನನ್ನ ಬಾಯಿಂದ ಎಂದಿಗೂ ಬರತಕ್ಕದಿಲ್ಲ ಎಂಬುದಾಗಿ ತಿಳಿಯ ಪಡಿಸಿಯಿಧೇನೆ.'

ಜವಾಬು ಸವಾಲ್ ಮಾಡುವಂಥ ಸಂದರ್ಭದಲ್ಲಿ ವಕೀಲ ರಾಮಪ್ಪನಿಗೆ ಕೋಲ್ ಸಾಹೇಬನಿಂದ ಆಕ್ಷೇಪಣೆಗಳನ್ನು ಎದುರಿಸುವಂಥ ಪ್ರಸಂಗಗಳು ಎದುರಾಗುತ್ತಿದ್ದುವು. ಇದಕ್ಕೆ ಕಾರಣ ಕೋಲ್ ಸಾಹೇಬನಿಗೆ ಮಹಾರಾಜರ ಆಡಳಿತ ಕ್ರಮ, ಅವರ ಸಂಪರ್ಕವಿದ್ದ ಜನರ ಬಗೆಗಿನ ಅನುಮಾನಗಳೇ ಕಾರಣ. ಆಕ್ಷೇಪಣೆಯ ಮಾತುಗಳನ್ನು ಕೇಳಿದ ನಂತರ ರಾಮಪ್ಪನು ಪರಸ್ಪರರಲ್ಲಿ ವಿಶ್ವಾಸ ಮೂಡಿಸಲು ಪ್ರಯತ್ನಗಳನ್ನು ಮಾಡಿದ್ದಾನೆ. ಮಹಾರಾಜರ ಎದುರಿಗೆ ಕುಂಪಣಿ ಸರಕಾರ ಮತ್ತು ಕೋಲ್ ಸಾಹೇಬನನ್ನು ಹೊಗಳಿ, ಕ್ಷುದ್ರ ಜನರ ಮಾತು ಕೇಳದೆ ರೂಬುರೂಬು ಜವಾಬು ಸವಾಲು ಮಾಡಲು ಕೋರುತ್ತಾನೆ.

ಮಹಾರಾಜರ ದರ್ಬಾರಿನಲ್ಲಿದ್ದ ಮೀರ್ ಮಹಮದ್ ಈ ಕೋಲ್ ಸಾಹೇಬನ ನಂಬುಗೆಯ ಅಧಿಕಾರಿಯಿದ್ದಂತೆ ಭಾವಿಸಲು ಕೆಲವು ಅವಕಾಶಗಳು ಪ್ರಸ್ತುತ ಕೈಫಿಯತ್ತಿನಲ್ಲಿವೆ. ಕೋಲ್ ಸಾಹೇಬನಿಗೆ ಮಾತು ಕೊಟ್ಟಿದ್ದಂತೆ ಮೀರ್ ಮಹಮದ್ ದರ್ಬಾರಿನಲ್ಲಿ ಕೋಲ್ ಸಾಹೇಬ ಇಷ್ಟಪಡದ ಕೆಲವರನ್ನು ತೆಗೆದು ಒಂದೆರಡು ತಿಂಗಳೊಳಗೆ ಬಂದೋಬಸ್ತು ಮಾಡಬೇಕಾಗಿತ್ತು. ಎಂಟು ತಿಂಗಳಾದರೂ ಆ ಕೆಲಸವಾಗದಿದ್ದಾಗ ಕೋಲ್ ಅಸಮಾಧಾನದಿಂದ ಮಹಾರಾಜರನ್ನೇ ಆಕ್ಷೇಪಿಸಿದ, ಕರಾರಿನಂತೆ ಕೆಲವರನ್ನು ತೆಗೆದಿರುವುದಾಗಿಯೂ, ಕೆಲವರನ್ನು ತೆಗೆಯಲು ಇರುವ ತೊಂದರೆಗಳನ್ನೂ, ಅಸಹಾಯಕತೆಗಳನ್ನೂ ಮಹಾರಾಜರು ಕೋಲ್‌ಗೆ ತಿಳಿಸಿದರು. ಕೋಲ್ ಕಳುಹಿಸಿದ ಪಟ್ಟಿಯಲ್ಲಿ ೧೮ ಜನರ ಹೆಸರುಗಳಿದ್ದು, ಅವರುಗಳಲ್ಲಿ ಕೆಲವರ ಬಗ್ಗೆ ಅನುಕಂಪ ತೋರಲು ಮಹಾರಾಜರು ಕೋರಿದರು. ಅನುಕಂಪಕ್ಕೆ ಕಾರಣಗಳನ್ನೂ ತಿಳಿಸಿದರು. ಆದರೆ ಕೋಲ್‌ನ ಅಸಮಾಧಾನ ಕಡಿಮೆಯಾಗಲಿಲ್ಲ. ಅವರುಗಳನ್ನು ಇಟ್ಟುಕೊಳ್ಳುವುದಾದರೆ ತನ್ನನ್ನು ಬಿಟ್ಟು ಬಿಡಬೇಕಾಗಿ ಕೋಲ್ ತಿಳಿಸಿದ. ಆಗಾಗ್ಗೆ ತನ್ನ ಮಾತುಗಳನ್ನು ಮಹಾರಾಜರು ಪೂರ್ಣವಾಗಿ ನಡೆಸದಿದ್ದಾಗ

ಅಥವಾ ನಿಧಾನಿಸಿದಾಗ ಕೋಲ್ ಇಂತಹ ಬೆದರಿಕೆಗಳನ್ನು ಹಾಕಿದ್ದಾನೆ. ಆಗೆಲ್ಲಾ ಮಹಾರಾಜರು ದೈನ್ಯತೆಯಿಂದ ಅಂತಹ ಮಾತುಗಳನ್ನಾಡದಿರಲು ಮತ್ತು ಅವರ ಮಾತನ್ನು ಪೂರ್ಣವಾಗಿ ಬೇಗನೇ ನಡೆಸುವ ಮನವಿಗಳನ್ನೂ ಮಾಡಿದ್ದಾರೆ. 'ತಾವು ದೋಸ್ತರು. ನಮ್ಮ ಸಂಸ್ಥಾನವನ್ನು ತಾವು ನಿಲ್ಲಿಸಿ ಕೀರ್ತಿ ಸಂಪಾದಿಸಿದವರು... ೧೨ ವರ್ಷದಿಂದ, ಅನುಭವವಿಲ್ಲದ ನಮ್ಮನ್ನು ನಡೆಸಿಕೊಂಡು ಬಂದಿದ್ದೀರಿ. ಸರ್ವರೂ ತಾವೆ. ೭-೮ ತಿಂಗಳಿಂದ ಯಾರ ಮಾತೂ ಕೇಳದಂತೆ ನಡೆಸಿದಂತೆಯೇ ಮುಂದೂ ನಡೆಸಲು' ಮಹಾರಾಜರು ಸೂಚನೆ ನೀಡಿದ್ದಾರೆ. ಇಂತಹ ಸೂಚನೆಗಳಿಂದ ಸಂತುಷ್ಟನಾದ ಕೋಲ್ 'ಇದರಿಂದ ಮೈಲು ಹೋಗಿದಿಲ್ಲು ಸಾಫಾಗುವ,' 'ನಂತರ ಭೇಟಿಗೆ ಬರುವ,' 'ಇದರಿಂದ ಲಾಟ್ ಸಾಹೇಬನಿಗೂ ಖುಷಿ ಆಗುತ್ತದೆ' ಎನ್ನುವ ಆಶ್ವಾಸನೆ ನೀಡಿದ್ದಾನೆ. ತನ್ನ ಮಾತನ್ನು ಮಹಾರಾಜರು ಕೇಳುತ್ತಿಲ್ಲ ಎಂಬ ಆಶ್ವಾಸನೆ ಭಾವನೆಯಿಂದ ಕೋಲ್ ದರ್ಬಾರಿಗೆ ಬರದಿರುವ ಬೆದರಿಕೆಯನ್ನೂ ಹಾಕಿದ್ದಾನೆ. ಕೋಲ್ ಆಕ್ಷೇಪಿಸಿದ ಕೆಲವರನ್ನು ಮಹಾರಾಜರು ಕಳುಹಿಸಿದರೂ, ಸ್ನಾನ ಮತ್ತು ಪೂಜೆಯ ಸಂದರ್ಭದಲ್ಲಿ ಬರುವ ಶ್ರೀ ರಂಗಾಚಾರ್ಯ ಮತ್ತು ಶ್ರೀನಿವಾಸಚಾರ್ಯ ಶಾಸ್ತ್ರ, ಹೇಳಲು ಮತ್ತು ವೀಣೆ ಕೇಳಿಸಲು ಬರುವ ವೆಂಕಟಸುಬ್ಬಯ್ಯ ಅವರನ್ನು ಕಳುಹಿಸಲಾಗುವುದಿಲ್ಲವೆಂದೂ' ಅವರನ್ನು ಉಳಿಸಿಕೊಳ್ಳಲು ಅನುಮತಿ ನೀಡಬೇಕೆಂದೂ ಕೋಲ್‌ಗೆ ಮನವಿ ಮಾಡುತ್ತಾರೆ. ಹಾಗೆಯೇ ಮಹಾಮಾತೃಶ್ರೀ (ಲಕ್ಷ್ಮಮ್ಮಣ್ಣಿ) ಅವರ ಬಳಿ ಇರುವ ಅಂಚಿ ಮಲ್ಲರಾಜಯ್ಯ, ಕೊಮಾರಯ್ಯ ಮುಂತಾದವರನ್ನು ಕಳುಹಿಸುವಲ್ಲಿ ತಮಗಿರುವ ಅಸಹಾಯಕತೆಯನ್ನು ನೀವೆದಿಸುತ್ತಾರೆ. ಕೋಲ್ ಇಂತಹ ಮನವಿಗಳ ಬಗ್ಗೆ ಅಸಮಾಧಾನ ವ್ಯಕ್ತಪಡಿಸುತ್ತಾನೆ.

ಮಹಾರಾಜರ ಖಾಸಾ ವಿಷಯಗಳಲ್ಲಿ ಮತ್ತು ಅರಮನೆಯ ಒಳಾಡಳಿತದ ವಿಷಯದಲ್ಲೂ ಬ್ರಿಟಿಷ್ ಅಧಿಕಾರಿಗಳು ಹೇಗೆ ತಮ್ಮ ಅಧಿಕಾರವನ್ನು ಬಳಸಿಕೊಳ್ಳಲು, ಒತ್ತಡವನ್ನು ಹೇರಲು ಪ್ರಯತ್ನಿಸುತ್ತಿದ್ದರು ಎಂಬುದನ್ನು ವಕೀಲ ರಾಮಪ್ಪನ ಕೈಫಿಯತ್ತಿನ ಹಲವಾರು ಪುಟಗಳಲ್ಲಿ ಕಾಣಬಹುದು. ವಕೀಲ ರಾಮಪ್ಪನ ಮೂಲಕವೇ ಮಹಾರಾಜರ ಸ್ವಂತ ಕಾರ್ಯಕ್ರಮಗಳು, ಕಾರ್ಯನಿರ್ವಹಣೆ ಇತ್ಯಾದಿಗಳ ಬಗ್ಗೆಯೂ ಕೋಲ್ ವಿಷಯ ಸಂಗ್ರಹಣೆ ಮಾಡುತ್ತಿದ್ದ,

೨೫-೯-೧೮೧೩ ರಂದು ಆರಂಭವಾಗುವ ದಸರ ಹಬ್ಬಕ್ಕೆ ಬರಲು ಮಹಾರಾಜರು ಕೋಲ್‌ಗೆ ವಕೀಲ ರಾಮಪ್ಪನ ಮೂಲಕ ೨೪-೯-೧೮೧೩ ರಂದು ಆಮಂತ್ರಣ ನೀಡುತ್ತಾರೆ. ಆ ಸಂದರ್ಭದಲ್ಲಿ ಮೇಜು (ಮೇಜುವಾನಿ) ಆಗಬೇಕೆಂದೂ ಮಹಾರಾಜರ ಅಪೇಕ್ಷೆಯಾಗಿರುತ್ತದೆ. ವರ್ಷಾವಧಿ ಹಬ್ಬದಂದು ಎಲ್ಲರೂ ಖುಷಿಯಿಂದಿರಬೇಕೆಂದು ಮಹಾರಾಜರು ಇಚ್ಛಿಸಿರುವುದನ್ನು ರಾಮಪ್ಪ ಕೋಲ್‌ಗೆ ತಿಳಿಸುತ್ತಾನೆ. ಅಮೀಲ, ರಾಮರಾಯ ಮತ್ತು ಬಾಬರಲ್ಲಿ ಖಾನರನ್ನು ಕೋಲ್‌ನನ್ನು ಕರೆತರಲು ಮಹಾರಾಜರು ಕಳುಹಿಸುತ್ತಾರೆ. 'ಮೇಜಿ'ಗಾಗಿ ಬಟ್ಲೆರು ನಯನಪ್ಪನಿಗೆ ಹುಕುಂ ಮಾಡಿ, ದಸರೆ ಮುಗಿಯುವವರೆಗೂ ಅದರ ಬಂದೋಬಸ್ತು ಮಾಡಲು ರಾಮಯ್ಯನನ್ನೇ ನೇಮಿಸಲಾಗುತ್ತದೆ. ೨೫-೯-೧೮೧೩ ರಂದು ಶಾಸ್ತ್ರ ಪ್ರಕಾರ ಸಿಂಹಾಸನದ ಪೂಜೆ, ಆರೋಹಣ ಇತ್ಯಾದಿ ಕಾರ್ಯಗಳೆಲ್ಲಾ ನಡೆದು ಐದು ಘಂಟೆಗೆ ದರ್ಬಾರು ಆರಂಭವಾಗುತ್ತದೆ. ದಸರೆ ಮುಗಿಯುವ ಸಂದರ್ಭದಲ್ಲಿ ಸರ್ದಾರನ ಶಿಫಾರ್ಸಿನಂತೆ ಕೆಲವು ಇಂಗ್ಲಿಷ್ ಅಧಿಕಾರಿಗಳು ಮತ್ತು ಅವರ ಹೆಂಡತಿಯರಿಗೆ ಕಿಲ್ಲತ್ತು, ಶಾಲು ಇತ್ಯಾದಿಗಳನ್ನು ನೀಡಿ ಸತ್ಕರಿಸಲಾಗುತ್ತದೆ.

ಅಕ್ಟೋಬರ್ ೧೮೧೩ ರಲ್ಲಿ ಲಾಟ್ ಸಾಹೇಬ ಮದರಾಸಿನಿಂದ ಮೈಸೂರಿಗೆ ಬರುತ್ತಾನೆಂಬ ಸುದ್ದಿ ತಿಳಿದು, ಅವನ ಪ್ರವಾಸದ ವಿವರಗಳನ್ನೂ ತರಿಸಿಕೊಂಡು ಪ್ರಯಾಣ ಮಾರ್ಗದಲ್ಲಿ ರಸ್ತೆಗಳ ದುರಸ್ತಿ, ಊಟ-ವಸತಿಗಳ ಏರ್ಪಾಡು ಇತ್ಯಾದಿಗಳ ಬಗ್ಗೆ ವ್ಯವಸ್ಥೆ ಮಾಡಲಾಗುತ್ತದೆ. ಅದಕ್ಕೆ ವಿಶೇಷ ಅಧಿಕಾರಿಗಳನ್ನು ನೇಮಿಸಲಾಗುತ್ತದೆ. ಲಾಟ್ ಸಾಹೇಬನನ್ನು ಎದುರುಗೊಳ್ಳಲು ಮಹಾರಾಜರೇ ಬರಬೇಕೆಂಬುದು ಕೋಲ್‌ನ ಅಪೇಕ್ಷೆ.

೧೬-೧೦-೮೩ ರಂದು ಮಹಾರಾಜರಿಗೆ ಕುತ್ತಿಗೆ

ಊತಾ ಕಡಿಮೆಯಾದುದನ್ನು ರಾಮಪ್ಪ ಕೋಲ್‌ಗೆ ವರದಿ ಮಾಡುತ್ತಾನೆ. ೧೮-೧೦-೮೩ರಂದು ಹಿಂದಿನ ದಿನ ಮಹಾರಾಜರಿಗೆ ತಲೆನೋವು ಇದ್ದುದನ್ನೂ ರಾಮಪ್ಪ ತಿಳಿಸುತ್ತಾನೆ. ಮಹಾರಾಜರ ಅಪೇಕ್ಷೆಯಂತೆ ೧೮ ರಂದು ಮಧ್ಯಾಹ್ನ ಒಂದೂ ಮುಕ್ಕಾಲು ಘಂಟೆಗೆ ಕೋಲ್ ಅವರನ್ನು ಭೇಟಿಯಾಗುತ್ತಾನೆ.

ಇಂತಹ ಅತ್ಯಂತ ಸೂಕ್ಷ್ಮ ಖಾಸಗಿ ವಿಷಯಗಳಲ್ಲದೆ ಮುಂಡಗದ್ದೆ ಸೂರಪ್ಪ ಎಂಬುವವನ ಬಗ್ಗೆ, ದೊಡ್ಡಮ್ಮ (ಲಕ್ಷ್ಮಮ್ಮಣ್ಣಿ) ಅವರ ಆಶ್ವಾಸನೆಯ ಪ್ರಕಾರ ವ್ಯಕ್ತಿಯೊಬ್ಬನಿಗೆ ತೋಟ ನೀಡದಿರುವ ಬಗ್ಗೆ, ಹೊನ್ನಾಳಿ ರೈತರ ಮೇಲಿನ ದೂರಿನ ಬಗ್ಗೆ ಇತ್ಯಾದಿ ವಿಷಯಗಳ ಬಗ್ಗೆ ಕೈಫಿಯತ್ತಿನಲ್ಲಿ ವಿವರಗಳಿವೆ.

ಮೈಸೂರು ಒಡೆಯರು, ಅದರಲ್ಲೂ ಮುಮ್ಮಡಿ ಕೃಷ್ಣರಾಜರು ಬ್ರಿಟಿಷರ ನೆರವಿನಿಂದ ಮತ್ತೆ ತಮ್ಮ ರಾಜ್ಯವನ್ನು ಪಡೆದು, ರಾಜ್ಯವಾಳಿದರೂ, ನೆರವು ನೀಡಿದ್ದ ಬ್ರಿಟಿಷ್ ಅಧಿಕಾರಿಗಳ ಅಡಿಯಾಳುಗಳಂತೆ ಹೇಗೆ ಅನುಸರಿಸಿ ಬಾಳಬೇಕಾಯಿತು, ಬ್ರಿಟಿಷ್ ಅಧಿಕಾರಿಗಳು ನೆರವು ನೀಡಿದ ಒಂದೇ ಆಧಾರದ ಮೇಲೆ ಹೇಗೆ ದೇಶೀಯ ರಾಜರನ್ನು ತಮ್ಮ ಕೈಕೆಳಗಿನವರಂತೆ ನಡೆಸಿಕೊಂಡರು ಎಂಬ ಸೂಕ್ಷ್ಮ ವಿಷಯ ಬಗ್ಗೆ ರಾಮಪ್ಪನ ಕೈಫಿಯತ್ತು ಬಹು ಮುಖ್ಯ ದಾಖಲೆಯಾಗುತ್ತದೆ. ಈ ಕೈಫಿಯತ್ತಿನ ಮೂಲ ಪ್ರತಿಯಾಗಲೀ, ನಕಲಿನ ಉಳಿದೆಲ್ಲಾ ಪ್ರತಿಗಳೇ ಆಗಲಿ ದೊರೆತರೆ ಕೈಫಿಯತ್ತನ್ನು ಪರಿಷ್ಕರಿಸಿ ಪ್ರಕಟಿಸುವುದು ಮುಖ್ಯವೆಂದು ತಿಳಿಯಲಾಗಿದೆ. ಆಗಿನ ಕಾಲದ ಭಾಷಾ ಬಳಕೆಯನ್ನೇ ಕೈಫಿಯತ್ತಿನಲ್ಲಿ ಉದ್ದಕ್ಕೂ ಬಳಸಲಾಗಿದೆ. ಸೂಕ್ಷ್ಮಾಧ್ಯಯನಕ್ಕೆ ಇಂತಹ ಕೈಫಿಯತ್ತುಗಳು ನೆರವಾಗುತ್ತವೆ.

ಹೆಚ್.ಎಸ್. ಉಷಾರಾಣಿ*

# ಬಾಹತ್ತರನಿಯೋಗಿಗಳು–ಒಂದು ಅಧ್ಯಯನ

ನಿರ್ದಿಷ್ಟ ಕೆಲಸ ಕಾರ್ಯಗಳನ್ನು ನಿರ್ವಹಿಸಲು ನಿಯುಕ್ತರಾದವರೇ ನಿಯೋಗಿಗಳು ಅಂದಮೇಲೆ ಬಾಹತ್ತರ ನಿಯೋಗಿಗಳು ನಿರ್ವಹಿಸುತ್ತಿದ್ದ ಕೆಲಸಗಳು ಯಾವುವು? ಇವರ ಅವಶ್ಯಕತೆ ಕಂಡುಬರುತ್ತಿದ್ದುದಾದರೂ ಎಲ್ಲಿ ? ಈ ಹಿನ್ನೆಲೆಯಲ್ಲಿ ಬಾಹತ್ತರನಿಯೋಗಿಗಳನ್ನು ಅಧ್ಯಯನ ಮಾಡುವುದೇ ಪ್ರಸ್ತುತ ಲೇಖನದ ಉದ್ದೇಶವಾಗಿದೆ.

ಮಧ್ಯಕಾಲೀನ ಯುಗದಲ್ಲಿ ರಚಿಸಲ್ಪಟ್ಟ ಸಹಸ್ರಾರು ಶಾಸನಗಳು ದಾನ ಶಾಸನಗಳಿದ್ದು ದೇವಾಲಯಗಳಿಗೆ ದತ್ತಿಕೊಟ್ಟ ಮಾಹಿತಿಯನ್ನು ಒದಗಿಸುತ್ತವೆ. ದೇವಾಲಯಗಳ ನಿರ್ವಹಣೆಯಲ್ಲಿ ಉದ್ಯೋಗಿಗಳ ಪಾತ್ರ ಮಹತ್ವರವಾದುದು. ಉದ್ಯೋಗಿಗಳನ್ನು ಸಾಮಾನ್ಯವಾಗಿ ದೇವರ ಪರಿವಾರ, ಪರಿಚಾರಕ ವರ್ಗ, ದೇವರ ಸರ್ವ ನಿಯೋಗಿಗಳು ಎಂದು ಸಂಬೋಧಿಸಲಾಗಿದೆ. ಕೆಲವು ಶಾಸನಗಳಲ್ಲಿ ಕಂಡುಬರುವ ಬಾಹತ್ತರನಿಯೋಗಿ ಎಂಬ ಪದ ಅಧ್ಯಯನಾರ್ಹ ಬಾಹತ್ತರನಿಯೋಗಿ ಎಂದಾಗ ನಿಯುಕ್ತರಾದ ಎಪ್ಪತ್ತೆರಡು ಮಂದಿ ಎಂಬ ಅರ್ಥದವರೆಂಬುದನ್ನು ಈ ಎಪ್ಪತ್ತೆರಡು ಮಂದಿಯ ನಿಯುಕ್ತಿಗೆ ಬಾಹತ್ತರ ನಿಯೋಗಾಧಿಪತಿ ಎಂಬ ಅಧಿಕಾರಿ ಪದನಾಮವನ್ನು ಶಾಸನಗಳಲ್ಲಿ ಗಮನಿಸುತ್ತೇವೆ. ಇದರಿಂದ ಬಾಹತ್ತರ ನಿಯೋಗಿಗಳಿಗೆ ಪ್ರಾಧಾನ್ಯತೆ ನೀಡಲಾಗಿತ್ತೆಂದು ಗೊತ್ತಾಗುತ್ತದಲ್ಲವೆ ?

ಶಾಸನಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ, ಬಾಹತ್ತರನಿಯೋಗಿ ಎಂಬ ಪದ ಬಹುಸಂಖ್ಯೆಯ ನಿಯುಕ್ತಿಯನ್ನುದ್ದೇಶಿಸಿ ಸಾಂಕೇತಿವಾಗಿ ಬಳಸಲ್ಪಟ್ಟದೆಂದು ವೇದ್ಯವಾಗುತ್ತದೆ. ಅಂದು ದೇವಾಲಯಗಳ ನಿರ್ವಹಣೆಗೆ ಬಹುನಿಯುಕ್ತ ಅಗತ್ಯವಿತ್ತು. ದೇವಾಲಯಗಳು ಅಗ್ರಹಾರಗಳಲ್ಲಿ ನಿರ್ಮಾಣಗೊಳ್ಳುತ್ತಿದ್ದುದರಿಂದ ಅಗ್ರಹಾರಗಳ ಕಾರ್ಯಕ್ಷೇತ್ರ ವಿಸ್ತರಿಸತೊಡಗಿತು. ಅಗ್ರಹಾರಗಳಲ್ಲಿ ಹಲವು ವಿಧ ಮಹಾ ಅಗ್ರಹಾರ ಪಿರಿಯ ಅಗ್ರಹಾರ, ಅನಾದಿ ಅಗ್ರಹಾರ, ಪರಮೇಶ್ವರದತ್ತಿ ಅಗ್ರಹಾರ, ಉತ್ತಮದ ಅಗ್ರಹಾರ ಎಂದು ಗುರುತಿಸಬಹುದು.[1] ಮಹಾ ಅಗ್ರಹಾರ ಅಥವಾ ಪಿರಿಯ ಅಗ್ರಹಾರಗಳ ದೇವಾಲಯಗಳಲ್ಲಿ ಬಹುಸಂಖ್ಯೆಯ ನಿಯೋಗ ಸಾಧ್ಯವಾಗುತ್ತಿತ್ತಷ್ಟೆ.

ಮೊದಲಿಗೆ, ಬಾಹತ್ತರನಿಯೋಗಿಗಳನ್ನು ಚಿತ್ರಿಸಲು ನೆರವಾಗುವ ಶಾಸನಗಳು ಕಡಿಮೆ ಸಂಖ್ಯೆಯಲ್ಲಿವೆ. ಕಲ್ಯಾಣಿ ಚಾಲುಕ್ಯರ ಜಗದೇಕಮಲ್ಲನ ಶಾಸನವೊಂದು[2] ಬರ್ಮಣ್ಣಯ್ಯ ದಂಡನಾಯಕನನ್ನು 'ಬಾಹತ್ತರ ನಿಯೋಗಾಧಿಷ್ಠಾಯಕಂ ಎಂದು ವರ್ಣಿಸುತ್ತದೆ. ಇದು ಕಲ್ಯಾಣಿ ಚಾಲುಕ್ಯರ ಕಾಲದಿಂದ ಬಹು ನಿಯೋಗಿಗಳ ಪ್ರತಿಷ್ಠಾಪನೆಯನ್ನು ಸೂಚ್ಯವಾಗಿ ತಿಳಿಸುತ್ತದೆ. (ಈ ಕಾಲಕ್ಕೂ ಮೊದಲು ಬಾಹತ್ತರ

* ಉಪನ್ಯಾಸಕರು : ವಿದ್ಯೋದಯ ಕಾಲೇಜು, ತಿ. ನರಸೀಪುರ, ಮೈಸೂರು ಜಿಲ್ಲೆ

1 ಡಾ. ಲೀಲಾ ಶಾಂತಕುಮಾರಿ, ಹಿಸ್ಟರಿ ಆಫ್ ದಿ ಅಗ್ರಹಾರಾಸ್–ಕರ್ನಾಟಕ ೪೦೦-೧೩೦೦, ಪುಟ ೨೪.

2 ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್, ಸಂ. ೪, ಸಂಖ್ಯೆ ೧೧, ೧೨ನೆಯ ಶತಮಾನ

ನಿಯೋಗಿ ಎಂಬ ಪದ ಶಾಸನಗಳಲ್ಲಿ ಕಂಡುಬರುವುದಿಲ್ಲ.) ಈ ನಿಯೋಗಿಗಳ ಬಗ್ಗೆ ಹೊಯ್ಸಳರ ಶಾಸನಗಳಲ್ಲಿ ತಕ್ಕಮಟ್ಟಿಗೆ ಮಾಹಿತಿ ದೊರೆಯತ್ತದೆ. ವೀರನಾರಸಿಂಹನ ತಿರುಮಕೂಡಲ ನರಸೀಪುರ ಶಾಸನಗಳು[3] ಸೋಮನಾಥಪುರ ಅಗ್ರಹಾರದಲ್ಲಿದ್ದ ದೇವಾಲಯಗಳ ಉದ್ಯೋಗಿಗಳನ್ನು ಬಾಹತ್ತರನಿಯೋಗಿಗಳೆಂದ ಉಲ್ಲೇಖಿಸಿರುವುದಲ್ಲದೆ ಅವರನ್ನು ಗುರುತಿಸಲು ನೆರವಾಗುತ್ತವೆ. ಅದರಂತೆ ಆಚಾರ್ಯರು, ನಂಬಿಯರು, ಪರಿಚಾರಕರು, ಮಾಲೆಗಾರರು, ಸಿಂಗಾರಿಗಳು ವಾದ್ಯದವರು ಅಥವಾ ಓಲಗದವರು, ಬಾಣಗರು, ಅಪ್ಪಣೆಯವರು, ಅಫ್ವಣೆಯವರು (?) ಆರತಿಯವರು, ಅಂಗರಕ್ಷಕರು ದವಸಿಗರು, ಕುಂಬಾರರು, ಅಕ್ಕಸಾಲಿ, ಅಗಸ, ನಾವಿದ, ಸೇನಬೋವ, ಭಂಡಾರಿ, ಅಧ್ಯಕ್ಷ ಮೊದಲಾದವರು ದೇವಾಲಯದ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಇವರು ದೇವಾಲಯದ ಅನಿವಾರ್ಯ ಅಂಗಗಳಾಗಿದ್ದುದು ಹೌದು. ಹಾಗಾಗಿ ದೇವಾಲಯಗಳು ಸಾಮಾಜಿಕ ಸಂಸ್ಥೆಗಳೆನಿಸಿದ್ದು ಧಾರ್ಮಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಚಟುವಟಿಕೆಗಳ ತಾಣಗಳಾಗಿದ್ದವು.

ತಿರುಮಕೂಡಲು ನರಸೀಪುರ ತಾಲೂಕಿನ ಶಾಸನಗಳು ವೈಷ್ಣವ ಹಾಗೂ ಶೈವ ದೇವಾಲಯಗಳಿಗೆ ಪ್ರತ್ಯೇಕವಾಗಿ ದತ್ತಿಕೊಟ್ಟ ವಿವರವನ್ನೊಳಗೊಂಡಿವೆ. ಪ್ರಸ್ತುತ ಅಧ್ಯಯನಕ್ಕನುಗುಣವಾಗಿ ನಿಯೋಗಿಗಳಿಗೆ ವಿನಿಯೋಗಿಸಲಾಗುತ್ತಿದ್ದ ಆದಾಯವನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆ. ದೇವಾಲಯಗಳಿಗೆ ನಿಯುಕ್ತರಾಗುತ್ತಿದ್ದ ನಿಯೋಗಿಗಳು ಹಾಗೂ ಅವರ ವೇತನವನ್ನು (ವಾರ್ಷಿಕ) ಕೆಳಕಂಡ ಪಟ್ಟಿಯ ಮೂಲಕ ತಿಳಿಯಬಹುದು.

| | | ಕೇಶವ ದೇವಾಲಯ | | ಪಂಚಲಿಂಗ ದೇವಾಲಯ | |
|---|---|---|---|---|---|
| | ನಿಯೋಗಿಗಳು | ಸಂಖ್ಯೆ | ವೇತನ ಗದ್ಯಾಣದಲ್ಲಿ | ಸಂಖ್ಯೆ | ವೇತನ ಗದ್ಯಾಣದಲ್ಲಿ |
| ೧. | ವೈಷ್ಣವರು | ೨೦ | ೩೦೦ | — | — |
| ೨. | ಸ್ಥಾನಿಕರು | — | — | ೬ | ೭೨ |
| ೩. | ಆಚಾರ್ಯರು | — | ೨೦ | — | ೬ |
| ೪. | ಪುರಾಣ ಉವಾಚಕ್ಕೆ | — | ೧೬ | — | ೧೨ |
| ೫. | ನಂಬಿಯರು | ೧೦ ಅರ್ಧ | ೧೨೬ | ೬ | ೭೨ |
| ೬. | ಸಿಂಗಾರಿಗಳು | ೫ | ೩೦ | ೬ | ೩೬ |
| ೭. | ಪರಿಚಾರಕರು | ೧೦ ಅರ್ಧ | ೪೨ | ೬ | ೨೪ |
| ೮. | ಅಪ್ಪಣೆಯವರು | ೧೦ ಅರ್ಧ | ೪೨ | — | — |
| ೯. | ದೇವರ ಅಫ್ವಣೆಯವರು | — | — | — | ೨೪ |
| ೧೦. | ಹಡಪದೋಲಗ | — | ೬ | — | — |
| ೧೧. | ಕುಡಿನೀರ ವೋಲಗ | — | ೬ | — | — |
| ೧೨. | ಶ್ರೀಗಂಧದೋಲಗ | — | ೬ | — | — |
| ೧೩. | ಮುದ್ರೆಯವೋಲಗ | — | ೧೨ | — | — |
| ೧೪. | ಭಂಡಾರದೋಲಗ | — | — | — | ೧೨ |
| ೧೫. | ಸೀಗುಂಚಾಮರದೋಲಗ | — | ೧೨ | — | ೧೨ |

3 ಎಪಿಗ್ರಾಫಿಯಾ ಕರ್ನಾಟಕ ಸಂ. ೫ (ಪರಿಷ್ಕೃತ ಆವೃತ್ತಿ) ತಿನ. ೮೮ ಮತ್ತು ೮೯

| ನಿಯೋಗಿಗಳು | ಕೇಶವ ದೇವಾಲಯ | | ಪಂಚಲಿಂಗ ದೇವಾಲಯ | |
|---|---|---|---|---|
| | ಸಂಖ್ಯೆ | ವೇತನ ಗದ್ಯಾಣದಲ್ಲಿ | ಸಂಖ್ಯೆ | ವೇತನ ಗದ್ಯಾಣದಲ್ಲಿ |
| ೧೬. ಗಂಧಕುಡಿನೀರವರು | — | — | — | ೧೨ |
| ೧೭. ಕರ್ಪೂರದಾರತಿಯವರು | ೨ | ೧೬ | — | ೧೨ |
| ೧೮ ರಂಗವಾಲೆ ಹಿಟ್ಟಿನಾರತಿಯವರು | ೪ | ೧೬ | — | — |
| ೧೯. ಬಾಣಸಿಗರು | ೧೦ ಅರ್ಧ | ೪೨ | ೫ | ೨೪ |
| ೨೦. ಬಾಣಸದ ಅಪ್ಪಣೆಯವರು | ೫ | ೨೦ | — | — |
| ೨೧. ಬಾಣಸದ ಅಪ್ಪಣೆಯವರು | — | — | ೬ | ೨೪ |
| ೨೨. ರಂಗವಾಲೆ | — | — | ೩ | ೧೨ |
| ೨೩. ಬಾಹಿಯವರು | ೫ | ೨೦ | ೬ | ೨೪ |
| ೨೪. ಮಾಲೆಗಾರರು | ೧೦ ಅರ್ಧ | ೪೨ | ೬ | ೨೪ |
| ೨೫. ದವಸಿಗರು | ೧೦ | ೪೦ | ೬ | ೨೪ |
| ೨೬. ದವಸಿಗರ ಆಳು | — | — | ೧೨ | ೪೮ |
| ೨೭. ಅಂಘರಿಕರ ಆಳು | ೧೭ | ೬೮ | ೯ | ೩೬ |
| ೨೮. ಅಂಗರಕ್ಕ ನಾಯಕ | — | ೧೦ | — | ೧೦ |
| ೨೯. ಭಂಡಾರಿ | — | — | — | ೧೨ |
| ೩೦. ಮುದ್ರೆಯ ಅದ್ದಿಕ (ಅಧ್ಯಕ್ಷ) | — | — | — | ೧೨ |
| ೩೧. ಸೇನಬೋವ | — | ೧೨ | — | — |
| ೩೨. ಸೇನಬೋವ ಭಟ್ಟಗುತ್ತರು | — | — | — | ೧೮ |
| ೩೩. ಭಟ್ಟಗುತ್ತರು (?) | ೨ | ೨೦ | — | — |
| ೩೪. ಅಕ್ಕಸಾಲೆ | — | ೪ | — | ೨ |
| ೩೫. ಕುಂಬಾರರು | ೩ | — | ೩ | ೧೨ |
| ೩೬. ಅಸಗ | — | ೪ | — | ೪ |
| ೩೭. ನಾಯಿಂದ | — | ೪ | — | ೪ |
| ೩೮. ನಾಗವಾಸಕ್ಕೆ | — | ೩೦೦ | — | — |
| ೩೯. ರಂಗಭೋಗದ ನಾಗವಾಸದ ಮೊಖರಿಗೆ | — | — | — | ೩೦ |
| ೪೦. ಕೊಠಾರಿ | — | — | — | ೧೨ |
| ೪೧. ಇಣ್ಣಿಯವರು (?) | — | — | ೬ | ೨೪ |

ಮೇಲ್ಕಂಡ ಪಟ್ಟಿಯಲ್ಲಿ ಉದ್ಯೋಗಿಗಳನ್ನು ವೀಕ್ಷಿಸಿದಾಗ ಸಮಾಜದ ವಿವಿಧ ವರ್ಗಗಳ ಜನರಿಗೆ ದೇವಾಲಯಗಳಲ್ಲಿ ಸೇವೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತೆಂಬುದು ಗಮನಾರ್ಹ. ನೇಮಿತ ಸಂಖ್ಯೆ ಇನ್ನೂರನ್ನು ಮೀರಿದೆ. ನಿಯೋಗ ಬಹುಸಂಖ್ಯೆಯಲ್ಲಿದ್ದರೂ ನಗದು ರೂಪದಲ್ಲಿ ವಾರ್ಷಿಕ ವೇತನ ನಿಗದಿಪಡಿಸಲಾಗುತ್ತಿತ್ತು. ಇದು ಆರ್ಥಿಕ ವ್ಯವಸ್ಥೆಯಲ್ಲಿ ಹಣಕಾಸು ಬೆಳವಣಿಗೆಯನ್ನು ಸೂಚಿಸುತ್ತದೆ. ಹಾಗೆಯೇ ಕೃಷಿಯೇತರ ಕಾರ್ಮಿಕರ ಜೀವನ ಮಟ್ಟ ನಿರ್ಧರಿಸಲು ಸಹಕಾರಿಯಾಗುತ್ತದೆ. ದೇವಾಲಯದ ಸಾಮಾನ್ಯ ನೌಕರನಿಗೆ ೪ ಗದ್ಯಾಣ ಸಂಭಾವನೆ ದೊರೆಯುತ್ತಿತ್ತೆಂದು ಗೋಚರಿಸುತ್ತದೆ। 'ದುಡಿಮೆಗೆ

ತಕ್ಕ ವೇತನ' ನಿಯಮವನ್ನು ಆಳ್ವಿಕೆಗಾರರು ತಮ್ಮ ಆರ್ಥಿಕ ನೀತಿಯಲ್ಲಿ ಅಳವಡಿಸಿಕೊಂಡಿದ್ದನ್ನು ಗಮನಿಸ ಬಹುದು.

ಶಾಸನಗಳಲ್ಲಿ ಸೋಮನಾಥಪುರ ಮಹಾ ಅಗ್ರಹಾರವೆಂದೂ, ವಿದ್ಯಾನಿಧಿ ಪ್ರಸನ್ನವೆಂದೂ, ಸರ್ವ ಶಾಸ್ತ್ರಗಳನ್ನು ಬಲ್ಲ ಉಪಾಧ್ಯಾಯರನ್ನು ಹೊಂದಿತ್ತೆಂದೂ ವರ್ಣಿಸಲಾಗಿದೆ. ಈ ಅಗ್ರಹಾರವು ದೋ-ಆಬ್ ಪ್ರದೇಶದಲ್ಲಿದ್ದುದರಿಂದ ದೇವಾಲಯಗಳು ಪಡೆದ ದತ್ತಿಯೂ ಅಧಿಕ ಪ್ರಮಾಣದ್ದಾಗಿದೆ. ಪರಿಣಾಮವಾಗಿ ಅಗ್ರಹಾರವು ಆರ್ಥಿಕವಾಗಿ ಸಂಪತ್ತಿನಿಂದ ಕೂಡಿತ್ತು. ಅಂದಮೇಲೆ ಪ್ರತಿಷ್ಠಿತ ಅಗ್ರಹಾರಗಳಲ್ಲಿ ಸೋಮನಾಥಪುರ ಒಂದಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಪ್ರಾಯಶಃ ಅಗ್ರಹಾರಧ ಆರ್ಥಿಕ ಸ್ಥಿರತೇ ಬಹು ನಿಯೋಗಿಗಳ ನೆಲೆಸುವಿಕೆಗೆ ಎಡೆಮಾಡಿಕೊಟ್ಟಿರ ಬಹುದು.

ಅಗ್ರಹಾರದ ವೈಷ್ಣವರು, ಆಚಾರ್ಯರು ಮತ್ತು ನಂಬಿಯರಿಗೆ ನೀಡಿದ ದತ್ತಿಶಾಸನದಲ್ಲಿ[4] ಈ ನಿಯೋಗಿಗಳು ಸಂಬಂಧಿಸಿದಂತೆ ಈ ರೀತಿ ಆದೇಶಿಸಲಾಗಿದೆ. "ತಂಮ ಬಾಹತ್ತರ ನಿಯೋಗಿಗಳಿಗೆ ಪೂರ್ವ್ವಮರಿಯಾದೆಯ ಶಾಸನದಲುಳ್ಳ ಜೀವಿತವನು ಮುನ್ನಿನ ಮರಿಯಾದೆಯಲ್ಲಿ ಮಾರೆಯ ಹಳ್ಳಿಯಲ್ಲಿ ನೆಲೆಜೀವಿತವಾಗಿ ಕೊಳುತಾಬಹರು" ಎಂದು. ಇದರಿಂದ ವೈಷ್ಣವ ದೇವಾಲಯದ (ಕೇಶವ ದೇವಾಲಯ) ಉದ್ಯೋಗಿಗಳ ಭವಿಷ್ಯ ಭದ್ರವಾಗಿತ್ತೆಂದು ಖಚಿತವಾಗುತ್ತದೆ. ಪ್ರಾರಂಭದಿಂದಲೂ ಈ ದೇವಾಲಯದ ನಿರ್ವಹಣೆಗೆ ಆದ್ಯತೆ ನೀಡಿದುದರಿಂದ ಇಂದಿಗೂ ಈ ದೇವಾಲಯ ಪ್ರವಾಸಿಗರನ್ನು ಆಕರ್ಷಿಸುತ್ತಿದೆ. ಪಂಚಲಿಂಗ ದೇವಾಲಯ ಸಂಪೂರ್ಣವಾಗಿ ನಿರ್ಲಕ್ಷಿತವಾಗಿದೆ.

---

4 ಅದೇ ಸಂಖ್ಯೆ ೯೧

ನಿರ್ಮಲ ಡಿ. ಪೋತದಾರ*

# ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಿದ್ದ ಕೆಲವು ತೆರಿಗೆಗಳು-ಒಂದು ಅಧ್ಯಯನ

ನಮ್ಮ ಪ್ರಾಚೀನ ಇತಿಹಾಸವನ್ನು ಅಭ್ಯಸಿಸಿದಾಗ, ಇತಿಹಾಸದ ಒಂದು ಭಾಗವಾಗಿ ಪ್ರಾಚೀನ ಕಾಲದ ಅರ್ಥವ್ಯವಸ್ಥೆ ಒಂದು ಪ್ರಮುಖವಾದ ಸ್ಥಾನವನ್ನು ಪಡೆದುದನ್ನು ನಾವು ಕಾಣುತ್ತೇವೆ. ನಮ್ಮ ಪ್ರಾಚೀನರಿಗೂ ಒಂದು ಸುವ್ಯವಸ್ಥಿತವಾದ ರಾಜ್ಯ ರಾಷ್ಟ್ರದ ಕಲ್ಪನೆಯಿತ್ತು. ಒಂದು ರಾಜ್ಯದ ಚಿತ್ರ ನಮ್ಮ ಮುಂದೆ ಮೂಡಿದಾಗ ಅದು ವ್ಯವಸ್ಥಿತವಾಗಿ ನಡೆಯಲು ಬೇಕಾಗುವ ಅವಶ್ಯಕತೆಗಳ ವಿಚಾರ ಮಾಡುವದು ಸಹಜ. ಈ ಅವಶ್ಯಕತೆಗಳ ವಿಚಾರವೇ ಮೌರ್ಯರ ಕಾಲದಲ್ಲಿ 'ಸಪ್ತಾಂಗಂ ರಾಜ್ಯಂ' ಎನ್ನುವ ಕೌಟಿಲ್ಯನ ತತ್ವಕ್ಕೆ ಹುಟ್ಟು ಹಾಕಿತು. ರಾಜ, ಮಂತ್ರಿಗಳು ರಾಜ್ಯದ ಒಂದು ಪ್ರಮುಖ ಅಂಗವಾಗಿರುವ ಹಾಗೆ ಕೋಶವೂ ಕೂಡ ಸಪ್ತಾಂಗಗಳಲ್ಲಿ ಒಂದು ಸ್ಥಾನ ಪಡೆದಿದೆ. ಈ ರಾಜ ಕೋಶವು ಯಾವಾಗಲೂ ಸಮೃದ್ಧ, ಸುವ್ಯವಸ್ಥಿತವಾಗಿ ಇರಲು ಒಂದು ಅಧಿಕಾರಿಗಳ ಗುಂಪು ಹುಟ್ಟಿಕೊಂಡ ಹಾಗೆಯೆ ಈ ಕೋಶಕ್ಕೆ ನಿಯಮಿತವಾಗಿ ಆದಾಯ ಬರುವಂತೆ ಮಾಡಿಕೊಂಡ ವ್ಯವಸ್ಥೆಯೇ 'ತೆರಿಗೆ ಸಂಗ್ರಹಣೆ' ಅಥವಾ 'ಕರ ಸಂಗ್ರಹಣೆ'.

ನಮ್ಮ ದೇಶದಲ್ಲಿ ಈ 'ತೆರಿಗೆ ವ್ಯವಸ್ಥೆ' ವೇದ ಕಾಲದಿಂದಲೂ ಜಾರಿಯಲ್ಲಿದ್ದುದು ಕಂಡು ಬರುತ್ತದೆ. ಆದರೆ ಈ ಕಾಲದಲ್ಲಿ ಶುಲ್ಕ ಮುಂತಾದ ತೆರಿಗೆಗೆ ಸಂಬಂಧಿಸಿದ ಪದಗಳ ಬಳಕೆ ಕಂಡು ಬಂದರೂ ತೆರಿಗೆಯ ವೈವಿಧ್ಯತೆ ಇದ್ದ ಬಗ್ಗೆ ಉಲ್ಲೇಖಗಳು ದೊರೆಯುವುದಿಲ್ಲ. ಈ ಅರ್ಥವ್ಯವಸ್ಥೆ ಅಥವಾ ರಾಜ್ಯದ ಆರ್ಥವ್ಯವಸ್ಥೆಗೆ (public finance) ಒಂದು ನಿರ್ದಿಷ್ಟವಾದ ರೂಪ ದೊರೆತದ್ದು ಮೌರ್ಯರ ಕಾಲದಲ್ಲಿಯೇ ಕೌಟಿಲ್ಯನ 'ಅರ್ಥಶಾಸ್ತ್ರ'ದಂತಹ ಗ್ರಂಥಗಳು ಅರ್ಥವ್ಯವಸ್ಥೆಯ ಸ್ವರೂಪ ಮತ್ತು ಅದರ ಎರಡು ಅಂಗಗಳಾದ ತೆರಿಗೆಯ ಸಂಗ್ರಹಣೆ (Tax ಅಥವಾ Revenue collection) ಮತ್ತು ಸಾರ್ವಜನಿಕ ವೆಚ್ಚ (public expenditure) ಬಗ್ಗೆ ವಿವರವಾದ ವಿವರಣೆ ನೀಡುತ್ತವೆ. ಹೀಗಾಗಿ ಮೌರ್ಯರ ಅರ್ಥವ್ಯವಸ್ಥೆ ಮುಂದೆ ಆಳಿದ ಎಲ್ಲ ಸಾಮ್ರಾಜ್ಯಗಳಿಗೂ ಒಂದು ಮಾದರಿಯಾಯಿತು. ಈ ರಾಜ ವಂಶಗಳು ಮೌರ್ಯರ ಅರ್ಥವ್ಯವಸ್ಥೆಯನ್ನೂ ತಮಗೆ ಅನುಕೂಲವಾಗುವಂತೆ ಅಲ್ಪ ಸ್ವಲ್ಪ ಮಾರ್ಪಾಡುಗಳೊಂದಿಗೆ ಬದಲಾಯಿಸಿಕೊಂಡರೂ ಹೆಚ್ಚಿನ ಅಂಶಗಳು ಹಾಗೆಯೇ ಮುಂದುವರೆದವು. ಮುಂದೆ ಕರ್ನಾಟಕದಲ್ಲಿ ಆಳಿದ ಕದಂಬರಿಂದ ಹಿಡಿದು ವಿಜಯನಗರದವರೆಗಿನ ರಾಜ ವಂಶಗಳು ಕೂಡ ತಮ್ಮ ಅರ್ಥವ್ಯವಸ್ಥೆಯಲ್ಲಿ ಈ ಅಂಶಗಳನ್ನು ಅಳವಡಿಸಿಕೊಂಡುದನ್ನು ಕಾಣಬಹುದು. ಪ್ರಸ್ತುತ ಲೇಖನದ ಉದ್ದೇಶ ಪ್ರಾಚೀನ ಕರ್ನಾಟಕದ ಅರ್ಥವ್ಯವಸ್ಥೆಯಲ್ಲಿ ಕಂಡು ಬರುವ ತೆರಿಗೆಗೆ ಸಂಬಂಧಿಸಿದ ಕೆಲವು ಕುತೂಹಲ ಕಾರಕ ಪದಗಳ ಅರ್ಥವಿಶ್ಲೇಷಣೆ ಆಗಿದೆ. ಈ ಪದಗಳನ್ನು

* ಸಂಶೋಧನ ವಿದ್ಯಾರ್ಥಿ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦೦೦೩

ಆಯಾ ವಿಭಾಗಕ್ಕೆ ಸಂಬಂಧಿಸಿದಂತೆ ವಿಭಾಗಿಸಿ ಅಭ್ಯಸಿಸಲಾಗಿದೆ.

## I. ಅರ್ಥವ್ಯವಸ್ಥೆಗೆ ಸಂಬಂಧಿಸಿದ ಸಾಮಾನ್ಯ ಪದಗಳು

೧. ಅಪೂರ್ವ ಆಯ—ತೆರಿಗೆಯ ಹೆಸರೇ ಸೂಚಿಸುವಂತೆ ಈ ತೆರಿಗೆಯನ್ನು ವಿಶಿಷ್ಟ ಸಂದರ್ಭಗಳಲ್ಲಿ ವಿಧಿಸಿರಬೇಕು. ರಾಜನು ಒಂದು ಮಹತ್ವಾಕಾಂಕ್ಷಿ ಯೋಜನೆಯನ್ನು ಕೈಗೊಂಡಾಗ ಹಣದ ಕೊರತೆ ಉಂಟಾದಾಗ ಈ ತೆರಿಗೆಯನ್ನು ವಿಧಿಸಿರಬೇಕು. ಇದನ್ನೊಂದು Surcharge ಎನ್ನಲು ಅಡ್ಡಿಯಿಲ್ಲ.

ವಿಶೇಷ ಆದಾಯ, ವಿಶೇಷ ಚರಾದಾಯ ಎಂಬ ತೆರಿಗೆಗಳೂ ಕೂಡ ಅಪೂರ್ವ ಆಯವನ್ನೇ ಹೋಲುತ್ತವೆ.

## II. ಒಕ್ಕಲುತನದ ತೆರಿಗೆಗಳು

೧. ಕಟುದೆರೆ, ಕಟುತೆರೆ—ಧಾನ್ಯಗಳ ವಿಶೇಷವಾಗಿ ಅಕ್ಕಿಯ ಮೂಟೆಯ ಮೇಲೆ ವಿಧಿಸುವ ಕರವಾಗಿತ್ತು. ಬಹುಶಃ ಈ ತೆರಿಗೆಯನ್ನು ಭತ್ತದ ಕೃಷಿ, ಮಾರಾಟ ಹೆಚ್ಚಿಗೆ ಇದ್ದ ಸ್ಥಳಗಳಲ್ಲಿ ವಿಧಿಸುತ್ತಿದ್ದಿರಬೇಕು.

೨. ಕವಣಾಯ—ಹುಲ್ಲುಗಾವಲಿನ ತೆರಿಗೆಯಿಂದ ಬರುವ ಆದಾಯ

೩. ಕೆಳವತ್ತ—ಭತ್ತದ ಕಣದಿಂದ ಭತ್ತದ ರೂಪವಾಗಿ ಕೊಡುವ ಸುಂಕ ಇದಾಗಿತ್ತು.

೪. ಖಾಣೆ—ಮೇವಿನ ಮೇಲಿನ ತೆರಿಗೆ

೫. ಗುಳಿದೆರೆ, ಕುಳಿದೆರೆ—ತೋಟದಲ್ಲಿಯ ಗಿಡಗಳನ್ನು ನೆಡುವ ಕುಣಿಗಳ ಮೇಲಿನ ಕರ; ತೋಟದ ಬಾವಿಯ ಮೇಲಿನ ಕರ. ಕುಳಿದೆರೆ ತೋಟದಲ್ಲಿ ನೆಟ್ಟ ಗಿಡಗಳನ್ನು ಎಣಿಸಿ ಅವುಗಳ ಮೇಲೆ ವಿಧಿಸುವ ಕರವಾಗಿತ್ತು.

೬. ತಿಪ್ಪೆಯ ಸುಂಕ—ತಿಪ್ಪೆಗಳ ಮೇಲಿನ ಸುಂಕ. ಇದು ತಿಪ್ಪೆಗಳಲ್ಲಿ ಸಂಗ್ರಹಿಸಿದ ಗೊಬ್ಬರದ ಮೇಲಿನ ಸುಂಕವಾಗಿತ್ತು.

೭. ನಲ್ಲಾವು, ನಲ್ಲೆತ್ತು, ನಲ್ಲೆಮ್ಮೆ—ಒಳ್ಳೆಯ ಜಾತಿಯ ಹಸು, ಎತ್ತು ಮತ್ತು ಎಮ್ಮೆಗಳ ಮೇಲಿನ ತೆರಿಗೆ.

೮. ಬಣಬೆದೆರೆ—ಬಣಿವೆಯ ಮೇಲಿನ ತೆರಿಗೆ.

೯. ಸೊಪ್ಪೆ ಬಿರಾಡ—ಮೇವಿನ ಮೇಲಿನ ತೆರಿಗೆ. ಸೊಪ್ಪು ಎಂಬ ಶಬ್ದವನ್ನು ಮೇವು ಅಥವಾ ಹಸಿಮೇವು ಎಂದು ಅರ್ಥೈಸಬಹುದು.

೧೦. ಹುಲು ಬನ್ನಿ—ದನ ಮೇಯಿಸುವ ಹುಲ್ಲುಗಾವಲಿನ ಮೇಲಿನ ಕರ. ಆಗಿನ ಕಾಲದ ಅರ್ಥವ್ಯವಸ್ಥೆ ಕೃಷಿ ಪ್ರಧಾನವಾದಗಿದ್ದುದರಿಂದ, ಕೃಷಿಗೆ ಸಂಬಂಧಿಸಿದ ಎಲ್ಲ ಚಟುವಟಿಕೆಗಳ ಮೇಲೂ ಕರ ವಿಧಿಸಿದುದನ್ನು ಕಾಣಬಹುದು.

## III. ಸುಂಕಗಳು

೧. ಹೊಳೆಯ ದಂಡೆಯ ಅನುವು—ಹೊರಗಿನಿಂದ ಹೊಳೆ ದಾಟಿ ಬರುವವರು ಕೊಡಬೇಕಾದ ಸುಂಕ. ಹೊಳೆಗಳು ಹೆಚ್ಚಾಗಿ ರಾಜ್ಯದ ಅಥವಾ ಆಡಳಿತ ವಿಭಾಗಗಳ ಸೀಮೆಗಳಾಗಿರುತ್ತಿದ್ದವು. ಆದ್ದರಿಂದ ಈ ಸುಂಕವು ಹೊಳೆ ದಾಟಿ ಬರುವವರಿಗೆ ಒಂದು ಬಗೆಯ ಜಕಾತಿ ಸುಂಕ (ಪ್ರವೇಶ ತೆರಿಗೆ) ಆಗಿತ್ತೆನ್ನಬಹುದು.

## IV. ವ್ಯಾಪಾರದ ತೆರಿಗೆಗಳು

೧. ಕೊನೆದೆರೆ—ಹಣ್ಣುಗಳ ಗೊನೆಯ ಮೇಲೆ ಹಾಕುವ ತೆರಿಗೆ.

೨. ಸನ್ನವಣ—ವೀಳೆಯದೆಲೆಯ ಮಾರಾಟದ ಮೇಲಿನ ತೆರಿಗೆ.

೩. ಬೀರವಣ—ವೀಳೆಯ ಎಲೆಯ ಕಟ್ಟಿನ ಮೇಲಿನ ತೆರಿಗೆ ಪ್ರಾಚೀನ ಅರ್ಥವ್ಯವಸ್ಥೆಯಲ್ಲಿ ವೀಳೆಯದೆಲೆಯ ಮಾರಾಟ, ಅದರ ಉಪಯೋಗ, ಈ ಉದ್ಯೋಗದಲ್ಲಿ ತೊಡಗಿದವರು ಒಂದು ಪ್ರಮುಖ ಸ್ಥಾನವನ್ನು ಪಡೆದಿದ್ದರೆಂದು ತೋರುತ್ತದೆ. ವೀಳೆಯದೆಲೆಯ ಮಾರಾಟ ರಾಜ್ಯದ ಬೊಕ್ಕಸಕ್ಕೆ ಒಂದು ಪ್ರಮುಖ ಆದಾಯ ತರುವಂತಹದಾಗಿರಬೇಕು. ಆದ್ದರಿಂದಲೇ ಈ ಉದ್ಯೋಗಕ್ಕೆ ಸಂಬಂಧಿಸಿದಂತೆ ಅನೇಕ ತೆರಿಗೆಗಳು ಇದ್ದುದನ್ನು ನಾವು ಕಾಣುತ್ತೇವೆ.

## V. ಸಾರಿಗೆ, ಸಾಗಾಣಿಕೆ ವಾಹನಗಳ ಮೇಲಿನ ಸುಂಕ

೧. ತಳಸಾರಿಗೆ—ರಸ್ತೆ ಸಾಗಾಣಿಕೆಯ ಮೇಲಿನ ಸುಂಕ. ಈ ತೆರಿಗೆಯನ್ನು ಗಮನಿಸಿದಾಗ ರಸ್ತೆಗಳು ರಾಜ್ಯದ ಸೊತ್ತಾಗಿರಬೇಕು ಎನಿಸುತ್ತದೆ. ಅವುಗಳ ನಿರ್ವಹಣೆಗಾಗಿ ತೆರಿಗೆ ರೂಪದಲ್ಲಿ ಸಂಗ್ರಹಿಸಿದ ಹಣವನ್ನು ಬಳಸುತ್ತಿರಬಹುದು. ಮಾರ್ಗಗಳನ್ನು ಉಪಯೋಗಿಸುವವರು ಅದರ ನಿರ್ವಹಣೆಗಾಗಿ ಸುಂಕ ಕೊಡಬೇಕಾಗುತ್ತದೆಂದು 'ಶುಕ್ರ ನೀತಿ'ಯಲ್ಲಿ ಹೇಳಲಾಗಿದೆ.

೨. ಪಸುಬೆದೆರೆ—ವ್ಯಾಪಾರಕ್ಕಾಗಿ ಹಸೂಬೆಯಲ್ಲಿ ಸಾಗಿಸುತ್ತಿದ್ದ ಸರಕುಗಳ ಮೇಲಿನ ಕರ.

೩. ಹೊಳೆಯ ಸುಂಕ—ಹೊಳೆ ದಾಟುವ ನಾವೆಗಳ ಮೇಲಿನ ಕರ. ಈ ತೆರಿಗೆಯನ್ನು ಹೊಳೆಯ ಉಪಯೋಗ ಮಾಡಿಕೊಳ್ಳುವವರ ಮೇಲೂ ವಿಧಿಸಿರಬೇಕು (ಹೊಳೆಯ ಮೂಲಕ ನಡೆಯುವಂತಹ ವಹಿವಾಟಿನ ಮೇಲೆ ನಿಯಂತ್ರಣವಿರಿಸಿಕೊಳ್ಳುವುದಕೋಸ್ಕರ) ಇಂತಹ ಕರಗಳನ್ನು ಸಂಗ್ರಹಿಸುವ ಅಧಿಕಾರಿಗೆ 'ಅರ್ಥಶಾಸ್ತ್ರ'ದಲ್ಲಿ 'ನೌ ಅಧ್ಯಕ್ಷ' ಎಂಬ ಉಲ್ಲೇಖವು ಬರುತ್ತದೆ.

## VI. ಕೈಗಾರಿಕೆಗಳ ಮೇಲಿನ ಕರ

೧. ಆಮೆದೆರೆ*—ಆಮೆಯನ್ನು ಹಿಡಿಯುವ ಗುತ್ತಿಗೆಯ ಮೇಲೆ ಕೊಡಬೇಕಾದ ತೆರಿಗೆ. ಆಮೆಗಳನ್ನು ಹಿಡಿದುಮುಂದೆ ಅವುಗಳ ಉಪಯೋಗವೇನು ಎಂಬುದನ್ನು ವಿವರಿಸುವುದು ಕಷ್ಟ. ಬಹುಶಃ ಅವುಗಳನ್ನು ಹಿಡಿದುತಂದು ನೀರಿನ ಸ್ವಚ್ಛತೆ ಕಾಯ್ದುಕೊಳ್ಳಲು ಕೆರೆ, ಬಾವಿಗಳಲ್ಲಿ ಬಿಡುತ್ತಿರಬಹುದು.

೨. ಯೆರೆಪಿಂಡಿ ಸುಂಕ—ಎಣ್ಣೆಯ ಹಿಂಡಿಯ ಮೇಲಿನ ಸುಂಕ. ಎಣ್ಣೆಯ ಉದ್ಯಮ ಕೂಡ ಒಂದು ಪ್ರಮುಖ ಕೈಗಾರಿಕೆಯಾಗಿತ್ತು. ಈ ತೆರಿಗೆಯ ಜೊತೆಗೆ 'ಗಾಣದೆರೆ' ಎಂಬ ಪದವನ್ನು ಕೂಡ ಗಮನಿಸಬಹುದು.

೩. ಲವಣ—ಉಪ್ಪಿನ ಮೇಲಿನ ಕರ

## VII. ವೃತ್ತಿ ತೆರಿಗೆ

೧. ಕನ್ನಡಿ ವಣ—ಕನ್ನಡಿಯ ಮೇಲೆ ಹಾಕುತ್ತಿದ್ದ ತೆರಿಗೆ ; ದೇವಾಲಯಗಳಲ್ಲಿನ ನೃತ್ಯಗಾರ್ತಿಯರ ಮೇಲಿನ ಕರ. ಕನ್ನಡಿ ಶೃಂಗಾರ ಸಾಧನಗಳಲ್ಲಿ ಒಂದು. ನೃತ್ಯಗಾರ್ತಿಯರಿಗೆ ಇದರ ಉಪಯೋಗ ಹೆಚ್ಚಾಗಿತ್ತು. ಆದ್ದರಿಂದ ಕನ್ನಡಿಯ ಮೇಲೆ ತೆರಿಗೆ ವಿಧಿಸಿದ್ದರು.

೨. ಕಂಠವಣ—ಕಂಠದ ಮೇಲೆ ವಿಧಿಸುವ ತೆರಿಗೆ ; ಹಸ್ತಪ್ರತಿ ಲಿಪಿಗಾರನ ಮೇಲೆ ವಿಧಿಸುವ ತೆರಿಗೆ.

೩. ಚಕ್ರಕಾಣಿಕೆ — ಕುಂಬಾರನ ತಿಗರಿಯ ಮೇಲಿನ ಕರ

೪. ಏಣಿ—ಎಲೆ ಕೊಯ್ಯುವಾಗ ಉಪಯೋಗಿಸುವ ಏಣಿಯ ಮೇಲೆ ಹಾಕುವ ತೆರಿಗೆ

೫. ಹೊಗೆದೆರೆ—ಕಮ್ಮಾರನ ವೃತ್ತಿಯ ಮೇಲೆ ವಿಧಿಸುವ ತೆರಿಗೆ. ಬಹುಶಃ ಈ ತೆರಿಗೆ ಕಮ್ಮಾರನ ಕುಲುಮೆಯ ಮೇಲೆ ವಿಧಿಸುವ ತೆರಿಗೆಯಾಗಿರಬೇಕು.

ಈ ಮೇಲಿನ ತೆರಿಗೆಗಳು ವೃತ್ತಿ ತೆರಿಗೆಗಳು ಆಗಿದ್ದರೂ ಕೂಡ ತೆರಿಗೆಯನ್ನು ವೃತ್ತಿ ಮಾಡುವ ವೃತ್ತಿಕಾರನ ಮೇಲೆ ವಿಧಿಸದೇ ಆತನ ವೃತ್ತಿಯಲ್ಲಿ ಅತ್ಯವಶ್ಯವಾದ ಉಪಕರಣ/ವಸ್ತುವಿನ ಮೇಲೆ ವಿಧಿಸಿದುದು ಒಂದು ವೈಶಿಷ್ಟ್ಯವಾಗಿದೆ. ಈ ಅಂಶಕ್ಕೆ ಹೊರತಾಗಿರುವ ಕೆಲವು ವೃತ್ತಿತೆರಿಗೆಗಳು ಇಂತಿವೆ.

೬. ಜಟ್ಟಿ ತೆರೆ—ಕುಸ್ತಿಪಟುಗಳ ಮೇಲಿನ ಕರ

೭. ನೋಟವಣ—ನಾಣ್ಯ ಪರೀಕ್ಷಕರ ಮೇಲಿನ ಕರ

೮. ದೊಂಬದೆರಿಗೆ—ದೊಂಬರಾಟ ಮಾಡುವವರ ಮೇಲೆ ಆಕರಿಸುವ ತೆರಿಗೆ

## VIII. ಧಾರ್ಮಿಕ ಶುಲ್ಕಗಳು

೧. ರಥವಣ—ರಥೋತ್ಸವಕ್ಕೆ ಬರುವ ಪರಸ್ಥಳದವರ ಮೇಲಿನ ಶುಲ್ಕ

---

* 'ಆಮೆ' ಎಂದರೆ ಕುಂಬಾರರು ಮಡಿಕೆ ಸುಡಲು ಉಪಯೋಗಿಸುತ್ತಿದ್ದ ಒಲೆಯಾಗಿರಬೇಕು. ಸಂ.

IX. ಸಾಮಾಜಿಕ ಕಾರ್ಯಗಳ ಮೇಲಿನ ಶುಲ್ಕಗಳು

೧. ಅಂಕ—ಮಲ್ಲಯುದ್ಧದ ಗರಡಿಯ ಮೇಲೆ ವಿಧಿಸುವ ಕರ

೨. ಪಟ್ಟಬಂಧ—ಅರಸನ ಪಟ್ಟಮಹೋತ್ಸವದ ಕಾಲಕ್ಕೆ ಆಕರಿಸುವ ತೆರಿಗೆ

೩. ಪುತ್ರೋತ್ಸಾಹ—ಪುತ್ರ ಜನಿಸಿದ ಶುಭ ಸಂದರ್ಭದಲ್ಲಿ ರಾಜನಿಗೆ ಕೊಡಬೇಕಾದ ಶುಲ್ಕ

೪. ಮದುವೆಯ ಸುಂಕ, ಹಂದರ ಹಣ—ಮದುವೆಯ ಶುಭ ಸಂದರ್ಭದಲ್ಲಿ ರಾಜನಿಗೆ ನೀಡಬೇಕಾದ ಶುಲ್ಕ

X ಇತರ ಪದಗಳು

೧. ಜಾತ್ರಾಮುಖ — ಜಾತ್ರೆಯ ಕಾಲಕ್ಕೆ ಸಂಗ್ರಹಿಸುವ ಕರವಾಗಿರಬಹುದು.

೨. ಬಾಗಿಲು ಜೋಳ — ದವಸಧಾನ್ಯಗಳ ಮೇಲಿನ ಕರ ; ರಾಶಿಯಾದ ಮೇಲೆ ಹೊಸ ಬೆಳೆಯನ್ನು ಮನೆಗೆ ತಂದಾಗ ಧಾನ್ಯ ರೂಪದಲ್ಲಿ ಸಂದಾಯ ಮಾಡಬೇಕಾದ ತೆರಿಗೆ ಇದ್ದಿರಬಹುದು.

ಮೇಲಿನ ವಿವಿಧ ತೆರಿಗೆಗಳಿಗೆ ಸಂಬಂಧಿಸಿದ ಪದಗಳನ್ನು ಗಮನಿಸಿದಾಗ ಸೋಜಿಗವೆನಿಸುತ್ತದೆ. ಅನೇಕ ತೆರಿಗೆಗಳು ಪ್ರಜೆಗಳಿಗೆ ಭಾರವಾಗಿರಬೇಕು ಎನ್ನಿಸಿದರೂ ಆದನ್ನು ಒಪ್ಪಲಾಗದು. ಬದಲಾಗಿ ಇಂದಿನ ದಿನಗಳಲ್ಲಿ ಕಾಣುವ ಅರ್ಥವ್ಯವಸ್ಥೆಯಷ್ಟೆ ಅಚ್ಚುಕಟ್ಟಾದ ವ್ಯವಸ್ಥೆಯನ್ನು ಆಗಲೂ ಕಾಣುತ್ತೇವೆ.

ಬಿಂ. ಶಾ. ಶ್ಯಾಮಲಾ ರತ್ನಕುಮಾರಿ*

# 'ವಡ್ಡಾರಾಧನೆ'ಯಲ್ಲಿ ಶಿಕ್ಷಣ ವ್ಯವಸ್ಥೆಯ ಚಿತ್ರಣ.

'ವಡ್ಡಾರಾಧನೆ' ಶಿವಕೋಟಾಚಾರ್ಯರಿಂದ ಕ್ರಿ. ಶ. ೧೦ನೇ ಶತಮಾನದಲ್ಲಿ ರಚಿಸಲ್ಪಟ್ಟ ಕೃತಿ. ಈವರೆಗೆ ನಮಗೆ ಉಪಲಬ್ಧವಾಗಿರುವ ಪ್ರಥಮ ಕನ್ನಡ ಗದ್ಯಕೃತಿ ಮೂಲತಃ ಜೈನ ಕೃತಿಯಾದ ಇದರಲ್ಲಿ ೧೯ ಜನ ಮಹಾಪುರುಷರ ಗಾಹೆ (ಗಾಥೆ-ಚರಿತೆ) ಗಳನ್ನೊಳಗೊಂಡಿದೆ. ಧಾರ್ಮಿಕ ಹಿನ್ನೆಲೆಯಲ್ಲೇ ರಚಿತವಾಗಿದ್ದರೂ ಈ ಕೃತಿಯು ಬಗ್ಗೆ ಸಮಕಾಲಿನ ಶಿಕ್ಷಣ ವ್ಯವಸ್ಥೆಯ ಅತ್ಯುಪಯುಕ್ತವಾದ ಮಾಹಿತಿಯನ್ನೊದಗಿಸುತ್ತದೆ.

ಈ ಕೃತಿಯಲ್ಲಿ ವೈದಿಕರ ವಿದ್ಯಾಭ್ಯಾಸ ಕ್ರಮ ಹಾಗೂ ಜೈನ ವಿದ್ಯಾಭ್ಯಾಸ ಕ್ರಮಗಳೆರಡನ್ನೂ ಸಮಾನವಾಗಿ ಪುರಸ್ಕರಿಸಲಾಗಿದೆ. ಹಾಗೆಯೇ ಲೌಕಿಕ, ಆಧ್ಯಾತ್ಮಿಕ ಶಿಕ್ಷಣಗಳೆರಡಕ್ಕೂ ಮಾನವ ಜೀವನದಲ್ಲಿ ಸ್ಥಾನವನ್ನು ಕಲ್ಪಿಸಲಾಗಿದೆ. ಇದರ ಸುಕುಮಾರ ಸ್ವಾಮಿಯ ಕಥೆ, ಸನತ್ಕುಮಾರ ಚಕ್ರವರ್ತಿಯ ಕಥೆ ವಿದ್ಯುಚ್ಚೋರರಿಸಿಯ ಕಥೆ, ಗುರುದತ್ತ ಭಟಾರರ ಕಥೆ, ಚಿಲಾತಪುತ್ರನ ಕಥೆಗಳಲ್ಲಿ ಶೈಕ್ಷಣಿಕ ಕ್ರಮದ ಬಗ್ಗೆ ಮಹತ್ವಪೂರ್ಣ ಮಾಹಿತಿ ಲಭ್ಯ ವಾಗುತ್ತದೆ.

ಸುಕುಮಾರಸ್ವಾಮಿಯ ಕಥೆಯಲ್ಲಿ ವತ್ಸದೇಶದ ಕೌಶಾಂಬಿನಗರದ ರಾಜ ಅತಿಬಳನ ಮಂತ್ರಿ ಸೋಮ ಶರ್ಮನ ಮಕ್ಕಳಾದ ಅಗ್ನಿಭೂತಿ, ವಾಯುಭೂತಿ ವಿದ್ಯಾವಂತರಲ್ಲ, ಸೋಮಾರಿಗಳು ಹಾಗೂ ಉಂಡಾಡಿಗಳಾಗಿದ್ದದ್ದರಿಂದ ಸೋಮಶರ್ಮನ ಮರಣಾನಂತರ ಮಂತ್ರಿ ಪದವಿಯನ್ನುಯೋಗ್ಯತಾ ಆಧಾರದ ಮೇಲೆ ರಾಜನು ಅವರ ದಾಯಾದಿಗೆ ಕೊಡುತ್ತಾನೆ. ಇದರಿಂದ ಅಪಮಾನಗೊಂಡು ತಮ್ಮ ತಾಯಿ ಕಾಶ್ಯಪಿಗೆ ಈ ವಿಷಯವನ್ನರುಹಿ ತಾವು ಇನ್ನು ಮುಂದೆ ವಿದ್ಯೆ ಕಲಿಯುವುದರಲ್ಲಿ ಆಸಕ್ತಿ ತೋರುವೆವು ಎಂದು ಹೇಳಲು ತಾಯಿಯು ಅವರಿಬ್ಬರನ್ನೂ ತನ್ನ ಸೋದರ ಮಗಧೆಯ ಮಂತ್ರಿ ಸೂರ್ಯಮಿತ್ರನಲ್ಲಿಗೆ ಕಳುಹುವಳು ಈ ಪ್ರಸಂಗದಿಂದ ವಿದ್ಯಾಭ್ಯಾಸವೇ ಅರ್ಹತೆಯ ಸಾಧನವೆಂದೂ, ಓದದಿರುವವರು ಮೂರ್ಖರೆಂದೂ ಅಂತಹವರಿಗೆ ಉನ್ನತ ಹುದ್ದೆಯನ್ನು ವಂಶ ಪಾರಂಪರ್ಯತಾಧಾರ ಮೇಲಾದರೂ ಕೊಡಲಾಗದು, ಯೋಗ್ಯತಾಧಾರದ ಮೇಲೆ ಉನ್ನತಾಧಿಕಾರಗಳಿಗೆ ನೇಮಕ ಎಂಬ ಕೃತಿಕಾರನ ಸ್ಪಷ್ಟ ಧೋರಣೆ ಮತ್ತು ಸಾರ್ವತ್ರಿಕ ಅಭಿಪ್ರಾಯ ವ್ಯಕ್ತವಾಗುವುದು.

ಅಗ್ನಿಭೂತಿ, ವಾಯುಭೂತಿ ಪಂಡಿತನಾದ ತಮ್ಮ ಸೋದರಮಾವ ಸೂರ್ಯಮಿತ್ರನೆಡೆಗೆ ಬಂದಾಗ ಸೂರ್ಯಮಿತ್ರ ಬಾಂಧವ್ಯ ಹಾಗೂ ಸಲಿಗೆ ವಿದ್ಯಾಭ್ಯಾಸಕ್ಕೆ ಹಾನಿಕರವೆಂದು ಭಾವಿಸಿ ಬಂಧುತ್ವವನ್ನು ಮರೆಮಾಚಿ ವಿದ್ಯಾರ್ಥಿಗಳಾಗಿ ತನ್ನ ಬಳಿ ಇರಲು ಅರ್ಹತಾ ನಿಯಮಗಳನ್ನೊಡ್ಡುವನು.'ವಿದ್ಯಾರ್ಥಿಗಳಾಗಿಯೋದಂ ಕಲ್ವೆಮೆಂಬಟ್ಟಿಯೊಳ್ ಬಂದಿರಪ್ಪೊಡೆ ಬೈಕಂದಿರಿದು ಕಪ್ಪಡಮುಟ್ಟೆರುಳುಂ ಪಗಲುಮಲಸದೆ ನಿರ್ಬಂಧದಿಂದೋದಲಾರ್ಪೊಡೆ ನಿಮ್ಮನೋದಿಸಲಕ್ಕುಂ'

* ಇತಿಹಾಸ ಉಪನ್ಯಾಸಕರು, ಬಸವೇಶ್ವರ ಪ್ರಥಮ ದರ್ಜೆ ಕಾಲೇಜು, ರಾಜಾಜಿನಗರ, ಬೆಂಗಳೂರು-೫೬೦ ೦೧೦

ಎಂದು. ಅಂದರೆ ವಿದ್ಯಾರ್ಥಿಗಳು ಓದು ಕಲಿಯ ಬೇಕೆಂಬ ಶ್ರದ್ಧಾಸಕ್ತಿಗಳನ್ನು ಮೊಟ್ಟಮೊದಲು ಹೊಂದಿರ ಬೇಕು, ಭಿಕ್ಷಾಟನೆಯಿಂದ ತಮ್ಮ ಆಹಾರವನ್ನು ತಾವೇ ಗಳಿಸಿಕೊಳ್ಳಬೇಕು ಹಾಗೂ ವೇಷಭೂಷಣಗಳಲ್ಲಿ ಆಸಕ್ತಿ ತೋರದೆ ನಿಯಮಪೂರ್ವಕವಾಗಿ ಹಗಲು ರಾತ್ರಿ ಗಳೆಂದೆಣಿಸದೆ ಸೋಮಾರಿತನ ಬಿಟ್ಟು ಕಷ್ಟ ಪಟ್ಟು ಓದಬೇಕು. ಇದೇ ವಿದ್ಯಾರ್ಥಿಗಳ ಲಕ್ಷಣ. ವಿದ್ಯಾರ್ಥಿ ಗಳಿಗೆ ಹೇಳಿರುವ ಈ ಲಕ್ಷಣಗಳು ಇಂದಿಗೂ ಉಪ ಯುಕ್ತವಾಗಿವೆ. ಹಾಗೂ ಆಚರಣ ಯೋಗ್ಯವಾಗಿವೆ.

ವಿದ್ಯಾರ್ಜನೆಗೆ ತೀವ್ರಾಕಾಂಕ್ಷೆ, ಛಲ ಮತ್ತು ತ್ಯಾಗದ ಅವಶ್ಯಕತೆ ಎಷ್ಟಿದೆ ಎಂಬುದು ತಿಳಿಯುತ್ತದೆ. ಸೂರ್ಯಮಿತ್ರನು ಸುಧರ್ಮಾಚಾರ್ಯರಿಂದ ಜ್ಯೋತಿ ಶ್ಯಾಸ್ತ್ರ ಕಲಿಯಲು ಬಂದ ಸಂದರ್ಭದಲ್ಲಿ, ಸೂರ್ಯ ಮಿತ್ರ ಸ್ವತಃ ತಾನೇ ಸರ್ವಶಾಸ್ತ್ರ ವಿಶಾರದ, ಪಂಡಿತ. ಆದರೂ ಸುಧರ್ಮಾಚಾರ್ಯರು ತಾನು ಕಳೆದಿದ್ದ ಅರಸನ ಉಂಗುರವನ್ನು ತಮ್ಮ ಜ್ಯೋತಿಷ ವಿದ್ಯೆಯಿಂದ ದೊರಕಿಸಿಕೊಟ್ಟು ಪ್ರಾಣವುಳಿಸಿದ್ದನ್ನು ಕಂಡು ಅಂತಹ ಶಕ್ತಿಯುಳ್ಳ ಜೋತಿಷ್ಯ ವಿದ್ಯೆಯನ್ನು ಕಲಿಯಲಪೇಕ್ಷಿಸಿ ಸುಧರ್ಮಾ ಚಾರ್ಯರಲ್ಲಿಗೆ ಬಂದು ವಿದ್ಯೆಯನ್ನು ಹೇಳಿ ಕೊಡಬೇಕೆಂದು ಕೇಳಿಕೊಂಡಾಗ ಸುಧರ್ಮಾಚಾರ್ಯರು ಇಂತೆಂದರು–'ತಮ್ಮಾ, ಎಮ್ಮ, ಜೋಯಿಸಮೆಂತಪ್ಪ ರೂಪಿದ ಋಷಿಯರ್ಗಲ್ಲದೆ ಪೇೞಲುಂ ಕಲಲುಮಾಗದು. ಆ ಮೇರೆಗೆ ಸೂರ್ಯಮಿತ್ರನು ಜ್ಯೋತಿಷವನ್ನು ಕಲಿಯಲೇಬೇಕೆಂಬ ತೀವ್ರಾಕಾಂಕ್ಷೆಯಿಂದ ಸುಧರ್ಮಾ ಚಾರ್ಯರನ್ನು ಬೇಡಿ ಅವರಿಂದ ದೀಕ್ಷೆಯನ್ನು ಪಡೆದು ಸುಧರ್ಮಾಚಾರ್ಯರ ನಿಯಮಗಳಿಗೊಪ್ಪಿ ಪಂಚ ಮಹಾವ್ರತಗಳು (ಸತ್ಯ, ಅಹಿಂಸೆ, ಅಸ್ತೇಯ, ಅಪರಿ ಗ್ರಹ ಮತ್ತು ಬ್ರಹ್ಮಚರ್ಯ) ಪರಿಕ್ರಮಣನಮಸ್ಕಾರ ಗಳನ್ನು (ಪಶ್ಚಾತ್ತಾಪ ಪ್ರಕೀರ್ಣಕ ಮತ್ತು ಪಂಚ ನಮಸ್ಕಾರ), ಅನುಷ್ಠಾನಮಾಡಿ ತ್ರಿಷಷ್ಠಿ (೬೩) ಶಲಾ ಕಾಪುರುಷ ಚರಿತ್ರೆ, ಚರಣಗ್ರಂಥ, ಕರಣಗ್ರಂಥಗಳನ್ನೂ ಹಾಗೂ ದ್ರವ್ಯಾನುಯೋಗವನ್ನೂ ಅಧ್ಯಯನ ಮಾಡಿ ದನು. ಅಷ್ಟೆ ಅಲ್ಲದೆ ಕೇವಲ ಜ್ಯೋತಿಷ ವಿದ್ಯೆಯನ್ನು ಕಲಿಯಲು ಸನ್ಯಾಸಿಯಾದವನು ಉಗ್ರ ನಿಷ್ಠೆಯಿಂದತಪೋ ಜೀವನವನ್ನು ಸ್ವ ಇಚ್ಛೆಯಿಂದಲೇ ಕೈಗೊಂಡನು, ತಪಃ ಶಕ್ತಿಯಿಂದಲೇ ಜ್ಯೋತಿಷವಿದ್ಯೆಯೂ ಸಾಧಿಸಲ್ಪಟ್ಟಿತು.

ಅಂದಿನ ವಿದ್ಯಾಭ್ಯಾಸ ವ್ಯವಸ್ಥೆಯಲ್ಲಿ ಬೋಧಿಸಲ್ಪಡುತ್ತಿದ್ದ ವಿಷಯಗಳ ವ್ಯಾಪ್ತಿ ಎಷ್ಟು ವಿಸ್ತೃತವಾಗಿತ್ತೆಂಬುದು ಈ ಕೆಳಗಿನ ಬೋಧನಾ ವಿಷಯ ಗಳ ಪಟ್ಟಿಯಿಂದ ತಿಳಿದುಬರುತ್ತದೆ. ಸೂರ್ಯಮಿತ್ರನು ತನ್ನ ಶಿಷ್ಯರಾದ ಅಗ್ನಿಭೂತಿಗೆ ಬೋಧಿಸಿದ ವಿಷಯ ಗಳೆಂದರೆ ಚತುರ್ವೇದಗಳು, ಷಡಂಗಗಳು, ಹದಿನೆಂಟು ಧರ್ಮಶಾಸ್ತ್ರಗಳು(ಮನು,ಗೌತಮ, ವಶಿಷ್ಠ, ಅತ್ರಿ,ದಕ್ಷ, ಆಂಗೀರಸ, ಉಶನಸ್, ವಾಕ್ಪತಿ, ವ್ಯಾಸ, ಅಪಸ್ತಂಭ, ಕಾತ್ಯಾಯನ, ವಿಷ್ಣು, ಯಾಜ್ಞವಲ್ಕ್ಯ, ನಾರದ,ಪರಾಶರ ಶಂಖ, ಹಾರೀತ-ಇವರಿಂದ ಪ್ರಣೀತವಾದ ಸ್ಮೃತಿ ಗಳು) ಮೀಮಾಂಸಾ, ನ್ಯಾಯವಿಸ್ತರ (ತರ್ಕಶಾಸ್ತ್ರ), ಪ್ರಮಾಣಂ (ಪ್ರತ್ಯಕ್ಷ, ಅನುಮಾನ, ಶಬ್ದ, ಅನುಪಲಬ್ಧ ಅರ್ಥಾಪತ್ತಿ), ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ, ನಾಟಕ, ಚಾಣಕ್ಯ (ಅರ್ಥಶಾಸ್ತ್ರ), ಸಾಮುದ್ರಿಕ ಶಾಲಿಹೋತ್ರ (ಶಾಲಿಹೋತ್ರನೆಂಬ ಋಷಿ ವಿರಚಿತ ಅಶ್ವಶಾಸ್ತ್ರ), ಪಾಳಕಾಪ್ಯ (ಪಾಳಕಾಪ್ಯನೆಂಬ ಋಷಿ ವಿರಚಿತ ಗಜಶಾಸ್ತ್ರ), ಹಾನಿತಂ, ಚರಕಂ, ಅಶ್ವಿನೀ ಮತಂ, ಬಾಹಲಾ, ಸುಶ್ರುತಂ, ಕ್ಷಾರಪಾನೀಯವೆಂಬ ಆರು ವೈದ್ಯಪದ್ಧತಿಗಳು, ಜ್ಯೋತಿಷ ಹಾಗೂ ಮಂತ್ರ ವಿದ್ಯೆ. ಈ ಬೋಧನಾವಿಷಯಗಳ ಪಟ್ಟಿಯಲ್ಲಿ ವೈದಿಕ ಶೈಕ್ಷಣಿಕ ಕ್ರಮದ ಲೌಕಿಕ, ಧಾರ್ಮಿಕ, ಪ್ರಾಣಿಕ ಮುಂತಾದ ವೈವಿಧ್ಯ ಪೂರ್ಣ ವಿಷಯಗಳು ಅಡಕ ವಾಗಿದ್ದು ಸಮಕಾಲೀನ ಜನ ಸಮುದಾಯದ ಅವಶ್ಯ ಕತೆಗಳನ್ನು ಪೂರೈಸುವ ಹಾಗೂ ದೈನಂದಿನ ಜೀವನದಲ್ಲಿ ಸುಲಭವಾಗಿ ಅಳವಡಿಸಬಹುದಾಗಿದ್ದು ಸಮಾಜದಲ್ಲಿ ಮಹತ್ವದ ಸ್ಥಾನವನ್ನು ಶಿಕ್ಷಣಕ್ಕೆ ತಂದಿತ್ತು ಎಂಬುದು ಗಮನಿಸಬೇಕಾದ ಅಂಶ.

ವೈದಿಕ ಶಿಕ್ಷಣ ವ್ಯವಸ್ಥೆಯ ಜೊತೆ ಜೊತೆಗೇ ಜೈನ ಶಿಕ್ಷಣ ಕ್ರಮವು ಈ ಕೃತಿಯಲ್ಲಿ ವಿವೇಚಿಸಲ್ಪಟ್ಟಿದೆ. ಜೈನ ಶೈಕ್ಷಣಿಕ ಕ್ರಮದಲ್ಲಿ ಬೋಧಿಸಲ್ಪಡುತ್ತಿದ್ದ ವಿಷಯಗಳೆಂದರೆ ೧೪ ಪೂರ್ವಗಳು (ಉತ್ಪಾದಪೂರ್ವ ಆಗ್ರಾಯಣೀಪೂರ್ವ, ವೀರ್ಯಾನುವಾದ ಪೂರ್ವ, ಅಸ್ತಿ ನಾಸ್ತಿಪ್ರವಾದಪೂರ್ವ, ಜ್ಞಾನಪ್ರವಾದ ಪೂರ್ವ, ಸತ್ಯಪ್ರವಾದಪೂರ್ವ, ಆತ್ಮಪ್ರವಾದಪೂರ್ವ,

ಕರ್ಮಪ್ರವಾದಪೂರ್ವ, ಪ್ರತ್ಯಾಖ್ಯಾನು ವಾದ ಪೂರ್ವ, ವಿದ್ಯಾನುವಾದ ಪೂರ್ವ, ಕಲ್ಯಾಣವಾದ ಪೂರ್ವ, ಪ್ರಾಣವಾದ ಪೂರ್ವ, ಕ್ರಿಯಾ ವಿಶಾಲ ಪೂರ್ವ, ತ್ರಿಲೋಕ ಬಿಂದುಸಾರ ಪೂರ್ವ), ದ್ವಾದಶಾಂಗಗಳು (ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತಿ, ಜ್ಞಾತೃಧರ್ಮ ಕಥಾಂಗ, ಉಪಾಸಕಾಧ್ಯಾಯಾಂಗ, ಅಂತಕೃದ್ಧಶಾಂಗ, ಅನುತ್ತರೋಪಪಾದಕ ದಶಾಂಗ, ಪ್ರಶ್ನವ್ಯಾಕರಣಾಂಗ, ವಿಪಾಕಸೂತ್ರಾಂಗ ದೃಷ್ಟಿಪ್ರವಾದಾಂಗ), ಚರಣಗ್ರಂಥ, ಕರಣಗ್ರಂಥ, ದ್ರವ್ಯಾನುಯೋಗ, ತ್ರಿಷಷ್ಠಿ ಶಲಾಕ ಪುರುಷರ ಚರಿತೆ ಮುಂತಾದವು.

ಸ್ತ್ರೀ ಶಿಕ್ಷಣಕ್ಕೆ ಸಂಬಂಧಿಸಿದಂತೆಯೂ ಈ ಕೃತಿಯು ಕೆಲವು ವಿವರಗಳನ್ನೀಡುತ್ತದೆ. ಸ್ತ್ರೀಯರು ಅಕ್ಷರಾ ಆಲೇಖ್ಯಗಣಿತ, ಗಾಂಧರ್ವ, ನೃತ್ಯ, ಚಿತ್ರ ಕರ್ಮ, ಪತ್ರಚ್ಛೇದ್ಯ ಮುಂತಾದ ೬೪ ಕಲೆಗಳಲ್ಲಿ ಪರಿಣತಿ ಪಡೆಯುತ್ತಿದ್ದರು ಎಂದು ವಿದ್ಯುಚ್ಚೋರನ ಕತೆ ತಿಳಿಸುತ್ತದೆ. ಇದೇ ಕತೆಯಲ್ಲಿ ಚೋರವಿದ್ಯೆ-ಕರ್ಪಟ ವಿದ್ಯೆ (ಕರಪಟ್ಟರಚಿತ ಶಾಸ್ತ್ರ), ಸುರಖಶಾಸ್ತ್ರ ಕಳ್ಳತನವನ್ನು ಪತ್ತೆಹಚ್ಚುವುದನ್ನು ಪ್ರತಿಪಾದಿಸುವ ಶಾಸ್ತ್ರ ಹಾಗೂ ಚೋರವಿದ್ಯೆಯ ಪ್ರಕಾರಗಳಾದ ಜೃಂಭಿನಿ (ಪ್ರತ್ಯಕ್ಷ, ಮಾಯ), ಸ್ತಂಭಿನಿ (ಗತಿನಿರೋಧ) ಮೋಹಿನಿ (ಮೂರ್ಛೆ) ಸರ್ಷಪಿ (ಚರ್ಮರೋಗವನ್ನು ಉಂಟುಮಾಡುವಿಕೆ), ತಾಳೋದ್ಘಾಟನಿ (ಬೀಗ ತೆಗೆಯುವುದು) ಮಂತ್ರ, ಚೂರ್ಣ, ಯೋಗ, ಘುಟಿಕಾ (ಗುಳಿಗೆ) ಮತ್ತು ಅಂಜನಗಳ ಉಲ್ಲೇಖವಿದೆ.

ಅಧ್ಯಯನ ವಿಧಾನಕ್ಕೆ ಸಂಬಂಧಿಸಿದಂತೆಯೂ ಮಾಹಿತಿ ದೊರಕುತ್ತದೆ ಈ ಕೃತಿಯಲ್ಲಿ. ಇಲ್ಲಿ ಹೇಳಿರುವ ಶಿಕ್ಷಣ ವಿಧಾನಗಳೆಂದರೆ ಸ್ವಾಧ್ಯಾಯ, (ಮನನಪೂರ್ವಕ ಸ್ವತಃ ವಿಷಯಗಳನ್ನು ಗ್ರಹಿಸುವಿಕೆ, ಅರ್ಥೈಸುವಿಕೆ), ವಾದ (ಪರಪಕ್ಷ ಖಂಡನಪೂರ್ವಕ ಸ್ವಪಕ್ಷ ಮಂಡನೆ), ಗ್ರಂಥಾರ್ಥ ಸ್ವರೂಪಾಧ್ಯಯನ, ವ್ಯಾಖ್ಯಾನ (ಪದವಿಭಾಗ, ಪದಶಃ ಅರ್ಥ, ಅನ್ವಯ ತಾತ್ಪರ್ಯ, ವಿಮರ್ಶೆ), ವಾಕ್ಯಾರ್ಥ (ಹೇತು ನಿರ್ದಿಷ್ಟವಾಗಿ ಆಂತರಿಕ, ಬಾಹ್ಯ ಪ್ರಮುಖ ಪೂರ್ವಕ ತರ್ಕಬದ್ಧವಾಗಿ ವಾಕ್ಯವನ್ನು ಅರ್ಥೈಸುವಿಕೆ). ವೇದಾಭ್ಯಾಸದಲ್ಲಿ ಅನುಸರಿಸಬೇಕಾದ ವಿಧಾನವೆಂದರೆ ಮೊದಲು ಪ್ರಣವದ (ಓಂಕಾರ) ಉಚ್ಚಾರಣೆ ಸ್ವರ, ವರ್ಣ, ಭೇದದಿಂದ ಮೊದಲು ೬೪ (ಋಕ್) ಸಂಹತಿಗಳನ್ನು ಪದಕ್ರಮ ಭೇದದಿಂದ ಬ್ರಾಹ್ಮಣ,, ಆರಣ್ಯಕ ಸೂತ್ರಗಳನ್ನು ಓದುವುದು, ಋಗ್ಯಜುಸ್ಸಾಮಾಥರ್ವಣ ವೇದಗಳನ್ನು ಸ್ವರವರ್ಣ ಭೇದದಿಂದ ಮಂತ್ರಸಹಿತ ಪಾಳಿ ಪದಕ್ರಮ ಜಟ ಭೇದದಿಂದ ಯಥಾಕ್ರಮದಿಂದ ಉಚ್ಚಾರಣೆ, ಮೀಮಾಂಸಾ ನ್ಯಾಯ ಸೂತ್ರಗಳನ್ನು ಓದಿ ಕ್ರಿಯಾ ಕಾರಕ ಸಂಬಂಧದಿಂದ ವ್ಯಾಖ್ಯಾನ ಮಾಡುವುದು. ಈ ವಿಧಾನಗಳನ್ನೇ ನಾಗಶ್ರೀ (ಕಾರ್ಯಕಾರಣ) ಅನುಸರಿಸಿ ತನಗಿರುವ ವಿದ್ಯಾ ಪಾಂಡಿತ್ಯವನ್ನು ಚಂದ್ರವಾಹನನೆಂಬ ಅರಸನ, ಸೂರ್ಯಮಿತ್ರ, ಅಗ್ನಿಭೂತಿ ಭಟಾರರ ಸಮ್ಮುಖದಲ್ಲಿ ಪ್ರಕಟಗೊಳಿಸಿದಳೆಂದು ಸುಕುಮಾರಸ್ವಾಮಿಯ ಕಥೆಯಿಂದ ತಿಳಿದುಬರುತ್ತದೆ. ಅಲ್ಲದೆ ಗುರುದತ್ತ ಭಟ್ಟಾರರ ಕಥೆಯಲ್ಲಿ ಹಸ್ತಿನಾಪುರದ ರಾಜ ವಿಜಯದತ್ತನ ಪುತ್ರನಾದ ಗುರುದತ್ತನು ಚಿಂತಾಗತಿ ಎಂಬ ವಿದ್ಯಾಧರ ಆಕಾಶಕ್ಕೇರುವ ವಿದ್ಯಾಸಾಧನೆಯಲ್ಲಿ ತೊಡಗಿ ಮಂತ್ರಪಠಣ ಗೈದಾಗ ಅದರಲ್ಲಿದ್ದ ಹೀನಾಧಿಕಾಕ್ಷರ ದೋಷಗಳನ್ನು ತನಗಿದ್ದ ಮಂತ್ರ ವ್ಯಾಕರಣ ಪರಿಣತಿಯಿಂದ ಕಂಡುಹಿಡಿದು ತಿದ್ದಿ ಮಂತ್ರ ಉಚ್ಚಾರಣೆ ಸಕ್ರಮಗೊಳಿಸಿ ವಿದ್ಯಾಧರನ ವಿದ್ಯಾಸಾಧನೆಗೆ ನೆರವಾದನೆಂದು ಹೇಳಿದೆ. ಈ ಪ್ರಸಂಗದಿಂದ ಮಂತ್ರಸಿದ್ಧಿಯಲ್ಲಿ ಹೀನಾಧಿಕಾಕ್ಷರ ಜ್ಞಾನದ ಮಹತ್ವ ಎಷ್ಟೆಂಬುದು ವ್ಯಕ್ತವಾಗುತ್ತದೆ. ಅಂತೆಯೇ ಬಾಹುಬಲಿ ಭಟ್ಟಾರರ ಕಥೆಯಲ್ಲಿ ವಾಚಕನ ತಪ್ಪಿನಿಂದ ಎಂಥ ಪ್ರಮಾದವಾಯಿತು ಎಂದು ಹೇಳಿದೆ. ಅಶೋಕ ಚಕ್ರವರ್ತಿಯು ತಾನು ಯುದ್ಧ ಕೈಗೊಂಡಾಗ ಆ ಪರದೇಶದಿಂದ ತನ್ನ ಮಂತ್ರಿ ಪುರೋಹಿತ ಮೊದಲಾದ ಅಧಿಕಾರಿಗೆ ಓಲೆಯೊಂದನ್ನು ಬರಯಿಸಿ ರಾಜಕುಮಾರ ಕುಣಾಲನ ವಿದ್ಯಾಭ್ಯಾಸಕ್ಕೆ ಏರ್ಪಡಿಸಬೇಕೆಂದು 'ಉಪಾಧ್ಯಾಯಂಗೆ ಕಟಿಮೆಯ ಕೂಟುಂ ತುಪ್ಪಮುಂ ತೊಮೆಯುಮನುಣಲ್ಕೊಟ್ಟು ಕುಮಾರನೋದಿಸುಗೆ' ಎಂದು ಆದೇಶ ನೀಡಿದನು. ಕುಮಾರಂ ಅಧ್ಯಾಯಯೇತ್ ಎಂಬುದನ್ನು ವಾಚಕನು ಕುಮಾರಯಂಧಾ

ಪಯೇತ್ ಎಂದು ವಿಪರೀತವಾಗಿ ಓದಿದ್ದರಿಂದ ಅಶೋಕನ ಆಜ್ಞೆಗೆ ಹೆದರಿ ಉಪಾಧ್ಯಾಯನಿಗೆ ಆದೇಶದ ಮೇರೆಗೆ ಅಕ್ಕಿ, ತುಪ್ಪ ಮುಂತಾದುವನ್ನು ಕೊಟ್ಟು ಕುಮಾರ ಕುಣಾಲನ ಕಣ್ಣುಗಳನ್ನು ಕೇಳಿ ಕುರುಡ ನನ್ನಾಗಿಸಲಾಗುತ್ತದೆ. ಇದರಿಂದ ಯಥಾರ್ಥವಾಚನ ಕಲೆಯ ಪ್ರಾಮುಖ್ಯತೆ ಎಷ್ಟೆಂದು ಸ್ಪಷ್ಟವಾಗುತ್ತದೆ.

ಶಿಕ್ಷಣದ ಅವಧಿಯ ಬಗ್ಗೆಯೂ ವಡ್ಡಾರಾಧನೆ ವೈದಿಕ ವಿದ್ಯಾಭ್ಯಾಸಕ್ಕೆ ಎಂಟು ವರ್ಷಗಳೆಂದೂ, ದೀಕ್ಷೆಯನ್ನು ಪಡೆದು ಜೈನಧರ್ಮದ ಆಧ್ಯಾತ್ಮಿಕ ಶಿಕ್ಷಣಕ್ಕೆ ಹನ್ನೆರಡು ವರ್ಷಗಳೆಂದೂ ನಿಗದಿಯಾಗಿತ್ತೆಂದು ತಿಳಿಸುತ್ತದೆ. ಹಾಗೂ ಶಿಕ್ಷಣದ ಪರಿಸಮಾಪ್ತಿಯು ಶಿಕ್ಷಣ ಪಡೆದ ವಿದ್ಯಾರ್ಥಿಯು ನಗರಕ್ಕೆ ತೆರಳಿ ಪಂಡಿತ ಸಭೆಯಲ್ಲಿ ಪಂಡಿತರೊಂದಿಗೆ ವಾದ ಮಾಡಿ ಗೆದ್ದು ಕೀರ್ತಿವಂತನಾಗುವುದರೊಂದಿಗೆ ಆಗುತ್ತದೆ ಎಂದು ಭದ್ರಬಾಹು ಭಟಾರರ ಕಥೆಯಲ್ಲಿ ಹೇಳಿದೆ. ಈ ಮೂಲಕ ಗುರುಕುಲದ ಖ್ಯಾತಿಯು ರಾಜನವರೆಗೂ ತಲುಪಿ ರಾಜ ಸ್ವತಃ ಗುರುಕುಲದ ನಿರ್ವಹಣೆಗೆ ಮುಂದಾಗುತ್ತಾನೆ, ಶಿಕ್ಷಣ ವ್ಯವಸ್ಥೆ ಪ್ರಗತಿಯನ್ನು ಹೊಂದುತ್ತದೆ. ಈಗ ಮೇಲೆ ಹೇಳಲಾದ 'ವಡ್ಡಾರಾಧನೆ'ಯಲ್ಲಿನ ಶಿಕ್ಷಣ ವ್ಯವಸ್ಥೆಯ ಚಿತ್ರಣವು ಎಷ್ಟರಮಟ್ಟಿಗೆ ಆಧುನಿಕ ಕಾಲದ ಶಿಕ್ಷಣ ವ್ಯವಸ್ಥೆಗೆ ಅನ್ವಯಿಸಬಹುದೆಂದು ತುಲನಾತ್ಮಕವಾಗಿ ಪರಿಶೀಲಿಸಿ ನೋಡೋಣ.

ಶಿಕ್ಷಣವು ವಿದ್ಯಾ ಎಂದರೆ ಜ್ಞಾನ ಹಾಗೂ ದರ್ಶನಗಳನ್ನು ಕಾರ್ಯಗತಗೊಳಿಸುವ ಪ್ರಕ್ರಿಯೆಯೇ ಆಗಿದೆ. ಶಿಕ್ಷಣದ ಮಹತ್ವ ಸಾಮಾಜಿಕ ಜೀವನದ ಸಂಪನ್ನತೆ ಮತ್ತು ಸಂಸ್ಕೃತಿಯ ಪ್ರಗತಿಗಾಗಿ ಎಂದು ಪರಿಗಣಿಸಲಾಗಿತ್ತು. ಶಿಕ್ಷಣವು ಸಾಂಸ್ಕೃತಿಕ ಪರಂಪರೆಗಳನ್ನು ನಿರ್ಮಿಸುವುದರಲ್ಲಿ ಹಾಗೂ ವಿಸ್ತರಣೆಯಲ್ಲಿ ನೆರವು ನೀಡುತ್ತದೆ ಹಾಗೂ ವಿದ್ಯಾರ್ಥಿಗೆ ಸಮಾಜದ ಕಲ್ಯಾಣದಲ್ಲಿ ಭಾಗವಹಿಸಲು ತನ್ನ ಜವಾಬ್ದಾರಿಗಳನ್ನು ಸಮರ್ಥವಾಗಿ ನಿಭಾಯಿಸಲು ಪ್ರೇರೇಪಿಸುತ್ತದೆ. ವ್ಯಕ್ತಿತ್ವದ ಸಂಪೂರ್ಣ ವಿಕಾಸ, ಸಮಾಜದ ಸಂರಕ್ಷಣೆ, ವ್ಯಕ್ತಿಯ ಸಾಮಾಜಿಕೀಕರಣ, ಮಾನವ ಸಭ್ಯತೆಯ ನಿರ್ಮಾಣ, ಜ್ಞಾನಪ್ರಸಾರ, ಆ ಮೂಲಕ ಚರಿತ್ರನಿರ್ಮಾಣ—ಇವು ಶಿಕ್ಷಣದ ಪ್ರಮುಖ ಉದ್ದೇಶಗಳು. ಈ ಶೈಕ್ಷಣಿಕ ಉದ್ದೇಶಗಳಿಗನುಗುಣವಾಗಿ ಪಠ್ಯಕ್ರಮ ರೂಪಿತವಾಗುತ್ತದೆ. ಪಠ್ಯಕ್ರಮದಲ್ಲಿನ ವಿಷಯಗಳನ್ನು ಕಲಿಸುವುದರಿಂದಲೇ ಆಯಾ ಕಾಲದ ಶಿಕ್ಷಣದ ಧ್ಯೆಯೋದ್ದೇಶಗಳೂ, ಜೀವನದರ್ಶನದ ಸಾಕ್ಷಾತ್ಕಾರವೂ ಆಗುತ್ತದೆ.

ಈ ಹಿನ್ನೆಲೆಯಲ್ಲಿ 'ವಡ್ಡಾರಾಧನೆ'ಯಲ್ಲಿ ಬಂದಿರುವ ಪಠ್ಯಕ್ರಮ ಸ್ವರೂಪವನ್ನು ವಿವೇಚಿಸಿದಾಗ ವೇದಗಳು; ವೇದಾಂಗಗಳು ಹಾಗೂ ಧರ್ಮಶಾಸ್ತ್ರಗಳು ಅಥವಾ ಸ್ಮೃತಿಗಳು ಧಾರ್ಮಿಕ ಹಾಗೂ ಆಧ್ಯಾತ್ಮಿಕ ಜ್ಞಾನದ ನೆಲೆಗಟ್ಟಿನಲ್ಲಿ ವ್ಯಕ್ತಿಯ ಚರಿತ್ರೆ ನಿರ್ಮಾಣ, ಆ ಮೂಲಕ ಮಾನವನ ಪರಮೋಚ್ಚ ಗುರಿಯಾದ ಮೋಕ್ಷದೆಡೆಗೆ ಕರೆದೊಯ್ಯಲು ಸಹಕಾರಿಯಾಗಿರುತ್ತಿದ್ದವು. ಮೀಮಾಂಸಾ — ಕ್ರಿಯಾಶಕ್ತಿಯನ್ನೂ, ನ್ಯಾಯ ವಿಸ್ತರ— ವಾಕ್ ಶಕ್ತಿಯನ್ನೂ, ಪ್ರಮಾಣವು ಸೂಕ್ಷ್ಮದರ್ಶಿತ್ವವನ್ನೂ, ಛಂದಸ್ಸು, ಅಲಂಕಾರ, ಕಾವ್ಯ, ನಾಟಕ-ಭಾವನಾತ್ಮಕತೆಯನ್ನೂ ಭಾವಾಭಿವ್ಯಕ್ತಿಯನ್ನು ವ್ಯಕ್ತಿಯಲ್ಲಿ ಪ್ರಚೋದಿಸುತ್ತದೆ. ಸಾಮುದ್ರಿಕ, ಪ್ರಾಣಿ ಹಾಗೂ ಮಾನವ ವೈದ್ಯಕೀಯ ಶಾಸ್ತ್ರಗಳು ಜ್ಯೋತಿಷ್ಯ ಹಾಗೂ ಮಂತ್ರವಿದ್ಯೆಗಳೂ ವ್ಯಕ್ತಿಗಳ ಜೀವನೋಪಾರ್ಜನ ವೃತ್ತಿಶಿಕ್ಷಣ ನೀಡಿ ಉದ್ಯೋಗಾವಕಾಶಗಳನ್ನು ಹೆಚ್ಚಿಸುತ್ತದೆ.

ವಡ್ಡಾರಾಧನೆಯಲ್ಲಿ ಬರುವ 'ವಿದ್ಯುಚ್ಚೋರ'ನೆಂಬ ಕಥೆಯಲ್ಲಿ ಚೋರ ವಿದ್ಯಾ ಪ್ರಕಾರಗಳನ್ನು ಹೇಳಿದೆ. ಇದರಿಂದ ಕಳ್ಳತನ ನಡೆದ ಬಗೆಯನ್ನು ತಿಳಿದು ಚೋರನನ್ನು ಹಿಡಿಯಲು ಹಾಗೂ ಮುಂದೆ ಆ ರೀತಿ ಕಳ್ಳತನ ನಡೆಯದಂತೆ ಏರ್ಪಡಿಸಲು ಅನುವಾಗುತ್ತದೆ. ಇದರಿಂದ ಸ್ಪಷ್ಟವಾಗುವ ಅಂಶವೆಂದರೆ ಚೋರತನವು ಅತ್ಯಂತ ಹೆಚ್ಚಿನ ಪ್ರಾಮುಖ್ಯತೆ ಪಡೆದ ಅಪರಾಧವೆಂದು ಪರಿಗಣಿಸಲ್ಪಟ್ಟು ಅದನ್ನು ಪತ್ತೆ ಹಚ್ಚಿ ನಿವಾರಿಸಲು ಕೆಲವುಗ್ರಂಥಗಳನ್ನೂ ಈ ನಿಟ್ಟಿನಲ್ಲಿ ರಚಿಸಿದ್ದರು ಎಂದು. ಅಂತಹ ಗ್ರಂಥಗಳಾದ ಕರ್ಪಟಶಾಸ್ತ್ರ ಮತ್ತು ಸುರಖ ಶಾಸ್ತ್ರಗಳಲ್ಲಿ ಕಳ್ಳನನ್ನು ಪತ್ತೆಹಚ್ಚುವ ವಿಧಾನಗಳನ್ನೂ, ಕಳ್ಳರನ್ನು ಯಾವ ರೀತಿಯ ಶಿಕ್ಷೆಗೆ ಒಳಪಡಿಸಬೇಕೆಂಬುದರ ಬಗ್ಗೆ ನಿಯಮಗಳನ್ನೂ ಹೇಳಲಾಗಿದ್ದು

ಅವುಗಳನ್ನು ಇಂದೂ ಕಳ್ಳತನವನ್ನು ಪತ್ತೆಹಚ್ಚುವ, ತಡೆಯುವ ಹಾಗೂ ಕಳ್ಳತನ ಅಪರಾಧ ಕಾಯ್ದೆಯಲ್ಲಿ ಅಲ್ಲಿ ಹೇಳಿದ ಕೆಲವು ಅಂಶಗಳನ್ನು ಸೇರಿಸುವುದಕ್ಕಾಗಿ ಅಧ್ಯಯನ ನಡೆಸುವ ಅವಶ್ಯಕತೆಯಿದೆ.

'ವಡ್ಡಾರಾಧನೆ' ಕೃತಿಯಲ್ಲಿ ಹೇಳಿರುವ ಶೈಕ್ಷಣಿಕ ವಿಧಾನಗಳಾದ ಸ್ವಾಧ್ಯಾಯ, ವಾದ, ವ್ಯಾಖ್ಯಾನ, ವಾಕ್ಯಾರ್ಥಗಳು ಇಂದಿನ ಶಿಕ್ಷಣ ವ್ಯವಸ್ಥೆಯಲ್ಲೂ ಮಹತ್ವದ ಸ್ಥಾನ ಪಡೆದಿದೆ. ಇಂದು ಪ್ರಚಲಿತವಾಗಿರುವ ಶಿಕ್ಷಣ ವಿಧಾನಗಳಾದ ಕಥನ, ವಿವರಣೆ, ವರ್ಣನೆ, ಚರ್ಚೆ, ಪ್ರಶ್ನೋತ್ತರ, ನಿರೂಪಣೆ ಮುಂತಾದವುಗಳು ಮೇಲಿನ ಶಿಕ್ಷಣ ವಿಧಾನಗಳಲ್ಲೇ ಅಡಕವಾಗಿದೆ. ಆದರೆ ಸ್ವಾಧ್ಯಾಯ, ಮನನಗಳನ್ನು ಮತ್ತಷ್ಟು ಪ್ರೋತ್ಸಾಹಿಸುವ ಅಗತ್ಯವಿದೆ.

---

ಆಧಾರ : ವಡ್ಡಾರಾಧನೆ. ಸಂ. ಡಿ. ಎಲ್. ನರಸಿಂಹಾಚಾರ್.

ಕೆ.ವೆಂ. ರಾಜಗೋಪಾಲ*

# ಪಂಪನ ಚಾಗದಕಂಬ ಶಾಸನ

'ಸಂಸ್ಕೃತಕ್ಕೆ ಕಾಳಿದಾಸನು ಹೇಗೋ ಕನ್ನಡಕ್ಕೆ ಪಂಪನು ಹಾಗೆ' ಎಂದು ತೀ ನಂಶ್ರೀ. ಅಭಿಪ್ರಾಯ ಪಟ್ಟಿರುತ್ತಾರೆ. ಇಂಥ ಕವಿಯ ಇತಿವೃತದ ಬಗ್ಗೆ ಶೋಧವು ನಡೆಯುತ್ತಲೇ ಇದೆ. ಈ ಹಿನ್ನೆಲೆಯಲ್ಲಿ ಆಂಧ್ರ ಪ್ರದೇಶದಲ್ಲಿ ದೊರೆತಿರುವ ೨–೩ ಶಾಸನಗಳ ಬಗ್ಗೆ ವಿದ್ವಾಂಸರ ಗಮನ ಸೆಳೆಯುತ್ತಾ ಅವುಗಳು ದೊರಕುವ ಸ್ಥಳ ಮತ್ತು ಅವುಗಳನ್ನು ಮೊದಲು ಗುರುತಿಸಿದ ವಿದ್ವಾಂಸರ ಬಳಿ ಸಂವಾದಕ್ಕೆ ಪ್ರಯತ್ನಿಸಿದ್ದೇನೆ. ಪಂಪನು 'ವೆಂಗಿಪಳು' ವಿನಲ್ಲಿ ರಾಷ್ಟ್ರಕೂಟ ಕೃಷ್ಣನ ಆಶ್ರಯದಲ್ಲಿ ಸಾಮಂತನಾಗಿದ್ದ ಚಾಲುಕ್ಯ ಅರಿಕೇಸರಿ ||ಯ ಆಸ್ಥಾನದಲ್ಲಿದ್ದವನೂ ಆತನ ಆತ್ಮೀಯನೂ ಆಗಿದ್ದನೆಂಬುದು ಕಾವ್ಯಗಳಿಂದಲೇ ತಿಳಿದು ಬರುತ್ತಿದೆ. ಆದರೆ ಆತನೇ ಬರೆದನೆಂಬುದಕ್ಕೆ ಆಂಧ್ರಪ್ರದೇಶದ ಕರೀಂನಗರದಲ್ಲಿ ಒಂದು ಶಾಸನವು ಸೂಚನೆ ನೀಡುತ್ತದೆ.

ಕರೀಂನಗರದ ಮ್ಯೂಸಿಯಂನಲ್ಲಿ ರಕ್ಷಿತವಾಗಿರುವ ಒಂದನೆಯ ಸಂಖ್ಯೆಯ ಶಾಸನವನ್ನು ಕೆಲವು ವರ್ಷಗಳ ಹಿಂದೆ ಹೈದರಾಬಾದಿನ ಆರ್ಕಿಯಾಲಜಿ ಸಂಸ್ಥೆಯವರು ಬೆಳಕಿಗೆ ತಂದಿದ್ದರೂ ಅದರ ಸರಿಯಾದ ಪರಿಶೀಲನೆಯಾಗಲಿ ಪಂಪನಿಗೂ ಅದಕ್ಕೂ ಇದ್ದ ನಿಕಟ ಸಂಬಂಧವಾಗಲಿ ಬೆಳಕಿಗೆ ಬಂದಿರುವುದಿಲ್ಲ. ಇದನ್ನು ಮೊದಲು ಓದಿದವರು ಕನ್ನಡವನ್ನು ಅರಿತವರಲ್ಲ. ಆದಕಾರಣ ಅದರ ಓದುವಿಕೆಗೆ ತಪ್ಪುಗಳು. ಸೇರಿಕೊಂಡುವು ಇದನ್ನು ಶ್ರೀ ಸೀತಾರಾಮ ಜಾಗೀರ್‌ದಾರ್ ಅವರು ತಮ್ಮ 'ಸಾಪೇಕ್ಷ' ಎಂಬ ಗ್ರಂಥದಲ್ಲಿ ಪ್ರಸ್ತಾಪಿಸಿದ್ದಾರೆ. ಈ ಕೃತಿಯು ಪಂಪನನ್ನು ಕುರಿತ ಹೊಸ ಶೋಧನೆಗಳನ್ನೆಲ್ಲಾ ವಿಮರ್ಶೆಗೆ ಒಳಪಡಿಸಿರುತ್ತದೆ. ಆದರೂ ಅವರ ಪರಿಶೀಲನೆಯು ವಿದ್ವಾಂಸರಿಗೆ ಒಪ್ಪಿಗೆಯಾಗಿರುವುದಿಲ್ಲ. ಏಕೆಂದರೆ ಅವರ ಊಹೆಗಳು ನಿರಾಧಿಕವಾಗಿರುತ್ತವೆ. ಇಂತಹ ಸ್ಥಿತಿಯಲ್ಲಿ ನಾನು ಕಳೆದ ನವಂಬರ್ ತಿಂಗಳು ಕೊನೆಯ ವಾರದಲ್ಲಿ ಕರೀಂನಗರಕ್ಕೆ ಭೇಟಿ ಕೊಟ್ಟು 'ಪಂಪನ ಶಾಸನ'ವನ್ನು ಗುರುತಿಸಿದ್ದೇನೆ. ಅದರಲ್ಲಿ 'ಶ್ರೀ ಪಂಪಂ ಬರೆದೊಂ ಎಂಬ ಒಕ್ಕಣೆಯನ್ನು ಸರಿಯಾಗಿ ಓದಿದುದಲ್ಲದೆ ಮೊದಲು ಅದನ್ನು ಓದಿದ ಪಾಠಕ್ಕೆ ತಿದ್ದುಪಡಿಯನ್ನು ತೋರಿಸಿಬಂದಿದ್ದೇನೆ.

ಪಂಪನು ಎರಡು ಮಹತ್ವದ ಕಾವ್ಯಗಳನ್ನು ಬರೆದಿರುವುದಲ್ಲದೆ 'ಶಾಸನ ಕವಿ'ಯು ಆಗಿರುವುದೇ ಈಗಿನ ವಿಶೇಷವಾಗಿದೆ. ಇದರಿಂದ ಆತನ'ವಿಕ್ರಮಾರ್ಜುನ ವಿಜಯಂ' ಕಾವ್ಯದ ಕಾಲವನ್ನು ಗುರುತಿಸಲು ಸಾಧ್ಯವಾಗಿರುತ್ತದೆ. ಈ ಶಾಸನದ ಮತ್ತೊಂದು ಮಹತ್ವವೆಂದರೆ ಇದನ್ನು 'ಚಾಗದಕಂಭ' ಎಂದು ಕರೆದಿರುವುದೂ ಅಲ್ಲದೆ, ಈ ಶಾಸನದ ಸೂಚನೆಯ ಮೇರೆಗೆ ಮತ್ತೆರಡು ಇಂಥ ಶಾಸನಗಳು ಇದ್ದಿರಬಹುದು. ಅವು ಅರಿಕೇಸರಿಯ ಪೂರ್ವಜರಿಗೆ ಸಂಬಂಧಿಸಿದುವಾಗುತ್ತವೆ. ಆದುದರಿಂದ ಈ ಶಾಸನವು ಐತಿಹಾಸಿಕವಾಗಿಯೂ ತುಂಬ ಮಹತ್ವದ್ದಾಗಿದೆ. ಇದರ ಕಾಲದ ಗುರುತನ್ನು ಶಾಸನವೇ ತಿಳಿಸುವಂತೆ ಕ್ರಿ.ಶ. ೯೪೬ಕ್ಕೆ ಸರಿಹೋಗುತ್ತದೆ. ಆದುದರಿಂದ ಪಂಪನ ವಿಕ್ರಮಾರ್ಜುನ ವಿಜಯಂ-ಕಾವ್ಯವೂ ಇದೇ ವರ್ಷದ ಕಾರ್ತೀಕ ಮಾಸಕ್ಕೆ ಸಂಬಂಧಿಸಿದ ವನ ಭೋಜನ–ಉತ್ಸವಕ್ಕೆ ಸೇರುವಂಥದೆಂದರೆ ಆಶ್ಚರ್ಯವಿಲ್ಲ.

• ಎಂ.ಐ.ಜಿ. ೪೧, ೮೧ ಅಡಿರಸ್ತೆ, ಕೆಂಗೇರಿ ಉಪನಗರ ೩ನೇ ಹಂತ, ಬೆಂಗಳೂರು–೫೬೦ ೦೬೦

**ಚಾಗದ ಕಂಭ :** ಈ ಶಾಸನವನ್ನು ಆಂಧ್ರ ಪ್ರದೇಶದ ಆರ್ಕಿಯಾಲಜಿ ಸಂಸ್ಥೆಯು 'ಜಿನವಲ್ಲಭನ ಶಾಸನ'ವನ್ನು ಪ್ರಕಟಿಸಿದಂತೆಯೇ ಬೆಳಕಿಗೆ ತಂದಿತಾದರೂ ಅದರ ವಾಸ್ತವತೆಯನ್ನು ಬೆಳಕಿಗೊಡ್ಡಲು ಸಮರ್ಥ ವಾಗಲಿಲ್ಲ. ಆದರೆ ಈ ಶಾಸನದಿಂದ ಪಂಪನ ವಿಕ್ರಮಾರ್ಜುನ ವಿಜಯಂ-ಕಾವ್ಯದ ಬಗ್ಗೆ ಇದ್ದ ಕೆಲವು ಅನುಮಾನಗಳು ಪರಿಹಾರವಾದುವು. ಪಂಪನ ತಂದೆ ಭೀಮಪಯ್ಯ ಮತ್ತು ತಾಯಿ ಅಬ್ಬಣಬ್ಬೆಯೆಂದೂ ಅವಳು ಧಾರವಾಡ ಜಿಲ್ಲೆಯ ಅಣ್ಣಿಗೆರೆಯ ಜೊಯಿಸ ಸಿಂಘನ ಮೊಮ್ಮಗಳೆಂದೂ ತಿಳಿದುಬಂದಿತು. ಇಷ್ಟೇ ಅಲ್ಲದೆ ಪಂಪನಿಗೆ ಜಿನವಲ್ಲಭನೆಂಬ ತಮ್ಮನಿದ್ದುದು ಈ (ಗಂಗಾಧರ ಶಾಸನ) ಶಾಸನದಿಂದ ಸ್ಪಷ್ಟವಾಯಿತು.

ಆದರೆ ಕರೀಂನಗರದ 'ಚಾಗದ ಕಂಭ'ದ ಶಾಸನವು ದೊರಕಿದ ಮೇಲೆ ಪಂಪನ ವಿಕ್ರಮಾರ್ಜುನ ವಿಜಯಂ ಕಾವ್ಯದಲ್ಲಿನ 'ಪ್ರವೇಶ' ಭಾಗದಲ್ಲಿ ಬಂದಿರುವ ಐದು ಪದ್ಯಗಳು ಇದರಲ್ಲಿ 'ಚಾಗದಕಂಭ' ಎಂಬ ಹೆಸರಿನಲ್ಲಿ ದಾಖಲಾಗಿರುವುದು ಕಂಡು ಬಂದಿತು. ಈ ಶಾಸನದ ಅಂತ್ಯದಲ್ಲಿ ಶ್ರೀಮ್ಮಮ್ನಂ ಬರೆದೆ ಎಂದು ಗುರುತಿಸಿ ದ್ದಾರೆ. ಇಂಥ ಹೆಸರು ತೆಲುಗಿಗೂ ಹಾಗೆಯೇ ಕನ್ನಡಕ್ಕೂ ಅಸಾಧ್ಯವಾದದು. ಅದು ಅವರಿಗೆ 'ಶ್ರೀಮತ್+ಅಮ್ಮಂ' ಎಂದಿರಬಹುದೆಂದು ಅನ್ನಿಸಿದಂತೆ ತಿಳಿದು ಬಂದಿದೆ. ಜಾಗೀರ್‌ದಾರರು ಈ ಶಾಸನದ ಫೋಟೋ ಪ್ರತಿಯನ್ನು ನೋಡಿದ್ದಾರೆಯಾದರೂ ಇದು ಖಂಡಿತವಾದ ತಪ್ಪೆಂದು ಅವರಿಗೆ ಕಂಡು ಬಂದಂತಿಲ್ಲ. ಆದರೆ ನನಗೆ ಈ ಶಾಸನವನ್ನು ಓದುತ್ತಿದ್ದಂತೆಯೇ ಹುಟ್ಟಿದ ಅನುಮಾನಗಳನ್ನು ಸಾಧಾರವಾಗಿ ತಾಳೆ ಮಾಡಿ ನೋಡಿದ್ದೇನೆ. ಹಾಗೂ ಶಾಸನವನ್ನೇ ಖುದ್ದಾಗಿ ನೋಡಿ ಬಂದಿದ್ದೇನೆ. ಅದನ್ನು ತಪ್ಪಾಗಿ ಯಾದರೂ ಮೊದಲು ಓದಿದ ಅಧಿಕಾರಿಗಳನ್ನು ಕಂಡು ಮಾತಾಡಿ ನನ್ನ ಅನುಮಾನಗಳನ್ನು ಸಾದರ ಪಡಿಸಿದ್ದೇನೆ. ಈ ಶಾಸನವನ್ನು ಬರೆದವನ ಹೆಸರಿನಲ್ಲಿ ಮೊದಲ 'ಪಂ' ಎಂಬುದನ್ನು ಅವರು 'ಮಂ' ಎಂದು ಓದಿರುವುದನ್ನು ತೋರಿಸಿಕೊಟ್ಟದ್ದರಿಂದ ಅದರ ಸಾಧ್ಯತೆ ಯನ್ನು ಅವರು ಶಾಸನದ ಕಾಗದ ಪ್ರತಿ (ದಸ್ತಾವೇಜ)ಯನ್ನು ಮತ್ತೆ ಪರಿಶೀಲಿಸಿ 'ಸಾಧ್ಯ' ವೆಂದಿದ್ದಾರೆ. ಇಂಥ ಪರಿಶೀಲನೆಯಿಂದ ಕನ್ನಡ ಸಾಹಿತ್ಯ ಚರಿತ್ರೆಗೆ ಆದ ಲಾಭ ಅಪಾರವಾಗಿದೆ.

೧. ಪಂಪನು ಶಾಸನಕವಿಯೆಂಬುದು ಇದರಿಂದ ಸ್ಪಷ್ಟ.

೨. ಈ ಶಾಸನಕ್ಕೆ ಕಾಲದ ಗುರುತು ಮಾಡ ಲಾಗಿದೆ. ಅದರಂತೆ ಈ ಶಾಸನವು ಕ್ರಿ.ಶ. ೯೪೬ಕ್ಕೆ ತಾಳೆಯಾಗುತ್ತದೆ.

೩. ಪಂಪನು ತನ್ನ 'ಆದಿಪುರಾಣ' ಕಾವ್ಯ ವನ್ನು ಬರೆದದ್ದು ಕ್ರಿ.ಶ. ೯೪೨ರಲ್ಲೆಂಬುದನ್ನು ಅದರಲ್ಲಿರುವ ಒಕ್ಕಣೆಯಿಂದ ಖಚಿತವಾಗುತ್ತಿದೆ. ಆದುದರಿಂದ ಈಗ ವಿಕ್ರಮಾರ್ಜುನದ ಆ ಗ್ರಂಥದ ಕಾಲವನ್ನು ನಿರ್ಧರಿಸಲು ಈ ಶಾಸನವು ನೆರವಾಗುತ್ತದೆ. ಅಂದರೆ ಕ್ರಿ.ಶ. ೯೪೬ರಲ್ಲಿ ಕೇವಲ ಮೂರು ತಿಂಗಳಲ್ಲಿ ರಚಿಸಿದ ಕೃತಿಯೆಂದೂ ವಿಕ್ರಮಾರ್ಜುನ ವಿಜಯಂ ಕಾವ್ಯವನ್ನು ಗುರುತಿಸಲು ಯಾವುದೇ ಅನುಮಾನವೇ ಬೇಕಾದುದಿಲ್ಲ.

೪. ಗಂಗಾಧರಂನ 'ಜಿನವಲ್ಲಭನ ಶಾಸನ'ದ ಕಾಲವನ್ನು ವಿದ್ವಾಂಸರು ಗುರುತಿಸುವಂತೆ ಕ್ರಿ.ಶ. ೯೫೦ ಮತ್ತು ೯೬೦ರ ನಡುವೆ ಎಂದು ಒಪ್ಪಿಕೊಳ್ಳುವುದು ಸರಿಯಾಗುತ್ತದೆ. ಅಂದರೆ ಪಂಪನು ಈ ಜಿನವಲ್ಲಭನ ಶಾಸನದ ವೇಳೆಗೇ 'ಮುಡಿಪಿ'ರಬಹುದು. ಆದುದರಿಂದ ಜಿನವಲ್ಲಭನ ಶಾಸನವನ್ನು ಪಂಪನ 'ನಿಸದಿಗೆ ಶಾಸನ' ವೆಂದು ಕರೆದರು ಸರಿಯಾದೀತು. ಒಟ್ಟಿನಲ್ಲಿ ಸುಮಾರು ಕ್ರಿ.ಶ. ೯೫೦ರ ಮತ್ತು ೯೬೦ರ ನಡುವೆ ಆತನು ತೀರಿ ಕೊಂಡಿರಬಹುದು.

೫. ಉಳಿದ ವಿಚಾರಗಳು ಪಂಪನನ್ನು ಕುರಿತಂತೆ ಶೋಧವಾಗಬೇಕಾದುದಿದೆ-ಅದಕ್ಕೆ ಮುಂದೆ ಕರೀಂನಗರ ಜಿಲ್ಲೆಯಲ್ಲಿ ಅಡಗಿರಬಹುದಾದ ಶಾಸನ ಗಳಿಗಾಗಿ ಕಾದುನೋಡಬೇಕು.

ಒಂದು ಐತಿಹಾಸಿಕ ದಾಖಲೆಯಾಗಿ–

ಈ ಶಾಸನವನ್ನು ಬರೆದವನು 'ಪಂಪ'ನೆನ್ನುವಾಗ 'ಶ್ರೀ ಪಂಪ್ಪಂ ಬರೆದೊಂ' ಎಂದು ಸರಿಯಾಗಿ ಓದಲೇ ಬೇಕಾಗಿದೆ. ಇದು ಹತ್ತನೆಯ ಶತಮಾನದ ಕನ್ನಡದ

ರೂಪ. ಇದರ ಮೊದಲ ಭಾಗದಲ್ಲಿ ಯುದ್ಧಮಲ್ಲ-ನರಸಿಂಹ-ಮತ್ತು ಎರಡನೇ ಅರಿಕೇಸರಿ-ಇವರ ಪರವಾದ 'ಚಾಗದ' ಒಕ್ಕಣೆಯಿದಾಗಿದೆ. ಇದೊಂದು ವಿಶಿಷ್ಟ ದಾನಶಾಸನವಾಗಿದೆ. ವಾಸ್ತವವಾಗಿ ಎರಡನೆಯ ಅರಿಕೇಸರಿಯು ಪೌದನಪುರದಲ್ಲಿ ಪಟ್ಟಾಭಿಷಿಕ್ತನಾಗಿ ತನ್ನ ಹಿರಿಯರ ರಾಜ್ಯವನ್ನು ಆಳುತ್ತಿದ್ದವನು ಸಾಮಂತಾಧಿಪತಿಯೂ ಹೌದು. ಇವನ ಆಳ್ವಿಕೆಗೆ ಕರೀಂನಗರ ಜಿಲ್ಲೆಯು ಸೇರಿದ್ದಿತು-ಎಂಬುದನ್ನು ಈತನಿಗೆ ಸಂಬಂಧಿಸಿದ ಉಳಿದ ಶಾಸನಗಳಿಂದಲೂ ಅವು ಸಧ್ಯಕ್ಕೆ ಕರೀಂನಗರ ಜಿಲ್ಲೆಯಲ್ಲಿ ಕಂಡು ಬಂದಿವೆ-ಎಂಬುದರಿಂದಲೂ ಗುರುತಿಸಬಹುದು. ಅಂತೆಯೇ ರಾಷ್ಟ್ರಕೂಟ ಮೂರನೇ ಕೃಷ್ಣನ ಅಧೀನ ರಾಜನೂ ಆಪ್ತನೂ ಆಗಿದ್ದವನೆಂದು ಅರಿಕೇಸರಿಯನ್ನು ಗುರುತಿಸಬಹುದು. ತಾನೇ ಅಧೀನ ರಾಜನಾದುದರಿಂದ 'ಪಂಪ'ನಿಗೆ 'ಕವಿಚಕ್ರವರ್ತಿ' ಎಂಬ ಬಿರುದನ್ನು ಕೊಡಲು ಸಮರ್ಥನಾಗಲಿಲ್ಲ-ಎಂಬುದು ವಿದ್ವಾಂಸರ ಮತವಾಗಿದೆ. ಆದರೂ 'ಪಂಪ'ನ ಕಾವ್ಯಕ್ಕೆ ರನ್ನ-ಜನ್ನ ಮೊದಲಾದವರು ತಲೆ ಬಾಗಿರುತ್ತಾರೆ ಮತ್ತು ಹೊಗಳಿ ಗೌರವಿಸಿದ್ದಾರೆ. ಅಲ್ಲದೆ ನಾಗಚಂದ್ರನಿಗೆ 'ಅಭಿನವ ಪಂಪ' ಎಂಬ ಬಿರುಕು ಸಂದಿರುವುದರಿಂದ ಪಂಪನ ಹಿರಿಮೆಯು ಸ್ಪಷ್ಟವೂ ಆದುದಾಗಿದೆ.

ಪಂಪನು ತನ್ನ ಆಶ್ರಯ ದಾತನಾಗಿದ್ದ ಎರಡನೇ ಅರಿಕೇಸರಿಯ ವಂಶಾವಳಿಯನ್ನು ಹಿರಿಮೆ ಗರಿಮೆಗಳನ್ನು ಹೊಗಳಿದ್ದಾನೆ. ಈ ಚಾಗದ ಕಂಬದ ಶಾಸನದ ವೇಳೆಗಾಗಲೇ ಎರಡನೇ ಅರಿಕೇಸರಿಯು 'ಗುಣಾರ್ಣವ'ನು 'ಪ್ರಿಯಗಳ್ಳ'ನೂ ಆಗಿದ್ದನೆಂಬುದನ್ನು ಈ ಶಾಸನವು ಹೇಳುತ್ತದೆ. ಇವೆರಡೂ ಬಿರುದುಗಳು ಸೇರಿರುವುದನ್ನು ವೇಮುಲವಾಡದ ಶಾಸನವು ಹೇಳುತ್ತದೆ. ಇದೂ ಕಂಭ ಶಾಸನವೇ ಆಗಿದೆ. ಇದನ್ನು ಎರಡನೇ ಅರಿಕೇಸರಿಯೂ 'ವೆಂಬುಳವಾಟಿಕ'ದಲ್ಲಿ ತನ್ನ ಹಿರಿಯರು ಕಟ್ಟಿಸಿದ್ದ ದೇಗುಲಗಳನ್ನು ರಕ್ಷಿಸುವುದಕ್ಕೆನ್ನುವಂತೆ ನಿಱಿಸಿದ್ದಾನೆ. ಆದರೆ ಇದರಲ್ಲಿ ಪಂಪನ ಹೆಸರಾಗಲಿ ಪಂಪ ಭಾರತದ ಪದ್ಯ ಭಾಗಗಳಾಗಲಿ ಇಲ್ಲ ಈ ಶಾಸನವು ಸಂಸ್ಕೃತದಲ್ಲಿದ್ದರೂ ೭೧ ರಿಂದ ೭೫ರ ವರೆಗೆ ಕನ್ನಡ ವಾಕ್ಯ ರಚನೆಯಿದ್ದು-ಕೊನೆಯ ಕ್ರಿಯಾಪದಭಾಗದಲ್ಲಿ ಸಮಸ್ತ ಶಾಸ್ತ್ರ ಪಾರಗಂ ಶ್ರೀ ಮತ್ಸಂಧಿ ವಿಗ್ರಹಿ ಗುಣಾಂಕುಶೇನ... ಎಂದು ಕಂಡು ಬರುವ ಜಾಣತನವಿದೆ. ಮತ್ತೊಂದು ಅಂಶವೆಂದರೆ ಇದರ ಲಿಪಿಯೂ ಪ್ರಾದೇಶಿಕ ಸಾಮಾನ್ಯ ಲಿಪಿಯಾಗಿದೆ. ಇದರ ಜೊತೆಗೆ ನಾವು ಜಿನವಲ್ಲಭನ ಕುರಿಕ್ಯಾಲಂ ಶಾಸನವೂ ಹೀಗೆಯೇ ಇರುವುದನ್ನು ಗಮನಿಸಬಹುದು. ಆದುದರಿಂದ ಈ ಶಾಸನವನ್ನು ಪಂಪನ ಪೂರ್ವ ಶಾಸನವೆಂದು ಪರಿಗಣಿಸಬೇಕಾದೀತು. ಏಕೆಂದರೆ ಗುಣಾರ್ಣವಂ ಮತ್ತು ಪ್ರಿಯಗಳ್ಳಂ-ಈ ಹೊಗಳಿಕೆಗಳು ಪಂಪನದೆನ್ನುವ 'ಚಾಗದಕಂಭ'ದಲ್ಲೂ ಆತನ ವಿಕ್ರಮಾರ್ಜುನ ವಿಜಯಂ ಕಾವ್ಯ ಪ್ರವೇಶದಲ್ಲೂ ಕಾಣಬಹುದಾಗಿವೆ. ಪಂಪನು 'ವಿಕ್ರಮಾರ್ಜುನ ವಿಜಯಂ'-ಕಾವ್ಯದಲ್ಲಿ 'ಚಾಗದಕಂಬಮಂ ನಿಱಿಸಿ'ದ ನಾಯಕನೆಂದೇ ಹೇಳಿದ್ದಾನೆ. ಆದುದರಿಂದ ಈ ಶಾಸನದ ಮಹತ್ವವು ವಿಕ್ರಮಾರ್ಜುನ ವಿಜಯಂ ಕಾವ್ಯದ ೧೪ನೇ ಆಶ್ವಾಸದ ಪದ್ಯಗಳಿಂದಲೂ ಖಚಿತವಾಗುತ್ತದೆ.

ಎರಡನೇ ಅರಿಕೇಸರಿಯು ತನ್ನ ರಾಜಧಾನಿಯಾದ ಪೌದನದಲ್ಲಿ (ಬೋಧನ) ಪಟ್ಟಾಭಿಷಿಕ್ತನಾದ ಗುರುತಾಗಿ 'ಗೋದಾನ ಭೂದಾನ ಸುವರ್ಣದಾನ'ಗಳನ್ನು ಯಥೇಚ್ಛವಾಗಿ ಮಾಡಿದ ಮೇಲೆ ಈ 'ಚಾಗದಕಂಭ' ವನ್ನು ನಿಱಿಸಿರುವುದು ಮಹತ್ವದ ವಿಷಯವೂ ಆಗಿದೆ. ಆದುದರಿಂದ, ಎರಡನೆಯ ಅರಿಕೇಸರಿಯು ತನ್ನ ಪಟ್ಟಾಭಿಷೇಕದ ಸಂದರ್ಭದಲ್ಲಿ 'ಚಾಗದಕಂಬ'ದ ಶಾಸನ ಮಾಡಿಸಿದ್ದಿರಬೇಕು-ಇದು ಒಂದು ಸಂಪ್ರದಾಯವಾಗಿದ್ದಲ್ಲಿ ಇನ್ನು ಕೆಲವು (ಎರಡಾದರೂ) ಶಾಸನಗಳು ದೊರಕಬಹುದಾಗಿದೆ. ಪಂಪನು ತನ್ನ 'ವಿಕ್ರಮಾರ್ಜುನ ವಿಜಯಂ' ಕೃತಿಯಲ್ಲಿ ಬದ್ದೆಗ ಮೊದಲಾದವರನ್ನು ಹೊಗಳಿರುವ ರೀತಿಯಿಂದ ಇಂಥ ಅನುಮಾನಕ್ಕೆ ಅವಕಾಶನಿದೆ.

ಇಂಥ ಸಂಪ್ರದಾಯವು ಮುಂದೆ ಕಲ್ಯಾಣಿ ಚಾಲುಕ್ಯರ ಸಂಪ್ರದಾಯದಲ್ಲಿ ಸೇರಿರಬಹುದಾಗಿ-ಅವರು ಚಾಗದಕಂಬ' ಎಂಬುದನ್ನು ಬೇರೆಯಾಗಿಯೇ ಕಡೆದಿರಬಹುದು. ಭೂಲೋಕಮಲ್ಲ ಸೋಮೇಶ್ವರ III ಕ್ರಿ.ಶ.

೧೧೨೫-ಈತನು ತನ್ನ ಕೊಲಮುಪಾಕದ ಶಾಸನದಲ್ಲಿ ಕೀರ್ತಿಸ್ತಂಭ – ಜಯಸ್ತಂಭ – ಮಾನಸ್ತಂಭ – ಎಂಬ ಮೂರು ಹೆಮ್ಮೆಗಳನ್ನು ಒಂದೇ ಶಾಸನದಲ್ಲಿ ಹೊಗಳಿಸಿ ಕೊಂಡಿದ್ದಾನೆ. ಇದು ಎರಡನೆಯ ಅರಿಕೇಸರಿಯ ವೆಂಬುಳವಾಟಕದ ದಾನ ಶಾಸನದಂತೆಯೇ ಇರುವುದನ್ನು ಮರೆಯುವಂತಿಲ್ಲ.

ಉಪಸಂಹಾರ-ಒಟ್ಟಿನಲ್ಲಿ ಪಂಪನು ಕನ್ನಡದಲ್ಲಿ 'ಕಾಳಿದಾಸ'ನೆನ್ನುವಂತೆ ಹೆಸರಾಂತವನೂ ಆಗಿದ್ದ 'ಮಹಾಕವಿ'ಯು ಶಾಸನ ಕವಿಯೂ ಆಗಿದ್ದುದಕ್ಕೆ 'ಶ್ರೀ ಪಂಪ್ಪಂಬರೆದೊಂ' ಎಂಬುದು ಆತನ ಕೈ ಬರೆಹದಷ್ಟೇ-ಒಂದು ದಾಖಲೆಯಾಗಿರುತ್ತದೆ.

ಮಂದಾಕಿನಿ ಪುರೋಹಿತ್*

# ಬನವಾಸಿ ಕದಂಬರ ಕಾಲದಲ್ಲಿ-ವೈದಿಕ ಸಂಸ್ಕೃತಿ

ಕದಂಬರು ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿ ಕರ್ನಾಟಕದ ಸಂಸ್ಕೃತಿಗೆ ತಮ್ಮದೇ ಆದ ಅಮೂಲ್ಯ ಹಾಗೂ ಉದಾತ್ತ ಕೊಡುಗೆಯನ್ನು ನೀಡಿದ ಕನ್ನಡಿಗರೆನಿಸಿ ಕೊಂಡಿದ್ದಾರೆ. ಈ ಸಾಮ್ರಾಜ್ಯದ ಸ್ಥಾಪಕನಾದ ಮಯೂರ ಶರ್ಮನು (ಕಾಲ ಕ್ರಿ.ಶ. ೩೪೫-೩೬೫) ವೈದಿಕ ಧರ್ಮವನ್ನು ಅವಲಂಬಿಸಿದ್ದ ಶ್ರೋತ್ರಿಯ ಬ್ರಾಹ್ಮಣನಾಗಿದ್ದ ನೆಂಬುದು ಕಾಕುಸ್ಥವರ್ಮನ ತಾಳಗುಂದ ಶಾಸನವು ವಿವರಿಸುತ್ತದೆ. ಈ ಶಾಸನವು ಮಯೂರಶರ್ಮನನ್ನು ಏವಮಾಗತೇ ಕದಮ್ಬ ಕುಲೇ ಶ್ರೀ ಮಾನ್ಬಭೂವ ದ್ವಿಜೋತ್ತಮ: ನಾಮತೋ ಮಯೂರಶರ್ಮೇತಿ ಶ್ರುತಶೀಲ ಶೌಚಾದ್ಯಲಂಕೃತಃ[1] ಎಂದು ಬಣ್ಣಿಸಿದೆ. ಅವರ ವಂಶಾವಳಿಯ ಮೇಲೆ ಮಹತ್ವದ ಬೆಳಕನ್ನು ಚೆಲ್ಲಿದ ರವಿವರ್ಮನ ಗುಡ್ನಾಪುರ ಶಾಸನದಲ್ಲಿ ಮಯೂರ ಶರ್ಮನ ತಾತನಾದ ವೀರಶರ್ಮನನ್ನು 'ಹಾರೀತಿ ಪುತ್ರೋ ಮಾನವ್ಯ ಗೋತ್ರೋದ್ಭವೋ ದ್ವಿಜಃ ವೀರಶರ್ಮ್ಮೇತಿ ವೇದಕುಳ ಮತಿಃ ಎಂದೂ ಮಯೂರ ಶರ್ಮನನ್ನು 'ವೇದ ವೇದಾಙ್ಗ ವಿಶಾರದಃ' ಎಂದೂ ವರ್ಣಿಸುತ್ತದೆ. ದ್ವಿಜೋತ್ತಮನಾದ ವೀರಶರ್ಮ-ಹಾಗೂ ಮಯೂರಶರ್ಮ ಇವರಿಬ್ಬರೂ ವೇದ-ವೇದಾಂಗಗಳಲ್ಲಿ ಅಪಾರ ಪಾಂಡಿತ್ಯವನ್ನು ಪಡೆದಿದ್ದರೆಂಬುದು ಸ್ಪಷ್ಟವಾಗಿದೆ. ವೀರಶರ್ಮನು ವೈದಿಕ ವೃತ್ತಿಯನ್ನವಲಂಬಿಸಿದ್ದರೆ ಅವನ ಸುತ ಬಂಧುಷೇಣನು ಕ್ಷಾತ್ರ ವೃತ್ತಿಯನ್ನು ಅವಲಂಬಿಸಿದ್ದನು. ಅವನ ಸುತನೇ ಮಯೂರಶರ್ಮ. ವೇದ ಪಾರಂಗತವಾಗಿದ್ದ ವೀರ ಶರ್ಮನು 'ಗುರುಕುಲ'ವೊಂದನ್ನು ನಡೆಸುತ್ತಿದ್ದ ನೆಂಬುದು ಗೊತ್ತಾಗುತ್ತದೆ.[2]

ತಾಳಗುಂದ ಶಾಸನದ ಪ್ರಕಾರ ಮಯೂರ ಶರ್ಮನು ತನ್ನ ಗುರುವಾದ ವೀರಶರ್ಮನೊಡನೆ ಪಲ್ಲವರ ರಾಜಧಾನಿಯಾದ ಕಾಂಚಿಯ ಘಟಿಕಾ ಸ್ಥಾನವನ್ನು ಸೇರಿದನೆಂಬುದನ್ನು ಗಮನಿಸಿದಾಗ ಅವನು ಪ್ರಾಥಮಿಕ ಹಂತದ ವಿದ್ಯಾಭ್ಯಾಸವನ್ನು ತನ್ನ ತಾತ (ಗುರು)ನಲ್ಲಿ ಪಡೆದು ಹೆಚ್ಚಿನ ಅಧ್ಯಯನಕ್ಕೆ ಕಾಂಚಿಯ ಘಟಿಕಾ ಸ್ಥಾನಕ್ಕೆ ಹೋದನೆಂದು ತಿಳಿಯಬಹುದು ಕಾಂಚಿಯಲ್ಲಿ ಅಶ್ವ ಸಂಸ್ಥೆಯವರೊಡನೆ ನಡೆದ ಕಲಹದಲ್ಲಿ ರೋಷಗೊಂಡು "ಗುರು ಕುಲದಲ್ಲಿ ಇಷ್ಟು ವರ್ಷಗಳ ವರೆಗೆ ಪಡೆದ ವಿದ್ಯೆ ವ್ಯರ್ಥವಾಯಿತಲ್ಲ ಬ್ರಹ್ಮ ಸಿದ್ಧಿಯು ನೃಪಾಧೀನವಾಯಿತಲ್ಲ ಎಂದು ನೊಂದು ಯಜ್ಞ ಯಾಗದಿಗಳಿಗೆ ಬಳಸುತ್ತಿದ್ದ ಕುಶ, ಸಮಿತ್ತು, ಆಜ್ಯ, ಚರುಗಳನ್ನು ಬಿಸುಟು ಅದೇ ಕೈಯಲ್ಲಿ ಶಸ್ತ್ರವನ್ನು ಹಿಡಿದನು."[3] ಎಂಬ ವಿವರಣೆ ಗಮನಾರ್ಹ. ಒಟ್ಟಾರೆ

---

* 'ಯಶೋರಾಮ' ಮಂಜುನಾಥಪುರ, ಮಾಳಮಡ್ಡಿ, ಧಾರವಾಡ-೫೮೦೦೦೭

1 ಡಾ। ಬಿ.ಆರ್ ಗೋಪಾಲ-ಬನವಾಸಿ ಕದಂಬರು ಸಂ. ಕದಂಬ ಸಾಂಸ್ಕೃತಿಕ ಅಧ್ಯಯನ ಸಂಸ್ಥೆ-ಶಿರಸಿ ೧೯೮೩ ಶಾಸನ ಸಂಖ್ಯೆ ೪ ಪುಟ ೮

2 " " ೨೩ ಪುಟ ೪೩

3 " " ೪ ಪುಟ ೮

ಕಾಕುಸ್ಥವರ್ಮನ ತಾಳಗುಂದ ಶಾಸನ ಹಾಗೂ ರವಿವರ್ಮನ ಗುಡ್ನಾಪುರ ಶಾಸನಗಳಿಂದ ಮಯೂರಶರ್ಮನ ವಂಶದವರೆಲ್ಲ ಸಕಲ ವೇದ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರೆಂಬುದು ಸ್ಪಷ್ಟವಾಗುತ್ತದೆ ಮತ್ತು ಅಂದು 'ಗುರುಕುಲ' ಮಾದರಿಯ ಶಿಕ್ಷಣ ಪದ್ಧತಿಯು ಉಚ್ಛ್ರಾಯ ಸ್ಥಿತಿಯಲ್ಲಿದ್ದಿತೆಂಬುದು ಗೊತ್ತಾಗುತ್ತದೆ.

ಅದೇ ತಾಳಗುಂದ ಶಾಸನವು ಮಹಾರಾಜ ರಘುವನ್ನು 'ಶ್ರುತಿಪಥ ನಿಪುಣಃ'[4] ಎಂದು ಬಣ್ಣಿಸಿದರೆ, ಮುದಿಗೆರೆ ಶಾಸನವು "ಸಿಂಹವರ್ಮನು ಅಶ್ವವಿದ್ಯೆ, ವಾಜಿ, ಗಾಂಧಾರ, ಬಿಲ್ವಿದ್ಯೆ, ತತ್ವ-ಶಬ್ದ,-ನೀತಿ-ಶಾಸ್ತ್ರ, ಸಂಗೀತ ಶಾಸ್ತ್ರವನ್ನು ಬಲ್ಲವನಾಗಿದ್ದನೆಂಬುದನ್ನು ತಿಳಿಸುವುದರ ಜೊತೆಗೆ ಅವನು ಅಧ್ಯಾತ್ಮ ಹಾಗೂ ಸಮಯ ಮೀಮಾಂಸೆಯನ್ನು ಅಧ್ಯಯನ ಮಾಡಿದ್ದನೆಂಬುದನ್ನು ತಿಳಿಸುತ್ತದೆ. ಮೃಗೇಶವರ್ಮನ ತಾಳಗುಂದ ಶಾಸನವು ಮೃಗೇಶನು ಇತಿಹಾಸ-ಪುರಾಣ-ಧರ್ಮ ಶಾಸ್ತ್ರಗಳನ್ನು ವೇದ ವೇದಾಂತಗಳನ್ನು ಬಲ್ಲವನಾಗಿದ್ದನೆಂದು ತಿಳಿಸಿದರೆ[6] ಹರಿವರ್ಮನನ್ನು ಆವನ ಶಾಸನವೊಂದು ಶ್ರುತಜಲ ನಿಧಿಃ[5] ಎಂದ ಬಣ್ಣಿಸಿದೆ.

ಹರಿವರ್ಮನ ನಾಲ್ಕನೆಯ ವರ್ಷದ ಶಾಸನದಲ್ಲಿ "ಮಹಾರಾಜಃ ಹರಿವರ್ಮ ಬಹುಭವಕೃತಃ ಪುಣ್ಣೈ ರಾಜಶ್ರೀಯಂ ನಿರುಪದ್ರವಾಮ್ ಪ್ರಥಿಷ್ಮ ಪಥಿಸ್ಥಿತಃ ಸ್ವಬಲ ಕುಲಿಶಾಭಃ ತೋಚ್ಚಿನ್ನ ದ್ವೀಷೆಥ ಸುಧಾಕರಃ[7] ಎಂದಿದ್ದಿದೆ. ಸಿಂಹವರ್ಮನು 'ಗುರು ಸಾಧು ಪೂಜಾ ನಿರತನೆಂದೂ' ವಿಜಯ ಶಿವ ಮೃಗೇಶನನ್ನು ದೇವದ್ವಿಜ ಗುರು-ಸಾಧು ಜನೇಭ್ಯಃ ಗೋ ಭೂಮಿ ಹಿರಣ್ಯ ಶಯನಾಚ್ಛಾದಿನೈಕ ವಿಧ ಪ್ರಧಾನ ನಿತ್ಯಃ" ಎಂದು ಶಾಸನಗಳು ತಿಳಿಸುತ್ತದೆ. ಇವನನ್ನು ವಿಶಿಷ್ಟ ವಿಪುಲ ಪುಣ್ಯಸ್ಕಂದಃ ಎಂದು ಶಾಸನಗಳು ಕೊಂಡಾಡಿವೆ.

ಕಾಕುಸ್ಥನು 'ವಿನಯ ಶೀಲನೂ ದೇವ ಗುರುಗಳಲ್ಲಿ ಭಕ್ತಿಯುಳ್ಳವನೂ ಧರ್ಮದಲ್ಲಿ ಯುಧಿಷ್ಠರನಾಗಿಯೂ ರಾಜ್ಯವಾಳುತ್ತಿದ್ದನೆಂದು ಶಾಸನಗಳು ತಿಳಿಸುತ್ತವೆ.

**ಅರಸರಿಂದ ದಾನ ಪಡೆದ ವ್ಯಕ್ತಿಗಳ ಅರ್ಹತೆ ಮತ್ತ ದಾನದ ಉದ್ದೇಶಗಳು :** ಮಯೂರಶರ್ಮನು ಅಹಿಚ್ಛತ್ರದಿಂದ ಹದಿನೆಂಟು ಬ್ರಾಹ್ಮಣ ಕುಟುಂಬಗಳನ್ನು ಕರೆ ತಂದನೆಂಬುದನ್ನು ಗಮನಿಸಿದಾಗ ಅಗ್ರಹಾರಗಳ ಸ್ಥಾಪನೆಗೆ ಈ ಅರಸರ ಕಾಲವು ಪೂರ್ವಭಾವಿಯಾದ ಹಿನ್ನೆಲೆಯನ್ನೊದಗಿಸಿತೆಂದು ಹೇಳಬಹುದು. ಇವರ ಶಾಸನಗಳಿಂದ ಆ ಕಾಲದ ಬ್ರಾಹ್ಮಣರ ವೇದಾಭ್ಯಾಸ-ಅವರ ಗೋತ್ರ-ಪ್ರವರಗಳೂ, ಹಾಗೂ ದಾನಗಳ ಉದ್ದೇಶವೂ ಸ್ಪಷ್ಟವಾಗಿ ತಿಳಿದು ಬರುತ್ತದೆ.

ಮಾಂಧಾತವರ್ಮನ ಐನೆಯ ವರ್ಷದ ಶಿವಮೊಗ್ಗ ತಾಮ್ರ ಶಾಸನವು ಬ್ರಾಹ್ಮಣ ಕುಟುಂಬವೊಂದರ ವಿವರವನ್ನು ಹೀಗೆ ಕೊಡುತ್ತದೆ.

ಅತ್ರೇಯ ಗೋತ್ರದ ತ್ರಿಯಂಬಕ ಸ್ವಾಮಿ, ವೇದ ಪಾರಾಗತನಾಗಿದ್ದನು.[9] ದುಗ್ಗಮಾರ ಚತುರ ವೇದ ಭಟ್ಟ-ಶ್ರೀಧರ ಚತುರ ವೇದ ಭಟ್ಟ ಇವರು ತ್ರಿವಿಕ್ರಮ ಭಟ್ಟ ಹಾಗೂ ರವಿನಾಗ ಭಟ್ಟನ ಮಕ್ಕಳು. ಇಲ್ಲಿ ಬರುವ 'ಚತುರ್ವೇದ ಭಟ್ಟ' ಎಂಬುದು ಗಮನಾರ್ಹ. ಚತುರ್ವೇದ ಭಟ್ಟ ಎಂಬುದು ನಾಲ್ಕು ವೇದಗಳನ್ನು ಅಧ್ಯಯನ ಮಾಡಿದ್ದನೆಂಬುದನ್ನು ಸೂಚಿಸುತ್ತದೆ. ಆಯಾ ವ್ಯಕ್ತಿಗಳು ಪಡೆದ ವಿದ್ವತ್ತಿನಿಂದಲೇ ಅವರನ್ನು ಗುರುತಿಸಲಾಗುತ್ತಿತ್ತು. ಕೆಲವರು ಒಂದೊಂದು ವೇದಗಳನ್ನು ಆಳವಾಗಿ ಅಧ್ಯಯನ ಮಾಡುತ್ತಿದ್ದರು.

ಈ ಅರಸರ ಶಾಸನಗಳಲ್ಲಿ ಬರುವ ಗೋತ್ರ ಪ್ರವರಗಳ ವಿವರಗಳೂ ಮಹತ್ವವಾಗಿದೆ. ಔಪಗಹನಿ ಗೋತ್ರದ

---

4 ಶಾಸನ ಸಂಖ್ಯೆ ೪ ಪುಟ ೯
5 " " ೩೬ ಪುಟ ೫೧
6 " " ೧೫ ಪುಟ ೪೦
7 " " ೩೬ ಪುಟ ೫೧
8 " " ೧೧ ಪುಟ ೩೪
9 " " " "

ಅಥರ್ವಣ ಶಾಖೆಗೆ ಸೇರಿದ ಪಿಂಗಳ ಸ್ವಾಮಿ ಕೌಂಡಿಣ್ಯ ಗೋತ್ರದ ತೈತ್ತಿರಿಯ ಶಾಖೆಗೆ ಸೇರಿದ ದೇವಶರ್ಮ, ಯಜುರ್ವೇದ ಶಾಖೆಯ ಕಾಶ್ಯಪಗೋತ್ರದ ಗೋವಿಂದ ಸ್ವಾಮಿ, ಧೌಮ್ಯ ಗೋತ್ರದ ಭವಸ್ವಾಮಿ, ಕಾಶ್ಯಪ ಗೋತ್ರದ ಪಾಶುಪತ, ಅಹಿತಾಗ್ನಿ ವಿಷ್ಣುಶರ್ಮ, ಆತ್ರೇಯಗೋತ್ರದ ತ್ರಿಯಂಬಕಸ್ವಾಮಿ, ಇತ್ಯಾದಿ ಹೆಸರುಗಳ ಅಂದು ಪ್ರಚಲಿತವಿದ್ದ ಗೋತ್ರಗಳು ಹಾಗೂ ಅಯಾ ವೇದಗಳ ಶಾಖೆಗಳನ್ನು ತಿಳಿಸಿಕೊಡುತ್ತವೆ. ಬ್ರಾಹ್ಮಣರ ಹೆಸರಿನ ಮುಂದೆ'ಶರ್ಮ'ಹಾಗೂ 'ಸ್ವಾಮಿ' ಎಂದು ಸೇರಿಸಿಕೊಳ್ಳುವುದು ಸಾಮಾನ್ಯವಾಗಿತ್ತು. ಇನ್ನೂ ಕೆಲವು ಅಪರೂಪದ ಗೋತ್ರಗಳ ಹೆಸರು ಕುತೂಹಲಕಾರಿಯಾಗಿದೆ. ಹರಿವರ್ಮನ ಎಂಟನೆಯ ವರ್ಷದ ಸಂಗೊಳ್ಳಿ ತಾಮ್ರ ಶಾಸನದಲ್ಲಿ ಬರುವ ಕೈಮ್ಬುಲ, ಚವುಲಿಯ ವಲಂದತ[10] ಕೆಲವು ಗೋತ್ರಗಳು. ಕಾಲಾಸ ಇದೇ ಶಾಸನದಿಂದ ಅರಸನು ಅಥರ್ವವೇದವನ್ನು ಅಧ್ಯಯನ ಮಾಡಿ ಬೇರೆ ಬೇರೆ ಗೋತ್ರಗಳಿಗೆ ಸೇರಿದ ಜನ ಬ್ರಾಹ್ಮಣರಿಗೆ ತೇದಾವ ಗ್ರಾಮವನ್ನು ದಾನ ಮಾಡಿದುದು ತಿಳಿದು ಬರುತ್ತದೆ. ಇಮ್ಮಡಿ ಕೃಷ್ಣವರ್ಮನ ಬೆಣ್ಣೂರು ಶಾಸನದಿಂದ ಈ ಅರಸನು ಯಾತ್ರೆಗೆ ಹೋಗುವ ಸಂದರ್ಭದಲ್ಲಿ ಹಾರೀತ ಗೋತ್ರಕ್ಕೆ ಸೇರಿದ ಭವಸ್ವಾಮಿ ಎಂಬುವನಿಗೆ ಭೂದಾನ ಮಾಡಿದನು. ಈ ಭವಸ್ವಾಮಿಯನ್ನು ಯಥಾ ನ್ಯಾಯೇನ ಸತತಪ ಸ್ವಾಧ್ಯಾಯ ವಿಶಿಷ್ಟಾ, ಛಂದೋಗ ಪಹಾಯ, ಯಜ್ಞವಿದಾ ಬ್ರಹ್ಮವಿದಾ ಬ್ರಹ್ಮಯಜ್ಞ ಪಾರಾಣಾಯ" ಎಂದು ವರ್ಣಿಸಲ್ಪಟ್ಟಿದ್ದಾನೆ[11] ಇದೇ ಇಮ್ಮಡಿ ಕೃಷ್ಣವರ್ಮನು (ಶಿರಸಿ ತಾಮ್ರ ಶಾಸನ) ವಾರಾಹಿ ಗೋತ್ರಕ್ಕೆ ಸೇರಿದ ಸೋಮಯಾಜಿ[12] ಎನಿಸಿದ ಸೋಮ ಸ್ವಾಮಿಗೆ ತನ್ನ ಮಾತಾ ಪಿತೃಗಳ ಪುಣ್ಯಕ್ಕಾಗಿ ಗಿರಿಗಡ ಗ್ರಾಮದ ಉಪಗ್ರಾಮ ದಾನ ಮಾಡಿದನೆಂದು ತಿಳಿಸುತ್ತದೆ. ಈ ಸೋಮಸ್ವಾಮಿಯ ಪೃಥ್ವೀ ದೇವತೆಗಳಲ್ಲಿ ಶ್ರೇಷ್ಠವೆನಿಸಿದ ಸೋಮಪವಮಾನ ಯಜ್ಞದಲ್ಲಿ ತೊಡಗಿರುತ್ತಿದ್ದರಿಂದಲೇ ಇವನಿಗೆ ಸೋಮಸ್ವಾಮಿ ಎಂದು ಹೆಸರು ಬಂದಿರಬಹುದೆಂದು ತಿಳಿಯಬಹುದು. ವಿಷ್ಣುವರ್ಮನು (ಹೆರ್ಬಟ ತಾಮ್ರ ಶಾಸನ) ತನ್ನ ಶ್ರೇಯಸ್ಸಿಗೋಸ್ಕರ ಹೆರ್ಬಟ ಗ್ರಾಮವನ್ನು ಬ್ರಹ್ಮದೇಯವಾಗಿ ಶುಕ್ಲಯಜುರ್ವೇದ ಶಾಖೆಗೆ ಸೇರಿದ ಬ್ರಾಹ್ಮಣರಿಗೆ ದಾನ ಮಾಡಿದ್ದಾನೆ.[13] ಎರಡನೆಯ ಕೃಷ್ಣವರ್ಮನು ತನ್ನ ಆತ್ಮ ಶ್ರೇಯಾರ್ಥವಾಗಿ ಸಹಸ್ರ ಗೋವುಗಳನ್ನು ದಾನಮಾಡಿದನು[14]

ಒಟ್ಟಾರೆ ಕದಂಬ ಅರಸರೆಲ್ಲರೂ ಆತ್ಮ ಶ್ರೇಯಸ್ಸಿಗಾಗಿಯೂ, ಪುಣ್ಯ ಸಂಪಾದನೆಗಾಗಿಯೂ, ಹಿರಿಯರ ಅಪೇಕ್ಷೆಯಂತೆ ಅವರ ಶ್ರೇಯಸ್ಸಿಗಾಗಿಯೂ ವೇದ ಸಂಪನ್ನರಾದ, ಯಜ್ಞ ಯಾಗಾದಿಗಳಲ್ಲಿ ನಿರತರಾಗಿದ್ದ ಬ್ರಾಹ್ಮಣರಿಗೆ ಅಶನಾರ್ಥವಾಗಿ ಬ್ರಹ್ಮದೇಯವಾಗಿ, ಗೋದಾನ ಭೂದಾನಗಳನ್ನು ಮಾಡುತ್ತಿದ್ದರು. ದಾನ ಧರ್ಮಗಳನ್ನು ರಕ್ಷಿಸಿಕೊಂಡು ಬಂದ ಅರಸರು ಸಮಾಜದ ಹಿತಕ್ಕಾಗಿ ಲೋಕೋಪಯೋಗಿ ಕಾರ್ಯಗಳನ್ನು ಮಾಡಿದ್ದಾರೆ. ರವಿವರ್ಮನು ಗುಡ್ಡ ತಟಾಕವನ್ನು ನಿರ್ಮಿಸಿದ್ದುದನ್ನು, ಗುಡ್ನಾಪುರ ಶಾಸನ ಹಾಗೂ ಕಾಕುಸ್ಥನು ಕೆರೆಯೊಂದನ್ನು ತೋಡಿಸಿದ್ದನ್ನು. ತಾಳಗುಂದ ಶಾಸಗಳು ಉಲ್ಲೇಸುತ್ತದೆ[15]

ವೇದ ಪಾರಂಗತರಾಗಿದ್ದ ಈ ಅರಸರು ಹಿಂದಿನ ಅನೇಕ ಅರಸರು ಆಚರಿಸಿದ್ದ ಅತ್ಯಂತ ಶ್ರೇಷ್ಠತಮದ್ದಾದ ಅಶ್ವಮೇಧ ಯಜ್ಞವನ್ನು ಮಾಡಿದ ಉಲ್ಲೇಖನವು ಶಾಸನಗಳು ದೊರೆಯುತ್ತದೆ. ಎರಡನೆಯ ಕೃಷ್ಣವರ್ಮನ ಬನ್ನಹಳ್ಳಿಯ ತಾಮ್ರ ಶಾಸನವು ಅವನನ್ನು

10 ಶಾಸನ ಸಂಖ್ಯೆ ೩೧ ಈ ವ್ಯಕ್ತಿಗಳ ಹೆಸರುಗಳು ಕದಂಬ ಅರಸರ ಬೇರೆ ಬೇರೆ ದಾನ ಶಾಸನಗಳಲ್ಲಿ ಬರುತ್ತದೆ.

11 ,, ,, ೩೫ ಪುಟ ೬೦

12 ,, ,, ೩೪ ,, ೬೮

13 ,, ,, ೩೧ ,, ೬೩

14 ,, ,, ೩೩ ,, ೬೬

15 ,, ,, ೪ ಹಾಗೂ ಶಾ. ಸ. ೨೩

ಅಶ್ವಮೇಧಯಾಜಿನಃ[16]ಎಂದು ಉಲ್ಲೇಖಿಸಿದೆ. ಬೆಣ್ಣೂರು ತಾಮ್ರ ಶಾಸನದಲ್ಲಿ "ಅಶ್ವಮೇಧವಬೃಥಸ್ನಾನ ಪವಿತ್ರೀ ಕೃತತ್ಮಾನಂ, ಕದಂಬಾನಾಂ ಪಞ್ಚಮೇ ಲೋಕಪಾಲಂ" ಎಂದು ವರ್ಣಿಸಲಾಗಿದೆ.[17] ತಾಳಗುಂದ ಶಾಸನವಂತೂ ಆ ಕಾಲದಲ್ಲಿ ಬ್ರಾಹ್ಮಣರು ನಡೆಸುತ್ತಿದ್ದ ಯಜ್ಞಯಾಗಾದಿಗಳ ಸುಂದರವಾದ ಚಿತ್ರಣವನ್ನು ಕೊಡುತ್ತದೆ. ವಿವಿಧ ಯಜ್ಞಾವಬೃಥ ಪುಣ್ಯಾಭಿಷೇಕಾರ್ದ್ರ ಮೂರ್ಧಜನು'ಪ್ರವಚನಾವಗಾಹ ನಿಷ್ಣಾತಂ'ವಿಧಿವತ್ಸಮಿಧಾಗ್ನಿಸೋಮಪಂ, ಪ್ರಣವಪೂರ್ವ ಷಡ್ವಿಧಾಧ್ಯೇಯ ನಾನದ್ಯಮಾನ್ತರಾಲಯಂ ಅಕೃಶ ಚಾತುರ್ಮಾಸ್ಯ ಹೋಮೇಷ್ಟಿ ಪಶು ಪಾರ್ವಣ ಶ್ರಾದ್ಧ ಪೌಷ್ಟಿಕಂ[18] ವೈದಿಕ ಕರ್ಮಗಳನ್ನು ನಡೆಸುತ್ತಿದ್ದ ಈ ಬ್ರಾಹ್ಮಣರ ವಿವಿಧ ಯಜ್ಞಗಳ ನಂತರ ಮಾಡಿದ ಅವಬೃಥ ಸ್ನಾನಗಳಿಂದ ಇವರ ಕೂದಲು ಸದಾ ಅರ್ದ್ರವಾಗಿರುತ್ತಿತ್ತು. ಇವರು ಯಾವಾಗಲೂ ಸಮಿತ್ತುಗಳಿಂದ ಅಗ್ನಿಯನ್ನು ಪ್ರಜ್ವಲಗೊಳಿಸುತ್ತಿದ್ದರು. ಓಂಕಾರದಿಂದಲೂ ಷಡ್ವಿಧಗಳಿಂದಲೂ ಇವರ ಮನೆಯ ಒಳಭಾಗ ಪ್ರಧ್ವನಿಸುತ್ತಿತ್ತು. ಎಂಬುವ ಸುಂದರ ವರ್ಣನೆ ಕದಂಬರು ಪರಂಪರಾಗತವಾಗಿ ಉಳಿಸಿಕೊಂಡು ಬಂದ ವೈದಿಕ ಸಂಸ್ಕೃತಿಗೆ ಉತ್ತಮ ಸಾಕ್ಷಿಯಾಗಿದೆ.

ಇಂತಹ ಉದಾತ್ತ ಬದುಕಿನ ಆದರ್ಶವನ್ನು ಕಂಡಿದ್ದ ಕದಂಬ ಅರಸರು ಗೋ ಬ್ರಾಹ್ಮಣರನ್ನು ರಕ್ಷಿಸುತ್ತ, ಸಮಸ್ತ ಪ್ರಜಾಕೋಟಿಯ ಒಳಿತಿಗಾಗಿ ರಾಜ್ಯ ಭಾರ ಮಾಡುತ್ತಿದ್ದರು. ಇವರ ಶಾಸನಗಳ ಕೊನೆಯಲ್ಲಿ ಬರುವ ಸ್ವಸ್ತ್ಯಸ್ತು'ಗೋ ಬ್ರಾಹ್ಮಣೇಭ್ಯಃ' ಹಾಗೂ ಸ್ವಸ್ತಿ ಪ್ರಜಾಭ್ಯಃ ಎಂಬುವ ವಾಕ್ಯಗಳು ಇದನ್ನೇ ಹಾರೈಸುತ್ತವೆ.

ಹೀಗೆ ಕದಂಬ ಅರಸರೆಲ್ಲರೂ ವೇದ ಪಾರಂಗತರಾಗಿದ್ದು, ಅಶ್ವಮೇಧಾದಿ ಯಜ್ಞಗಳನ್ನು ಮಾಡುತ್ತಿದ್ದರು. ಇವರು ಕರ್ನಾಟಕದಲ್ಲಿ ಅಗ್ರಹಾರ ಸಂಸ್ಕೃತಿಗೆ ಪೂರ್ವಭಾವಿಯಾದ ಹಿನ್ನಲೆಯನ್ನೊದಗಿಸಿದರು. ಬ್ರಾಹ್ಮಣರ ವೇದಾಧ್ಯಯಕ್ಕೆ ಸಾಕಷ್ಟು ದಾನ ದತ್ತಿಗಳನ್ನು ಹಾಕಿಕೊಟ್ಟು ಪ್ರೋತ್ಸಾಹ ನೀಡಿದರು. ಇವರು ಗೋತ್ರ ಪ್ರವರಗಳನ್ನು ಬೆಳೆಸಿದರು. ಬ್ರಾಹ್ಮಣರೆಲ್ಲರೂ ಪಂಚ ಮಹಾಯಜ್ಞಗಳನ್ನು ಸೋಮಯಜ್ಞ ಬ್ರಹ್ಮಯಜ್ಞ, ಮೊದಲಾದ ನಿತ್ಯ ನೈಮಿತ್ತಿಕ ಯಜ್ಞಗಳನ್ನು ನಡೆಸುತ್ತ ಅಧ್ಯಯನ-ಅಧ್ಯಾಪನ ಮಾಡುತ್ತ ಷಟ್ಕರ್ಮ ನಿರತರಾಗಿರುತ್ತಿದ್ದರು. ಒಟ್ಟಾರೆ ಕದಂಬ ಅರಸು ಪರಮತ ಸಹಿಷ್ಣುಗಳಾಗಿ ಜೈನ ಬುದ್ಧ ಧರ್ಮಗಳಿಗೆ ಗೌರವವನ್ನು ಕೊಟ್ಟರು. ಆದರ್ಶ ಸಂಸ್ಕೃತಿಯನ್ನು ಕಾಪಾಡಿಕೊಂಡು ಆತ್ಮೋದ್ಧಾರ ಹಾಗೂ ಸಮಸ್ತ ಮಾನವ ಜನಾಂಗದ ಕಲ್ಯಾಣ ಇವರ ಬದುಕಿನ ಮೌಲ್ಯಗಳಾಗಿದ್ದವೆಂದು ಹೇಳಬಹುದು. ಇವರ ಕಾಲದ ಸಮಾಜವು ಶಾಂತಿ ಸೌಖ್ಯದನೆಲೆವೀಡಾಗಿತ್ತು. ಇಂದು ಕಣ್ಮರೆಯಾಗುತ್ತಿರುವ ಉದಾತ್ತ ಸಂಸ್ಕೃತಿಯ ಚಿತ್ರ ಪ್ರಾಚೀನ ಕದಂಬರ ಶಾಸನಗಳಿಂದ ದೊರಕುತ್ತದೆ.

---

16 ಶಾಸನ ಸಂಖ್ಯೆ ೩೩ ಪುಟ ೩೫
17 ,, ,, ೩೫ ,, ೬೯
18 ,, ,, ೪ ,, ೮

ಎಸ್.ಎ. ಕೃಷ್ಣಯ್ಯ*

# ರಾಯಚೂರು ಕೋಟೆಗೆ ಹಾರ

ಕರ್ನಾಟಕದಲ್ಲಿ ಹಲವಾರು ಕೋಟೆ ಕೊತ್ತಳಗಳಿವೆ. ಕ್ಷೇತ್ರಕಾರ್ಯ ಮಾಡುವವರಿಗೆ ಸ್ಥಳೀಯ ಐತಿಹ್ಯಗಳು, ಕಥೆಗಳು ಇನ್ನೂ ಅನೇಕ ಮಾಹಿತಿಗಳು ಲಭ್ಯವಾಗುವ ಸಾಧ್ಯತೆ ಇರುವುದು. ಕೋಟೆ-ಕೊತ್ತಳದ ಕಟ್ಟಡ ಭದ್ರವಾಗಲು ಬಲಿಯಾದ ದುರಂತ ಚಿತ್ರಣ 'ರಾಯಚೂರು ಕೋಟೆಗೆ ಹಾರ' ಈ ಜನಪದ ಗೀತೆಯಲ್ಲಿ ತಿಳಿಸಲಾಗಿದೆ. ಐತಿಹಾಸಿಕವಾಗಿ ಹೊಸ ಬೆಳಕ ಚೆಲ್ಲಲು ಮೌಖಿಕ ಆಧಾರಗಳೂ ಅಗತ್ಯ. ಕಟ್ಟಪ್ಪಣೆಯಿಂದ ಬರೆಯಿಸಿದ ಶಾಸನಗಳಿಗಿಂತ ಜನಸಾಮಾನ್ಯರ ಮೌಖಿಕ ಸಾಹಿತ್ಯ ಸಮಾಜದ ವಾಸ್ತವಿಕ ಘಟನೆಗಳ ಮೇಲೆ ಹೆಚ್ಚಿನ ಬೆಳಕು ಚೆಲ್ಲುವ ಸಾಧ್ಯತೆಯಿರುವುದು. ಈ ನಿಟ್ಟಿನಲ್ಲಿ 'ರಾಯಚೂರು ಕೋಟೆಗೆ ಹಾರ' ಜಾನಪದ ಅಧ್ಯಯನ ದೃಷ್ಟಿಯಿಂದ ಮಹತ್ವವುಳ್ಳದ್ದು. ಅಲ್ಲದೆ ಐತಿಹಾಸಿಕವಾಗಿಯೂ ಪೂರಕ ಅಂಶಗಳು ಈ ಕಥನಗೀತೆಯಲ್ಲಿರುವುದು ವಿಶೇಷ.

ಕೋಟೆಯ ಹೊರಭಾಗವನ್ನು (ದಕ್ಷಿಣ) ಮಾವಿನಕೆರೆ ಎಂದು ಕರೆಯುವ ಈ ಸ್ಥಳದಲ್ಲೆಯೂ ಆಹುತಿ ನೀಡಿದ ಐತಿಹ್ಯ ಗಮನಾರ್ಹ. ಮಾವಿನಕೆರೆ ಭಾಗವನ್ನು ಸ್ಥಳೀಯವಾಗಿ "ಮಾಂಕೆರೆ" ಎಂದು ಕರೆಯುತ್ತಿದ್ದು ಇತ್ತೀಚೆಗೆ "ಮಾವಿನಕೆರೆ" ಎಂದು ಕರೆದಿರುವರು. "ಮಾಂಕೆರೆ" ಅಥವಾ "ಮಾವಿನಕೆರೆ"ಗೆ ಸಂಬಂಧಿಸಿದಂತೆ "ಮಾರಿಯ ಮಾಸತಿಕಲ್ಲು" ಕುರಿತು ಸ್ಥಳೀಯ ಕಥೆ ಆಧಾರದಿಂದ ಲೇಖಕ ನಾರಾಯಣರಾವ್ ತಾಳೀಕೋಟೆ ಅವರು ಕಥನಕಾವ್ಯ ರಚಿಸಿರುವ ಕೃತಿ "ಮಾಸತಿಕಲ್ಲು" (೧೯೭೪) ಐತಿಹಾಸಿಕ ದೃಷ್ಟಿಯಿಂದ ಹಾಗೂ ಜಾನಪದೀಯ ಅಧ್ಯಯನ ದೃಷ್ಟಿಯಿಂದ ಸೂಕ್ಷ್ಮವಾಗಿ ಗಮನಹರಿಸುವ ಅಗತ್ಯವಿದೆ.

ಇತ್ತೀಚೆಗೆ ರಾಯಚೂರು ಕೋಟೆ ಸಮೀಕ್ಷಿಸಿ ನಾನು ಕಂಡು ಕೊಂಡಂತೆ ಕೋಟೆ ಗೋಡೆಯಲ್ಲಿ ಕೆತ್ತಿರುವ ಹೆಣ್ಣು ಗಂಡುಗಳ ಶಿಲ್ಪ ಚಿತ್ರ ಅಪೂರ್ಣವಾಗಿರುವುದು, ಇವು ಬಲಿಯಾದ ವ್ಯಕ್ತಿಗಳ ಶಿಲ್ಪಕ್ಕಿಂತ ದೃಷ್ಟಿ ನಿವಾರಣೆ ಮಾಡಲು ಕೆತ್ತಿದ ಶಿಲ್ಪಗಳೆಂದು ನಿರ್ಧರಿಸಬಹುದು. ಮೇಲ್ನೋಟಕ್ಕೆ ಕೂದಲು ಕೆದರಿದ ಭೈರವ ಹಾಗೂ ಭೈರವಿ ವೇಷದ ಶಿಲ್ಪದಂತೆ ತೋರಿ ಬರುವುದು. ರಾಯಚೂರು ಇಂದು ಜಿಲ್ಲಾ ಸ್ಥಾನದಲ್ಲಿದ್ದು ಕೋಟೆಯ ಒಳಭಾಗ, ಹೊರಭಾಗ ಪೂರ್ಣವಾಗಿ ನಾಗರೀಕ ಪಟ್ಟಣವಾಗಿರುವುದು. ರಾಯಚೂರು ಕೋಟೆಯನ್ನು ಕ್ರಿ.ಶ. ೧೨೯೪ ನವಂಬರ ೨೫ ರಂದು ಪ್ರಜಾ ಸಂರಕ್ಷಣಾರ್ಥವಾಗಿ "....ಎರಡನೇ ಪ್ರತಾಪ ದೇವನ ದಂಡನಾಯಕನಾಗಿದ್ದ ಗೋನಗೋನಯ್ಯ ರೆಡ್ಡಿ ಎಂಬಾತನ ನೇತೃತ್ವದಲ್ಲಿ ವಿಠಲನಾಥ ಎಂಬ ಪರಿಪಾಲಕನು ಈ ಕೋಟೆ ನಿರ್ಮಿಸಿದನು" ಎಂದು ತೆಲುಗಿನ ಶಾಸನವೊಂದು ತಿಳಿಸುವುದು. ಶಾಸನದಲ್ಲಿ ರಾಯಚೂರು ಎಂಬ ಹೆಸರಿನ ಬದಲಾಗಿ 'ರಾಚೂರಿ ಪಟ್ಟಣ' ಎಂದು ಉಲ್ಲೇಖವಿರುವುದು.

ಪ್ರಸ್ತುತ ಜನಪದ ಗೀತೆಯಲ್ಲಿ 'ಮಲ್ಲವ್ವ' ಹಾಗೂ

* ಸಂಶೋಧಕರು, ಜಾನಪದ ರಂಗ ಕಲೆಗಳ ಅಧ್ಯಯನ ಕೇಂದ್ರ, ಎಂ.ಜಿ.ಎಂ. ಕಾಲೇಜು, ಉಡುಪಿ-೨.

ಬಸ್ಸರೆಡ್ಡಿ' (ಸತಿ-ಪತಿ) ಇವರಿಬ್ಬರ ಹೆಸರು ಜನಪದ ಗಾಯಕಿಯರಿಂದ ಮೂಡಿ ಬಂದಿರುವುದು ಗಮನಾರ್ಹ. ಶಾಸನದಲ್ಲಿ ತಿಳಿಸುವ 'ಗೋನಗೋನಯ್ಯ ರೆಡ್ಡಿ' ಮನೆ ತನಕ್ಕೆ ಸಂಬಂಧಿಸಿದ ಪೂರ್ವ ಮಾಹಿತಿಗಳು ಲಭ್ಯವಾಗ ದಿದ್ದರೂ 'ರೆಡ್ಡಿ' ಎಂಬ ವಾಂಶಿಕ ಹೆಸರು ಹಾಡಿನಲ್ಲಿ ಸೂಚಿತಗೊಂಡಿರುವುದರಿಂದ 'ರಾಯಚೂರು ಕೋಟೆಗೆ ಬಲಿ' ಪೂರ್ವ ನಿರ್ಧರಿತ ಸಂಚಾಗಿ ಒಂದು ಆಚರಣೆ ಕ್ರಿಯೆಯಾಗಿ ನಡೆದಿರಬಹುದೆಂದು ಭಾವಿಸಲು ಈ ಹಾಡು ಪೂರಕವಾಗಿರುವುದು.

ಈ ಹಾಡಿನಲ್ಲಿ ರಾಯಚೂರು ಕೋಟೆಗೆ ನಾರಿ ಮಲ್ಲವ್ವನನ್ನು ಬಲಿ ಕೊಡುವ ಚಿತ್ರಣವಿರುವುದು. ಇದೊಂದು ದುರಂತ ಗೀತೆ. ನಾರಿಮಲ್ಲವ್ವನನ್ನು ತವರೂರಿಗೆ ಕಳುಹಿಸುವ ಸುಳ್ಳು ನೆಪದಿಂದ ಕೋಟೆಯ ಬಳಿ ಕರೆದುಕೊಂಡು ಹೋಗುವರು. ಕೋಟೆಯ ಬಳಿ ನಾರಿ ಮಲ್ಲವ್ವನ ಮೂಲಕ ಪೂಜೆ ಮಾಡಿಸಿ ಹಿಂತಿರುಗುವಾಗ 'ಗಿಂಡಿ ಬಿಟ್ಟೇವಿ ತರುಹೋಗೆ ಮಲ್ಲ' ಎಂದು ಮುಗ್ಧ ಹೆಣ್ಣನ್ನು ಪೂರ್ವ ನಿರ್ಧರಿತ ಸಂಚಿಗೆ ಒಳಗಾಗಿಸುವಂತೆ ಕಳುಹಿಸುವರು. ಅತಿ ತಳದಲ್ಲಿ ಬಿಟ್ಟ ಗಿಂಡಿಯನ್ನು ತರಲೆಂದು ಮೂರನೇ ಅಂತಸ್ತಿನ ತಳಮನೆ (ಪಟ್ಟಣ) ಇಳಿದಾಗ ಮೇಲಿನಿಂದ 'ದಬ್ಬಾಸ' ಅಥವಾ ನೆಲಸಮ ಮಾಡಿ ಆಹುತಿ ಕೊಟ್ಟ ಚಿತ್ರಣ ಹಾಡಿನಲ್ಲಿರುವುದು. ಇದೆ ಸಂದರ್ಭದಲ್ಲಿ ದಂಡಿನಲ್ಲಿದ್ದ ಗಂಡ ಬಸ್ಸರೆಡ್ಡಿಗೆ ಕೆಟ್ಟ ಸ್ವಪ್ನ ಬಿದ್ದು ಕುದುರೆ ಏರಿ ಮಲ್ಲವ್ವನನ್ನು ಕಾಣಲೆಂದು ಬರುವನು. ಮಲ್ಲವ್ವ ತಾಯಿ ಮನೆಗೆ ಹೋಗಿರುವುದಾಗಿ ಕುಂಟು ನೆಪ ಹೇಳುವರು. ಅತ್ತೆಮನೆಗೆ ಬಂದು ಹೆಂಡತಿಯು ಈ ಮನೆಗೆ ಬಾರದೆ ಬಹಳ ವರ್ಷಗಳಾದವು ಎಂದು ಸುದ್ದಿ ತಿಳಿದು ಹಿಂತಿರುಗಿ ಬರುವನು. ಅರಮನೆಗೆ ದಾವಿಸಿ ಬಂದು ಮಲಗುವ ಮಂಚಕ್ಕೆ ತನ್ನ ತಲೆ ಹೊಡೆದುಕೊಂಡು ಪ್ರಾಣ ಕಳೆದುಕೊಳ್ಳುವನು. ತದನಂತರ ಬಸ್ಸರೆಡ್ಡಿಯನ್ನು ರಾಯಚೂರು ಕೋಟೆಗೆ ಅಡ್ಡ ಹಾಕಿ ಕೋಟೆ ಎತ್ತರಿಸುವರು. ಹೀಗೆ ಗಂಡ ಹೆಂಡಿರ ಪ್ರಾಣಾಹುತಿ ರಾಯಚೂರು ಕೋಟೆಯ ಕಟ್ಟಡಕ್ಕೆ ಸಂದಿರುತ್ತದೆ.

ರಾಯಚೂರು ಕೋಟೆಗೆ ಬಲಿಯಾದ ಸತಿಪತಿಗಳಿಬ್ಬರ ದುರಂತ ಗೀತೆಯಂತೆ ಪ್ರಪಂಚದ ಇತರ ಭಾಗಗಳಲ್ಲಿಯೂ 'ಬಲಿಯಾಗುವ ಕ್ರಿಯೆ'ಯು ಅನೇಕ ರಾಷ್ಟ್ರಗಳಲ್ಲಿ, ಪ್ರಾಂತ್ಯಗಳಲ್ಲಿ ಲಭ್ಯವಿರುವ ಲಾಪಣಿಗಳ ಅಧ್ಯಯನದಿಂದ ತಿಳಿದು ಬರುತ್ತದೆ.

ಮೌಖಿಕ ಸಾಹಿತ್ಯದ ವರ್ಣನೆಗಳು ಕೆಲವೊಮ್ಮೆ ಜನಪ್ರಿಯ ಆಶಯಗಳನ್ನು ಪುನರಾವರ್ತನೆಗೊಳಿಸುವುದು. ಪುನರಾವರ್ತನೆಗೊಳ್ಳುವ ಕ್ರಿಯೆ ಜನಪದ ಸಾಹಿತ್ಯದ ಒಂದು ಲಕ್ಷಣ. ಜನಪದ ಸಾಹಿತ್ಯದಲ್ಲಿ ಪುನರಾವರ್ತನೆಯ ಅಂಶಗಳನ್ನು ಮತ್ತು ವರ್ಣನಾತ್ಮಕ ಅಂಶಗಳನ್ನು ಹೊರತಾಗಿಸಿ ಕಾರ್ಯಸಂಬಂಧದ ಘಟಕಗಳನ್ನು ಚರಿತ್ರೆಯ ನಿರ್ಮಾಣಕ್ಕೆ ತೌಲನೀಕರಿಸಬಹುದಾಗಿದೆ. ಚರಿತ್ರೆ ಅಥವಾ ಇತಿಹಾಸ ಎಂದ ಕೂಡಲೇ ಪುರಾತತ್ವ ಆಧಾರ, ಶಾಸನ ಆಧಾರ, ಕೈಬರಹದ ಪ್ರಮಾಣಗಳು, ನಾಣ್ಯ–ಮುದ್ರೆ ಅಥವಾ ವಾಸ್ತುಶಿಲ್ಪ ಆಧಾರಗಳು ಗಟ್ಟಿಯಾಗಿದ್ದಾಗ ಮಾತ್ರ ಚರಿತ್ರೆ ನಿರ್ಮಾಣ ಸಾಧ್ಯ ಎನ್ನುವ ಕಾಲ ಇಂದು ಬದಲಾಗಿದೆ. ಇಂದಿನ ದಿನಗಳಲ್ಲಿ ಮೌಖಿಕ ಸಾಹಿತ್ಯದ ಆಶಯ ಹಾಗೂ ಘಟನೆಯ ವಿವರಗಳು, ವ್ಯಕ್ತಿ, ಊರಿನ ಹೆಸರುಗಳು ಆಯಾಯ ಪ್ರಾಂತ್ಯದ ಐತಿಹ್ಯ, ಹಾಡುಗಳು ಸೂಚ್ಯವಾಗಿ ನಡೆದಿರಬಹುದಾದ ಸತ್ಯ ಘಟನೆಯನ್ನು ಅಭಿವ್ಯಕ್ತಿಸಬಲ್ಲದು. ಜನಪದ ಸಾಹಿತ್ಯದ ಮೂಲಕ ಪ್ರಾದೇಶಿಕ ಸಾಂಸ್ಕೃತಿಯ ಕಾಲ ಘಟ್ಟವನ್ನು ಗುರುತಿಸಬಹುದಾಗಿದೆ. ಮೌಖಿಕ ಸಾಹಿತ್ಯದ ಆಕರಗಳಿಗೆ ಚಾರಿತ್ರಿಕ ಆಧಾರ ಅಥವಾ ಬೆಂಬಲ ಒದಗಲು ಕೈಫಿಯಾತ್, ವಾಸ್ತುಶಿಲ್ಪ, ಪ್ರವಾಸಿಗರ ಟಿಪ್ಪಣಿ ಬರಹಗಳು ಇತ್ಯಾದಿ ನೆರವಾಗಬಲ್ಲದು.

'ರಾಚೂರು ಕೋಟೆ' ಹಾರ ಕುರಿತಂತೆ ದೊರಕುವ ಇತಿಹಾಸದ ಕಾಲವನ್ನು ನಿರ್ಣಯಿಸಲು ಇತ್ತೀಚೆಗೆ ಕ್ಷೇತ್ರಕಾರ್ಯ ನಡೆಸಿದಾಗ ಇನ್ನು ಹಲವಾರು ವಾಸ್ತವ ಸಂಗತಿಗಳು ಬೆಳಕಿಗೆ ಬಂದವು. ೧೯೧೭ರಲ್ಲಿ ಬಷೀರುದ್ದೀನ್ ಅಹಮದ್ (ದೆಹಲಿ ಇಂದ ಬಂದ ಲೇಖಕ) ಉರ್ದುವಿನಲ್ಲಿ 'ತಾರಿಖ್ ಬಿಜಾಪುರ' ಎಂಬ ಗ್ರಂಥವನ್ನು ೩ ಸಂಪುಟಗಳಲ್ಲಿ ಬರೆದು ಅನೇಕ ಮಾಹಿತಿಗಳನ್ನು ನೀಡಿರುವನು. ಈ ಕೃತಿಯ ಮೂಲ ಹೆಸರು

'ವಾಕಯಾತ್ ಮಮ್ಮಲಿಕತ್ ಬಿಜಾಪುರ' (ಬಿಜಾಪುರ ಸಂಸ್ಥಾನದ ಘಟನೆಗಳು ಅಥವಾ ಇತಿಹಾಸ).

'ತಾರಿಖ್ ಬಿಜಾಪುರ' ಅಥವಾ ಬಿಜಾಪುರ ಇತಿಹಾಸ ತಿಳಿಸುವ ಈ ಕೃತಿಯಲ್ಲಿ ಅನೇಕ ಶಾಸನಗಳ ಯಾಥಾ ಅಚ್ಚನ್ನು ಮತ್ತು ರಾಯಚೂರು ಕೋಟೆ ಕುರಿತಂತೆ ಛಾಯಾಚಿತ್ರ ಹಾಗೂ ಹಲವು ಕೋಟೆಗಳ ನಕಾಶೆ ಮಾದರಿ ಮತ್ತು ವಾಸ್ತುಶಿಲ್ಪದ ಚಿತ್ರಗಳನ್ನು ಒದಗಿಸುವನು. ಈ ಕೃತಿಯಲ್ಲಿ ರಾಯಚೂರು ಕೋಟೆಯ ಬೆಟ್ಟವನ್ನು 'ಗುಬ್ಬೇರ ಬೆಟ್ಟ' ಎಂದು ಕರೆದಿರುವನು. ಇಂದಿಗೂ ಬೆಟ್ಟದ ಮೇಲೆ ಇರುವ 'ಪಂಚಬೀದಿ ಮಕಬರಾ' (ಐದು ಜನ ಗರತಿಯರ ಗೋರಿ) ಇರುವುದಾಗಿ ತಿಳಿಸಿರುವನು. ಇಂದಿಗೂ ಕೋಟೆಯ ಮೇಲ್ಭಾಗದಲ್ಲಿರುವ ಬೇವಿನ ಮರದ ಕೆಳಗೆ ಈ ಗೋರಿಗಳಿರುವುದು. ಅದೇ ಸ್ಥಳದಲ್ಲಿ ಪಂಚಲಿಂಗ ದೇವಸ್ಥಾನ ಇತ್ತೆಂಬುದು ಸೂಚ್ಯವಾಗಿ ತಿಳಿಸಿರುವನು.

'ತಾರಿಫೆ ಬಿಜಾಪುರ' (ಪು. ೩೦೮) ಕೃತಿಯಲ್ಲಿ ಕೆಲವು ಜನಪದ ಐತಿಹ್ಯ ಕುರಿತು ವಿವರಣೆ ಒದಗಿಸಿರುವನು. ಇಂದಿಗೂ ಈತ ತಿಳಿಸಿದ ಐತಿಹ್ಯ ಹಲವಾರು ಭಿನ್ನ ಪಾಠಾಂತರಗಳಲ್ಲಿ ರಾಯಚೂರು ಜಿಲ್ಲಾ ಜನತೆ ಮೌಖಿಕ ವಿವರಣೆ ನೀಡಬಲ್ಲರು. ಐತಿಹ್ಯದಲ್ಲಿ ತಿಳಿಸಿದಂತೆ ರಾಯಚೂರು ಆರಂಭದಲ್ಲಿ 'ನಾಯಿಚೂರು' ಎಂದು ಕರೆಯಿಸಿಕೊಂಡಿತ್ತು. ಜನ ಬಳಕೆಯ ಮಾತಿನಲ್ಲಿ ರಾಯಚೂರು ಆಯಿತು ಎಂದಿರುತ್ತಾನೆ. ರಾಯಚೂರು ಕೋಟೆ ಕಟ್ಟಿಸಿದ ಸಾಮಂತ ಆರಂಭದಲ್ಲಿ ಮಲಿಯಾಬಾದ್ (ರಾಯಚೂರುನಿಂದ ದಕ್ಷಿಣಕ್ಕೆ ೭ ಕಿ.ಮೀ. ದೂರದಲ್ಲಿ ಕೋಟೆಯನ್ನು (ಕಾಕತೀಯ ವಂಶಸ್ಥ (ಕಟ್ಟಿಸಿದ. ತರುವಾಯ ರಾಜನು ರಾಯಚೂರು ಭಾಗದತ್ತ ಕೋಟೆ-ಕೊತ್ತಳ ನಿರ್ಮಿಸಿದ ಐತಿಹ್ಯ ಕುತೂಹಲಕಾರಿಯಾಗಿದೆ.

'ತಾರಿಫೆ ಬಿಜಾಪುರ' ಕೃತಿ (ಪು. ೩೦೬) ತಿಳಿಸುವಂತೆ 'ಗೋ(ಡ)ನ ಗಂಗಯ್ಯ ರೆಡ್ಡಿ' ವರ್ಧಮಾನಪುರದ ವಜೀರ್ ರಾಜಾ ವಿಠಲಪ್ಪ ನಾಯಕ ಬೇರೆ ಪ್ರದೇಶಗಳನ್ನು ಗೆದ್ದು ರಾಯಚೂರು ಭಾಗದತ್ತ ರಾಜ್ಯ ವಿಸ್ತಾರ ಮಾಡಿಕೊಂಡನೆಂದು ತಿಳಿಸಿರುವನು.

'ಬೊಸ್ಸರೆಡ್ಡಿ' ಎಂಬ ಹೆಸರಿನ ಮನುಷ್ಯ (ರಾಜ) ಮಲ್ಲಬಾವಿ ಅಥವಾ ಮಲಿಯಾಬಾದ್ ಕೋಟೆಯನ್ನು ಕಟ್ಟಿಸುತ್ತಿದ್ದ. ಒಂದು ದಿನ ಬೇಟೆಗಾಗಿ ಹೊರಟ ರಾಜನ ನಾಯಿ ಒಂದು ಮೊಲವನ್ನು ಅಟ್ಟಿಸಿಕೊಂಡು ರಾಯಚೂರು ತಲುಪಿತು. ಮೊಲವನ್ನು ಹಿಂಬಾಲಿಸಿದ ರಾಜನು ಆಶ್ಚರ್ಯದ ಘಟನೆಯನ್ನು ಕಂಡನು. ಮೊಲವು ರಾಜನ ನಾಯಿ ವಿರುದ್ಧ ಸೆಣಸಾಡಿ ನಾಯಿಯನ್ನು ಗಾಯಗೊಳಿಸಿತು. ಮೊಲ ನಾಯಿಯನ್ನು ಗಾಯಗೊಳಿಸಿದ್ದುದನ್ನು ಕಂಡು ಅದೇ ಸ್ಥಳ ಗಂಡುಭೂಮಿ ಎಂದು ನಿರ್ಧರಿಸಿದ. ಮಲಿಯಾಬಾದ್ ಕೋಟೆಯನ್ನು ಬಿಟ್ಟು ನಾಯಿ ಗಾಯಗೊಂಡ ಸ್ಥಳದಲ್ಲಿ ಕೋಟೆ ಕಟ್ಟಲು ಆರಂಭಿಸಿದ. ಆ ಸ್ಥಳವನ್ನು 'ನಾಯಿಚೂರು' ಎಂದು ಹೆಸರಿಸಿದನೆಂದು ಕಾಲಕ್ರಮೇಣ ಜನರ ಆಡು ಮಾತಿನ ಬಳಕೆಯಲ್ಲಿ 'ರಾಯಚೂರು' ಆಯಿತು ಎಂದು ಉರ್ದು ಕೃತಿಯಲ್ಲಿ ತಿಳಿಸಿರುವನು. ಈ ಕೋಟೆಯನ್ನು ವಿಠಲಪ್ಪ ನಾಯಕ ಮುಂದುವರಿಸಿದ ಎಂದು ತಿಳಿಸಲಾಗಿದೆ. ಈ ಕಥೆಯಲ್ಲಿ ಉಲ್ಲೇಖಗೊಂಡಿರುವ ವ್ಯಕ್ತಿಗಳಾದ ಗೋನಗೋನಯ್ಯ ರೆಡ್ಡಿ ಮತ್ತು ವಿಠಲನಾಥರು ಶಾಸನೋಕ್ತರೂ ಆಗಿರುತ್ತಾರೆ. 'ರಾಚೂರು ಕೋಟೆ ಹಾರ' ಜನಪದ ಗೀತೆಯಲ್ಲಿ ಬರುವ ಹೆಸರು ಬಸ್ಸರೆಡ್ಡಿ' ಯೇ ಗೋನಗೋನಯ್ಯ ರೆಡ್ಡಿ ಆಗಿದ್ದಿರಬಹುದು ಎಂದು ಭಾವಿಸಬಹುದು. 'ಗೋನಗೋನಯ್ಯ' ಎಂಬ ಹೆಸರಿನ ಅರ್ಥ ಗಮನಿಸಿದಲ್ಲಿ ಆಕಳು, ಬಸವ, ನಂದಿ ಇತ್ಯಾದಿಯಾಗಿ ಒಳಾರ್ಥ ಹೊಂದುವುದು.

ಕೌಟುಂಬಿಕ ಹೆಸರು ಬಸವರೆಡ್ಡಿಯು ಬಸ್ಸರೆಡ್ಡಿ ಆಗಿದ್ದು ರಾಜ್ಯಪರಿಪಾಲನೆಯ ಗೌರವಾರ್ಥ ನಾಮವಾಗಿ ತೆಲುಗಿನಲ್ಲಿ ಗೋನಗೋನಯ್ಯ ರೆಡ್ಡಿ ಆಗಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.* 'ತಾರಿಫೆ ಬಿಜಾಪುರ' (ಪು. ೩೦೬) ಉರ್ದು ಕೃತಿಯಲ್ಲಿ 'ಬೊಸ್ಸ

---

* ಗೋನ ಗೋನಯ್ಯ ರೆಡ್ಡಿ ಎಂಬ ಪದವೇ ಕನ್ನಡದ ರೂಪವಾಗಿ ಬಸವಯ್ಯ ಎಂದಾಗಿರಬೇಕೆಂದು ಶ್ರೀ ಶಾಂತರಸ ಅವರು ಅಭಿಪ್ರಾಯ ಪಡುತ್ತಾರೆ.

ರೆಡ್ಡಿ' ಎಂದು ಉಲ್ಲೇಖಿಸಿರುವುದು ಗಮನಾರ್ಹ 'ತಾರಿಖೆ ಬಿಜಾಪುರ' ಉರ್ದು ಕೃತಿಯಲ್ಲಿ ಲಭ್ಯವಾದ ಹೆಸರಿನ ಆಧಾರವನ್ನು ಗಮನದಲ್ಲಿರಿಸಿಕೊಂಡು ರಾಯಚೂರು ಕೋಟೆಗೆ ಬಲಿಯಾದ ನಾರಿಮಲ್ಲವ್ವ ಮತ್ತು ಬಸ್ಸರೆಡ್ಡಿ ಹೆಸರುಗಳನ್ನು ಜನಪದ ಗೀತೆಯಲ್ಲಿ ಕಾಣಬಹುದಾಗಿದೆ.

'ತಾರಿಖೆ ಬಿಜಾಪುರ' (ಪು. ೩೦೬) ಉರ್ದು ಕೃತಿಯಲ್ಲಿ ಸೂಚಿಸಿರುವ ಹೆಸರು 'ಬೊಸ್ಸರೆಡ್ಡಿ' (ಮಲಿಯಾಬಾದ್ ಕಿಲ್ಲಾ ಕಟ್ಟಿಸುತ್ತಿದ್ದ ರಾಜ) ಹಾಗೂ ಜನಪದ ಗೀತೆಯಲ್ಲಿ ಲಭ್ಯವಾಗುವ 'ಬಸ್ಸರೆಡ್ಡಿ' ಈ ಎರಡೂ ಹೆಸರು ಏಕವ್ಯಕ್ತಿಯದೆಂದು ತಿಳಿಯಬಹುದಾಗಿದೆ. ಪೂರಕವಾಗಿ ಮೊಲ ನಾಯಿ ವಿರುದ್ಧ ಸೆಣಸಾಡಿದ ಐತಿಹ್ಯ ಹಾಗೂ ಮಲಯಾಬಾದ್ ಕೋಟೆ ಸ್ಥಳಕ್ಕಿಂತ ಗಂಡು ಭೂಮಿಯಾಗಿ ತೋರಿಬಂದ ಸ್ಥಳದಲ್ಲಿ ಕೋಟೆ ಕಟ್ಟಿಸಿದ ಐತಿಹ್ಯ ಗಮನಾರ್ಹವಾದುದ್ದಾಗಿದೆ.

ರಾಯಚೂರು ಕೋಟೆಯ ನವರಂಗ ದರವಾಜಾದ ಹೊರಭಾಗದ ಬಾಹೆರ್ ಕಿಲ್ಲ ಸ್ಥಳದಲ್ಲಿ ಮತ್ತೊಂದು ಹೆಣ್ಣಿನ ಸಮಾಧಿ ಆದ ಐತಿಹ್ಯವೊಂದು ಇಂದಿಗೂ ಸ್ಥಳೀಯರಲ್ಲಿ ಜನಜನಿತವಾಗಿದೆ. 'ಬಾಹೆರ್‌ಕಿಲ್ಲಾ' ಹೊರಭಾಗದಲ್ಲಿನ ಕೋಟೆಯ ಒಂದು ಮೂಲೆಯಲ್ಲಿ 'ಬಾಲಸಂಗಮ' ಎಂದು ಪೂಜಿಸುತ್ತಾರೆ. ಈ ಕೋಟೆಯ ಭಾಗವನ್ನು 'ಬಾಲಸಂಗಮ್ಮನ ಕೋಟೆ" ಎಂದು ಸ್ಥಳೀಯರು ಕರೆದಿರುವರು.

'ಬಾಲಸಂಗಮ್ಮ' ಓರ್ವ ಕಟ್ಟಡ ಕಟ್ಟಿಸುತಿದ್ದ ಮೇಸ್ತ್ರಿಯ ಸೊಸೆ. ಕನಸಿನಲ್ಲಿ ಬಾಲಸಂಗಮ್ಮನ ಮಾವನಿಗೆ ಕೋಟೆಗೆ ಬಲಿಯಾಗಿಸಲು ಜೀವಾಧಾರ ಕೇಳಿತಂತೆ. ತನ್ನ ಸ್ವಂತ ಮಗಳನ್ನು ಕೊಡುತ್ತೇನೆ, ನೆರೆ ಹೊರೆಯವರ ಹೆಣ್ಣುಮಕ್ಕಳನ್ನು ಕೇಳಬೇಡ ಎಂದಾಗ ಕಿರಿಸೊಸೆ ಬಾಲಸಂಗಮ್ಮನನ್ನೆ ಬೇಡಿತಂತೆ. ನಾನು ಸಂಗ್ರಹಿಸಿದ ಹೇಳಿಕೆಗಳಲ್ಲಿ 'ಬಾಲಸಂಗಮ್ಮ' ನೇರವಾಗಿ ಕೋಟೆಯಡಿ ಸಮಾಧಿಯಾಗಲು ಸ್ವಇಚ್ಛೆಯಿಂದ ಆತ್ಮಬಲಿದಾನಕ್ಕೆ ತಯಾರಾದವಳೆಂದೂ ಮತ್ತೊಂದು ಹೇಳಿಕೆಯಲ್ಲಿ ಮೋಸದಿಂದ ಕರೆದೊಯ್ದು ಜೀವಂತವಾಗಿ ಕೋಟೆಗೆ ಬಲಿ ಕೊಟ್ಟರೆಂದು ತಿಳಿಸಿರುವರು. ಯುರೋಪಿಯನ್ ಬ್ಯಾಲೆಡ್‌ಗಳಲ್ಲಿ ಬಲಿಯಾದ ವ್ಯಕ್ತಿಗೆ ಕಿಂಡಿ ಬಿಡುವಂತೆ ಬಾಲಸಂಗಮ್ಮ ಬಲಿದಾನವಾದ ಕೋಟೆಯ ಒಂದು ಭಾಗದಲ್ಲಿ ಕಿಂಡಿ ಬಿಟ್ಟಿರುವ ಆಶಯ ಗಮನಾರ್ಹವಾದುದ್ದಾಗಿದೆ. ಈ ಕಿಂಡಿಯ ಮೂಲಕ ಬಾಲಸಂಗಮ್ಮ ತನ್ನ ಮೈಮೇಲಿನ ಒಡವೆಗಳನ್ನು ಶುಭಕಾರ್ಯಗಳಿಗೆ ನೀಡುತ್ತಿದ್ದಳಂತೆ. ನೀಡಿದ ವಸ್ತುಗಳನ್ನು ಮತ್ತೆ ಅದೇ ಕಿಂಡಿಯಲ್ಲಿ ಜನ ಹಿಂತಿರುಗಿಸುತ್ತಿದ್ದರೆಂದು ಒಂದು ದಿನ ಕೊಟ್ಟ ವಸ್ತುಗಳನ್ನು ಪಡೆದವರು ಸಕಾಲದಲ್ಲಿ ಹಿಂದಿರುಗಿಸಲಿಲ್ಲವಂತೆ. ಅಂದಿನಿಂದ ಬಾಲಸಂಗಮ್ಮ ಶುಭಕಾರ್ಯಗಳಿಗೆ ಆಭರಣ ನೀಡುವುದು ಕೊನೆಗೊಂಡಿತು.

ಹೀಗೆ ಅಧಿಕೃತವಾಗಿ ಚರಿತ್ರೆಗೆ ದೊರಕಲಾರದ ಅನೇಕ ವಾಸ್ತವಿಕ ಘಟನೆಗಳು ಮೌಖಿಕ ಆಧಾರದ ಹೇಳಿಕೆಯಿಂದ ಸ್ಪಷ್ಟಗೊಳ್ಳುವುದು. ಚರಿತ್ರೆಯ ರಚನೆಯಲ್ಲಿ ಮೌಖಿಕ ಸಾಹಿತ್ಯದ ಆಶಯಗಳಿಗೆ ವಾಸ್ತುಶಿಲ್ಪ ಪೂರಕವಾಗಿ ಸಹಾಯ ಮಾಡಬಲ್ಲದು ಎಂಬುದಕ್ಕೆ 'ರಾಚೂರು ಕೋಟೆಗೆ ಹಾರ' ಎಂಬ ಜಾನಪದ ಕಥನಗೀತೆ ಉತ್ತಮ ಉದಾಹರಣೆಯಾಗಿದೆ.

(ಈ ಲೇಖನ ಬರೆಯಲು ಸಹಕಾರ ನೀಡಿದ ಶ್ರೀ ಶಾಂತರಸ ಅವರಿಗೆ ಕೃತಜ್ಞತೆಗಳು–ಲೇಖಕ)

ಪಿ.ವಿ. ಕೃಷ್ಣಮೂರ್ತಿ*

# 'ಸೀತಿ' : ಸೀತಿಬೆಟ್ಟದ ಭೂಸ್ಥಿತಿ ಮತ್ತು ಶಾಸನಗಳ ಹಿನ್ನೆಲೆಯಲ್ಲಿ ಒಂದು ಅಧ್ಯಯನ

ಇಂದು ಎಷ್ಟೋ ಕಡೆಗಳಲ್ಲಿ ಹೆಸರುಗಳ ಮೂಲವು, ಸಾಮಾನ್ಯವಾಗಿ ಆ ಎಡೆಯ ಭೌಗೋಳಿಕಾ ಸ್ಥಿತಿಗತಿಯಿಂದ ವೈಶಿಷ್ಟ್ಯವೆನ್ನಿಸಬಲ್ಲ ಲಕ್ಷಣದಿಂದ ನಿಯಂತ್ರಿತವಾಗಿರುತ್ತದೆ. ಪ್ರಸ್ತುತ 'ಸೀತಿ' ಎಂಬುದು ಕೂಡ ಅಂತಹ ಒಂದು ಎಡೆಸೂಚಿ ಪದವಾಗಿದ್ದು, ಕ್ಷೇತ್ರಪರಿವೀಕ್ಷಣೆ ಮತ್ತು ಶಾಸನೋಕ್ತ ವಿವರಗಳ ಹಿನ್ನೆಲೆಯಲ್ಲಿ ಈ ಎಡೆಯ ಹೆಸರಿಗೆ ಕಾರಣವಾದ ಮೂಲಾಂಶಗಳ ಶೋಧನೆ ಈ ಸಂಪ್ರಬಂಧದ ಉದ್ದೇಶ.

ಕೋಲಾರಕ್ಕೆ ವಾಯುವ್ಯ ದಿಸೆಯಲ್ಲಿ, ಸುಮಾರು ೨೦ ಕಿ.ಮೀ. ಅಂತರದಲ್ಲಿ ಸೀತಿಬೆಟ್ಟವಿದ್ದು, ಅಷ್ಟೇನು ಎತ್ತರವಿರದ ಈ ಬೆಟ್ಟದ ತಪ್ಪಲಿನಲ್ಲಿ ಈಗ ಸೀತಿ ಎಂಬ ಗ್ರಾಮವಿದೆಯಾದರೂ, ಹಿಂದೆ ಈ ಊರು ಬೆಟ್ಟದ ಮೇಲೆಯೇ ಇದ್ದಿತೆಂದು ಶಾಸನಗಳಿಂದ ತಿಳಿದುಬರುತ್ತದೆ. ಬೆಟ್ಟದ ಅರ್ಧ ಹಾದಿಯಲ್ಲಿಯೇ ಅಲ್ಲಿನ ಮುಖ್ಯ ದೇವಾಲಯಗಳಾದ ಶ್ರೀಪತೀಶ್ವರ ಮತ್ತು ಭೈರವ ದೇವರ ಗುಡಿಗಳು ದಕ್ಷಿಣಾಭಿಮುಖವಾಗಿವೆ. ಶ್ರೀಪತೀಶ್ವರ ದೇವಾಲಯದ ಗರ್ಭಗೃಹವು ಮೂಲತಃ ನೈಸರ್ಗಿಕ ಕಲ್ಲಾಸರೆಯ ಗುಹೆಯಾಗಿದೆ. ಈ ಗುಹಾಲಯದ ಪೂರ್ವಕ್ಕೆ ಸುಂದರವಾದ ಭೈರವ ದೇವಾಲಯವನ್ನು ಶಿಲೆಯಿಂದ ನಿರ್ಮಿಸಲಾಗಿದೆ. ಶ್ರೀಪತೀಶ್ವರ ದೇವಾಲಯದ ಆವರಣದಲ್ಲಿ ದೇವಿ, ಮಹಿಷಾಸುರ ಮರ್ಧಿನಿ, ಗಣಪತಿ, ಷಣ್ಮುಖರ ಸಣ್ಣ ಸಣ್ಣ ಗುಡಿಗಳಿವೆ. ಭೈರವ ಗುಡಿಯ ಸೂರನ್ನು ಸೇರಿಸಿಕೊಂಡು ಈ ಎಲ್ಲ ಸಣ್ಣ ಗುಡಿಗಳನ್ನು ಒಳಗೊಂಡಂತೆ ಒಂದು ವಿಶಾಲವಾದ ಪಾತಾಳಾಂಕಣ ಮಂಟಪವನ್ನು ಕಟ್ಟಲಾಗಿದೆ. ಈ ಮಂಟಪದ ಮುಂದೆ ವಿಜಯನಗರ ಕಾಲಕ್ಕೆ ಸೇರಿದ ಮಹಾದ್ವಾರವಿದೆ. ಇಲ್ಲಿನ ಭೈರವದೇವರು ತ್ರಿಭುವನ ವಿಡಂಗ 'ಕ್ಷೇತ್ರಪಾಲ' ಎಂಬ ಹೆಸರಿನಿಂದ ಬಹಳ ಪ್ರಸಿದ್ಧಿ ಪಡೆದಿದ್ದ ಅಂಶ ಅಲ್ಲಿ ದೊರೆತಿರುವ ಸುಮಾರು ೬೦ಕ್ಕೂ ಹೆಚ್ಚು ತಮಿಳು, ಕನ್ನಡ ಶಾಸನಗಳಿಂದ ಮನಗಾಣಬಹುದಾಗಿದೆ. ಈ ಬೆಟ್ಟವು ನೈಸರ್ಗಿಕ ಗುಹೆ (ಕಲ್ಲಾಸರೆ) ಹಾಗೂ ದೊಣೆಗಳಿಂದ ಕೂಡಿದೆ.

ಪ್ರಸ್ತುತ ಭೈರವದೇವರು ನೆಲೆಗೊಂಡಿರುವ ಎಡೆಯನ್ನು ಅಲ್ಲಿನ ತಮಿಳು ಶಾಸನಗಳಲ್ಲಿ ಶ್ರೀಪತಿ, ಸಿರೀಪತಿ, ಸೀಪತಿ, ಎಂದೂ; ಕನ್ನಡ ಶಾಸನಗಳಲ್ಲಿ ಸೀಹತಿ, ಸೀಹತ್ತಿ, ಸಿಯತಿ, ಸೀತಿ ಎಂದೂ ಕರೆಯಲಾಗಿದೆ. ಇದು ಈ ಬೆಟ್ಟ ಹಾಗೂ ಬೆಟ್ಟದ ಮೇಲೆಯೇ ಮೊದಲಿಗಿದ್ದ ಊರಿನ ಹೆಸರಾಗಿದ್ದಿತು. ಶಾಸನೋಕ್ತ

* ಬಿ. ಜಿ.೫೧೦, ೧೨ನೇ ಅಡ್ಡರಸ್ತೆ, ಎಚ್. ಎ. ಎಲ್. ಕಾಲೊನಿ, ಮಾರತ್‌ಹಳ್ಳಿ, ಬೆಂಗಳೂರು-೫೬೦೦೩೭

ಶ್ರೀಪತಿ ಹಾಗೂ ಸಿರೀಪತಿ ರೂಪಗಳು ಸಂಸ್ಕೃತಾನುಕರಣ ಕ್ರಿಯೆಗೆ ಈಡಾಗಿರುವುದು ಸ್ಪಷ್ಟ. ಆದ್ದರಿಂದ ಅವನ್ನು ಹೊರತುಪಡಿಸಿದರೆ, ಸೀಪತಿ > ಸೀಹತಿ > ಸಿಯತಿ > ಸೀತಿ ಎಂಬ ಕ್ರಮದಲ್ಲೇ ಅದು ರೂಪಾಂತರಗೊಂಡಿರುವುದು ಖಚಿತವಾಗುತ್ತದೆ ; ಅಂದರೆ 'ಸೀಪತಿ' ಎಂಬುದು ಪ್ರಾಚೀನರೂಪ, 'ಸೀತಿ' ಎಂಬುದು ಅರ್ವಾಚೀನ ರೂಪವಾಗಿರುವುದು ಮನನವಾಗುತ್ತದೆ.

'ಸೀತಿ' ಎಂದಾಗ ಮೊದಲು ನಮ್ಮ ನೆನಪಿಗೆ ಬರುವುದು ನಮ್ಮ ನಾಡಿನ ಅನೇಕ ಬೆಟ್ಟಗುಡ್ಡಗಳಲ್ಲಿನ ಸೀತಿಸೆರಗು, ಸೀತಿದೊಣೆ, ಸೀತಿಕಲ್ಲು, ಸೀತಿಕುಂಡ, ಎಂದು ಮುಂತಾಗಿ ಕರೆಯಲ್ಪಡುತ್ತಿರುವ ಬಂಡೆಗಳು ಸೀಳಿ ಉಂಟಾಗಿರುವ ಹಳ್ಳಗಳು, ಸಾಮಾನ್ಯವಾಗಿ ನೀರಿರುವ ಎಡೆಗಳು. ಇಂತಹ ಎಡೆಗಳಿಗೆ ಸಾಮಾನ್ಯವಾಗಿ ರಾಮಾಯಣದ ಸೀತೆಗೆ ಸಂಬಂಧಿಸಿದಂತೆ ಐತಿಹ್ಯಗಳು ಹುಟ್ಟಿಕೊಂಡಿರುತ್ತವೆ. ಸೀತಿಬೆಟ್ಟದಲ್ಲಿ ಇಂತಹ ಭೂ ವೈಶಿಷ್ಟ್ಯಗಳಿದ್ದಾಗ್ಯೂ ಈ ತೆರನಾದ ಐತಿಹ್ಯಗಳು ಹುಟ್ಟಿಕೊಂಡಿರುವುದಿಲ್ಲ. ಅಲ್ಲದೆ ಸೀತಿ ಎಂಬುದು ಇಲ್ಲಿ ಇಡೀ ಬೆಟ್ಟ ಹಾಗೂ ಊರಿಗೆ ಅನ್ವಯಿಸುವ ನಾಮವಾಗಿದೆ. ಜೊತೆಗೆ ಇಲ್ಲಿನ ಶಾಸನಗಳಲ್ಲಿ ಈ ಸ್ಥಳದ ಪ್ರಾಚೀನ ಹೆಸರು 'ಸೀಪತಿ' ಎಂದಿದ್ದುದನ್ನು ಗಮನಿಸಬೇಕಾಗಿದೆ. ಅಂತೆಯೇ ಮೇಲೆ ಉಲ್ಲೇಖಿಸಿರುವ ಸೀತಿಸೆರಗು, ಸೀತಿದೊಣೆ ಮುಂತಾದುವುಗಳಲ್ಲಿನ 'ಸೀತಿ' ಎಂಬ ಭಾಗದ ಮೂಲರೂಪ 'ಸೀಪತಿ' ಆಗಿರುವ ಸಾಧ್ಯತೆಗಳೇ ಅಧಿಕವಾಗಿರುವುದನ್ನು ಪರಿಶೀಲಿಸಬೇಕಾಗಿದೆ.

ಸೀಪತಿ ಎಂಬುದು ಸೀ+ಪತಿ ಎಂಬ ಎರಡು ಪದಗಳನ್ನೊಳಗೊಂಡಿದೆ. ದ್ರಾವಿಡ ಭಾಷೆಗಳಲ್ಲಿ 'ಸೀ' ಎಂಬುದಕ್ಕೆ ಸೀವು, ಹರಿ, ವಿಂಗಡಿಸು ಬೇರೆಮಾಡು (DED : ೨೬೦೧)., ಎಂಬ ಅರ್ಥಗಳಲ್ಲದೆ, ಸೀಯಿಸು, ಸುಡು, ಕಮರಿಸು, ದಹಿಸಲ್ಪಟ್ಟ, ಸುಟ್ಟ ಸ್ಥಿತಿಯಲ್ಲಿರುವ (DED : ೨೬೬) ಎಂಬ ಅರ್ಥಗಳೂ ಇವೆ. ಹಾಗೆಯೇ, 'ಪತಿ' ಎಂಬುದಕ್ಕೆ ಕೊರೆ, ಅಗೆ, ತೋಡು, ಅಚ್ಚುಒತ್ತು, ಕಚ್ಚುಹಾಕು, ಕೆಳಕ್ಕಿಳಿಸು, ತಗ್ಗಿಸು, ಕುಂದಿಸು, ಕೆಳಕ್ಕೆ ಸೇರು, ಬುಡಕ್ಕೆ ಹೊಯ್ಯಿ ಎಂಬ ಅರ್ಥಗಳಿವೆಯಲ್ಲದೆ, ವಾಸಿಸು, ಹಿಡಿ, ನೆಲೆಗೊಳ್ಳು, ತಳವೂರು (DED : ೪೯೧೧) ಎಂಬ ಅರ್ಥಗಳೂ ಇವೆ. ಈ ಅರ್ಥಗಳ ಹಿನ್ನೆಲೆಯಲ್ಲಿ ಸೀಳಿ ಉಂಟಾಗಿರುವ ಹಳ್ಳ, ಕುಣಿಗಳಂತಹ ದೊಣೆಗಳಲ್ಲದೆ, ಗುಹೆಯ ರೀತಿಯ ನೈಸರ್ಗಿಕ ಕಲ್ಲಾಸರೆಯಂತಹ ರಚನೆಗಳನ್ನೂ ಹಾಗೂ ಸಿಡಿಲಿನ ಹೊಡೆತಕ್ಕೆ ಸೀದು ಸೀಳಿ ನಿಂತಿರುವ ಬಂಡೆಗಲ್ಲುಗಳನ್ನೂ ಇದು ಸೂಚಿಸುತ್ತಿರುವಂತೆ ತೋರುತ್ತದೆ.

ಬೆಟ್ಟಗುಡ್ಡಗಳ ಬಂಡೆಗಳು ಅನೇಕ ನೈಸರ್ಗಿಕ ಕಾರಣಗಳಿಂದಾಗಿ ಕಾಲಾಂತರದಲ್ಲಿ ಸೀಳಿ ದೊಣೆರೂಪದ ಹಳ್ಳಗಳಾಗಿ ಜಲಸೂಚಿ ಎನಿಸಿದರೆ, ಸೀಳಿ ಕಲ್ಲಾಸರೆಯಂತಹ ನೈಸರ್ಗಿಕ ಆಶ್ರಯ ತಾಣಗಳಾಗಿ ರೂಪುಗೊಂಡವೆಂದು ಹೇಳಬಹುದಾಗಿದೆ. ಪ್ರಸ್ತುತ ಸೀತಿಬೆಟ್ಟದಲ್ಲಿ ಈ ಎರಡೂ ತೆರನಾದ ಭೂ ವೈಶಿಷ್ಟ್ಯವನ್ನುವನ್ನು ಹೆಚ್ಚಿನ ಪ್ರಮಾಣದಲ್ಲ ಕಾಣಬಹುದಾಗಿದೆ. ನೀರಿನ ಆಸರೆಯಾಗಿರುವ ಎರಡು ಮೂರು ದೊಣೆಗಳಿವೆ. ಶ್ರೀಪತೀಶ್ವರ ಲಿಂಗವಿರುವ ಗುಹೆಯಲ್ಲದೆ ಬೆಟ್ಟದ ಮೇಲ್ಗಡೆ ಭೂಪತಮ್ಮನ ಗುಡಿ ಎಂದು ಕರೆಯುವ ವಿಶಾಲವಾದ ಕಲ್ಲಾಸರೆ ಇದೆ. ಜೊತೆಗೆ ಬೆಟ್ಟದ ಬೇರೆ ಬೇರೆ ಕಡೆ ೩ ಮೀ×೪ ಮೀ.ಗಳಷ್ಟು ವಿಶಾಲತೆವುಳ್ಳ ಎರಡು ಕಲ್ಲಾಸರೆಗಳು ಇವೆ. ಸಿಡಿಲಿನ ಶಾಖ ಮತ್ತು ಒತ್ತಡಕ್ಕೆ ಸಿಕ್ಕಿ ಸೀಳಿ ಹೋಳಾಗಿ ನಿಂತಿರುವ ಬಂಡೆಗಳೂ ಇವೆ. ಈ ಭೂ ವೈಶಿಷ್ಟ್ಯವು ಸೀ+ಪತಿ ಎಂಬ ದ್ರಾವಿಡ ಮೂಲಪದಗಳಿಂದ ಹೊರಡುವ ಅರ್ಥವ್ಯಾಪ್ತಿಯನ್ನು ಪೋಷಿಸುವುದು ವಿಸ್ಮಯಕಾರಿಯಾಗಿದೆ. ಅಂದರೆ ಇಂತಹ ಎಡೆಗಳನ್ನು ಮೂಲತಃ 'ಸೀಪತಿ' ಎಂದು ಕರೆಯಲ್ಪಟ್ಟು ಕಾಲಾಂತರದಲ್ಲಿ ಇಂದು ಬಳಕೆಯಲ್ಲಿರುವ 'ಸೀತಿ' ಎಂಬ ರೂಪಕ್ಕೆ ಕಾರಣವಾಗಿರಬೇಕು. ಇಂದಿಗೂ 'ಸೀತಿ' ಎಂಬ ವಿಶಿಷ್ಟ ಪ್ರತ್ಯಯವುಳ್ಳ ಅನೇಕ ಎಡೆಗಳು ದಕ್ಷಿಣ ಭಾರತದ್ಯಾಂತ ಕಾಣಬಹುದಾಗಿದೆ. ಪ್ರಾಯಶಃ ಅವು ಕೂಡ ಇಂತಹದೇ ಭೂ ವೈಶಿಷ್ಟ್ಯವನ್ನು ಪಡೆದಿದೆಯೆಂದು ಊಹಿಸಬಹುದಾಗಿದೆ. ಕರ್ನಾಟಕದಲ್ಲಿ, ಹಿರೇಕೆರೂರು ತಾಲೂಕಿನ ಸೀತಿಕೊಂಡ, ಗೋಕಾಕ ತಾಲೂಕಿನ ಶಿಲ್ತಿಭಾವಿ, ಬಾಗಲಕೋಟೆ ತಾಲೂಕಿನ ಸೀತಿಮನಿ,

ಮಾನ್ವಿ ತಾಲೂಕಿನ ಸೀಕಲ್, ಹಾಸನ ಜಿಲ್ಲೆಯಲ್ಲಿನ 'ಸೀತಿಕಲ್' ಎಂಬ ಎಡೆಗಳು ಮಹಾರಾಷ್ಟ್ರದ ಗಡಿಯಲ್ಲಿರುವ ರಾಮಘೆರ್ ಬಳಿಯ ಸೀತಾಕುಂಡ, ಹಾಗೇ ತೇಕಲ್‌ನಾಡಿನ ಶೀಪತಿಪಟ್ಟ (ಎ.ಕ. ೧೦, ಮಾಲೂರು ೨೦, ತೇಕಲ್ಲು ೧೩೪೩) ಎಂಬ ಉಲ್ಲೇಖ ಮುಂತಾದವು ಇಲ್ಲಿ ಉಲ್ಲೇಖನಾರ್ಹ.

ಒಟ್ಟಾರೆ ಸೀತಿಸೆರಗು, ಸೀತಿದೊಣೆ, ಸೀತಿಕಲ್ಲು, ಸೀತಿಕುಂಡ ಮುಂತಾದವು ನಿರ್ವಿವಾದವಾಗಿ 'ಸೀಪತಿ' ಎಂಬ ಮೂಲಾಂಶವನ್ನೊಳಗೊಂಡು ರೂಪ ತಾಳಿದ ಎಡೆಗಳಾಗಿವೆ ಎಂಬುದನ್ನು ಈ ಅಧ್ಯಯನದಿಂದ ದೃಢ ಪಡಿಸಿಕೊಳ್ಳಬಹುದಾಗಿದೆ.

**ಅನುಬಂಧ :**

**ಸೀತಿಬೆಟ್ಟದ ಭೈರವ** :- ಕ್ರಿ. ಶ. ೧೦೦೫ರ ಚೋಳರಾಜೇದ್ರನ ಶಾಸನ ಈ ಬೆಟ್ಟದ ಮೇಲಿದೆ. ಆ ಕಾಲಕ್ಕಾಗಲೇ ಕೈವಾರನಾಡು, ಕುವಲಾಳನಾಡು, ನೊಂಡುಗುಳಿನಾಡುಗಳಲ್ಲಿ ಈ ಭೈರನದೇವರು ಖ್ಯಾತಿಯನ್ನು ಪಡೆದಿದ್ದ ಅಂಶ ಶಾಸನಗಳಿಂದ ವ್ಯಕ್ತವಾಗುತ್ತದೆ. ಈ ಭೈರವಮೂರ್ತಿ ಮೂರು ಅಡಿ ಎತ್ತರದ ಉಬ್ಬು ಶಿಲ್ಪವಾಗಿದ್ದು ನಾಲ್ಕು ಕೈಗಳಿಂದ ಕೂಡಿದೆ. ತ್ರಿಶೂಲ, ಡಮರು, ಸರ್ಪ, ಮತ್ತು ಕಪಾಲಗಳನ್ನು ಬಿಡಿಸಲಾಗಿದೆ. ರುಂಡಮಾಲೆ ಕೊರಳಿನಲ್ಲಿದೆ. ಸ್ಪಷ್ಟ ಹಾಗೂ ಸರಳವಾಗಿರುವ ಈ ಬಿಂಬವು ಮೂಲತಃ ಗಂಗರ ರಚನೆಯಾಗಿರುವಂತೆ ತೋರುತ್ತದೆ. ಮುಖ್ಯವಾಗಿ ಈ ದೇವರಿಗೆ ಚೋಳರ ಮಾಂಡಲೀಕರಾಗಿ ಈ ಪ್ರದೇಶವನ್ನು ಆಳಲು ನೇಮಕಗೊಂಡ ಮೂಲತಃ ಗಂಗ ವಂಶೀಯರೇ ಆದ ಬ್ರಹ್ಮಾದಿರಾಜ ಗಂಗಪೆರುಮಾಳನ ಸಂತತಿಯುವರ ದಾನದತ್ತಿಗಳು ವಿಶೇಷವಾಗಿ ಸಂದಿವೆ. ಈಗ ಇರುವ ದೇವಾಲಯುವನ್ನು ಕ್ರಿ.ಶ.೧೨೭೫ರಲ್ಲಿ ಬ್ರಹ್ಮಾದಿರಾಜ ಕರಿಯುಗಂಗ ಪೆರಮಾಳನು ಕಟ್ಟಿಸಿರುತ್ತಾನೆ. ಕ್ರಿ.ಶ. ೧೧೨೦ಕ್ಕೆ ಸೇರಿದ ಶಾಸನವೊಂದು ಹೊಯ್ಸಳ ವಿಷ್ಣುವರ್ಧನದಾಗಿದೆ. ಅಂದರೆ ಚೋಳರ ಮಾಂಡಲಿಕರಾಗಿ ಕಾರ್ಯವಹಿಸುತ್ತಿದ್ದವರೇ ಹೊಯ್ಸಳರ ಆಶ್ರಯದಲ್ಲೂ ಮುಂದುವರೆದಿರುವಂತೆ ಕಾಣುತ್ತದೆ. ನಂತರದಲ್ಲಿ ವಿಜಯನಗರದ ಅರಸರ ಸೇವೆಯು ಈ ದೇವರಿಗೆ ಸಂದಿದೆ. ಇಂದಿಗೂ ಈ ಪ್ರದೇಶದ ಜನರು ಭಯಭಕ್ತಿಗಳಿಂದ ಭೈರವದೇವರಿಗೆ ನಡೆದುಕೊಳ್ಳುತ್ತಾರೆ. ಬಹುತೇಕ ಎಲ್ಲ ಜಾತಿಯ ಜನರು ಈ ದೇವರ ಭಕ್ತರಿದ್ದಾರೆ. ವಿಶೇಷವಾಗಿ ಒಕ್ಕಲು ಮಕ್ಕಳಾದ ಮೊರಸು ಒಕ್ಕಲಿಗ, ರೆಡ್ಡಿ ಜನಾಂಗದವರಲ್ಲಿ, ಹಿಂದೆ ಈ ದೇವರಿಗೆ ಬೆರಳನ್ನು ಕೊಡುತ್ತಿದ್ದ ಪದ್ಧತಿಯಿದ್ದಿತು. ಈ ರೀತಿ ಬೆರಳು ಕೊಡುವ ಪದ್ಧತಿಯನ್ನು ಸಾಂಪ್ರದಾಯಿಕವಾಗಿ ಕೈಬೆರಳಿಗೆ ಹೂವನ್ನು ಸುತ್ತಿ, ಆ ಹೂವನ್ನು ದೇವರಿಗೆ ಅರ್ಪಿಸುವುದರ ಮೂಲಕ ಸಾಂಕೇತಿಕವಾಗಿ ಆಚರಿಸಿಕೊಂಡು ಬರುವವರನ್ನು 'ಬೆರಳು ಕೊಡುವ' ಒಕ್ಕಲಿಗರೆಂದು ಪ್ರತ್ಯೇಕವಾಗಿ ಗುರುತಿಸಲಾಗುತ್ತಿದೆ. ಕ್ರಿ.ಶ. ೧೪ನೇ ಶತಮಾನದ ಶಾಸನವೊಂದು ಈ ವಿಷಯುದ ಬಗ್ಗೆ ಬೆಳಕು ಚೆಲ್ಲುತ್ತದೆ ಎಂಬ ೧೯೧೦ರ ಎಂ. ಎ. ಆರ್. ಮುಂತಾದ ಕಡೆ ದಾಖಲಾಗಿರುವ ಹೇಳಿಕೆಗೆ ಸ್ಪಷ್ಟ ಆಧಾರವಿದ್ದಂತೆ ಕಾಣುತ್ತಿಲ್ಲ. ಕೋಲಾರ ೩೭೫ನೇ ಶಾಸನ ತಚ್ಚನ್, ಕರುಮಾನ್, ತಟ್ಟಾನ್ ಅಂದರೆ ಚಿನ್ನದ ಕೆಲಸಗಾರ, ಕಬ್ಬಿಣದ ಕೆಲಸಗಾರ ಹಾಗೂ ಬಡಗಿಯರು 'ಸೀಪದಿನಾಯನಾರ್ ತಿರುವಾಶಲಿಲ್ ವರಲ್ ಆರಿಸಿ'ಯನ್ನು ಈ ಮೂವರು ಮೂರು ಭಾಗವಾಗಿ ಹಂಚಿಕೊಳ್ಳಬೇಕೆಂದು ಅದು ತಿಳಿಸುತ್ತದೆ. ಆದರೆ ಇದರ ಖಚಿತ ಅರ್ಥ ಸ್ಪಷ್ಟವಾಗುವುದಿಲ್ಲ. ಈ ಶಾಸನದ ಸಂಪಾದಕರು ಇದರ ಅನುವಾದವನ್ನು ಕೊಡದೆ ಬಿಟ್ಟಿರುತ್ತಾರೆ. ಬೆರಳು ಕೊಡುವ ಪದ್ಧತಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಪೌರಾಣಿಕ ಕತೆ ೧೯೧೦ರ ಎಂ.ಎ.ಆರ್, ಕನ್ನಡ ವಿಶ್ವಕೋಶ, ಕೋಲಾರ ಜಿಲ್ಲೆ ಹಾಗೂ ರಾಜ್ಯ ಗೆಝೆಟಿಯರ್ ಇತ್ಯಾದಿಗಳಲ್ಲಿ ಉಕ್ತವಾಗಿರುವುದರಿಂದ ಅದನ್ನು ಇಲ್ಲಿ ಪುನರುಕ್ತಿಸುವ ಅಗತ್ಯವಿಲ್ಲವೆಂದು ಭಾವಿಸುತ್ತೇನೆ.*

* (ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನ್ನೊಂದಿಗಿದ್ದು ಸಹಕರಿಸಿದ ವಿದ್ಯಾರ್ಥಿಮಿತ್ರರಾದ ಕೆ.ವಿ. ರಾಮಕೃಷ್ಣೇಗೌಡ ಹಾಗೂ ಹರಿಹರ ಶ್ರೀನಿವಾಸರಾವ್ ಅವರಿಗೂ, ಅನೇಕ ಸಲಹೆ ಸೂಚನೆಗಳನ್ನು ನೀಡಿ ಪ್ರೋತ್ಸಾಹಿಸಿದ ಹಿರಿಯ ಮಿತ್ರರಾದ ಶ್ರೀ ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀ ಬಿ. ರಾಜಶೇಖರಪ್ಪ, ಚಿತ್ರದುರ್ಗ, ಅವರುಗಳಿಗೂ ಲೇಖಕ ಋಣಿ.)

# ಗ್ರಂಥಋಣ


Epigraphia Carnatica Vols. X, 1905 & XVII, 1965.

Mysore Archaeological Reports, 1910, 1927 & 1935.

Kolar District Gazetteer, 1968.

ಕರ್ನಾಟಕ ಗೆಝೆಟಿಯರ್ ಭಾಗ-ಮೂರು, ೧೯೬೮.

ಕನ್ನಡ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

T. Burrow & M. B. Emeneau : *A Dravidian Etimological Dictionary 1968*·

C. Krishna Murthy : *'Some Minor Dynasties of Kolar District (1179-1338)'*, Prof : K· A. Neelakanta sastry Felicitation volume, 1971.

ಕುಂ. ಬಾ. ಸದಾಶಿವಪ್ಪ*

# ಬಳ್ಳಾರಿ ಜಿಲ್ಲೆಯ ಪ್ರಾಚೀನ ಕಾಲದ ಕಟ್ಟೆಗಳು-ಒಂದು ಅಧ್ಯಯನ

'ಕಟ್ಟೆ' ಎಂದರೆ ಎತ್ತರವಾದ ಸ್ಥಳ. ಆಂಗ್ಲ ಭಾಷೆಯಲ್ಲಿ ಪ್ಲಾಟ್‌ಫಾರ್ಮ್ ಎಂದು ಕರೆಯುವರು. ಪ್ರಾಚೀನ ಕಾಲದಿಂದಲೂ ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮದ ಪ್ರಮುಖರು ಒಂದು ಸ್ಥಳದಲ್ಲಿ ಕುಳಿತು ಜನರಿಗೆ ನ್ಯಾಯ ನಿರ್ಣಯಿಸುತ್ತಿದ್ದುದು ಒಂದು ಕಟ್ಟೆಯ ಮೇಲೆ. ಆದಕ್ಕಾಗಿ ಅವರು ಕುಳಿತ ಸ್ಥಳಕ್ಕೆ ಪಂಚಾಯಿತಿ ಕಟ್ಟೆ ಎಂದು ಕರೆದಿರುವರು. ಕೆಲವೊಂದು ವೇಳೆ ಕಟ್ಟೆಯ ಮಧ್ಯದಲ್ಲಿ ಗಿಡ ಮರಗಳನ್ನು ಬೆಳೆಸಿರುವುದು ಕಾಣಬಹುದಾಗಿದೆ. ಕೆಲವು ಕೋಮಿನವರು ತಮ್ಮಲ್ಲಿ ಉಂಟಾದ ಜಗಳಗಳನ್ನು ಕಟ್ಟೆಮನೆ ಗೌಡರಲ್ಲಿ ತೀರ್ಮಾನಕ್ಕೆ ತರುತ್ತಿದ್ದರು. ಅವುಗಳನ್ನು ಅವರ ಗುರುಗಳು ಮತ್ತು ಇತರರ ಸಂಗಡ ಚರ್ಚಿಸಿ ಗೌಡರು ತೀರ್ಮಾನ ಕೊಡುತ್ತಿದ್ದರು. ಈ ಕಟ್ಟೆ ಮನೆಗಳು ಕೆಲ ಗ್ರಾಮಗಳಲ್ಲಿ ಮಾತ್ರ ಇರುತ್ತಿದ್ದವು. ಗೌಡರನ್ನು ಅರಸರೇ ನೇಮಿಸುತ್ತಿದ್ದರು. (ಕಂಚಿನ ಪತ್ರಗಳಿಂದ ಈ ಮಾಹಿತಿ ಒದಗುವುದು. ಕಟ್ಟೆಮನೆಯು ಸಿಂಹಾಸನ ಕಟ್ಟೆಯ ಒಂದು ಪ್ರಭೇದವೂ ಹೌದು.

ಕೋಟೆಯ ಮುಖ್ಯ ಬಾಗಿಲಿಗೆ ಅಲ್ಪದೂರದಲ್ಲಿ ಎದುರುಗಡೆ ಇಲ್ಲವೇ ಎಡ ಅಥವಾ ಬಲ ಭಾಗಗಳಲ್ಲಿ ಒಂದು ಕಟ್ಟೆಯನ್ನು ಪ್ರಾಚೀನರು ಸ್ಥಾಪಿಸುತ್ತಿದ್ದರು. ಅದರ ಮೇಲೆ ಆಳುವ ಅರಸ, ಗ್ರಾಮದ ಉತ್ಸವ ದೇವತೆಯ ಮೂರ್ತಿ, ಗುರುಗಳು, ಅರ್ಚಕರು ಕುಳಿತುಕೊಂಡರೆ ; ಎದುರುಗಡೆ ಸೇನಾಧಿಪತಿಗಳು, ಸಚಿವರು, ಮಾನ್ಯರು, ಸೈನಿಕರು, ಪ್ರಜೆಗಳು ಕುಳಿತುಕೊಳ್ಳುತ್ತಿದ್ದರು. ಅರಸ ಕುಳಿತುಕೊಂಡ ಸ್ಥಳವಾಗಿದ್ದರಿಂದ ಈ ಕಟ್ಟೆಗೆ ಸಿಂಹಾಸನ ಕಟ್ಟೆ ಎಂದು ಕರೆದಿರಬೇಕು. ಸಿಂಹಾಸನ ಕಟ್ಟೆಗಳ ರಚನೆಯ ಉದ್ದೇಶಗಳನ್ನು ಈ ಕೆಳಕಂಡಂತೆ ಗುರುತಿಸಬಹುದು :

೧) ಪ್ರಜೆಗಳ ಮಧ್ಯೆ ಉಂಟಾದ ಜಗಳ ತೀರ್ಮಾನ. ೨) ಹಬ್ಬ ಹುಣ್ಣಿಮೆ, ಸಾಂಸ್ಕೃತಿಕ ಕಾರ್ಯಕ್ರಮಗಳ ವೀಕ್ಷಣೆ. ೩) ವೀರರಿಗೆ, ಕುಸ್ತಿ ಪಟುಗಳಿಗೆ, ಕವಿ-ಕಲಾವಿದರಿಗೆ ಪ್ರಶಸ್ತಿ ಪ್ರಧಾನ. ೪) ಅನ್ಯ ಅರಸರನ್ನು ಗೆದ್ದು ಬಂದ ವಿಜಯೋತ್ಸವದಲ್ಲಿ ೫) ಪಟ್ಟಾಭಿಷೇಕ ಸಮಾರಂಭಗಳ ಕಾರ್ಯಕ್ರಮಕ್ಕೆ. ಈ ಕಟ್ಟೆಗಳು ಯಾವಾಗ ? ಯಾವ ಅರಸರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದವು ? ಎಂಬುದಕ್ಕೆ ಖಚಿತ ಆಧಾರಗಳು ದೊರೆತಿಲ್ಲ. ಕೆಲ ಗ್ರಾಮಗಳ ವಯೋವೃದ್ಧರ ಹೇಳಿಕೆಯ ಮೇರೆಗೆ ಕೋಟೆ ಮತ್ತು ದೇವಾಲಯಗಳನ್ನು ರಚಿಸಿ ಉಳಿದ ಕಲ್ಲುಗಳಿಂದ ಈ ಸಿಂಹಾಸನ ಕಟ್ಟೆಗಳನ್ನು ನಿರ್ಮಿಸಿಕಂಡು ಬರುವುದು. ಏಕೆಂದರೆ ಬಹು ಜನ ವಯೋವೃದ್ಧರ ಅಭಿಪ್ರಾಯ ಹೆಚ್ಚಾಗಿ ಒಂದೇ ಆಗಿರುತ್ತದೆ. ಕೆಲವು ಕಟ್ಟೆಗಳನ್ನು ನುರಿತ ಶಿಲ್ಪಿಗಳು ಮತ್ತೆ ಕೆಲವು ಕಟ್ಟೆಗಳನ್ನು ಸಾಮಾನ್ಯ ಶಿಲ್ಪಿಗಳು ನಿರ್ಮಿಸಿರಬೇಕು. ಈ ತೆರನಾದ ಕಟ್ಟೆಗಳನ್ನು ಕರ್ನಾಟಕದ ಮತ್ತು ದೇಶದ ಇತರ ಭಾಗಗಳಲ್ಲಿ ನಾವು ಕಂಡರೂ ಪ್ರಸ್ತುತ ಲೇಖನದ

* ನಾರಾಯಣಭಟ್ಟರ ಕಾಂಪೊಂಡ್, ಹರಪನ ಹಳ್ಳಿ, ಬಳ್ಳಾರಿ ಜಿಲ್ಲೆ

ಅಧ್ಯಯನವನ್ನು ಬಳ್ಳಾರಿ ಜಿಲ್ಲೆಯ ಪ್ರದೇಶಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿರುತ್ತೇನೆ.

ಬಳ್ಳಾರಿ ಜಿಲ್ಲೆಯ ಪ್ರಾಚೀನ ಕಾಲದ ಕೋಟೆಗಳು ಬಹುಪಾಲು ಹಾಳಾಗಿರುತ್ತವೆ. ಹಾಳಾಗದೇ ಉಳಿದಿರುವ ಕೆಲವು ಕೋಟೆಗಳು ಅವುಗಳ ಮುಂದೆ ಕಂಡು ಬರುವ ಕಟ್ಟೆಗಳಿಗೆ ಈಗಲೂ ಸಿಂಹಾಸನ ಕಟ್ಟೆಗಳೆಂದು ಕರೆದರೆ, ಮತ್ತೆ ಕೆಲವು ಕಟ್ಟೆಗಳಿಗೆ ಆಯಾ ಗ್ರಾಮ ದೇವತೆಗಳ ಅಥವಾ ಮಠಗಳ ಹೆಸರಿನಿಂದ ಕರೆಯುವ ರೂಢಿ ಉಂಟಾಗಿದೆ.

ಉದಾ :–೧) ದಸರಾ ದಿಬ್ಬ ೨) ಉಚ್ಚಂಗೆಮ್ಮನ ಪಾದಗಟ್ಟೆ ೩) ಮಲ್ಲಿಕಾರ್ಜುನ ಕಟ್ಟೆ ೪) ಆಂಜನೇಯನ ಕಟ್ಟೆ ೫) ಬಸವಣ್ಣನ ಕಟ್ಟೆ ೬) ತಿಮ್ಮಪ್ಪನ ಕಟ್ಟೆ ೮) ದುರುಗಮ್ಮನ ಪಾದಗಟ್ಟೆ ೯) ಆಲದ ಕಟ್ಟೆ ಇದಕ್ಕೆ ಕಾರಣ ಮೇಲೆ ತಿಳಿಸಿದ ಕಟ್ಟೆಗಳೆಲ್ಲಾ ಪ್ರಾಚೀನ ಕಾಲದ ಸಿಂಹಾಸನ ಕಟ್ಟೆಗಳಾಗಿವೆ. ಪ್ರಾಚೀನ ಕಾಲದಲ್ಲಿ ಅರಸರು ಯುಗಾದಿ ಹಬ್ಬದಲ್ಲಿ ಬೇಟೆಗಾಗಿ ಕಾಡಿಗೆ ಹೋಗಿ ಪುನಃ ಗ್ರಾಮಕ್ಕೆ ಮರಳಿದಾಗ, ಗ್ರಾಮದ ಹೊರ ಭಾಗದಲ್ಲಿಯೇ ಸ್ವಲ್ಪ ಕಾಲ ಸಿಂಹಾಸನ ಕಟ್ಟೆಯ ಮೇಲೆ ತಂಗುತ್ತಿದ್ದರು. ಅನಂತರ ಗ್ರಾಮದ ಪ್ರಮುಖರ ಮನೆಗಳ ಸುಮಂಗಲೆಯರು ಕಳಸ ಕನ್ನಡಿಗಳಿಂದ ಅರಸರನ್ನು ಗ್ರಾಮದ ಕರುಗಲ್ಲು ಬಳಿ ಮೇಕೆ ಕುರಿ ಮರಿಗಳನ್ನು ಬಲಿಕೊಟ್ಟು ಗ್ರಾಮಕ್ಕೆ ಸ್ವಾಗತಿಸುತ್ತಿದ್ದರು. ಈಗ ಅರಸರಿಲ್ಲದಿದ್ದರೂ ಯುಗಾದಿ ಹಬ್ಬದಲ್ಲಿ ಗ್ರಾಮ ದೇವತೆಯ ಉತ್ಸವ ಮೂರ್ತಿಗೆ ಈ ಗೌರವಗಳನ್ನು ಸಲ್ಲಿಸಿ, ಗ್ರಾಮದಲ್ಲಿ ಕರೆದು ಕೊಳ್ಳುವುದನ್ನು ಈಗಲೂ ಬಳ್ಳಾರಿ ಜಿಲ್ಲೆಯ ಹೆಚ್ಚು ಗ್ರಾಮಗಳಲ್ಲಿ ಕಾಣಬಹುದು.

ಬಳ್ಳಾರಿ ಜಿಲ್ಲೆಯ ಕೋಟೆಗಳಿದ್ದ ಬಹುತೇಕ ಗ್ರಾಮಗಳಲ್ಲಿ ಈ ಸಿಂಹಾಸನ ಕಟ್ಟೆಗಳನ್ನು ಈಗಲೂ ಕಾಣಬಹುದು. ಆದರೆ ವಾಸ್ತುಶಿಲ್ಪ ದೃಷ್ಟಿಯಿಂದ ಮತ್ತು ಗಾತ್ರದ ದೃಷ್ಟಿಯಿಂದ ಅವು ಹೆಚ್ಚು ಮಹತ್ವ ಪಡೆದಿಲ್ಲವಾದರೂ ಎರಡು ಕಟ್ಟೆಗಳು ಮಾತ್ರ ಅತ್ಯಂತ ಪ್ರಮುಖವಾಗಿರುವವು. ೧) ಹೂವಿನ ಹಡಗಲಿ ತಾಲ್ಲೂಕು ಹಿರೇಕುರುವತ್ತಿಯ ಸಿಂಹಾಸನ ಕಟ್ಟೆ ೨) ಹೊಸಪೇಟೆ ತಾಲ್ಲೂಕಿನ ಹಂಪಿಯ ಸಿಂಹಾಸನ ಕಟ್ಟೆ (ಇದಕ್ಕೆ ಮಹಾನವಮಿ, ದಸರಾ ದಿಬ್ಬಗಳೆಂದು ಕರೆಯುವರು)

ಹಿರೇಕುರುವತ್ತಿ ಸಿಂಹಾಸನ ಕಟ್ಟೆಯು ಉತ್ತರದಿಂದ ದಕ್ಷಿಣಕ್ಕೆ : ೧೧೨ ಅಡಿ ಉದ್ದವಾಗಿಯೂ ಪೂರ್ವದಿಂದ ಪಶ್ಚಿಮಕ್ಕೆ : ೪೪ ಅಡಿ ಅಗಲವಾಗಿದ್ದು ೮ ಅಡಿ ಎತ್ತರವಾಗಿ ಆಯತಾಕಾರದಲ್ಲಿದೆ.

ಇದು ಕೋಟೆಯ ಮುಖ್ಯ ದ್ವಾರದ ಮುಂಭಾಗದಲ್ಲಿ ಸುಮಾರು ೯೦೦ ಅಡಿಗಳಷ್ಟು ದೂರದಲ್ಲಿದೆ. ಈ ಕೋಟೆ ಚಿಕ್ಕದಾದರೂ ಈ ಸಿಂಹಾಸನ ಕಟ್ಟೆಯ ಗಾತ್ರ ಬಹು ದೊಡ್ಡದು. ದೊಡ್ಡ ಗಾತ್ರದ ಸಿಂಹಾಸನ ಕಟ್ಟೆ ನಿರ್ಮಿಸಲು ಈ ಕೆಳಗಿನಂತೆ ಕಾರಣಗಳು ಇದ್ದಿರಬೇಕು. ೧) ಹಿರೇಕುರುವತ್ತಿ ಗ್ರಾಮದ ಬಳಿ ತುಂಗಭದ್ರಾ ನದಿ ಪಶ್ಚಿಮವಾಹಿನಿಯಾಗಿ ಹರಿದಿದೆ. ದಕ್ಷಿಣ ವಾರಣಾಸಿ ಎಂದು ಈ ಗ್ರಾಮಕ್ಕೆ ಶಾಸನದಲ್ಲಿ ಕರೆದಿದೆ. ೨) ಚಾಲುಕ್ಯ ಅರಸರಿಂದ ಸ್ಥಾಪಿಸಿದ ಸೋಮೇಶ್ವರ, ಕಲ್ಲೇಶ್ವರ (ಆಹವ ಮಲ್ಲೇಶ್ವರ) ಮಲ್ಲಿಕಾರ್ಜುನ ದೇವಾಲಯಗಳು ಇಲ್ಲಿವೆ. ೩) ಲೋಕಾಭರಣ ಮತ್ತು ಚಿಲ್ಲು ಕಾರ್ಯ ಮಹಾಮುನಿಗಳು ಇಲ್ಲಿ ವಾಸಿಸಿದ್ದರು. ೪) ಚಾಲುಕ್ಯ ಚಕ್ರವರ್ತಿ ಮೊದಲ ಸೋಮೇಶ್ವರ ಈ ನದಿಯಲ್ಲಿಯೇ ಹಾರಿ ಸ್ವಯಂ ಪ್ರೇರಣೆಯಿಂದ ಜಲಸಮಾಧಿ ಹೊಂದಿರುವನು. ಆ ಸ್ಥಳದಲ್ಲಿ ಒಂದು ಈಶ್ವರ ಲಿಂಗು ಸ್ಥಾಪಿಸಿದೆ. ಅದಕ್ಕೆ ಶಂಕರಲಿಂಗುವೆಂದು ಕರೆಯುವರು. ೫) ಪ್ರಸಿದ್ಧ ಶಿಲ್ಪಿಗಳು ಈ ಸ್ಥಳದಲ್ಲಿ ಇದ್ದುದಾಗಿ ತಿಳಿದು ಬರುವುದು. ೬) ಚಾಲುಕ್ಯ ಅರಸರು ಸಾಮಂತ ಅರಸರ ಮಧ್ಯ ಉಂಟಾದ ಜಗಳಗಳನ್ನು ಇಲ್ಲಿಯೇ ಬಗೆಹರಿಸುವ ಉದಾಹರಣೆಗಳುಂಟು. ೭) ಚಾಲುಕ್ಯ ಅರಸರಿಗೆ ಈ ಸ್ಥಳ ಹೆಚ್ಚು ಪವಿತ್ರವಾದುದು.

ಪ್ರಾಚೀನ ಕಾಲದಲ್ಲಿ ಸಿಂಹಾಸನ ಕಟ್ಟೆಯ ಎಡಭಾಗದಲ್ಲಿ ಅರಸ ಬಲ ಭಾಗದ ಮಂಟಪದಲ್ಲಿ ದೇವರ ಉತ್ಸವ ಮೂರ್ತಿ, ಅದರ ಪಕ್ಕದಲ್ಲಿ ಗುರುಗಳು ಆಸೀನರಾಗಿರುತ್ತಿದ್ದರು. ಮಂಟಪದ ಪಕ್ಕದಲ್ಲಿ ಕುಳಿತುಕೊಳ್ಳುವ ಗುರುಗಳಿಗೆ ಜನ ಸಾಮಾನ್ಯರು ಮಂಟಪದ ಐಗಳೆಂದು ಕರೆದರು. ಮಂಟಪದ ಐಗಳ ಮಠ ಮತ್ತು ಅವರ ವಾರಸುದಾರರನ್ನು ಹಿರೇಕುರುವತ್ತಿ ಗ್ರಾಮದಲ್ಲಿ

ಈಗಲೂ ಕಾಣಬಹುದು. ಈ ಸಿಂಹಾಸನ ಕಟ್ಟೆ ಕ್ರಿ. ಶ. ೧೯೪೩ ಮತ್ತು ೧೯೫೧ರಲ್ಲಿ ಎರಡು ಬಾರಿ ಜೀರ್ಣೋದ್ಧಾರವಾಗಿ ಹೊಸ ತರಹದ ಒಂದು ಮಂಟಪ ವನ್ನು ಹೊಂದಿರುತ್ತದೆ. ಆದರೆ ಆದರ ಬಲ ಭಾಗದಲ್ಲಿ ಗಜಲಕ್ಷ್ಮಿ ಮತ್ತು ಗಣಪತಿಗಳ ಶಿಲ್ಪಗಳು ಪ್ರಾಚೀನ ಕಾಲದವಾಗಿದ್ದು, ಇಂದಿಗೂ ಅಲ್ಲಿಯೇ ಇವೆ. ಕ್ರಿ.ಶ. ೧೧೯೦ರಲ್ಲಿ ಚಾಲುಕ್ಯ ಚಕ್ರವರ್ತಿ ಆಹವಮಲ್ಲನು ಚಾವುಂಡೋಜನೆಂಬ ಶಿಲ್ಪಿಯಿಂದ ಮಲ್ಲಿಕಾರ್ಜುನ ದೇವಾಲಯವನ್ನು ನಿರ್ಮಿಸಿದನು. ಅದಕ್ಕಾಗಿ ಈ ದೇವ ರಿಗೆ ಆಹವಮಲ್ಲನೆಂದೂ ಶಾಸನದಲ್ಲಿ ಹೊಗಳಿದೆ. ಈ ದೇವಾಲಯವನ್ನು ಕಟ್ಟಿ ಉಳಿದ ಕಲ್ಲುಗಳಿಂದ ಈ ಸಿಂಹಾಸನ ಕಟ್ಟೆಯನ್ನು ನಿರ್ಮಾಣ ಮಾಡಿರಬಹುದು.

**ಹಂಪಿಯ ಸಿಂಹಾಸನ ಕಟ್ಟೆಯು** ಪೂರ್ವ ಪಶ್ಚಿಮವಾಗಿ ೪೦ ಅಡಿ ಉದ್ದವಾಗಿಯೂ ಉತ್ತರ ದಕ್ಷಿಣ ೪೦ ಅಡಿ ಅಗಲವಾಗಿಯೂ ೨೩ ಅಡಿ ಎತ್ತರ ವಾಗಿಯೂ ಇದ್ದು ಚೌಕಾಕಾರವಾಗಿದೆ.

ಶ್ರೀ ಕೃಷ್ಣದೇವರಾಯನು ಒರಿಸ್ಸಾ ರಾಜ್ಯವನ್ನು ಗೆದ್ದ ಮೇಲೆ ಆದರ ನೆನಪಿಗಾಗಿ ಈ ಸಿಂಹಾಸನ ಕಟ್ಟೆ ಯನ್ನು ನಿರ್ಮಿಸಿದಂತೆ ತಿಳಿದು ಬರುತ್ತದೆ. ಈ ಕಟ್ಟೆಯ ವರ್ಣನೆಯನ್ನು ಪೋರ್ಚಗೀಸ್ ರಾಯಭಾರಿ ಚೆನ್ನಾಗಿ ವರ್ಣಿಸಿರುವನು. ಇದನ್ನು ನೋಡಿದಾಗ ಹಜಾರ ರಾಮಸ್ವಾಮಿ ಗುಡಿಯ ನೆನಪು ಬರುತ್ತದೆ. ಇದರ ಸುತ್ತಲೂ ಉಬ್ಬು ಚಿತ್ರ, ಬೇಟೆ ದೃಶ್ಯ ನೃತ್ಯ ಭಂಗಿ, ಪೌರಾಣಿಕ ಚಿತ್ರ, ಆನೆಗಳ ಮೆರವಣಿಗೆ, ಒಂದು ಆಸನ ದಲ್ಲಿ ಕುಳಿತ ವ್ಯಕ್ತಿಗೆ ಬೇರೊಬ್ಬ ಬಾಗಿ ನಮಸ್ಕರಿಸು ವುದು; ಅವನ ಪರ್ಷಿಯನ್ ಟೋಪಿ ಮೊನಚಾದ ಗಡ್ಡ ಕಾಣುವುದು. ಇದರಿಂದ ಲಾಂಘೆಸ್ಟೋರ್ಟ್ ಹೇಳಿಕೆಯ ಪ್ರಕಾರ ರಾಜರ ಆಸ್ಥಾನಕ್ಕೆ ಭೇಟಿ ಕೊಟ್ಟ ಪರ ದೇಶದ ರಾಯಭಾರಿಯನ್ನು ಈ ವೇದಿಕೆಯಲ್ಲಿ ಚಿತ್ರಿಸಲಾಗಿದೆ ಎಂದು ಗ್ರಹಿಸಬಹುದು. ಇದರ ಇನ್ನೊಂದು ಭಾಗದಲ್ಲಿ ಹೋಳಿ ಹಬ್ಬದ ದೃಶ್ಯ ಕಾಣುವುದು.

ಈ ಸಿಂಹಾಸನ ಕಟ್ಟೆಯ ಮೇಲೆ ದೇವರ ಉತ್ಸವ ಮೂರ್ತಿಯನ್ನು ಕೂಡಿಸಿ ಆದರ ಪಕ್ಕದಲ್ಲಿ ಗುರುಗಳು ಹಾಗೂ ಅರಸು ಕುಳಿತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿದ್ದರು. ಗೆದ್ದ ಕುಸ್ತಿ ಪಟು ಮುಂತಾದವರಿಗೆ ಪ್ರಶಸ್ತಿಗಳನ್ನು ವಿತರಿಸುತ್ತಿದ್ದರು. ನ್ಯಾಯ ನಿರ್ಣಯಿಸುತ್ತಿದ್ದರು. ಶಿವರಾತ್ರಿ ಮತ್ತು ದಸರಾ ಹಬ್ಬಗಳಲ್ಲಿಯೇ ಹೆಚ್ಚು ಕಾರ್ಯಕ್ರಮಗಳು ಜರುಗುತ್ತಿದ್ದುದರಿಂದ ಇದಕ್ಕೆ ದಸರಾ ದಿಬ್ಬ ಅಥವಾ ಮಹಾನವಮಿ ದಿಬ್ಬವೆಂದು ಜನ ಸಾಮಾನ್ಯರು ಕರೆದಿರುವರು.

ಗ್ರಾಮಗಳಲ್ಲಿ ವರ್ಷದಲ್ಲಿ ಬರುವ ಹಬ್ಬ ಹುಣ್ಣಿಮೆ ಗಳಲ್ಲಿ ಗ್ರಾಮದೇವತಾ ಉತ್ಸವ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು ಈಗಲೂ ಈ ಸಿಂಹಾಸನ ಕಟ್ಟೆಗಳ ಮುಂದೆಯೇ ಜರುಗುವುವು. ಸಿಂಹಾಸನ ಕಟ್ಟೆಯ ಮೇಲೆ ಉತ್ಸವ ದೇವತೆಯ ಮೂರ್ತಿಯನ್ನು ಕಾಣ ಬಹುದು. ವರ್ಷದ ಇತರ ದಿನಗಳಲ್ಲಿಯೂ ಗ್ರಾಮದ ಜನರು ಈ ಕಟ್ಟೆಗಳಿಗೆ ಭಕ್ತಿಯನ್ನು ತೋರಿಸುತ್ತಾರೆ.

ಬಸವಲಿಂಗ ಸೊಪ್ಪಿಮಠ *

# ಗೊಬ್ಬೂರು ಮತ್ತು ಬಿಬ್ಬಿ ಬಾಚಯ್ಯ ಕೆಲವು ಹೊಸ ವಿಚಾರಗಳು

ಹನ್ನೆರಡನೆಯ ಶತಮಾನದ ಪ್ರಮುಖ ಶರಣರಲ್ಲಿ ಗೊಬ್ಬೂರಿನ ಬಿಬ್ಬಿ ಬಾಚಯ್ಯನೂ ಒಬ್ಬ. "ಗುರು ಪ್ರಸಾದಿ ಗುರು ಭಕ್ತಯ್ಯನಾದರೆ ಲಿಂಗ ಪ್ರಸಾದಿ ಪ್ರಭುದೇವನಾದರೆ, ಜಂಗಮ ಪ್ರಸಾದಿ ಬಸವಣ್ಣನಾದರೆ, ಪ್ರಸಾದ ಪ್ರಸಾದಿ ಬಿಬ್ಬಿ ಬಾಚಯ್ಯ" ಎಂದು ಚೆನ್ನಬಸವಣ್ಣನಿಂದ ಸ್ತುತಿಸಲ್ಪಟ್ಟ ಬಿಬ್ಬಿ ಬಾಚಯ್ಯನ ಪ್ರಸಾದ ನಿಷ್ಠೆ ಮತ್ತಿತರ ಜೀವನೇತಿಹಾಸದ ವಿವರಗಳು ತೆಲುಗು ಬಸವ ಪುರಾಣ, ಶಿವತತ್ವ ಚಿಂತಾಮಣಿ, ವೀರಶೈವಾಮೃತ ಮಹಾಪುರಾಣ, ಭೈರವೇಶ್ವರ ಕಾವ್ಯ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ, ಬಸವೇಶ್ವರ ಪುರಾಣದ ಕಥಾ ಸಾಗರ, ಭಕ್ತಿ ರಸದ ಸೋನೆ ಮೊದಲಾದ ಕಾವ್ಯಪುರಾಣಗಳಲ್ಲಿ ಬಂದಿದೆ. ಇಲ್ಲೆಲ್ಲ ವರ್ಣಿತವಾಗಿರುವ ಈತನ ಒಟ್ಟು ಚರಿತ್ರೆ ಸ್ಥೂಲವಾಗಿ ಹೀಗಿದೆ—

ಗೊಬ್ಬೂರು ಎಂಬುದು ಒಂದು ಅಗ್ರಹಾರ. ಇಲ್ಲಿ ದ್ವಿಜರ ವಂಶದಲ್ಲಿ ಹುಟ್ಟಿ ವೀರಶೈವನಾದ ಶರಣ ಬಿಬ್ಬಿ ಬಾಚಯ್ಯ. ಜಂಗಮರ ಒಕ್ಕುಮಿಕ್ಕ ಪ್ರಸಾದದಿಂದ ಜೀವನ ಮುಕ್ತಿ ಎಂದು ತಿಳಿದು ಪ್ರಸಾದ ನಿಷ್ಠೆಯಲ್ಲಿ ಬಾಳು ಸವೆಸುತ್ತಿರುವವನು. ಒಂದು ದಿನ ಆತ ಪ್ರಸಾದವನ್ನು ಬಂಡಿಯಲ್ಲಿ ತೆಗೆದುಕೊಂಡು ಮನೆಗೆ ಬರುತ್ತಿರುವಾಗ ದಾರಿಯಲ್ಲಿ ಊರ ವಿಪ್ರರೆಲ್ಲ ಸೇರಿ ಬಂಡಿಯನ್ನು ತಡೆದು ಪ್ರಸಾದವನ್ನು ಎಂಜಲೆಂದು ನಿಂದಿಸಲು ಅವರ ಮನೆಗಳೆಲ್ಲ ಉರಿಯ ತೊಡಗಿದವು. ಮುಂದೆ ವಿಪ್ರರು ತಮ್ಮ ತಪ್ಪನ್ನು ತಿಳಿದು ಭಕ್ತಿತಾಳಿ ಬಿನ್ನವಿಸಲಾಗಿ ಬಾಚಯ್ಯ ಅವರ ಮನೆಗಳನ್ನು ಮುನ್ನಿನಂತಾಗಿಸಿದ.

ಬಿಬ್ಬಿ ಬಾಚಯ್ಯನ ಪ್ರಸಾದ ಮಹಾತ್ಮೆಯನ್ನು ಸಾರುವ ಮೇಲಿನ ಘಟನೆ ನಡೆದದ್ದು ಗೊಬ್ಬೂರಲ್ಲಿ, ಅಂದರೆ ಬಾಚಯ್ಯನ ಊರಿನಲ್ಲಿ--ಎಂದು ಆತನ ಜೀವನವನ್ನು ಕಥಿಸುವ ಪುರಾಣಕಾವ್ಯಗಳು ತಪ್ಪದೆ ಹೇಳುತ್ತವೆ. ಹಾಗಾದರೆ ಬಿಬ್ಬಿ ಬಾಚಯ್ಯನ ಆ ಗೊಬ್ಬೂರು ಎಲ್ಲಿದೆ ? ಎಂಬುದನ್ನು ಪರಿಶೋಧಿಸುವುದು ಈ ಲೇಖನದ ಉದ್ದೇಶ.

ಡಾ|| ಫ. ಗು. ಹಳಕಟ್ಟಿಯವರು ತಮ್ಮ "ಶಿವ ಶರಣರ ಚರಿತ್ರೆಗಳು-೨" ಎಂಬ ಗ್ರಂಥದಲ್ಲಿ ಬಿಬ್ಬಿ ಬಾಚಯ್ಯನ ಕುರಿತು ಬರೆಯುತ್ತ–"ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಮೇರೆಯಿಂದ ಪೂರ್ವಕ್ಕೆ ೧೮ ಮೈಲಿಗಳ ಮೇಲೆ ಗೊಬ್ಬೂರೆಂಬ ಗ್ರಾಮವಿರುತ್ತದೆ. ಅದು ಈಗ ಕಲಬುರ್ಗಿ ಜಿಲ್ಲೆಯಲ್ಲಿರುತ್ತದೆ. ಮೊದಲಿನ ಕಾಲದಲ್ಲಿ ಇದು ಬ್ರಾಹ್ಮಣರ ಒಂದು ಪ್ರಸಿದ್ಧ ಅಗ್ರಹಾರವಾಗಿತ್ತು" ಎಂದು ಮುಂತಾಗಿ ಬರೆದು, ಇಲ್ಲಿ ಆದಿತ್ಯದೇವನೆಂಬ ಭೂಸುರನ ಮಗನಾಗಿ ಬಿಬ್ಬಿ ಬಾಚಯ್ಯ ಹುಟ್ಟಿದನೆಂದು ಬರೆದಿದ್ದಾರೆ. ಇದೇ ಅಭಿಪ್ರಾಯವನ್ನೇ ಮುಂದಿನ ವಿದ್ವಾಂಸರು ತಮ್ಮ

* ಕನ್ನಡ ಅಧ್ಯಾಪಕರು, ಬಿ.ಆರ್.ಬಿ. ವಾಣಿಜ್ಯ ಕಾಲೇಜು, ರಾಯಚೂರು-೫೮೪೧೦೧

ಬರಹಗಳಲ್ಲಿ ಕಾಣಿಸುತ್ತ ಬಂದಿದ್ದಾರೆ. ಡಾ|| ಹಳಕಟ್ಟಿಯವರು ಹೇಳುವ ಕಲಬುರ್ಗಿ ಜಿಲ್ಲೆಯ ಗೊಬ್ಬೂರನ್ನು ನಾನು ಸಂದರ್ಶಿಸಿದಾಗ ಈ ಗ್ರಾಮದಲ್ಲಿ ಬಿಬ್ಬಿ ಬಾಚಯ್ಯನ ಇತಿಹಾಸವನ್ನು ಹೇಳುವ ಒಂದು ಕುರುಹಾದರೂ ನನ್ನ ಕಣ್ಣಿಗೆ ಬೀಳಲಿಲ್ಲ. ಆದರೆ ಸುಮಾರು ೭ ವರ್ಷಗಳ ಕೆಳಗೆ ಈ ಗೊಬ್ಬೂರಿನ ಹತ್ತಿರದ ಹುಣಸೆ ಹಡಗಲಿಯಲ್ಲಿ ಬಸವಲಿಂಗಪ್ಪ ಮುತ್ಯಾ ಎಂಬ ಅನುಭಾವಿಗಳಿದ್ದಾರೆ. ಇವರು ತಮಗೆ ಸ್ವಪ್ನದಲ್ಲಿ ಬಿಬ್ಬಿ ಬಾಚಯ್ಯ ದರ್ಶನ ಕೊಟ್ಟಿದ್ದಾನೆ ; ಈ ಗೊಬ್ಬೂರಲ್ಲಿ ಆತ ಹಿಂದೆ ಇದ್ದದ್ದು ; ಆತನ ಒಂದು ಸ್ಥಳ ಮಾಡಿರಿ ಎಂದರಂತೆ. ಆ ಪ್ರಕಾರ ಗೊಬ್ಬೂರ ಗ್ರಾಮಸ್ಥರೆಲ್ಲ ಸೇರಿ ಊರ ಹೊರಗೆ ಹೆಸರು-ದೆಸೆಯಿಲ್ಲದೆ ಭಗ್ನವಾಗಿ ಬಿದ್ದಿದ್ದ ನಂದಿಯ ವಿಗ್ರಹವನ್ನೇ ಎತ್ತಿ ತಂದು ಸ್ಥಾಪಿಸಿ, ಬಿಬ್ಬಿ ಬಾಚಯ್ಯನ ಹೆಸರಿನಲ್ಲಿ ಗುಡಿ ಕಟ್ಟುತ್ತಲಿದ್ದಾರೆ.[1] ಡಾ|| ಹಳಕಟ್ಟಿ ಅವರು ಲೇಖನ ಬರೆಯುವ ಕಾಲಕ್ಕೆ ಕೇವಲ ಹೆಸರಿನ ಸಾಮ್ಯದ ಮೇಲೆ ಅವರು ಈ ಗೊಬ್ಬೂರನ್ನು ಸೂಚಿಸಿದ್ದಾರೆ ಎಂಬುದು ಸ್ಪಷ್ಟ. ಹಾಗಾದರೆ ಬಿಬ್ಬಿ ಬಾಚಯ್ಯನ ನಿಜವಾದ ಗೊಬ್ಬೂರು ಯಾವುದು ? ಎಲ್ಲಿದೆ ? ಎಂಬುದು ಪ್ರಶ್ನೆ.

ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನಲ್ಲಿ ಗೊಬ್ಬೂರು ಎಂಬ ಊರು ಇದೆ. ಪುರಾತನ ಶಿವ ದೇವಾಲಯಗಳಿಂದ ತುಂಬಿಹೋಗಿರುವ ಈ ಊರಿನಲ್ಲಿ ಮನೆಗಳಿಗಿಂತ ದೇವಾಲಯಗಳೇ ಹೆಚ್ಚು ಎಂದರೆ ಅತಿಶಯೋಕ್ತಿಯಲ್ಲ. ತಮ್ಮ ಊರು ಬಭ್ರುವಾಹನನ ಮಣಿಪುರ ಎಂದು ಹೇಳಿಕೊಳ್ಳುವ ಗೊಬ್ಬೂರಿನ ಜನರ ನಂಬಿಕೆಗೆ ಕಾರಣ ತಿಳಿಯದೇ ಇದ್ದರೂ, ಲಕ್ಷಿಸುವ ಸಂಗತಿ ಎಂದರೆ ಬಿಬ್ಬಿ ಬಾಚಯ್ಯನ ಚರಿತ್ರೆ ಹೇಳುವ ಕೆಲವು ಕನ್ನಡ ಕೃತಿಗಳಲ್ಲಿ ಉದಾಹರಣೆಗೆ ಭೈರವೇಶ್ವರ ಕಾವ್ಯದ ಕಥಾ ಮಣಿಸೂತ್ರ ರತ್ನಾಕರದಲ್ಲಿ ಗೊಬ್ಬೂರನ್ನು ಮಹಾಭಾರತದ ಜನಮೇಜಯ ರಾಜನು ಬ್ರಾಹ್ಮಣರಿಗೆ ಅಗ್ರಹಾರವಾಗಿ ನೀಡಿ ತನಗೆ ತಗುಲಿದ್ದ ಕುಷ್ಠರೋಗವನ್ನು ನಿವಾರಿಸಿಕೊಂಡನೆಂದು ಹೇಳಲಾಗಿದೆ. ಈ ಪೌರಾಣಿಕತೆಯ ಸತ್ಯಾಸತ್ಯತೆ ಏನೇ ಇದ್ದರೂ ಇಲ್ಲಿ ಗಮನಿಸಬೇಕಾದದ್ದು ಈ ಗೊಬ್ಬೂರಿನ ಬಗ್ಗೆ ಜನ ನಂಬಿಕೆ ಪುರಾಣ ಕಾವ್ಯಗಳ ಹೇಳಿಕೆಯಲ್ಲಿ ಇರುವ ಹೋಲಿಕೆಯ ಬಗ್ಗೆ. ಕಲಬುರ್ಗಿ ಜಿಲ್ಲೆಯ ಗೊಬ್ಬೂರಿನಲ್ಲಿ ನಾವು ಇದನ್ನು ಕಾಣಲಾರೆವು.

ರಾಯಚೂರು ಜಿಲ್ಲೆಯ ಈ ಗೊಬ್ಬೂರಿನ ಪೂರ್ವ ದಿಕ್ಕಿಗೆ ೨ ಕಿ.ಮೀ. ಅಂತರದಲ್ಲಿ ಬಿಬ್ಬಿ ಬಾಚಯ್ಯನ ಹೊಲ'ವಿದೆ. ಈ ಹೊಲದಲ್ಲಿ ಬಾಚಯ್ಯ ಜಂಗಮರಿಗೆ ನಿತ್ಯ ಪ್ರಸಾದ ಅರ್ಪಿಸುತ್ತಿದ್ದ ಎಂದು ಹೇಳಲಾಗುವ 'ಅರ್ಪಣ ಕಟ್ಟಿ' ಇದೆ. ಈ ಕಟ್ಟಿಯ ಮೇಲೆ ಸೊಂಪಾಗಿ ಬೆಳೆದು ವಿಶಾಲವಾಗಿ ಹರಡಿಕೊಂಡು ನೆಲದವರೆಗೂ ಬಾಗಿ ಮೇಲೆದ್ದಿರುವ ವಿಲಕ್ಷಣ ಆಕರ್ಷಣೆಯನ್ನು ಹೊಂದಿರುವ ಬನ್ನಿಯ ಮರ ಇದೆ. ಈ 'ಅರ್ಪಣಕಟ್ಟಿ'ಯನ್ನು ಬಾಚಯ್ಯನವರ ಪ್ರಸಾದದ ಅರ್ಪಣದ ಕಟ್ಟಿ ಎಂದು ಹೇಳುವುದರ ಜೊತೆಗೆ ಬಾಚಯ್ಯನವರ ಸಮಾಧಿ ಗದ್ದುಗೆ ಇದೇ ಕಟ್ಟಿಯಲ್ಲಾಗಿದೆ ಎಂದು ಹೇಳುವವರೂ ಇದ್ದಾರೆ. 'ಅರ್ಪಣ' ಎಂದಾಗ ಪ್ರಸಾದದ ನೆನಪಾಗುತ್ತದೆ. (ವೀರಶೈವ ಪಾರಿಭಾಷಿಕ ಪದ 'ಅರ್ಪಣ') ಬಿಬ್ಬಿ ಬಾಚಯ್ಯ ಪ್ರಸಾದಿಕನೆಂದೇ ಪ್ರಸಿದ್ಧ— ಈ ಹಿನ್ನೆಲೆಯಲ್ಲಿ ಈ 'ಅರ್ಪಣ ಕಟ್ಟಿ' ಜಂಗಮ ದಾಸೋಹದ ಕಟ್ಟಿಯಾಗಿದ್ದಿರಬಹುದು ಎಂಬ ಸಮಾಧಾನ ಉಂಟಾಗುತ್ತದೆ. ಅತ್ಯಂತ ಸ್ಮರಣೀಯರಾದ ಮನೆಯ ಹಿರಿಯರು ನಿಧನರಾದರೆ ಅವರ ಶವಸಂಸ್ಕಾರವನ್ನು ತಮ್ಮ ಹೊಲದಲ್ಲಿಯೇ ಮಾಡಿ ಗದ್ದುಗೆ ನಿರ್ಮಿಸುವುದು ವೀರಶೈವರ ಪದ್ಧತಿ. ಈ ಹಿನ್ನೆಲೆಯಲ್ಲಿ ನೋಡಿದರೆ, 'ಬಿಬ್ಬಿ ಬಾಚಯ್ಯನ ಹೊಲದಲ್ಲಿ ಆತನ ಸಮಾಧಿ ಇದ್ದು, ಅದು ಈ ಅರ್ಪಣ ಕಟ್ಟಿ ಸ್ಥಳದಲ್ಲೇ ಆಗಿದ್ದರೆ ಅಸಂಭವವೇನಲ್ಲ. ಅಂತೂ ಇದು ಬಿಬ್ಬಿ ಬಾಚಯ್ಯನ ಹೊಲ, ಬಾಚಯ್ಯನಿಗೆ ಸಂಬಂಧಿಸಿದ ಕಟ್ಟಿ ಎಂಬುದಂತೂ ನಿಜ. ಈ

1 ಇದನ್ನು ನನಗೆ ತಿಳಿಸಿದವರು ಗೊಬ್ಬೂರಿನ ಆ ಗುಡಿಯ ಪೂಜಾರಿಗಳಾಗಿರುವ ಶ್ರೀ ವೀರಭದ್ರಯ್ಯ ಮಠಪತಿ ಮತ್ತು ಅಲ್ಲಿನ ಶಿಕ್ಷಕರಾದ ಶ್ರೀ ದೇವತ್ಕಲ್ ಶಿಕ್ಷಕರು.

‘ಅರ್ಪಣ ಕಟ್ಟೆ’ಗೆ ನಿತ್ಯ ಪೂಜೆ ಸಲ್ಲುತ್ತಿದ್ದು, ಇದರ ಪೂಜಾರಿಗಳು ಗಾಂಜಿಗುಡಿಮಠ ಎಂಬವೀರಶೈವ ಜಂಗಮರಾಗಿದ್ದು ಅವರೇ ಈ ಹೊಲದ ಉಸ್ತುವಾರಿಯನ್ನು ನೋಡಿಕೊಳ್ಳುತ್ತ ಬಂದಿದ್ದಾರೆ. ಈ ಹೊಲಕ್ಕೆ ಸಂಬಂಧಿಸಿ ಹೇಳಬೇಕಾದ ವಿಶೇಷ ಆಚರಣೆ ಎಂದರೆ ಗೊಬ್ಬೂರು ಹಾಗೂ ಸುತ್ತುಮುತ್ತಲಿನ ಜನ ಯಾರೂ ಈ ಹೊಲದಲ್ಲಿ ದನಗಳನ್ನು ಬಿಡುವುದಿಲ್ಲ, ಸುಗ್ಗಿಯಲ್ಲಿ ಕದಿಯುವುದು ಇತ್ಯಾದಿ ಮಾಡುವದಿಲ್ಲ ಮಾತ್ರವಲ್ಲ, ಚಪ್ಪಲಿ ಮೆಟ್ಟಿಕೊಂಡು ಯಾರೂ ಹೊಲದೊಳಗೆ ಪ್ರವೇಶಿಸುವುದಿಲ್ಲ. ಕಾರಣ ಕೇಳಿದರೆ, ಬಿಬ್ಬಿ ಬಾಚಯ್ಯನವರು ಶರಣರು ಎಂದು ಹೇಳುತ್ತಾರೆ. ಬಾಚಯ್ಯನವರ ಬಗ್ಗೆ ಈ ಜನತೆ ಹೊಂದಿದ ಭಯ-ಭಕ್ತಿ ಗಮನಾರ್ಹವಾದುದು.

ರಾಯಚೂರು ಜಿಲ್ಲೆಯ ಈ ಗೊಬ್ಬೂರನಲ್ಲಿ ಬಾಚಯ್ಯ, ಬಿಬ್ಬಣಯ್ಯ ಎಂಬ ಹೆಸರಿಡುವುದು ಸಾಮಾನ್ಯ. ತಲೆತಲೆಮಾರಿನಿಂದ ಬಿಬ್ಬಿ ಬಾಚಯ್ಯನ ಹೆಸರು ಇಡುವ ಈ ಪರಂಪರೆ ಬೆಳೆದು ಬಂದಿದೆ. ಈ ಊರಿನಲ್ಲಿ ಪ್ರತ್ಯೇಕವಾಗಿ ಬ್ರಾಹ್ಮಣರ ಓಣಿ ಇದ್ದು, (ಕಲಬುರ್ಗಿ ಜಿಲ್ಲೆಯ ಗೊಬ್ಬೂರಿನಲ್ಲಿ ಹೀಗೆ ಇಲ್ಲ-ಅಲ್ಲೊಂದು ಇಲ್ಲೊಂದು ೮-೧೦ ಮನೆಗಳಿವೆ). ಈ ಬ್ರಾಹ್ಮಣ ಮನೆತನದವರು ಮೇಲೆ ಹೇಳಿದ ಬಿಬ್ಬಿ ಬಾಚಯ್ಯನ ‘ಅರ್ಪಣ ಕಟ್ಟೆ’ಗೆ ನಡೆದು ಕೊಳ್ಳುವುದು, ಕಾಯಿ-ಕರ್ಪುರ ನಡೆಸುವುದು ಈಗಲೂ ಇದೆ. ಇದರ ಬಗ್ಗೆ ಕೇಳಿದರೆ, ತಾವು ಹಿಂದೆ ಬಾಚಯ್ಯನವರ ಪ್ರಸಾದವನ್ನು ನಿಂದಿಸಿ ತಪ್ಪು ಮಾಡಿದ್ದಾಗಿ ಹೇಳುತ್ತಾರೆ. ಅವರ ಅನುಗ್ರಹಕ್ಕೆ ಈ ಪೂಜೆ ಎನ್ನುತ್ತಾರೆ.

ಬಿಬ್ಬಿ ಬಾಚಯ್ಯ ಕಲ್ಯಾಣದಲ್ಲಿ ಬಸವಾದಿ ಶಿವಶರಣರ ನಡುವೆಯೇ ಬಹಳ ದಿನಗಳನ್ನು ಕಳೆದು ಕಲ್ಯಾಣ ಕ್ರಾಂತಿಗೀಡಾದಮೇಲೆ ಗೊಬ್ಬೂರಿಗೆ ಮರಳಿದನಂತೆ ಬರುವಾಗ ತನ್ನ ಜೊತೆಗೆ ಚೆನ್ನವೀರ ಹೆಸರಿನ ಜಂಗಮನನ್ನು ಅವರ ಶಿಷ್ಯರೊಂದಿಗೆ ಕರೆತಂದನಂತೆ. ಈ ಜಂಗಮರೆಲ್ಲ ಗೊಬ್ಬೂರಿಗೆ ಹೊಂದಿಕೊಂಡು ಇರುವ ಬೆಟ್ಟದಲ್ಲಿ ಇದ್ದರೆಂದು ಗೊಬ್ಬೂರಿನ ಜನ ತೋರಿಸುತ್ತಾರೆ ಈ ಬೆಟ್ಟದಲ್ಲಿ ‘ಸಿದ್ಧ ಗಣಂಗಳ’ಗವಿಗಳು ಇದ್ದು ಚೆನ್ನವೀರರು ತಮ್ಮ ಶಿಷ್ಯರೊಂದಿಗೆ ಇಲ್ಲಿ ನೆಲೆಸಿದ್ದಾಗಿ ತಿಳಿಯುತ್ತದೆ. ಈ ಚೆನ್ನವೀರರಿಗೆ ಸೂಗೂರೇಶ್ವರ ಎಂಬ ಪರ್ಯಾಯನಾಮವಿದ್ದು ಈತನ ಹೆಸರಿನಲ್ಲಿ ಕಲ್ಯಾಣ ಚಾಳುಕ್ಯರ ಕಾಲದ ಭವ್ಯ ದೇವಾಲಯವೊಂದು ಪಾಳು ಬಿದ್ದು ಈ ಬೆಟ್ಟದಲ್ಲಿದೆ. ಇಂತಹದದೇ ಹೆಸರಿನ ದೇವಾಲಯವೊಂದು ಈ ಗೊಬ್ಬರಿಗೆ ಸು. ೧೮ ಕಿ.ಮೀ ಅಂತರದಲ್ಲಿರುವ ದೇವಸೂಗುರು ಎಂಬಲ್ಲಿಯೂ ಇದ್ದು ಕರ್ನಾಟಕದ ಕೆಲವೇ ಜಾಗೃತ ಸ್ಥಾನಗಳಲ್ಲಿ ಒಂದು ಎನಿಸಿದೆ. [2]ದೇವಸೂಗುರು ಮೊದಲು ಸೂಗೂರು ಎಂದು ಹೆಸರಿದ್ದು ಇದು (ಹಿರೇ ಸೂಗೂರ; ಪಕ್ಕದಲ್ಲಿ ಚಿಕ್ಕ ಸೂಗೂರು ಇದೆ) ಮುಂದೆ ಚೆನ್ನವೀರದೇವ ನೆಲಸಿ ದೇವಸೂಗೂರು ಆದಂತೆ, ಚೆನ್ನವೀರರೂ ಸೂಗೂರಿನಲ್ಲಿ ನೆಲಸಿ ಸೂಗೂರೇಶ್ವರ ಆಗಿದ್ದಾರೆ ಎಂದು ತಿಳಿಯಬಹುದಾಗಿದೆ.

ಬಿಬ್ಬಿ ಬಾಚಯ್ಯನೊಂದಿಗೆ ಕಲ್ಯಾಣದಿಂದ ಗೊಬ್ಬೂರಿಗೆ (ಮುಂದೆ ಗೊಬ್ಬರಿನಿಂದ ದೇವಸೂಗೂರಿಗೆ) ಬಂದ ಚೆನ್ನವೀರರು ಮೂಲತಃ ಕಾಶ್ಮೀರದ ಮಹದೇವ ಭೂಪಾಲನಿಗೆ (ಈತನೇ ಮೋಳಿಗೆಯ ಮಾರಯ್ಯ) ಗುರುವಾಗಿ ತಮ್ಮ ೬೦೦೦ ಜಂಗಮರೊಂದಿಗೆಚೆನ್ನವೀರರು ಇಲ್ಲಿ ಇದ್ದರೆಂದೂ, ಕಲ್ಯಾಣ ಬಸವ ತನ್ನ ಲಕ್ಷದಾ ಮೇಲಿನ ತೊಂಭತ್ತು ಸಾವಿರ ಜಂಗಮರಿಗೆ ಇನ್ನು ಆರು ಸಾವಿರ ಜಂಗಮರನ್ನು ಸೇರಿಸುವ ಉದ್ದೇಶದಿಂದ ವ್ಯಾಪಾರಿಯ ವೇಷದಲ್ಲಿ ಕಾಶ್ಮೀರಕ್ಕೆ ಬಂದು ಭಕ್ತಿಯಿಂದ ಗುಪ್ತವಾಗಿಕಲ್ಯಾಣಕ್ಕೆ ಕರೆತಂದರೆಂದೂ ಪ್ರತೀತಿ ಇದೆ. ‘ಚೋರ ಬಸವ ಕಾವ್ಯ’‘ಮೋಳಿಗಯ್ಯನ ಪುರಾಣ’ ಎಂಬ ಕನ್ನಡ ಕೃತಿಗಳಲ್ಲಿ ಈ ಘಟನೆ ಬಂದಿದೆ. ಆದರೆ ಬಸವಣ್ಣನವರೊಂದಿಗೆ ಕಾಶ್ಮೀರದಿಂದ ಕಲ್ಯಾಣಕ್ಕೆಬಂದ ಜಂಗಮ ಸಮೂಹದ ನೇತಾರ ಶ್ರೀ ಚೆನ್ನವೀರ ರಾಗಿದ್ದರೆಂಬ ವಿಷಯವನ್ನು ಈಕೃತಿಗಳಲ್ಲಿ ಎತ್ತಿ ಹೇಳಿಲ್ಲ.ಇದನು ಈ ಕೊರತೆಯನ್ನು, ಗೊಬ್ಬೂರು ದೇವಸೂಗೂರು ಸ್ಥಳ ಪುರಾಣಗಳು ತುಂಬಿಕೊಡುತ್ತವೆ. ಚೆನ್ನವೀರನ್ನ

2 ಗೊಬ್ಬೂರಿನ ಸೂಗೂರೇಶ್ವರನ ದೇವಸ್ಥಾನದಲ್ಲಿ ಮೂರ್ತಿ ಇಲ್ಲ, ದೇವಸೂಗೂರಿನಲ್ಲಿ ವೀರಭದ್ರನನ್ನು ಹೋಲುವ ಶಿಲ್ಪವಿದ್ದು, ಸೂಗೂರೇಶ್ವರನ ವೀರಭದ್ರನ ಅವತಾರ ಎಂಬ ಜನ ನಂಬಿಕೆಗೆ ಕಾರಣವಾದಂತಿದೆ.

ಶಿಷ್ಯತ್ವವಹಿಸಿ ಬಾಚಯ್ಯ ನಿತ್ಯ ಅವರಿಗೆ 'ಅರ್ಪಣಕಟ್ಟೆ' ಯಲ್ಲಿ ದಾಸೋಹ ನಡೆಸುತ್ತಿದ್ದ ಎಂಬು ಗೊಬ್ಬುರಿನ ಐತಿಹ್ಯವನ್ನು ಗಮನಿಸಿದರೆ, ಚೆನ್ನವೀರರ ಸಂಬಂಧದ ಮೂಲಕ ಬಿಬ್ಬಿ ಬಾಚಯ್ಯ ಹನ್ನೆರಡನೇ ಶತಮಾನದ ವನಾಗುತ್ತಾನೆ. ಮಾತ್ರವಲ್ಲ, ದೇವಸೂಗೂರಿಗೆ ಹತ್ತಿರವಿರುವ ಈ ಗೊಬ್ಬೂರಿನವನೇ ಆಗುತ್ತಾನೆ.

ಚೆನ್ನವೀರರು ಗೊಬ್ಬೂರು ಬಿಟ್ಟು ದೇವಸೂಗೂ–ರಿಗೆ ಬಿಬ್ಬಿಬಾಚಯ್ಯನ ಕಾಲಾನಂತರ ಬಂದರೇ, ಮೊದಲೇ ಬಂದರೇ ತಿಳಿಯದು. ಗೊಬ್ಬೂರಿಗೆ ಬೇಸರಿಸಿ ಬಂದರೆಂದು ಜನ ಹೇಳಿಕೆಯನ್ನು ಪರಿಶೀಲಿಸಿದರೆ, ಬಾಚಯ್ಯನ ನಂತರ ದಾಸೋಹ ನಿಂತು, ಜಂಗಮ ಮಹತ್ವ ಕುಗ್ಗಿ ಗೊಬ್ಬೂರನ್ನು ತೊರೆದಿರಬೇಕು ಎಂದು ಊಹಿಸುವುದೇ ಸರಿಯೆನಿಸುತ್ತದೆ. ಚೆನ್ನವೀರರನ್ನು ದೇವಸೂಗೂರಿಗೆ ಕರೆತಂದಾತ ಆನಂದ ರಾಚಯ್ಯ ಮತ್ತು ಆತನ ಸೋದರನಂತೆ. ಈ ಆನಂದ ರಾಚಯ್ಯ, ಚೆನ್ನವೀರ ಅರ್ಥಾತ್ ಸೂಗೂರೇಶ್ವರನ ಮೇಲೆ ರಚಿಸಿದ ಪದ್ಯವೊಂದು ಇದ್ದು, ಅದರಲ್ಲಿ "ಬಿಬ್ಬಿ ಬಾಚಯ್ಯನ ವರಭಕ್ತಿಗೆ ಮನದೇವ ಬಿರುದುಳ್ಳ ಮೂರ್ತಿ ಸೂಗೂರಯ್ಯ" ಎಂಬ ಸಾಲು ಬರುತ್ತದೆ. ಸೂಗೂರಯ್ಯ ಅರ್ಥಾತ್ ಚೆನ್ನವೀರರು ಬಿಬ್ಬಿ ಬಾಚಯ್ಯನ ಮನೆದೇವ ಎಂಬ ಮಾತು ಮಹತ್ವದಾಗಿದ್ದು, ಸೂಗೂರೇಶ್ವರನ ಜೊತೆಗೆ ಬಿಬ್ಬಿಬಾಚಯ್ಯನ ಉಲ್ಲೇಖ ಚಾರಿತ್ರಕವಾಗಿ ಮುಖ್ಯವಾದುದು.

ಇಷ್ಟು ಹಿನ್ನೆಲೆಯಲ್ಲಿ ಬಿಬ್ಬ ಬಾಚಯ್ಯ ರಾಯಚೂರು ಜಿಲ್ಲೆಯ ಗೊಬ್ಬೂರಿನವನು ಎಂದು ನಿಸ್ಸಂದೇಹವಾಗಿ ತಿಳಿಯಬಹುದಾಗಿದೆ. ಕಲಬುರ್ಗಿ ಜಿಲ್ಲೆ ಗೊಬ್ಬೂರನ್ನು ಬಿಬ್ಬಿ ಬಾಚಯ್ಯನಿಗೆ ಸಂಬಂಧಿಸಿ ಇನ್ನು ಮುಂದೆ ಕೈಬಿಡಬೇಕಾಗುತ್ತದೆ.

ಕೊನೆಯದಾಗಿ ಇನ್ನು ಬಿಬ್ಬಿ ಬಾಚಯ್ಯ ಎನ್ನುವಲ್ಲಿ "ಬಿಬ್ಬಿ"ಎನನ್ನು ಸೂಚಿಸುತ್ತದೆ ? ಎಂಬುದನ್ನು ಪರೀಶಿಲಿಸಿದರೆ ಈ ಲೇಖನ ಪೂರ್ಣವಾಗುತ್ತದೆ. ವಚನ ಕಾರರ ಹೆಸರುಗಳ ಹಿಂದೆ ಸೇರಿಕೊಂಡು ಬರುವ ಪದ ಸಾಮಾನ್ಯವಾಗಿ ವೃತ್ತಿ ಸೂಚಕವೋ ಜಾತಿ ಸೂಚಕವೋ ಆಗಿರುತ್ತದೆ. ಕೆಲವು ಸಲ ಗ್ರಾಮ ಸೂಚಕವೂ ಆಗಿರುತ್ತದೆ. ಹಾಗಾದರೆ ಬಿಬ್ಬಿ ಬಾಚಯ್ಯ ಎನ್ನುವಲ್ಲಿ 'ಬಿಬ್ಬಿ' ಏನನ್ನು ಹೇಳುತ್ತಿರಬೇಕು.

ಬಿಬ್ಬಿ ಬಾಚಯ್ಯನ ಊರು ಗೊಬ್ಬೂರು ಎಂದು ತೆಲುಗು ಮತ್ತು ಕನ್ನಡ ಕೃತಿಗಳು ಉಲ್ಲೇಖಿಸುವುದರಿಂದ 'ಬಿಬ್ಬಿ' ಎಂಬುದು ಬಾಚಯ್ಯನ ಊರಿನ ಹೆಸರಾಗಲಿಕ್ಕಿಲ್ಲ.[3] ವೃತ್ತಿ ಇಲ್ಲವೆ ಜಾತಿ ಸೂಚಕ ಎನ್ನಬೇಕೆಂದರೆ 'ಬಬ್ಬಿಗೆ' ಅರ್ಥವನ್ನೆ ನಿಘಂಟುವಿನಲ್ಲಿ ಹೇಳಿಲ್ಲ 'ಬಿಬ್ಬರ, ಬಿಬ್ಬಿಱಿ' ಎಂಬ ಶಬ್ದಗಳು ಕಿಟ್ಟೆಲ್ ಕೋಶದಲ್ಲಿ ಸಿಗುತ್ತಿದ್ದು, ಅವುಗಳಿಂದ ಬಿಬ್ಬ ಇಲ್ಲವೆ ಬಿಬ್ಬ ಎಂದು ಸಿದ್ಧಿಸಿರಬೇಕೆ ? ಎಂಬುದು ನನ್ನ ಅನುಮಾನ. ಬಿಬ್ಬರ ಮತ್ತು ಬಿಬ್ಬಿಱಿಗೆ ಕ್ರಮವಾಗಿ burstingly, to burst ಅರ್ಥ ಹೇಳಲಾಗಿದೆ. burst ಎನ್ನುವುದು ಸ್ಫೋಟನ ಗುಣವನ್ನು ಹೇಳುತ್ತಿದ್ದು ಬಾಚಯ್ಯನ ಉಗ್ರತೆಯನ್ನು ಇದು ಸೂಚಿಸುತ್ತಿರಬೇಕೆ? ಗೊಬ್ಬೂರಿನ ವಿಪ್ರರು ಪ್ರಸಾದವನ್ನು ಎಂಜಲೆಂದು ಹೀಯಾಳಿಸಿದ ಸಂದರ್ಭದಲ್ಲಿ ಪ್ರಸಾದ ನಿಷ್ಠೆಯ ಬಾಚಯ್ಯ ಅವರ ಮನೆಯನ್ನು ಸುಟ್ಟುರುಹಿದ ಪ್ರಸಂಗವನ್ನು ನೆನಪಿಸಿಕೊಂಡರೆ, 'ಬಿಬ್ಬ' ಆತನ ಅಬ್ಬರ, ಉಗ್ಗಡಣೆಯನ್ನು ಹೇಳುತ್ತಿರುವ ಪದವಾಗಿಯೇ ತೋರುತ್ತದೆ. ಪಾಲ್ಕುರಿಕೆ ಸೋಮನ ತೆಲುಗು 'ಬಸವ ಪುರಾಣ'ದಲ್ಲಿ ಬಾಚಯ್ಯ ಪ್ರಸಾದದ ಬಂಡಿಯೊಂದಿಗೆ ಹೊರಾಟ ಸನ್ನಿವೇಶವನ್ನು ವರ್ಣಿಸುತ್ತ—

ಬೊಬ್ಬೆಗಳನ್ನಿಡುತುಬ್ಬಿಯಾಡುತಲಿ
ಬಿಬ್ಬಿ ಬಾಚಯ್ಯನು ಗೊಬ್ಬೂರು ಸೇರೆ"

ಎಂಬ ಸಾಲುಗಳು (ಅನುಃ ಡಾ. ಪಿ. ವಿ. ನಾರಾಯಣ) ಬರುತ್ತವೆ. ಇಲ್ಲಿ 'ಬೊಬ್ಬೆಗಳ ನಿಡುತ'ಎಂಬ ಪದ ಪ್ರಯೋಗ ಮಹತ್ವದ್ದು. ಈ 'ಬೊಬ್ಬೆ' ಇಲ್ಲಿ ಉಗ್ಗಡಣೆಯನ್ನು ಹೇಳುತ್ತಿದ್ದು. ಇದು ಬಿಬ್ಬರ, ಬಿಬ್ಬಿಱಿ ಶಬ್ದಗಳಿಂದ ಸಿದ್ಧಿಸಿದ ರೂಪವೇ ಆಗಿದೆ. ಹೀಗೆ ಬಿಬ್ಬಿ ಬಾಚಯ್ಯ ಎಂದರೆ ಉಗ್ಗಡಿಸುವ ಬಾಚಯ್ಯ ಎಂದೇ ಅರ್ಥೈಸುವುದು ಸರಿಯಾಗಿ ಕಾಣಿಸುತ್ತದೆ.

---

3 ಬಿಬ್ಬಿಗೆ 'ಬಿಬ್ಬ' ಎಂಬ ಪಾಠಾಂತರ ಇದೆ.

ಉಗ್ಗಡಿಸುವ ಕಾಯಕದ ಶರಣರು ೧೨ನೇ ಶ. ದಲ್ಲಿ, ಆನಂತರದಲ್ಲಿ ಸಿಗುತ್ತಿರುವದೂ ಗಮನಾರ್ಹವಾಗಿ (ಉದಾ : ಉಗ್ಗಡಿಸುವ ಶಾಂತ, ಕೂಗಿನ ಮಾರಯ್ಯ) ಡಾ. ಪಿ. ವಿ. ನಾರಾಯಣ ಅವರು ಬಿಬ್ಬಿಗೆ ಅರ್ಥ 'ಹಾಸ್ಯ'ವೆಂದು ಹೇಳಿ, ಬಿಬ್ಬಿ ಬಾಚಯ್ಯ ಹಾಸ್ಯ ಮಾಡುವ ಕಾಯಕದವನು ಎಂದಿದ್ದಾರೆ. 'ಬಿಬ್ಬಿ'ಗೆ ಆ ಅರ್ಥವಿರುವುದೇ ಸಂದೇಹಾಸ್ಪದವಿರುವುದರಿಂದ ಅವರ ಅಭಿಪ್ರಾಯವನ್ನು ಒಪ್ಪುವುದು ಕಷ್ಟವಾಗುತ್ತದೆ. ಅಲ್ಲದೆ, ಬಿಬ್ಬಿ ಬಾಚಯ್ಯನ ಉಗ್ರ ವ್ಯಕ್ತಿತ್ವಕ್ಕೆ ತುಂಬ ವಿರುದ್ಧವಾಗಿ ಇದು ಕಾಣಿಸುತ್ತದೆ. ಬಿಬ್ಬಿ ಬಾಚಯ್ಯನ ವಚನಗಳ ಗಾಂಭೀರ್ಯ ಕೂಡ ಇದಕ್ಕೆ ಅಡ್ಡ ಬರುತ್ತದೆ. ಸದ್ಯಕ್ಕೆ ಬಿಬ್ಬಿ ಬಾಚಯ್ಯ ಉಗ್ಗಡಿಸುವ ಕಾಯಕದವನು ಎಂದು ತಿಳಿಯುವುದು ಸರಿಯಾಗಿ ತೋರುತ್ತದೆ.

ಬಿಬ್ಬಿ ಬಾಚಯ್ಯನ ವಚನಾಂಕಿತ 'ಏಣಾಂಕಧರ ಸೋಮೇಶ್ವರ ಲಿಂಗ' ಎಂಬುದಿದ್ದು ಈಗ ಗೊಬ್ಬೂರಲ್ಲಿ ಹೆಸರಿಲ್ಲದ ಗುಡಿಗಳು ಅನೇಕ ಇದ್ದು ಇದರಲ್ಲಿ ಯಾವುದೊ ಒಂದು ಸೋಮೆಶ್ವರ ದೇವಸ್ಥಾನವಾಗಿದ್ದಿರ ಬೇಕು.

ಜಯರಾಮಯ್ಯ ಜೆ.ಟಿ.*

# ಕುಣಿಗಲ್ ನಾಡು

ಬೆಂಗಳೂರು ಹಾಸನ ರಸ್ತೆಯಲ್ಲಿ ಬೆಂಗಳೂರಿನಿಂದ ಸುಮಾರು ೭೫ ಕಿ.ಮೀ. ದೂರದಲ್ಲಿರುವ ತುಮಕೂರಿನಿಂದ ದಕ್ಷಿಣಕ್ಕೆ ಸುಮಾರು ೩೫ ಕಿ.ಮೀ. ದೂರದಲ್ಲಿರುವ ತಾಲ್ಲೂಕು ಕೇಂದ್ರವೇ ಕುಣಿಗಲು

ಬೆಂಗಳೂರು ಜಿಲ್ಲೆಯ ಸುಪ್ರಸಿದ್ಧ ಸ್ಥಳವಾದ ಶಿವಗಂಗೆಯಲ್ಲಿ ಹುಟ್ಟುವ ನಳಿನಿ, ನಾಗಿನಿ ಮತ್ತು ಕಮಲ ಎಂಬ ಝರಿಗಳು ಇಲ್ಲಿ ಐಕ್ಯವಾಗುತ್ತವೆ. ಕತೆಯೊಂದರ ಪ್ರಕಾರ ಉತ್ತರ ಭಾರತದ ರಾಜನಾದ 'ನೃಗ' ಎಂಬ ಚಕ್ರವರ್ತಿಯು ಇಲ್ಲಿ ಸ್ನಾನ ಮಾಡಿ ತನಗಂಟಿದ್ದ ಕುಷ್ಠರೋಗನನ್ನು ಕಳೆದು ಕೊಂಡನಂತೆ. ಆದುದರಿಂದಲೆ ಆ ಸ್ಥಳದಲ್ಲಿ ದೊಡ್ಡ ಕೆರೆಯೊಂದನ್ನು ಕಟ್ಟಿಸಿದನೆಂದು[1] ಹೇಳಲಾಗಿದೆ. ಕುಣಿಗಲು ಪೂರ್ವಕ್ಕೆ ಇರುವ ಕೆರೆಯೇ ಇಂದಿನ ದೊಡ್ಡಕೆರೆ.

ಈ ಸ್ಥಳಕ್ಕೆ ಕುಣಿಗಲು ಎಂಬ ಹೆಸರು ಹೇಗೆ ಬಂದಿತು ಎಂಬುದರ ಬಗ್ಗೆ ನಿಖರವಾದ ಮಾಹಿತಿಗಳಿಲ್ಲ ಸ್ಥಳನಾಮಗಳಿಗೆ ಒಂದು ಮಹತ್ವದ ಅರ್ಥ ಇದೆಯೆಂದು ಆ ಅರ್ಥವನ್ನು ಆ ಸ್ಥಳದ ಹಳೆಯ ನಾಮರೂಪವನ್ನು ಪರಿಶೀಲಿಸುವುದರ ಮೂಲಕ ಖಚಿತ ಪಡಿಸಿಕೊಳ್ಳಬಹುದೆಂದು ಇತಿಹಾಸಕಾರರು ಹೇಳಿದ್ದಾರೆ. ಅದರ ಪ್ರಕಾರ (i) ಪ್ರತಿಯೊಂದು ಸ್ಥಳನಾಮಕ್ಕೂ ಅರ್ಥ ಇದ್ದೇಇದೆ (ii) ಸ್ಥಳನಾಮಗಳು ಎದೆಂದಿಗೂ ಪೌರಾಣಿಕ ಕಥನ, ಕಾವ್ಯಕಲ್ಪನೆ ಒಳಗೊಂಡಿರುವುದಿಲ್ಲ. (iii) ಸಾಮಾನ್ಯವಾಗಿ ಸ್ಥಳನಾಮಗಳಲ್ಲಿ ಎರಡು ಘಟ್ಟಕಗಳಿದ್ದು ಒಂದು ಸಾಮಾನ್ಯ ಅರ್ಥವನ್ನು ಇನ್ನೊಂದು ವಿಶೇಷಾರ್ಥವನ್ನು ನಿರ್ದೇಶಿಸುವುದಿದೆ. (iv) ಸರಿಯಾದ ಅರ್ಥ ವಿವರಣೆ ನೀಡಬೇಕಿದ್ದರೆ ಉಪಭಾಷೆ, ಧ್ವನಿಶಾಸ್ತ್ರ, ಸ್ಥಳೀಯ ಚಾರಿತ್ರಿಕ ದಾಖಲೆ ಮುಂತಾದವುಗಳೊಂದಿಗೆ ಪ್ರಾಚೀನ ತಮ ವಿಶ್ವಸನೀಯ ರೂಪವನ್ನು ಕಂಡು ಹಿಡಿಯುವುದು ಅಗತ್ಯ.

ಪ್ರಸ್ತುತ ಕುಣಿಗಲು ಸ್ಥಳಕ್ಕೆ ನಾಮ ನಿಷ್ಪತ್ತಿಯನ್ನು ಈ ಕೆಳಕಂಡ ಎರಡು ಮೂಲಗಳಿಂದ ಬಂದಿರಬಹುದೆಂದು ಹೇಳಬಹುದಾಗಿದೆ. ಶಾಸನಗಳು ಕಂಡು ಬರುವ ಕುಣಿಂಗಿಲ್, ಕುಣುಂಗಿಲ್ ಎಂಬ ಶಬ್ದ ಪ್ರಯೋಗಗಳಿವೆ. ಈ ಶಬ್ದಗಳು ಸಸ್ಯಸಂಪತ್ತನ್ನು ಮತ್ತು ಖನಿಜ ಸಂಪತ್ತನ್ನು ಅರ್ಥೈಸುತ್ತವೆ. ಕುಣಿಂಗ್ + ಇಲ್ → ಕುಣಿಂಗಿಲ್ → ಕುಣಿಗಿಲ್ → ಕುಣಿಗಲು ಎಂದಾಗಿರಬೇಕು. ಕುಣಿಂಗ್ ಎಂದರೆ ಗುರಗಂಜಿ ಗಿಡ[2] ಇಲ್ ಎಂದೆರೆ ಪ್ರದೇಶ ಮನೆ. ಗುರುಗಂಜಿ ಗಿಡಗಳು ಎಲ್ಲ ಕಡೆಯಲ್ಲಿಯೂ ಹೆಚ್ಚಿಗೆ ಕಂಡುಬರುವುದಿಲ್ಲ. ಆದರೆ ಇಲ್ಲಿ ಸಾಮಾನ್ಯವಾಗಿ ಕಂಡು ಬರುತ್ತವೆ. [ಕುಣಿ–ಎಂದರೆ ನಂದಿವೃಕ್ಷ ಎಂದು ಸಹ ಕರೆಯಲಾಗಿದೆ. ಅಮರಕೋಶ ದ್ವಿತೀಯ ಕಾಂಡ ೧೭೭ನೆಯ ಶ್ಲೋಕ]

* ಇತಿಹಾಸ ಉಪನ್ಯಾಸಕರು, ವಿವೇಕಾನಂದ ಪದವಿ ಪೂರ್ವ ಕಾಲೇಜು ರಾಜಾಜಿನಗರ, ಬೆಂಗಳೂರು-೫೬೦ ೦೧೦

1 ತುಮಕೂರು ಜಿಲ್ಲಾ ದರ್ಶನ-ಪು. ೧೭೯

2 ದಿ.ಇದಿ. ಡ್ರವಿಡಿಯನ್ ಎಟಿಮಲಾಜಿಕಲ್ ಡಿಕ್ಷನರಿ, ೧೯೬೪, ಪು. ೧೭೦.

ಮೂಲದ ಬಗ್ಗೆ ಮತ್ತೊಂದು ನಿಷ್ಪತ್ತಿಯನ್ನು ಕೂಡ ಗಮನಿಸಬಹುದಾಗಿದೆ. ಕುಣಿ+ಇಂಗು→ಕುಣಿಂಗ್→ ಕುಣಿಗಲ್ ಎಂದಾಗಿರುವ ಸಾಧ್ಯತೆ ಕೂಡ ಇದೆ. ಕುಣಿ–ಸಂಕುಚಿತ ಗೊಂಡಿರುವ ಕಲ್ಲು ಮತ್ತು ಇಂಗು ಎಂದರೆ ಒಣಗು, ಬತ್ತು, ಅಡಗು, ಎಂದು ಅರ್ಥ ಇದೆ[3] ಇಂದಿಗೂ ಸಹ ಕುಣಿಗಲ್ಲು ಸುತ್ತಮುತ್ತ ಸಣ್ಣ ಸಣ್ಣ ಕಲ್ಲುಗಳಿರುವ ಗುಡ್ಡಗಳನ್ನು ಕಾಣಬಹುದು. ಬಹುಶಃ ಮಳೆಯ ನೀರು ಬಹಳ ಬೇಗ ಇಂಗುತ್ತಿತ್ತು. ಅಥವ ಒಣಗುತ್ತಿತ್ತು. ಇದರಿಂದಾಗಿ ಎರಡು ವಿಷಯು ಗಳ ಸಮ್ಮಿಶ್ರದಿಂದಾಗಿ ಈ ಹೆಸರು ಬಂದಿರುವ ಸಾಧ್ಯತೆ ಇದೆ.

ಕತೆಯ ಪ್ರಕಾರ ಶಿವನು ಇಲ್ಲಿಯ ಪ್ರಕೃತಿಯ ರಮಣೀಯ ಚೆಲುವನ್ನು ಕಂಡು ಕುಣಿದನಂತೆ (ನೃತ್ಯ) ಶಿವನು ನರ್ತಿಸಿದಾಗ ಅಲ್ಲಿದ್ದ ಕಲ್ಲುಗಳು ಕೂಡ ಕುಣಿದವಂತೆ ಶಿವ ಕುಣಿದ ಕಲ್ಲು ಕುಣಿಗಲು ಎಂದಾಯಿತು ಎಂದಿದ್ದಾರೆ.

ಕರ್ನಾಟಕದಲ್ಲಿ ರಾಜ್ಯವಾಳಿದ ಅರಸರಲ್ಲಿ ತಲಕಾಡಿನ ಗಂಗರಿಂದ ಮೈಸೂರು ಒಡೆಯರ ಕಾಲದ ವರೆಗಿನ ಶಿಲಾ ಶಾಸನಗಳು ಇಲ್ಲಿ ಸಿಗುತ್ತವೆ. ಮಾಗಡಿ ತಾಲ್ಲೂಕು ಕುಪ್ಪೆ ಪಾಳ್ಯದಲ್ಲಿ ಸಿಕ್ಕಿರುವ ಶಾಸನದ ಪ್ರಕಾರ ಗಂಗರ ೩ನೆಯ ಶಿವಮಾರನು ಕುಣಿಂಗಿಲ್ ನಾಡಿನ ರಾಜ್ಯಪಾಲನಾಗಿದ್ದನೆಂದು ಗೊತ್ತಾಗುತ್ತದೆ.

ಹಿಂದಿನ ರಾಜರುಗಳು ಆಡಳಿತದ ಅನುಕೂಲ ಕ್ಕಾಗಿ ರಾಜ್ಯವನ್ನು ವಿಷಯುಗಳು, ಮಂಡಲ, ನಾಡು ಎಂಬುದಾಗಿ ವಿಂಗಡಿಸುತ್ತಿದ್ದರು. ಕುಣಿಗಲು ಹೊಯ್ಸಳರ ಕಾಲದಲ್ಲಿ ಇಂತಹ ಒಂದು ಆಡಳಿತ ಘಟಕ ವಾಗಿತ್ತು ಎಂಬುದು ಕ್ರಿ.ಶ. ೧೧೧೭ರ ಈ ಶಾಸನದಿಂದ ಕಂಡುಬರುತ್ತದೆ.

ಶ್ರೀ ಮನ್ಮಾಹಾ ಮಂಡಳೇಶ್ವರ ತ್ರಿಭುವನಮಲ್ಲ
ತಲಕಾಡು ಕೊಂಡ ಭುಜಬಳ ವೀರಗಂಗ
ಹೊಯ್ಸಳ
ದೇವರು ಪೃಥ್ವೀ ರಾಜ್ಯಂಗೆಯ್ಯೆ ಕುಣಿಗಲು
ನಾಡ
ಕಾವಗೌಡನ ಹಳ್ಳಿಯ ರಾಮೇಶ್ವರ ದೇವರಿಗೆ
ಕಾಳಾಯುಕ್ತ
ಸಂವತ್ಸರದ ಅಸ್ವೀಜ ಸುದ್ದ ಪಂಚಮಿ
ಸೋಮವಾರದಂದು....[4]

ಮೈಸೂರು ಒಡೆಯರ ಕಾಲದಲ್ಲಿ ೧೮ ಆಡಳಿತದ ವಿಭಾಗಗಳು ಇದ್ದವು. ಅದರ ಒಂದು ವಿಭಾಗದ ಉಲ್ಲೇಖ ಇಲ್ಲಿನ ಶಾಸನದಲ್ಲಿ ಕಂಡುಬರುತ್ತದೆ.

ಸ್ವಸ್ತಿಶ್ರೀ ವಿಜಾಯಭ್ಯುದಯ ಶಾಲಿವಾಹನ
ಶಕ
ವರ್ಷಂಗಳು ೧೬೮೬ ಸಂದ ವರ್ತಮಾನವಾದ
ತಾರಣ
ಸಂವತ್ಸರದ ಚೈತ್ರ ಶು. ೫ರಲ್ಲು ಶ್ರೀ
ಮದ್ರಾರಾಜಾಧಿ ರಾಜ
ರಾಜ ಪರಮೇಶ್ವರಪ್ರತಿಮ ಪ್ರೌಢ
ಪ್ರತಾಪವೀರ
ನರ ಪತಿ ಮಹಿಶೂರ ಶ್ರೀ ಕೃಷ್ಣರಾಜ
ವಡೆಯರೈನವರು
ಅಂಣ್ಯ ಶಾಸ್ತ್ರಿಗಳಿಗೆ ಬರೆಸಿ ಕೊಟ್ಟ ಭೂದಾನ
ತಾಂಮ್ರ ಶಾಸನದ
ಕ್ರಮವೆಂತೆಂದರೆ ಪಟ್ಟಣದ ಹೋಬಳಿ
ವಿಚಾರದ ಚಾವಡಿ
ಹುಲಿಯೂರು ದುರ್ಗ ಸ್ಥಳದ....[5]

**೫೦೦ ವರಹಗಳ ನಾಡು :** ಗುಬ್ಬಿಯ ೬೧ ನೆಯ ಶಾಸನವು ಈ ಬಗ್ಗೆ ವಿವರಗಳನ್ನು ನೀಡುತ್ತದೆ. ಚಾಲುಕ್ಯರ ರಾಜ ಬಾಲವರ್ಮ, ಅವನ ಮಗ ಯಶೋವರ್ಮ ಅವನ ಮಗ ವಿಮಲಾದಿತ್ಯರ ಬಗ್ಗೆ ತಿಳಿಸುತ್ತದೆ. ವಿಮಲಾದಿತ್ಯನು ಐದುನೂರು ವರಹಗಳ ನಾಡಗಿದ್ದ ಕುಣಿಂಗಿಲ್ ವಿಭಾಗಕ್ಕೆ ರಾಜ್ಯಪಾಲ ನಾಗಿದ್ದನು.[6]

---

3 —"—೪೩೦—ಪು. ೪೦
4 ಎಪಿಗ್ರಾಫಿಯ ಕರ್ನಾಟಕ ಸಂ. ೧೨-ಪು. ೮೭
5 —"—"—ಪು. ೯೮
6 —"—"—ಪು. ೮೮

ಅರಮನೆಗಳು, ದೇವಾಲಯಗಳು, ಸ್ಮಾರಕಗಳು, ಕೋಟೆ ಕೊತ್ತಲಗಳು ಗತ ಇತಿಹಾಸದ ಕುರುಹು ಗಳಾಗಿವೆ. ಕೋಟೆಗಳಲ್ಲಿ ಮೂರು ಪ್ರಕಾರಗಳು ಕಂಡುಬರುತ್ತವೆ. ಗಿರಿದುರ್ಗ, ಜಲದುರ್ಗ, ಸ್ಥಳ ದುರ್ಗ, ಕುಣಿಗಲುನಲ್ಲಿ ಕಂಡುಬರುವುದು ಸ್ಥಳದುರ್ಗದ ಅವಶೇಷ ಗಳು ದೊಡ್ಡಕೆರೆಯ ಹಿಂಭಾಗದಲ್ಲಿ ದೇವಾಲಯಕ್ಕೆ ಹೊಂದಿಕೊಂಡಂತೆ ಸುಮಾರು ೩೦೦ ಮೀಟರ್ ಉದ್ದದ ಪಾಳುಕೋಟೆಯ ಗೋಡೆಯನ್ನು ಕಾಣ ಬಹುದಾಗಿದೆ. ರಾಷ್ಟ್ರಕೂಟರ ರಾಜ ೧ನೆಯ ಧ್ರುವನ ಮಗ ವೀರ ಕಂಬರಾಯನ ಕಾಲದಲ್ಲಿ ಕೋಟೆ ಯನ್ನು ಕಟ್ಟಲು ಪ್ರಾರಂಭ ಮಾಡಿರಬೇಕು. [ಧ್ರುವನು ಗಂಗರ ರಾಜ ಶಿವಮಾರನನ್ನು ಸೋಲಿಸಿ ಸೆರೆಯಲ್ಲಿಟ್ಟ ನಂತರ ಬಹುಶಃ ಈ ವೀರ ಕಂಬರಾಯನನ್ನು ಈ ಭಾಗದ ಆಡಳಿತ ನೋಡಿಕೊಳ್ಳಲು ನೇಮಿಸಿರಬಹುದು][7] ಕುಣಿಗಿಲ್‌ನಲ್ಲಿ ಕಟ್ಟಿದ ಕೋಟೆಗೆ ನಾಲ್ಕು ಮಹಾದ್ವಾರ ಗಳು ಇದ್ದವು. ಅವುಗಳಲ್ಲಿ ಒಂದು ಬಾಗಿಲ ಹೆಸರು ಮೈಸೂರು ಹೆಬ್ಬಾಗಿಲು ಎಂಬುದಾಗಿ ಶಾಸನದಿಂದ ಕಂಡುಬರುತ್ತವೆ.[8]

ಹೊಯ್ಸಳ ರಾಜ ಸೋಮೇಶ್ವರನು (ಕ್ರಿ.ಶ. ೧೨೩೪–೧೨೬೩] ತನ್ನ ಮಕ್ಕಳಿಬ್ಬರಿಗೆ ರಾಜ್ಯವನ್ನು ಹಂಚಿಕೊಡುವಾಗ ತುಮಕೂರು ಪ್ರಾಂತ್ಯಕ್ಕೆ ಸೇರಿ ಕೊಂಡಂತೆ ಉರ್ಡಿಗೆರೆಯಿಂದ ಹೆಬ್ಬೂರಿನವರಗೆ ೩ನೆಯ ನರಸಿಂಹನಿಗೂ [ಕ್ರಿ.ಶ. ೧೨೬೩–೯೩], ಕುಣಿಗಲು ಮತ್ತು ತಮಿಳು ನಾಡಿನ ಭಾಗಗಳನ್ನು ರಾಮನಾಥನಿಗೂ [೧೨೬೩–೯೫] ಹಂಚಿಕೊಟ್ಟಿದ್ದನು. ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಇದು ಪ್ರಸಿದ್ಧವಾದ ಆಡಳಿತ ಕೇಂದ್ರವಾಗಿತ್ತು ಎಂಬುದಕ್ಕೆ ಇವರ ಕಾಲದ ಶಾಸನಗಳು ಕುಣಿಗಲ್ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ದೊರೆಯುತ್ತವೆ. ಉದಾ :

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೫೨೧ಯ ವಿಕಾರಿ ಸಂವತ್ಸರದ ಜೇಷ್ಟ ಬ೧೩ಲು ಚತುರ್ಥ ಗೋತ್ರದ ಯಲಹಂಕ ನಾಡಪ್ರಭು ಯಿಂಮಡಿ ಹಿರೀ ಕೆಂಪಯ್ಯ ಗೌಡರೆಯ್ಯ ನವರ ಪುಣ್ಯ ಸ್ತ್ರೀಗಳಾದ ವೆಂಕಟ ಕ್ರುಷ್ಣಾ ಜಂಮ್ಮ ನವರು ಮಾಡಿದ ಅಗ್ರಹಾರಕೆ ಥಾನ ಧರ್ಮ ಸಾಧನ

> ಸಿಲಾ ಶಾಸನ ಕ್ರಮ ವೆಂತೆಂದರೆ ನಂಮ
> ಕುಣಿಗಿಲಿಗೆ ಸಲುನ ಪಡುವ ದಿಕ್ಕಿನಲ್ಲಿ
> ಕಟ್ಟಿ ದೇವೇಂಕಟ ಕ್ರುಷ್ಣ ಸಾಗರ ಗ್ರಾಮ....[9]

ಈಗ ಈ ಗ್ರಾಮದಲ್ಲಿ ಜನವಸತಿ ಇಲ್ಲವಾಗಿದೆ. ಈ ಗ್ರಾಮಕ್ಕೆ ೩೦ ಖಂಡುಗ ಬತ್ತಬೆಳೆಯುವ ಗದ್ದೆ ಯನ್ನು ತಮ್ಮ ಅತ್ತೆ ಲಿಂಗಾಜಮ್ಮ ಮತ್ತು ಮಾವ ಯಿಂಮ್ಮಡಿ ಕೆಂಪೇಗೌಡರೆಯ್ಯನವರಿಗೂ ಪುಣ್ಯವಾಗಲಿ ಎಂದು ದತ್ತಿಬಿಟ್ಟಕೊಟ್ಟ ವಿಷಯ ಈ ಶಾಸನದಲ್ಲಿ ರೂಪಿತವಾಗಿದೆ.

ಇಂದು ಕುಣಿಗಲ್‌ನಲ್ಲಿ ಹಲವು ಪುರಾತನ ದೇವಾಲಯಗಳನ್ನು ಕಾಣಬಹುದಾಗಿದೆ. ಪ್ರಮುಖ ವಾದವುಗಳೆಂದರೆ ನರಸಿಂಹ ದೇವಾಲಯ ಪದ್ಮೇಶ್ವರ ದೇವಾಲಯ, ಸೋಮೇಶ್ವರ ದೇವಾಲಯ, ಗಣೇಶ, ಆಂಜನೇಯ ದೇವಾಲಯ ಮೊದಲಾದವುಗಳು. ಇಂದು ಕೃಷಿ, ರೇಷ್ಮೆ ಮತ್ತು ಅಶ್ವ ತಳಿಗೆ ಹೆಸರಾಗಿರುವ ಈ ಪ್ರದೇಶವು ತುಮಕೂರು ಜಿಲ್ಲೆಯಲ್ಲಿಯೇ ಹೆಸರಾಂತ ತಾಲ್ಲೂಕಾಗಿದೆ.

ಈ ಪ್ರಬಂಧವನ್ನು ರಚಿಸಲು ಮಾರ್ಗದರ್ಶನ ನೀಡಿದ ದೇವರ ಕೊಂಡಾರೆಡ್ಡಿ, ಕೆ.ಆರ್. ಗಣೇಶ್ ಮತ್ತು ಪಿ.ವಿ. ಕೃಷ್ಣಮೂರ್ತಿಯವರಿಗೆ ನಾನು ಅಭಾರಿ ಯಾಗಿದ್ದೇನೆ.

---

7 ಎಪಿಗ್ರಾಫಿಯ ಕರ್ನಾಟಿಕಾ ಸಂ. ೧೨–ಪು. ೮೯

8 —"—"—ಪು. ೮೯

9 —"—"—ಪು. ೧೦೮

ಎಂ.ಜಿ. ನಾಗರಾಜ್*

# ಕೊಡಗಿನ ಕಲ್ಲ್‌ಬೋಟಿಗಳು (ಮೇಟಿ ಕಂಬಗಳು !)

ಒಕ್ಕಲುಕಣದ ನಡುವೆ ಇರುವ ಮರದ ಅಥವಾ ಕಲ್ಲಿನ ಕಂಬಕ್ಕೆ ಮೇಟಿ, ಮೇಂಟಿ ಮೇಟಿಕಂಬ ಎಂದೆಲ್ಲ ಹೆಸರು ಹೇಳುವುದುಂಟು. ಅದನ್ನು 'ಗೋಸಾಸ' ದೊಡನೆ ನಂಟು ಹಾಕುವುದುಂಟು. ಎತ್ತು, ಕೃಷಿ, ಧರ್ಮ, ದೈವ, ಹಬ್ಬ, ಬಲಿ ಇತ್ಯಾದಿ ಸಂಬಂಧಗಳೂ ಪೌರಾಣಿಕವಾಗಿ ಹಾಗು ಐತಿಹಾಸಿಕವಾಗಿ ಅದಕ್ಕೆ ಇದ್ದು ಗಮನ ಸೆಳೆಯುತ್ತದೆ. ಇತಿಹಾಸ ಪೂರ್ವಕಾಲದ ಪವಿತ್ರ ಧಾರ್ಮಿಕ ಆಚಾರದ ಒಂದು ರೂಪಾಂತರ ಇದರಲ್ಲಿ ಅಡಕಗೊಂಡಿರುವಂತಿದೆ. ಸ್ತಂಭ ಪೂಜೆಯ ಇತಿಹಾಸವೂ ಇದರಲ್ಲಿ ಮೇಳೈಸಿದೆನ್ನುವಂತಿದೆ. ಸೈಂಧವ ಸಂಸ್ಕೃತಿಯ ಲಿಂಗಶಿಲ್ಪದ ಚಹರೆಗಳನ್ನು ತೋರುವ, ಮೂಲಮನೆ ಕಟ್ಟ್ಮೋಣದ ಅವಿಭಾಜ್ಯ ಅಂಗವಾಗಿರುವ ಜನಪದ ಆಚಾರಗಳು ಹಾಗು ಮೇಲೆ ಸೂಚಿಸಿದ ಸಂಬಂಧಗಳನ್ನು ಹೊಂದಿ ಕೊಡವ ಭಾಷೆಯಲ್ಲಿ 'ಕಲ್ ಬೋಟಿ'ಗಳೆಂದು ಕರೆಸಿಕೊಳ್ಳುವ ಮೇಟಿಸ್ತಂಭಗಳು ಕೊಡಗಿನಲ್ಲಿ ಐನ್‌ಮನೆಯ ಹಟ್ಟಿಯಲ್ಲಿ ಕಾಣಬರುವುದು ಸಾಮಾನ್ಯ. ಇಲ್ಲಿ ಅದು ನಡೆದು ಬಂದ ದಾರಿಯನ್ನು ತೌಲನಿಕವಾಗಿ ಗಮನಿಸುವ ಪ್ರಯತ್ನವಾಗಿದೆ.

ಕೊಡಗಿನಲ್ಲಿ ಸುಗ್ಗಿ ಕಂಬ-ಕಟ್ಟೆ ಹಬ್ಬದಲ್ಲಿ ಬೇಟೆಯ ಪ್ರಾಣಿಗಳನ್ನು ದೇವರ ಕೆರೆಯಲ್ಲಿ ಮುಳುಗಿಸಿಡುವುದು, ಭದ್ರಕಾಳಿ ಹಬ್ಬದಲ್ಲಿ ತಲೆಗೆ ಕೊಂಬನ್ನು ಹಿಡಿದು ಆಡುವ ಕೊಂಬಾಟ, ಹಾಗು ಹುಲ್ಲು ಕೊಂಬುಗಳನ್ನು ಧರಿಸಿ ಆಡುವ ಆಟ, ಕಲ್ಲುಬೋಟಿಗಳ ಶಿಲ್ಪ ಹಾಗು ತುದಿಯ ಆಕಾರ—ಇವೆಲ್ಲ ಎತ್ತು, ಒಕ್ಕಲು, ದೈವ, ದಾನ, ಧರ್ಮ, ಆಳು-ಒಡೆಯ ಸಂಬಂಧಗಳೂ ಇಲ್ಲಿನ ಕಲ್‌ಬೋಟಿಗಳಾಗಿವೆ. ಅಂತಾಗಿ ಕನ್ನಡ ಭಾಷೆಯ 'ಮೇಟಿಕಂಬ' ಕೊಡಗಿನ 'ಕಲ್‌ಬೋಟಿ'ಗೆ ಸಂವಾದಿಯಾಗುತ್ತದೆ. ಆ 'ಬೋಟಿ'ಯ ವೈವಿಧ್ಯ ವಿಸ್ತಾರವನ್ನು ಪರಿಚಯಿಸಲು ಸಹಾಯಕವಾಗುತ್ತದೆ.

ಬಾದಾಮಿ ಚಾಲುಕ್ಯರ ಅಂತ್ಯಕಾಲದಲ್ಲಿ ಆರಂಭವಾಗಿ ರಾಷ್ಟ್ರಕೂಟರಲ್ಲಿ ಬೆಳೆದು ಕಲ್ಯಾಣಿ ಚಾಲುಕ್ಯರ ಆರಂಭದ ಅವಧಿಯಲ್ಲಿ ಬೆಳವಣಿಗೆ ಕಳೆದುಕೊಂಡ 'ಗೋಸಾಸ' ಕಂಬಗಳ[1] ನಂಟನ್ನು ಮೇಟಿಕಂಬಗಳಿಗೆ ಹೊಂದಿಸಿರುವುದುಂಟು. ರಾಷ್ಟ್ರಕೂಟರ ಶಾಸನ ರೀತ್ಯಾ 'ಗೋಸಹಸ್ರ'(> ಗೋಸಾಸ)ದಲ್ಲಿ ಮುಖ್ಯವಾಗಿ ಕೃಷಿ ಸಂಬಂಧದ ತಾಂತ್ರಿಕ ಸಂಸ್ಕೃತಿ ಕಾಣುತ್ತದೆ; ಈ 'ಗೋಸಾಸ' ಕಂಬಗಳ ಮೇಲೆ ನೇಗಿಲ ಚಿಹ್ನೆಯ ಸೂಚನೆ ಇದೆ; ಮೇಟಿ ಸಾಸಿರ್ವರು, ಎಂದಿರುವಲ್ಲಿ, ಆಳುಗಳಿಗೆ ಒಕ್ಕಲುಕಣದ ಸ್ತಂಭ ನಿಲ್ಲಿಸುವಲ್ಲಿ ನೀಡುತ್ತಿದ್ದ

* ನಂ. ೨೯, ಮಹಡಿ, ೨ನೆಯ ಅಡ್ಡರಸ್ತೆ, ಶ್ರೀರಾಮನಗರ, ಮಹಾಲಕ್ಷ್ಮಿಪುರ, ಬೆಂಗಳೂರು-೫೬೦೦೮೬

1 ಎಂ.ಎಂ. ಕಲಬುರ್ಗಿ : ಐತಿಹಾಸಿಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೧, ಪು. ೨೬

ದಾನದ ಸಂಗತಿಯೂ ಇದೆ.[2] ಆಯದವರಿಗೆ ಆಳು ಕೃಷಿಕನಿಗೆ ಬೆಳೆಯ ಪಾಲು ಕಲ್ಲುಬೋಟಿಯ ಬಳಿ ನೀಡುವ ಪದ್ಧತಿ ಈಗಲೂ ಇದೆ.

ಸಾಮಾನ್ಯವಾಗಿ ಮನೆತನದ ಹಿರಿಯರು ಕಟ್ಟಿದ ಮೂಲ ಮನೆಯಾದ 'ಐನ್‌ಮನೆ'ಯ ಒಂದು ಅವಿಭಾಜ್ಯ ಅಂಗವಾಗಿ ಮನೆಯ ನೈರುತ್ಯ ಮೂಲೆ/ಪಾರ್ಶ್ವದಲ್ಲಿ ಈ ಬೋಟಿಗಳಿರುತ್ತವೆ. ಒಕ್ಕಲುಕಣದಲ್ಲಿ, ಮನೆಯ ಮುಂದಿನ ಅಂಗಳದಲ್ಲಿ ಇರುತ್ತವೆ. ಕೆಲವೆಡೆ ಮನೆಯ ನಾಲ್ಕೂ ಕಡೆ ಎರಡೆರಡು ಸಂಖ್ಯೆಯಲ್ಲಿ ನಿಂತಿರುವುದುಂಟು. ಸನಿಹದಲ್ಲಿ ಪತ್ತಾಯ (ಭತ್ತದ ಕಣಜ) ಇರುವುದುಂಟು. 'ಮನೆಗೊಂದು ಬೋಟಿ ಕಣಕ್ಕೊಂದು ಬೋಟಿ' ಎಂಬ ಮಾತೇನೋ ಇದೆ. ಆದರೆ ತಕ್ಕ ಮುಖ್ಯಸ್ಥರ, ಗೌಡ ಮುಖ್ಯಸ್ಥರ ಹಟ್ಟಿಯಲ್ಲಿ ಇವು ಇರಲೇಬೇಕೆಂಬ ಅಧಿಕಾರ ನಿಮಿತ್ತ ರಾಜನಿಯಮವಿತ್ತಂತೆ. ವಸ್ತುಶಃ ಈ ಮುಖ್ಯಸ್ಥರ ಹಟ್ಟಿಗಳಲ್ಲಿ ಇಂದೂ ಕಾಣಬರುವುದುಂಟು. ವ್ಯವಸಾಯದ ಅಧಿದೇವತೆ ಇಗ್ಗುತಪ್ಪನಿಗೆ ಪಾಡಿ ನಾಲ್ಕುನಾಡು—ನಾಪೋಕ್ಲು ನಾಡಿನಲ್ಲಿ ಕಲ್‌ಬೋಟಿಗಳು ಆಗಿಬರದು ಎಂಬ ಅಚ್ಚರಿಯ ಅಂಶವಿದ್ದದ್ದೂ, ಒಂದು ಕಾಲಕ್ಕೆ ಅಲ್ಲಿ ಅವು ಇದ್ದ ಕುರುಹಾಗಿ ಆ ದೇವರಿಗೆ ಇಂದೂ ಹೋಗುವ ಎತ್ತು ಪೊರಟ, ನಡೆಯುವ ಅಕ್ಕಿ ತುಲಾಭಾರ, ವ್ಯಕ್ತಿಯೇ ಒಯ್ಯುವ ಪಾಲು ಬೈನಾಡು ಇತ್ಯಾದಿ ಅಂಶಗಳೇ ಸಾಕ್ಷಿ ಆಗಿವೆ. ಅಲ್ಲದೆ ಮೇಲಿನ ಮಾತಿಗೆ ಅಪವಾದವಾಗಿ ಕುಟ್ಟಂಜೆಟ್ಟಿರ ಐನ್‌ಮನೆಯ ಅಂಗಳದಲ್ಲಿ ಇಂದಿಗೂ 'ಅತ್ತಪಟ್ಟೆ' ಅಥವಾ 'ಅತ್ತಬೋಟಿ' ಕೊಡವ ಭಾಷೆಯಲ್ಲಿ ('ಅತ್ತ', ಎಂದರೆ 'ದನಕರು' ಎಂದರ್ಥ) ಅಂದರೆ ಎತ್ತ ಕಲ್‌ಬೋಟಿ ಇರುವುದೇ ಸಾಕ್ಷಿ ಆಗಿದೆ. ಆದರೆ ಇಲ್ಲಿಂದ ಮೊದಲು ಇಗ್ಗುತಪ್ಪನಿಗೆ ಹೋಗುತ್ತಿದ್ದ ಎತ್ತು ಪೊರಟ ಇಂದು ಹೋಗುತ್ತಿಲ್ಲ. ಬದಲು ಮನೆಯ ವ್ಯಕ್ತಿ ತಾನೇ 'ಪಾಲು ಬೈನಾಡು' ಒಯ್ಯುತ್ತಾರೆ.[3]

ಕೃಷಿ–ಒಕ್ಕಲು ಕೆಲಸ, ಭತ್ತದ ದಾನ, ಧರ್ಮ, ದೇವಾಚಾರ, ದನಕರು ಸಂಬಂಧ, ಈ ಸ್ತಂಭಗಳ ಅಸ್ತಿತ್ವದೊಡನೆ ಮೇಳೈಸಿದೆ. ಹುತ್ತರಿ ಕದಿರು ಹಾಕಿ, ಸೆರೆಕಟ್ಟುವಲ್ಲಿ ಈ ಸ್ತಂಭ ಮನೆಯ ಆಸ್ತಿಯ ಭಾಗವೆಂದೂ ಪರಿಗಣನೆ ಇದೆ. ಹಾಲೇರಿ ಅರಸರ ಅಪ್ಪಂಗಳ ಅರಮನೆ, ಗರ್ವಾಲೆ ಅರಮನೆ ಇತ್ಯಾದಿ ಜಳ ಪಂಸ್ಯ ಭೂಮಿಗೆ ಸಂಬಂಧಿಸಿದಂತೆ ಸಂಬಂಧಿಸಿದ ಅರಮನೆಯ ಹಟ್ಟಿಯಲ್ಲಿ ಈ ಬೋಟಿಗಳು ಅಧಿಕಾರ ಮಾನ್ಯತೆಯ ಸಂಕೇತಗಳಾಗಿಯೂ ಇದ್ದಂತೆ ತೋರುತ್ತದೆ. ಪ್ರಾಯಶಃ ಗ್ರಾಮತಕ್ಕ, ದೇವತಕ್ಕ, ಗ್ರಾಮಗೌಡರಲ್ಲಿನ ಬೋಟಿಗಳೂ ಈ ಸಂಪ್ರದಾಯ ಕಾರಣ ಅಸ್ತಿತ್ವದಲ್ಲಿರುವಂತಿದೆ. ಕೆಲವೆಡೆಈ ಬೋಟಿಗೆ ಕಟ್ಟಿ ಹಾಕಿ ತಪ್ಪಿಗೆ ಶಿಕ್ಷೆ ವಿಧಿಸುತ್ತಿದ್ದರೆನ್ನಲಾಗಿದೆ.

**ಕಲ್‌ಬೋಟಿಗಳ ವರ್ಗೀಕರಣ** : ಸಾಮಾನ್ಯವಾಗಿ 'ಕಲ್‌ಬೋಟಿ' ಎಂಬ ಹೆಸರಿನೊಡನೆ ಮೇಟಿ ಕಂಬ ಅರ್ಥ ಹೊತ್ತಿದ್ದರೂ, ಇವುಗಳ ಸ್ವರೂಪ, ಕೂಡಿರುವ ಕ್ರಿಯೆಗಳ ಹಿನ್ನೆಲೆಯಲ್ಲಿ ವಿಂಗಡಣೆಯ ಅವಶ್ಯಕತೆ ಇದೆ. ಇವಲ್ಲಕ್ಕೂ ಹುತ್ತರಿಯಲ್ಲಿ ಭತ್ತದ ಕದಿರು ಕಟ್ಟುವುದು ಸಾಮಾನ್ಯ. ಈ ಬೋಟಿ ಹಾಗು ಓಣಿ ದಾಟಿದರೆ ಕಾಣುವುದೇ ಗದ್ದೆ.

**ಸಾಜಕಲ್ ಬೋಟಿ :** ಎಲ್ಲೆಡೆ ಒಕ್ಕಲುಕಣದಲ್ಲಿ ಕಾಣಬರುವ ಈ ಬೋಟಿಗಳು ಸಾಮಾನ್ಯ ಸಹಜ ನಿರಾಶ್ರಯ ರೂಪದವಾಗಿ ಮನೆಯ ಹಿಂಪಾರ್ಶ್ವದ ಕಣಗಳಲ್ಲಿರುತ್ತವೆ. ವಿನ್ಯಾಸದಲ್ಲಿ ಉರುಟಾಕಾರ ಅಥವಾ ನಾಲ್ಕು ಮುಖದ ಬ್ರಹ್ಮಕಾಂತ ಸ್ತಂಭ ಮಾದರಿಯವಾಗಿರುತ್ತವೆ. ಮರ ಅಥವಾ ಗ್ರಾನೈಟ್ ಹಾಗು ಕೆಂಪು ಶಿಲೆಗಳಿಂದ ಮಾಡಲ್ಪಟ್ಟ ಸುಮಾರು ನಾಲ್ಕು ಅಡಿ ಎತ್ತರ ಅರ್ಧ ಅಡಿ ದಪ್ಪ ಇರುತ್ತವೆ. ಚಪ್ಪಟೆ ತುದಿ ಅಥವಾ ಮೊಂಡು ತುದಿಯ ಬೋಟಿಗಳಾಗಿರುತ್ತವೆ. ಇಂತಹವು ಕುಮಟೂರು ಬಾಚರಣೆಯಂಡ,

---

2 S·L· Shantakumari : 'GOSAHASRA > GOSASA-A Note'Journal of the Epigraphical Society of India, Vol. 14, 1987, PP. 104-105

3 ಕುಟ್ಟಂಜೆಟ್ಟಿರ ಎಂ. ನಂಜುಂಡ ಅವರು ಈ ಅಂಶವನ್ನು ತಿಳಿಸಿದ್ದಾರೆ.

ಅರಮೇರಿ ಬಾಚಿರ ಮನೆಗಳಲ್ಲಿಯೂ ಕಾಣ ಬರುತ್ತವೆ. ಈ ಬೋಟೆಗಳು ಮಾತ್ರ ಮರದ್ದೂ ಆಗಿರುವುದಿದೆ.

೨. **ಚಿತ್ರಕಲ್ ಬೋಟೆ** : ಸುಮಾರು ೫ ರಿಂದ ೯ ಅಡಿ ಎತ್ತರದ ಈ ಕಂಬಗಳು ವಿನ್ಯಾಸದಲ್ಲಿ ಬ್ರಹ್ಮಕಾಂತ ವಿಷ್ಣುಕಾಂತ, ರುದ್ರಕಾಂತ ಸ್ತಂಭ. ಅಂದರೆ ಚತುರಶು, ಅಷ್ಟಾಶು ಅಥವಾ ಷೋಡಶಾಶು, ವೃತ್ತ ಶರೀರಿಯಾಗಿರುತ್ತವೆ. ಕೆಲವು ಕೆತ್ತನೆಗಳನ್ನೂ ಒಳಗೊಂಡಿರುತ್ತವೆ. ಬುಡ ಮತ್ತು ಕಂಠ ಮುಖಗಳು ಚತುರಶುವಾಗಿರಬಹುದು. ಆ ಮುಖಗಳಲ್ಲಿ ಅರಳಿದ ಪದ್ಮಗಳು, ನಕ್ಷತ್ರಗಳು, ಹೆಡೆನಾಗಮುಖಗಳು ಹಾಗು ರೇಖಾ ವಿನ್ಯಾಸಗಳಿರಬಹುದು. ಈ ಮುಖಗಳ ಮೇಲ್ಮೂಲೆಗಳಲ್ಲಿ 'ತೋರೆ ಹಕ್ಕಿ', ನವಿಲು ಅಥವಾ ಹಂಸಗಳ ಕಂಡರಣೆ ಇರಬಹುದು. ನಂತರದಲ್ಲಿ ಸುತ್ತು ತಗ್ಗುಗಳು ಹಬ್ಬಿದಂತೆ ರಚನೆ ಇರಬಹುದು. ಕೆಲವೆಡೆ ಈ ಮೇಲ್ಮೂಲೆಗಳಲ್ಲಿ ಸಿಲಿಂಡರಾ ಕೃತಿಯ ವೈ, ಶಂಕುವಿನ ತುದಿ ಹೊಂದಿರುವ ರಚನೆಗಳುಂಟು. ಇಂತಹ ಬೋಟೆ (ಸ್ತಂಭ)ಗಳ ತುದಿಯಲ್ಲಿ ಕಂಡರಿಸಿದ ಮೊಂಡು ತುದಿಯ ಕಳಶ ಅಥವಾ ಗೋಪುರಾಕೃತಿ ಇರುತ್ತದೆ. ಅಥವಾ ಉರುಟು ಗುಂಡು ಇರುತ್ತದೆ. ಕೆಲವಡೆ ಬುಡದಲ್ಲಿ ಚತುರಶು ಪೀಠಗಳನ್ನು ಹಂತಗಳಲ್ಲಿ ಹೊಂದಿರುವುದುಂಟು. ಕೆಲವೆಡೆ ಐನ್ ಮನೆಯ ನಾಲ್ಕು ಬದಿಯಲ್ಲಿ ಎರಡೆರಡೇ ಕಂಬಳಂತೆ ನಿಂತು ಅಷ್ಟದಿಕ್ಪಾಲಕರ ನೆಲೆಯನ್ನು ಸೂಚಿಸಿ ರಕ್ಷಣಾ ಸಂಕೇತವೂ ಆಗಿರುವಂತಿವೆ. ಇದಕ್ಕೆ ಬಾವಲಿಯ ಬಿದ್ದಂಡ ಕಂಡಂಗಾಲದ ಮೂಕಚಂಡ ಕೊಂಗಾಂಟ್, ಅರಮೇರಿಯ ಬಾಚಿರ, ನಾಯಕಂಡ ಕುಮಟೂರು ಗ್ರಾಮದ ದೇಶತಕ್ಕ ಕಳ್ಳಿಂಗಡ ಹಾಗು ಬಾಚರಣಿಯಂಡ ಮನೆತನಗಳ ಐನ್ ಮನೆಗಳು ಕೆಲವು ಉದಾಹರಣೆ ಆಗಿವೆ. ಕೆಲವೆಡೆ ಅವುಗಳನ್ನೂ ನೆಟ್ಟ ಕಾಲದ ಸೂಚನೆಯೂ ಇದೆ. ಉದಾಹರಣೆಗೆ ಬಾಚಿರಣಿಯಂಡ ಮನೆಯಲ್ಲಿ ಮೊದಲು ಕುಮಟೂರಿನಲ್ಲಿ ೧೮೯೬ರಲ್ಲಿ ಬೋಟೆ ನೆಟ್ಟುದುದಂತೆ. ಕೆಲವು ಯೂಪ ಸ್ತಂಭದ ಮಾದರಿಯಾಗಿರಬಹುದು ಎನ್ನುವುದಕ್ಕೆ ಮೂಕಚೆಂಡ ಮನೆಯ ಬೋಟೆಯಿಂದ ಸೂಚನೆ ದೊರೆಯುತ್ತದೆ. ಪಾರಣಮಾನಿ ಹಬ್ಬದಲಿ, ಪಾರಣಮಾನಿ ಗದ್ದೆಗೆ ಹೋಗಿ 'ಕುದುರೆ ಬೋಡು ಕಳಿ'ಯ ಮುಕ್ತಾಯ ಮಾಡುವಲ್ಲಿ ಈ ಬೋಟೆಯ ಸುತ್ತ ಸುತ್ತಿ ಬಂದು ಈ ಕುದುರೆ (ಬೆತ್ತದಲ್ಲಿ ಮಾಡಿದ್ದು) ಗದ್ದೆಯಲ್ಲಿ 'ಅಳಂಜ ಕುದುರೆ' ಅಂದರೆ ಅಳಿಯುವ ಕುದುರೆ ಆಗಬೇಕು. ಅಶ್ವಮೇಧದ ಸಂಕೇತವಾಗಿ ತುಲಾ ಸಂಕ್ರಮಣದ ಮರುದಿನ ಆರಂಭವಾದ ಈ 'ಕುದುರೆ ಕಳಿಯು' ಸಂಚಾರ ಇಡೀ ಕೊಡಗಿನಲ್ಲಿ ಆಗಿ ಇಲ್ಲಿ ಮುಕ್ತಾಯಗೊಳ್ಳಬೇಕಾದ್ದು ಜೂನ್ ಆರಂಭದಲ್ಲಿ ಎಂಬ ಪದ್ಧತಿ, ನಂಬಿಕೆ ಇದೆ. ಇವನ್ನು ಒಂದೇ ಬಂಡೆಯಿಂದ ಕೆತ್ತಿ ರೂಪಿಸಿರುವುದೂ ಉಂಟು. ಒಂದು ರೀತಿಯಲ್ಲಿ ಇಲ್ಲಿ 'ರಿಚುಯಲ್ ಪೋಲ್' ನಂತೆ ಪರಿಗಣನೆಯಾಗಿರುವಂತಿದೆ. ಅಲ್ಲದೆ ಸೋಮವಾರ ಪೇಟೆ, ವೀರರಾಜ ಪೇಟೆ, ತಾಲೂಕಿನ ಗ್ರಾಮಗಳಲ್ಲಿನ ಕಲ್ಗೋರಿಗಳಿಂದಾಗಿ ಇಲ್ಲಿನ ಇತಿಹಾಸ ಪೂರ್ವ ಕಾಲದ ಆದಿವಾಸಿ ಜನ ವಾಸ್ತವ್ಯದ ಕಲ್ಪನೆ ದೊರಕುತ್ತದೆ.[4] ಈ ನೆಲೆಗಳ ಇಂದಿನ ಸುಗ್ಗಿ ಕಂಬ-ಕಟ್ಟೆ ಹಬ್ಬಗಳಲ್ಲಿ ಬೇಟೆಯ ಪ್ರಾಣಿಗಳನ್ನು ನೀರಿನಲ್ಲಿಡುವುದು, ಕಲ್ ಬೋಟೆಗಳಿಗೆ ಪ್ರಾಣಿ ಕೊಂಬುಗಳನ್ನು ಮಾಡಿಡುವುದು, ಬೆತ್ತದ ಯಾಗ ಕುದುರೆಯ ಸಹಯೋಗ ಇತ್ಯಾದಿಗಳು ಚಿತ್ರಕಲ್‌ರ ಬೋಟೆಗಳ ನೆಲೆಯಲ್ಲಿ ಹೆಚ್ಚು ಕಾಣ ಬರುವ ಕಾರಣ ಇತಿಹಾಸ ಪೂರ್ವಯುಗದ ಇಲ್ಲಿನ ಸಾಂಸ್ಕೃತಿಕ ಆಚರಣೆಗಳ ಸಾಂಕೇತಿಕ ರೂಪವೆ ಆಗಿರುವಂತಿವೆ.

ಇಂತಹ ಬೋಟೆಗಳು ಐನ್ ಮನೆಯ ಮುಂಬದಿಯಲ್ಲಿ ಹೆಚ್ಚು ಕಾಣ ಸಿಗುತ್ತವೆ. ಇವಕ್ಕೆ ಸಿಂಗಾರ ಬೋಟೆ ಎಂದೇ ಜನಪದ ಹಾಡಿನಲ್ಲಿ ಬರುತ್ತದೆ. ಹುತ್ತರಿ ಹಬ್ಬದಲ್ಲಿ ಓಣಿಯಿಂದ ಐನ್‌ಮನೆ ಹತ್ತುವಲ್ಲಿ ಕಲ್ ಬೋಟೆಯನ್ನು ಕುರಿತಂತೆ ಹೇಳುವ ಹಾಡು ಹೀಗಿದೆ–

....ಪಟ್ಟೆಕ್ ಚಿಂಗಾರ ಕಲ್ಲರ ಬೋಟೆ| ಮಾಣಿಕ ಕಲ್ಲೊಂಡ್ ಕೆಜ್ಜ ಪಣಿಯೋ| ಚೋಮನ ತಳ

4 ಆ: ಕೊಡಗು ಜಿಲ್ಲೆ (ಪರಿಷ್ಕೃತ) ಗ್ಯಾಸೆಟಿಯರ್ : (ಮು. ಸಂ) ಸೂರ್ಯನಾಥ ಯು. ಕಾಮತ್, ೧೯೯೧, ಪು. ೬೮

ತುವ ಕಗ್ಗಲ್ಲ್ ಬೋಟ | ಎಟ್ಟ್ ಪೆಟ್ಟ್ ಗೊಂಡ್ ಕೆಜ್ಜ ಪಣಿಯೋ| ಚೂದರ ಮಾನೆ ಪೋಲೆ ಮೋಂದಯು ನೋಟ್, ಪೋರಾಟ ಪೋಪಕ ಚೋಮನ ಕಟ್ಟುವ | ಬೋಟರ ಸುತ್ತೊಡೆ ಕಲ್ಲೆದ ಪಟ್ಟ್ | ಪಾರೆ ಕಲ್ಲ್ ಗೊಂಡ ಕೆಜ್ಜ ಪಣಿಯೋ....

(ಹಟ್ಟಿಗೆ ಸಿಂಗಾರ ಕಲ್ಲು ಬೋಟ ಬಿಳಿ ಕಲ್ಲಿನಿಂದ ಮಾಡಿದ ಆ ಕೆಲಸ ಚಂದ. ಎತ್ತನ್ನು ಕಟ್ಟಿ ಹಾಕುವ, ಸಾಧು ಮಾಡುವ ಸ್ತಂಭವದಾಗಿದೆ. ಎಂಟು ಮುಖ ಪಟ್ಟಿಕೆಗಳನ್ನೂ ಹೊಂದಿದೆ. ದೇವರ ಎತ್ತು ಪೊರಟಕ್ಕೆ ಹೋಗುವ ಎತ್ತನ್ನೂ ಕಟ್ಟುವ ಈ ಸ್ತಂಭದ ಸುತ್ತ ಸೂಜಿ ಮನೆಯಂತೆ ಸೇರುವಟುಗಳ ಚಪ್ಪಟೆ ಕಲ್ಲನ್ನೂ ಹಾಸಿದೆ.ಅದರಿಂದ ಕೆಸರೂ ನುಗ್ಗದಂತೆ ಜೋಡಣೆ ಆಗಿದೆ. ಒಂದೇ ಬಂಡೆಗಲ್ಲಿಂದ ಮಾಡಿದ ಕೆಲಸ ಈ ಬೋಟ ಗೆಲಸ ಚೆನ್ನಾಗಿದೆ.)

ಹೀಗೆ ಕಲೆ, ಕೃಷಿ, ದೈವ, ಮಳೆ, ಎತ್ತುಗಳ ಸಂಬಂಧದೊಡನೆ ತಕ್ಕರ ಮನೆಯ ಶಿಸ್ತನ್ನೂ ಸೂಚಿಸುವ ಭಾವ ಇಲ್ಲಿದೆ. ರಾಜರ ಕಾಲದಲ್ಲಿ ಇಂತಹ ಬೋಟಗಳಿಗೆ ಆನೆಯನ್ನು ಕಟ್ಟಿ ಹಾಕುತ್ತಿದ್ದರೆಂದು ಗ್ರಾಮೀಣರ ಅಂಬೋಣ.

**೩) ಎತ್ತುಕಲ್ ಬೋಟ (ಅತ್ತ ಬೋಟ)** ಈ ಶಿಲಾ ಸ್ತಂಭಗಳ ಶಿರದಲ್ಲಿ ಕಳಶ–ಗೋಪುರಾಕೃತಿಗಳ ಬದಲಿಗೆ ಚೌಕ ಪೀಠದ ಮೇಲೆ ಆಸೀನ ಅಥವಾ ಅಪರೂಪವಾಗಿ ಸ್ಥಾನಕ ವೃಷಭ (ಬಸವ)ನ ವಿಗ್ರಹ ವಿರುತ್ತದೆ. ಈ ಬಗೆಯು ಚಂಗಾಳ್ವರ ಕಾಲದಿಂದ ಅಥವಾ ಹಾಲೇರಿ ಅರಸರ ಕಾಲದಲ್ಲಿ ರೂಢಿಗೆ ಬಂದಿತೋ ಎಂಬುದು ನಿರ್ದಿಷ್ಟವಿಲ್ಲವಾದರೂ ಅವುಗಳಿರುವ ನೆಲೆಯಂತು ಪ್ರಾಚೀನತೆಯನ್ನೂ ಪೋಷಿಸುತ್ತವೆ. ಆ ಅರಸರ ಪ್ರಭಾವ ಕೊಡಗಿನ ಜನತೆಯಲ್ಲಿ ಆಗಿರುವುದಕ್ಕೆ ಈ ಬೋಟಗಳು ಸಾಕ್ಷಿ ಎನಿಸುವಂತಿವೆ.

ಕೈಟಲಿಕ್ ಐನ್ ಮನೆಯ ಹಟ್ಟಿಯಲ್ಲಿ ಸುಂದರ ವೃಷಭ ವಿಗ್ರಹದ ಈ ಬೋಟ ಇದೆ. ಪನ್ಯ ಭೂಮಿಯ ಅಪ್ಪಂಗಳ ಅರಮನೆ, ಗರ್ವಾಲೆ ಅರಮನೆಗಳ ಮುಂದಿನ ಹಟ್ಟಿಯಲ್ಲಿ ಇಂತಹ ವಿಗ್ರಹ ಕಾಣುತ್ತದೆ. ಗರ್ವಾಲೆಯ ಈ ಸ್ತಂಭದ ಮೇಲೆ, ಮಸುಕಾಗಿರುವ ಕಂಡರಿಸಿದ ಅಕ್ಷರಗಳೂ ಇವೆ. ಇಂದು ಅರಮನೆ ಶಿಥಿಲವಾಗಿ ಭಾಗಗಳ ವಿವರವೇ ಮಸಕಾಗಿದ್ದರೂ ಈ ಕಲ್ ಬೋಟೆಯ ನೆರವಿನಿಂದ, ಅಂದಿನ ಅರಮನೆಯ ಭಾಗಗಳ ಸ್ವರೂಪ ದೊರಕಲು ಸಹಾಯಕವಾಗಿದೆ. ಗುತ್ತಿಮಠ, ಹಾಗು ದೇಗುಲಗಳ ಮುಂದೆ ಇಂತಹುದೇ ಸ್ತಂಭವಿದ್ದರೂ, ಕೇವಲ ಪೂಜಾ ಉದ್ದೇಶಗಳಿಗೆ ಸೀಮಿತವಾಗಿರುವಂತಿದೆ.

**೪) ಸೊಡ್ಲುಕಲ್ ಬೋಟ :** ಸುಮಾರು ೫ ಅಡಿ ಎತ್ತರದ ಆರು ಮುಖ ಪಟ್ಟಿಕೆಯ ಕಲ್ಲು ಸ್ತಂಭದಲ್ಲಿ ದ್ವೀಪದ ಗೂಡುಗಳಿರುತ್ತವೆ. ಹಿರಿಯರ ಸ್ಮಾರಕ ನೆಲೆಯಲ್ಲಿ ನಿಲ್ಲಿಸಿರುವುದುಂಟು. ಆದರೆ ಇವು ಮರದ ಕೆಳಗಿನ ದೇವ ನೆಲೆಗಳಲ್ಲಿ ಕೊಡಗಿನಲ್ಲಿ ಸಾಮಾನ್ಯವಾಗಿ ಕಾಣಬರುವ ಕುಳ್ಳು ಸ್ತಂಭದ ಕಲ್ಲು ದೀಪಗಳಲ್ಲ. ಜಮ್ಮ ಮಾಪಿಳ್ಳೆಗಳಲ್ಲಿ ಗುರು ಹಿರಿಯರ ನೆಲೆಗೆ 'ಖುರಕ್ ಮಾರ್' ನೆಲೆ ಎನ್ನುತ್ತಾರೆ (ಅದು ಕೊಡವರ ಕೈ ಮಡನನ್ನೂ ಹೋಲುವಂತಿದೆ) ಮೈತಾಡಿ ಚಾಮಿಯಾಲ್‌ನ ಕುವಲೆ ಮನೆತನದ ಐನ್ ಮನೆಯ ಬಲ ಹಿಂಪಾರ್ಶ್ವದಲ್ಲಿರುವ ಖುರಕ್‌ಮಾರ್ ನೆಲೆಯ ಬದಿಯಲ್ಲಿ ಈ ರೀತಿಯ ಬೋಟೆ ಇದೆ. ಬಹುಶಃ ಮೊದಲು ಈ ಸ್ತಂಭದ ಮೇಲಿದ್ದ ಗುಮ್ಮಟ ಭಾಗ ಈಗ ಕಾಣೆಯಾಗಿದೆ. ದೀಪದ ಗೂಡಿನ ಭಾಗ ರೇಖಾ ವಿನ್ಯಾಸದಿಂದ ಕೂಡಿದೆ.

**ಸುಗ್ಗಿಕಲ್ ಬೋಟ :** ಇವುಗಳು ಐನ ಮನೆಯ ಹಟ್ಟಿಯಲ್ಲಿ ಇಲ್ಲದಿರುವಂತಹವು. ಗ್ರಾಮದೊಳಗೆ ಕಟ್ಟಿ, ಮಂಟಪ ಅಥವ ಜೋಡಿಸ್ತಂಭಗಳ ಸುಗ್ಗಿ ಕಟ್ಟೆಗಳಿರುವಲ್ಲಿ ಒಂದೇ ಶಿಲಾ ಸ್ತಂಭವಿರುವ ನಗರ ಹಳ್ಳಿ ಸುಗ್ಗಿ ಕಲ್ ಬೋಟೆಯ ಉದಾಹರಣೆ ಇದೆ. ಮೊದಲಿಗೆ ಮರದ ಸ್ತಂಭವಾಗಿತ್ತು. ಸ್ತಂಭದ ಮೇಲೆ ಚಿತ್ತಾದ ಕೆತ್ತನೆಗಳಿದ್ದು ೧೨ ವರ್ಷಕ್ಕೊಮ್ಮೆ ನಡೆಯುವ ಇದರ ದೊಡ್ಡ ಸುಗ್ಗಿ ಹಬ್ಬದಲ್ಲಿ ಮೊದಲಿಗೆ ಇದ್ದ ಕೋಣ ಹಾಗು ಎತ್ತಿನ ಬಲಿ ಈಗ ನಿಂತಿದೆ. ವಾರ್ಷಿಕವಾಗಿ ನಡೆಯುವ ಸಣ್ಣ ಸುಗ್ಗಿ ಹಬ್ಬದಲ್ಲಿ ಎಣ್ಣೆ ಹಚ್ಚಿ ನೇರ ಮಾಡಿ ಸೊಡ್ಲು ಹಚ್ಚಿ ಆಚಾರಗಳು ನಡೆಯುತ್ತವೆ. ಒಂದು ಕಾಲಕ್ಕೆ ಬಹುಶಃ ಈ ರೀತಿಯ ತನಿ

ಸುಗ್ಗಿಕಲ್ ಬೋಟೆ ಆಗಿದೆ. ಬೆಕ್ಕೆ ಸೊಡ್ಲೂರಿನ ಮುಂದತಮ್ಮನ ಸುಂದರ ಶಿಲಾಸ್ತಂಭವನ್ನೂ ಈ ವರ್ಗಕ್ಕೆ ಸೇರಿಸಬಹುದು. ಹಂತ ಹಂತಗಳಲ್ಲಿ ನಾಲ್ಕು ಮುಖ ಮೈ (ಬ್ರಹ್ಮಕಾಂತಮಾ ಧರಿ) ನಡುವೆ ತಗ್ಗು ಸುತ್ತು ಹೊಂದಿದೆ. ಕಮಲ ಹಾಗು ನಕ್ಷತ್ರಗಳ ಚಿತ್ರಗಳು ಈ ಈ ಸ್ತಂಭದ ಮೇಲಿದ್ದು ಪಾರ್ವತಿಯ ಪ್ರತೀಕವಾಗಿ ಆರಾಧನೆಗೊಳ್ಳುತ್ತಿದೆ. ಇದರ ಆರಾಧನೆಯಲ್ಲಿ ಕುದುರೆ ಬೋಡು ಕಳಿ (ಅಶ್ವಮೇಧದ ಸಂಕೇತ) ಹಾಗು ಮಾಸ್ತಿ ವಿಗ್ರಹದ ಪೂಜೆಯೂ ಸಹಯೋಗವಾಗಿರುವುದು ಗಮನಾರ್ಹ. ಇದಲ್ಲದೆ ಸುಗ್ಗಿಕಲ್ ಬೋಟೆ-ಸುಗ್ಗಿ ಹಬ್ಬದ ಸಂಬಂಧವಿರುವ ಹೆದ್ದೇವರು (ನಾಗಬನ) ಬನ ದಲ್ಲಿ ಆ ದೇವರ ಸಂಕೇತವು ಮಣ್ಣಿನ ಸಿಲಿಂಡರಾಕೃತಿಯ ಸ್ತಂಭಗಳ ತುದಿಯಲ್ಲಿ ಕಳಶಗೋಪುರ ಹೊಂದಿರುವ ಉದಾಹರಣೆಗಳೂ ಇವೆ.

**ಸಹಯೋಗಕತೆ ಮತ್ತು ಆಚಾರಗಳು :** ಕೆಲವು ಕೊಡವ ಮನೆತನಗಳಲ್ಲಿ ಉಳಿದು ಬಂದಿರುವ ಪದ್ಧತಿ ಗಳಿಂದಾಗಿ ಕೇರಳದ ಬೈತೂರಪ್ಪನಿಗೂ, ಕಲ್‌ಬೋಟೆ ಗಳಿಗೂ ಸಂಬಂಧ ಕಾಣುತ್ತದೆ. ಅದಕ್ಕೆ ಕಿರಾತ ಶಿವ-ಅರ್ಜುನನ ನಡುವೆ ನಡೆದ ಯುದ್ಧ ಕತೆ ಇದೆ. ಆದರೆ ಇಲ್ಲಿ ಬಿದ್ದವನು ಕಿರಾತಶಿವ. ಅಂತಾಗಿ ತಲೆಗೆ ಕಲ್ಲು ತಾಗಿ ರಕ್ತ ಬಂತು. ಆಗ ಪಾರ್ವತಿ ಅರ್ಜುನನ ಕಳವಳ ಕಂಡು ಅವನಿಂದಲೇ ಹಸುವಿನ ತುಪ್ಪ ತರಿಸಿ ಲೇಪಿಸಿ ವಾಸಿ ಮಾಡಿದಳಂತೆ. ಶಿವ ಬಿದ್ದ ನೆಲೆ, ತುಪ್ಪ ಲೇಪಿಸಿದ ನೆಲೆ ಬೈತೂರಂತೆ. ಜೊತೆಗೆ ಶಿವ, ಅರ್ಜುನ ನಿಗೆ ತೆರೆದುಕೊಂಡ ನೆಲೆ. ಹಾಗೆ ಬಿದ್ದ ತೆರೆದ ನೆಲೆ ಬೈತೂರು. ಈ ಶಿವನಿಗೆ ಕೊಡಗಿನ ಮನೆತನಗಳು ಹಾಲು ಬೈನಾಡು (ಅಕ್ಕಿ ಹಾಗು ಹಸುವಿನ ಹಾಲು) ಒಪ್ಪಿಸಿ ಬೈತೂರಪ್ಪನ ಪ್ರಸಾದವಾಗಿ ಹಸುವಿನ ತುಪ್ಪ ತಂದು ಮನೆಯಲ್ಲಿ ಹರಕೆಯಂತೆ ರೋಗಿಯ ತಲೆಗೆ ಹಚ್ಚುತ್ತಾರೆ. ಹಾಲು ಬೈವಾಡು ಒಯ್ಯುವಲ್ಲಿ, ಅಕ್ಕಿ, ತೆಂಗು, ಬೆಲ್ಲವನ್ನೂ ಅಲಂಕರಿಸಿ ಪೂಜಿಸಿದ ಕಲ್ಲುಬೋಟೆ ಬಳಿ ಎತ್ತಿನ 'ಕವುಂದಿ'ಯ ಮೇಲೆ ವಿಂಗಡಿಸಿಟ್ಟು, ಎತ್ತು ಪೊರಟ (ಎತ್ತಿನ ಹೇರು)ವನ್ನ ಕಲ್ಲು ಬೋಟೆಯ ಸುತ್ತ ಸುತ್ತಿಸಿ, ಬೈತೂರಪ್ಪನನ್ನ ಪ್ರಾರ್ಥಿಸಿ ಹೊರಡು ತ್ತಾರೆ. ಇದು ಬಾಚಿರ ಮನೆತನದಲ್ಲಿ ಕಾಣ ಬರುವ ಆಚಾರ.

ಇನ್ನೊಂದು ದೇಶ ತಕ್ಕ ಕಳ್ಳಿಂಗಡ ಮನೆತನಕ್ಕೆ ಸಂಬಂಧಿಸಿದ ಕತೆ. ಕೇರಳದ ಬೈತೂರಿನ ಅಡಿಯಾಂದರ ಮಠದಲ್ಲಿ ಮಂತ್ರ ವಿದ್ಯೆಕಲಿತ ಕಳ್ಳಿಂಗಡ ಮುಂದಣ್ಣ ಕಾರೊಣ ಜೊತೆಯಲ್ಲಿಯೆ ಮಂತ್ರ ಮೂರ್ತಿಯನ್ನು ಕರೆತಂದ. ಮುಂದಣ್ಣ ತೀರಿದ ಮೇಲೆ ಅವನ ಕೈಮಡದ ನೆರೆಯಲ್ಲಿಯೆ ಮಂತ್ರ ಮೂರ್ತಿಗೂ ನೆಲೆ ಆಯಿತು. ಹುತ್ತರಿ ಹಬ್ಬದ ಮರುದಿನ ರಾತ್ರಿ ಮುಂದಣ್ಣ ಕಾರೊಣನ ಆವೇಶ ಬಂದವರು ಹಟ್ಟಿಯ ಚಿತ್ರಕಲ್ ಬೋಟೆಯ ಮೇಲೆ ಕುಳಿತು ತೆಂಗನ್ನು ಅದಕ್ಕೆ ಒಡೆದು ಚಚ್ಚಿ, 'ಚಾಂಡಾಳನಕ್, ಇದು ನೀಚನಕ್, ಇದ ಕುಟ್ಟಿಯಳಕ್' ಎಂದು ಕೆಂಬಟ್ಟ ಹರಿಜನ, ಯರವ ಹಾಗು ಮಕ್ಕಳತ್ತ ಎಸೆಯುತ್ತಾರೆ. ಈ ಕ್ರಿಯೆ ಕಲ್ ಬೋಟೆಯ ಮೇಲೆಯೇ ಆಗಬೇಕಾದ್ದರಿಂದ ಬಲಿಯ ಹಿನ್ನೆಲೆ ಸೂಚಿಸುವಂತಿದೆ.

ಇನ್ನೊಂದು ಕತೆ ಆಳು-ಮನೆ-ಬೋಟೆ-ಒಡೆಯನ ನಡುವಣ ಸಂಬಂಧ ಸೂಚಿಸುವ ಕತೆಯಾಗಿದೆ. ಕುಟುಂಬವೊಂದರಲ್ಲಿ ಹಿರಿಯ ಸತ್ತಾಗ ಪದ್ಧತಿಯಂತೆ ನೆಲ್ಲಕ್ಕಿನಡುಬಾಡೆಯಲ್ಲಿ ಶವಕ್ಕೆ ಬಟ್ಟೆ ಹೊದಿಸಿ ಮಲಗಿಸಿದ್ದರಂತೆ. ರಾತ್ರಿ ಚಳಿಗೆ, ಹೊರಗೆ ಇದ್ದ ಕೆಂಬಟ್ಟ ಹರಿಜನ ನಡುಗುತ್ತಿದ್ದವ ಕೂಗಿ ಬೆಂಕಿ ಕೇಳಿದ ನಂತೆ. ಮನೆಯವರು ಎಚ್ಚರಗೆಟ್ಟು ನಿದ್ದೆ ಮಾಡಿದ್ದರು. ಆಗ ಸತ್ತ ಹಿರಿಯ ಎದ್ದು ಬೆಂಕಿ ಹಿಡಿದು ಹೊರಗೆ ಬಂದ. ಅದನ್ನು ಕಂಡ ಕೆಂಬಟ್ಟ ಹೆದರಿ ತಾ ಹೊದ್ದಿದ್ದ ಬಟ್ಟೆಯನ್ನು ಕಲ್ಲು ಬೋಟೆಗೆ ಎಸೆದು ಓಡಿದ. ಸತ್ತವ ಆ ಕತ್ತಲಿನಲ್ಲಿ ಕಲ್ಲುಬೋಟೆಯನ್ನೆ ಕೆಂಬಟ್ಟ ಎಂದು ತಬ್ಬಿ ಹಿಡಿದನಂತೆ. ನಿದ್ದೆ ತಿಳಿದು ಎದ್ದವರು ಕಲ್ಲು ಬೋಟೆ ಬಳಿ ಶವವನ್ನು ನೋಡಿ ಕೆಂಬಟ್ಟೆಯಿಂದ ವಿಷಯ ತಿಳಿದು ಸಂಸ್ಕಾರ ಮುಗಿಸಿ, ಬೋಟೆಯನ್ನೂ ತೆಗೆಸಿ ಬಿಟ್ಟರಂತೆ. ಅಂದರೆ ಐನ್ ಮನೆ ಕುರಿತ ಹಿರಿಯನ ಮೋಹ, ಕೆಂಬಟ್ಟ ಹಾಗು ಕಲ್‌ಬೋಟೆಗೂ ಇರುವ ಅವಿಭಾಜ್ಯ ಚಿತ್ರ ಇಲ್ಲಿದೆ.

ಗ್ರಾಮದೇವತೆ ಭಗವತಿ ಹಬ್ಬ ಮತ್ತು ಕೆಂಬಟ್ಟ ಹರಿಜನರ ಮುಖ್ಯ ದೇವತೆ ಪನ್ನಾಂಗಾಲತಮ್ಮೆ ಹಬ್ಬಕ್ಕೆ ಹೋಗುವಲ್ಲಿ ಹೆಬ್ಬೆಯ ಕಲ್ಲು ಬೋಟೆಯ ಬಳಿ ಎತ್ತು ಪೊರಟ ನಿಲ್ಲುತ್ತದೆ. ಸ್ನಾನ ಮಾಡಿಸಿ, ಅಲಂಕರಿಸಿ,

ಅಕ್ಕಿ ತೆಂಗು ಬೆಲ್ಲದ 'ಪೋರ್' ಅನ್ನ ಎತ್ತುಗಳ ಮೇಲೆ ಇಡುವುದು ಇಲ್ಲಿಯೆ. ಬೋಟೆಯ ಸುತ್ತ ಮೂರು ಸುತ್ತು ಬಂದು ಪ್ರಾರ್ಥಿಸಿ ಪದ ಹಾಡುತ್ತ ಹೊರಡುತ್ತಾರೆ. 'ಪನ್ನಂಗಾಲ ತಮ್ಮೆಕ ಅರಟ್ ಬೊಳಕ್ ಪನ್ನಂಗಾಲ ತಮ್ಮೆಕ ಎತ್ತು ಪೊರಟನಡಪೋಲೆ. ನಮ್ಮೆರ ದೇವನ್ನಾನ ಪೋರ ಒಪ್ಪಿಚಿಡಕ್ ಪೋಪುದು ನಂಗ'–ಪನ್ನಂಗಾಲ ತಮ್ಮೆ ಹಬ್ಬಕ್ಕೆ ಭಯ ಭಕ್ತಿಯಿಂದ ಎತ್ತು ಪೊರಟವನ್ನು ಒಪ್ಪಿಸಲು ಹೋಗುತ್ತೇವೆ, ಎನ್ನುವಲ್ಲಿ ದಾನ, ಧರ್ಮ ಪಶು ಸಂಬಂಧ ಬೋಟೆಯೊಡನೆ ಸಹಯೋಗವಾಗಿದೆ ಎನಿಸುತ್ತದೆ.

ಯಜಮಾನ ಕುಟುಂಬದ ಕಲ್ಲುಬೋಟೆಯೊಡನೆ ಅವಿಭಾಜ್ಯ ಸಂಬಂಧವಿರುವ ಕೆಂಬಟ್ಟಿ ಕುಡಿಗಳು ಸುಗ್ಗಿ ಸಮಯದಲ್ಲಿ ಹುಲ್ಲಿನಲ್ಲಿ ಎತ್ತಿನ ಕೊಂಬು ಮಾಡಿ ಕಲ್ಲು ಬೋಟೆಗೆ ಕೋಡು ಕಟ್ಟುತ್ತಾರೆ. ಸುತ್ತ ಕೃಷಿ ಕೆಲಸದ ಸಾಮಾನುಗಳನ್ನೂ ಇಟ್ಟು ಪೂಜಿಸುತ್ತಾರೆ. (೧ ಪರ, ೧ ಮೊರ, ೧ ಕುಕ್ಕೆ) ಎಂದು ಮೂರು ಕುಕ್ಕೆ ಭತ್ತ ಇಟ್ಟು ಬಾಳೆ, ತೆಂಗು ನಿವೇದಿಸಿ ಪ್ರಸಾದ ಪಡೆಯುತ್ತಾರೆ. ಕುಟುಂಬದ ಒಡೆಯ ಈ ಆಳುಗಳಿಗೆ ಕುಕ್ಕೆ ಭತ್ತ ಕೊಡುತ್ತಾನೆ. ಈ ಪದ್ಧತಿ ಅಮ್ಮತ್ತಿ ನಾಡಿನ ಹೊಸೂರು–ಬೆಟ್ಟೇರಿಯ ಕೆಂಬಟ್ಟಿ ಹರಿಜನರಲ್ಲಿ ಅನ್ವಯವಾಗಿದೆ. ಅಂದರೆ 'ಕುಳಪುಟ್ಟಿಗೆ' 'ಆಯದಾಳು' ಸಂಬಂಧ ಕಲ್ಲು ಬೋಟೆಗೆ ಇರುವ ಬಗ್ಗೆ ಇದು ಇಂದಿನ ಸಾಕ್ಷ್ಯವೆನಿಸಿದೆ. ಹಾಗೆಯೆ ಕಲ್ಲು ಬೋಟೆಗೆ ಕಟ್ಟುವ ಎತ್ತಿನಕೋಡು ಇತಿಹಾಸ ಪೂರ್ವ ಕಾಲದ 'ರಿಚುಯಲ್ ಪೋಲ್'ನ' ಸಂಕೇತವೆಂದೂ ತೋರುತ್ತದೆ.

ಶಾಸನಗಳು ಅವುಗಳ ಇತಿಹಾಸವನ್ನೂ ೧೧ನೇ ಶತಮಾನದ ದಕ್ಷಿಣ ಕಾಲದ ಕಲ್ಗೋರಿಗಳ (ಡಾಲ್ಮೆನ್) ಅಸ್ತಿತ್ವ ಕೊಡಗಿನಲ್ಲೂ ಕಾಣ ಬರುವ ಕಾರಣ ಆ ಕಾಲದ ಜನರ ಸಂಸ್ಕೃತಿಯಲ್ಲಿ 'ರಿಚುಯಲ್ ಪೋಲ್' (ಧಾರ್ಮಿಕ ಬಲಿಸ್ತಂಭ !)ಗಳ ಬಹುಶಃ ಇಂದಿನ ಕಲ್ ಬೋಟೆಗಳ ಪರಂಪರೆಗೆ ರೂಪುಗೊಟ್ಟಿರುವ ಸಾಧ್ಯತೆಯ ಹಿನ್ನೆಲೆಯಲ್ಲಿ ಕೊಡಗಿನಲ್ಲಿ ಅವುಗಳ ಅಸ್ತಿತ್ವದ ಮೂಲ ಇತಿಹಾಸ ಪೂರ್ವ ಕಾಲದಿಂದಲೇ ಒದಗಿರುವಂತಿದೆ.

ಎಂ.ಜಿ. ಚಂದ್ರಕಾಂತ್ ಮತ್ತು ಎಂ.ಜಿ. ನಾಗರಾಜ್*

# ಕೊಡಗಿನ ದೇವರ ಕಾಡುಗಳು

ದೇವರ ನೆಲೆ ಅಥವಾ ದೇಗುಲಕ್ಕೆ ಇರುವ ಕಾಡು, ದೇವರ ಕಾಡು ಎನ್ನುವುದು ಸ್ಥೂಲಾರ್ಥ. ಅಲ್ಲಿ ಕೆಲವು ನೈತಿಕ ನಿಯಮಗಳ ಸ್ವಯಂಪಾಲನೆ ಗ್ರಾಮೀಣರಿಗೆ ಉಂಟು. ಈ ಕಾಡುಗಳು ಗ್ರಾಮದ ನಡುವೆ ಅಥವಾ ನೆರೆಯಲ್ಲಿರುತ್ತವೆ. ದೇವರ ಕೆರೆ ಅಥವಾ ತೊರೆ, ಹಾಗು ಗದ್ದೆಗಳನ್ನು ತಮ್ಮ ಸನಿಹದಲ್ಲಿ ಇವು ಹೊಂದಿರುತ್ತವೆ. ಎತ್ತರದಲ್ಲಿ ದೇವ ನೆಲೆ ಇರುವ ಕಾಡು ಇರುತ್ತದೆ. ಕೊಡಗಿನ ಪ್ರತಿ ಗ್ರಾಮದಲ್ಲಿ ಇಂದೂ ಇವು ಉಳಿದು ಬಂದಿರುವುದೇ ಅಲ್ಲಿನ ವೈಶಿಷ್ಟ್ಯ. ಅಲ್ಲಿನ ಪರಂಪರೆಯಲ್ಲಿ ರೂಪುಗೊಂಡ ಈ ಕಾಡುಗಳಲ್ಲಿ ಪುರಾಣ, ಸಮಾಜಶಾಸ್ತ್ರ, ಸಾಂಸ್ಕೃತಿಕ ಮಾನವಶಾಸ್ತ್ರ, ವೈದ್ಯ, ಪರಿಸರ ನಿರ್ಮಾಲಿನ್ಯ ಹಾಗು ಸಮತೋಲನ, ವ್ಯವಸಾಯತಂತ್ರ ಮತ್ತು ವೈಜ್ಞಾನಿಕತಂತ್ರಗಳ ಪರಿಕಲ್ಪನೆಯ ಅಳವಡಿಕೆಯ ಅರಿವಿದ್ದೋ, ಇಲ್ಲದೆಯೋ ಈ ದೇವರ ಕಾಡುಗಳ ನಿರ್ವಹಣೆಯಲ್ಲಿಯೂ ಕಾಣ ಬರುತ್ತದೆ. ಅರ್ಥಾತ್ ಕಾಡು, ಕೆರೆ-ತೊರೆ, ಕಾಯುವ ದೈವ ಇವುಗಳ ತ್ರಿಕೂಟ ಸಂರಚನೆ ಇಲ್ಲಿ ಎದ್ದುಕಾಣುತ್ತದೆ.

ಭಾರತದಲ್ಲಿ ವೃಕ್ಷಾರಾಧನೆ ಬಹು ಪ್ರಾಚೀನ. ಸೈಂಧವ ಸಂಸ್ಕೃತಿಯ ಚಿಹ್ನೆಗಳಲ್ಲಿ (seals) ದೊರೆತಿರುವ ಪಶುಸಮೂಹ, ಸಪ್ತ ಮಾತೃಕೆಯರ ಸಹಿತವಾದ ಅಶ್ವತ್ಥವೃಕ್ಷದೊಳಗಣ ಕೊಂಬಿನ ಶಿರೋವೇಷಧಾರಿ ಮಾನುಷಾಕೃತಿ ದುರ್ಗೆಯ ಪ್ರತೀಕ ಎನ್ನಲಾಗಿದೆ.[1] ಅದನ್ನು ರುದ್ರಪಶುಪತಿ ಎನ್ನುವುದೇ ಹೆಚ್ಚು ಸೂಕ್ತ. ಇತಿಹಾಸ ಯುಗದಲ್ಲಿ ಯಕ್ಷಯಕ್ಷಿಯರಿಗೆ ಪವಿತ್ರ ವೃಕ್ಷಗಳಲ್ಲಿ ವಾಸ್ತವ್ಯ ಅವರ ಶಿರಕ್ಕೆ ಗಿಡದೆಲೆಗಳ ಅಲಂಕಾರವಿದ್ದ ಬಗ್ಗೆ ಉಲ್ಲೇಖಗಳಿವೆ. 'ಅಭೀಷ್ಟ ಸಿದ್ಧಿಯ ವೃಕ್ಷ'ಗಳೆಂಬ ಪೂಜಾವೃಕ್ಷಗಳ ಬಗ್ಗೆ ಕಾಶ್ಮೀರದ ಗ್ರಂಥಗಳು ತಿಳಿಸುತ್ತವೆ. ಆಲದಮರದ ದೇವತೆಗೆ ಸೆರೆ ಹಿಡಿದ ರಾಜಕುಮಾರರನ್ನು ಬಲಿ ಕೊಡುತ್ತಿದ್ದ ಬಗ್ಗೆ ಜಾತಕ ಕತೆಗಳು ತಿಳಿಸುತ್ತವೆ. ಹಿಂದೂ ಪುರಾಣಗಳ ರೀತ್ಯಾ ಶಿವಪಂಚಾಯತನ, ನಕ್ಷತ್ರವನ, ನವಗ್ರಹವನ, ರಾಶಿಚಕ್ರವನ, ವ್ರತವನ, ಸಪ್ತರ್ಷಿವನ, ಅಶೋಕ ವನ, ಕದಂಬ ವನ ಎಂಬ ಪವಿತ್ರ-ದೇವತಾ ಕಾಡುಗಳ ವಿಂಗಡಣೆ ಇದೆ.[2] ತಮಿಳು ರಾಜರು ತಮ್ಮ ಅರಮನೆಯ ಅಂಗಳದಲ್ಲಿ ರಕ್ಷಕ ವೃಕ್ಷ

---

* ಸಂ. ೨೨೧, ೬೮ನೆಯ ಅಡ್ಡರಸ್ತೆ, ರಾಜಾಜಿನಗರ ೬ನೆಯ ಬ್ಲಾಕ್, ಬೆಂಗಳೂರು-೫೬೦೦೧೦

1 Aska Parpola : 'The fig diety Seal' from Mohenja-daro : its iconography and inscription', paper read at 10th Internaional conference of south Asian Archca logists, July 1989, P. 14.

2 Sacred Plants : A study by A.N. Yellappa Reddy others, Karnatnka forest Department, 1988, P. 55-66 AND M.G. Chandra Kanth, J.K. Gillers, V. Gowramma M.G. Nagaraja : Temple forests in India's forest devolopment, Agro foresty system 11 : 1990 Netherlands, P. 200

ಗಳನ್ನು ನಗರ ರಕ್ಷಕ ದೇವತೆಯ ಸಂಕೇತವಾಗಿ ನೆಟ್ಟು ಪೂಜಿಸುತ್ತಿದ್ದ ಬಗ್ಗೆ ತಮಿಳು ಸಾಹಿತ್ಯದಲ್ಲಿ ಉಲ್ಲೇಖ ಗಳಿವೆ. ಕ್ರಿ.ಪೂ. ೩೨೧-೨೯೬ರಲ್ಲಿಯೆ ಕೌಟಿಲ್ಯನು ಅರಣ್ಯ ನೀತಿಯನ್ನು ರೂಪಿಸಿದ್ದ ; ರಾಜ್ಯದ ಅವಶ್ಯ ಕತೆಗಳಿಗನುಗುಣವಾಗಿ ಆರ್ಥಿಕ ಶಕ್ತಿವರ್ಧನೆಗಾಗುವಂತೆ ಅರಣ್ಯಗಳ ವರ್ಗೀಕರಣ ಮಾಡಿದ್ದ.[3] ಕೊಡವರ ಮೂಲಪುರುಷ ಕದಂಬ ವಂಶದ ಚಂದ್ರವರ್ಮ ಎನ್ನ ಲಾಗಿದೆ ; ಕದಂಬ ರಾಜವಂಶಕ್ಕೆ ಕದಂಬ ವೃಕ್ಷದ ಕಾರಣ ಹೆಸರು ಮೂಡಿತು ಎಂದಿರುವಲ್ಲಿ, ಸಂಬಂಧಗಳ ಸಂವಾದಿಯಾಗಿವೆ ಎನಿಸುತ್ತವೆ. ಈ ಮೇಲಿನ ಅನೇಕ ಅಂಶಗಳು ಕೊಡಗಿನ ಜನಪದ-ದೇವರ ಕಾಡುಗಳ ಸಂಬಂಧದಲ್ಲಿ ಸಾಂಕೇತಿಕವಾಗಿ ಆಚರಣೆಗಿರುವುದೇ ಆಗಿದೆ.

ಬೆಟ್ಟಯತ್‌ನಾಡಿನ ಕೈಕೇರಿ ಬಳಿಯ ಕುಂದ ಬೆಟ್ಟದಲ್ಲಿ ಜಾತ್ರೆಗೆ ಹರಕೆ ಹೊತ್ತವರು ಮಂಡಿಯಿಂದ ಮುಡಿಯವರೆಗೆ ಗಿಡದೆಲೆಗಳಿಂದ ಅವರಿಸಿಕೊಳ್ಳುವ 'ಬೆತ್ತಲೆ ಕಳಿ' ಆಡುತ್ತಾರೆ. ಕುಮಟೂರು ದೇವರ ಕಾಡಿನ ದೇವತೆಯ (ಹಬ್ಬದಲ್ಲಿ) ಬಳಿ ಕೆಂಬಟ್ಟಿ ಹರಿಜನ ಹೆಣ್ಣು ಮಕ್ಕಳು ತಲೆಯವರೆವಿಗೂ ಗಿಡದೆಲೆಗಳನ್ನು ಸುತ್ತಿಕೊಂಡು ಹರಕೆ ಕುಣಿತ ಸಲ್ಲಿಸುತ್ತಿದ್ದರಂತೆ. ರುದ್ರಗುಪ್ಪೆಯ ಪಾರಣಮಾನಿ ಹಬ್ಬದಲ್ಲಿ ಮೈಗೆಲ್ಲ ಹುಲ್ಲು ಸುತ್ತಿಕೊಂಡು ಆಡುವ 'ನಗ್ನ ಹುಲ್ಲುಭೂತ' ಗಾಳಿಬೀಡಿನ ಭದ್ರಕಾಳಿ ದೇವತೆಯ ಹಬ್ಬದಲ್ಲಿ ಕಾಲಿಗೆ ಹುಲ್ಲುಹಗ್ಗ, ತಲೆಗೆ ಹುಲ್ಲಿನಿಂದ ಮಾಡಿದ ಕೊಂಬು ಕಟ್ಟಿಕೊಂಡು ಆಡುವ 'ಬೇಡು ಆಟ', ಆರಮೇರಿಯ ಕೆಂಬಟ್ಟಿ ಹರಿಜನರು ಹುತ್ತರಿ ಕೋಲಾಟದ ಮೂರು ದಿನ ಮೈಗೆ ಬಾಳೆ ತರಗುಗಳನ್ನು ಸುತ್ತಿಕೊಂಡು ಆಡುವ ಆಟ, ಇವೆಲ್ಲವೂ ಪ್ರಾಚೀನ ವೃಕ್ಷ ಆರಾಧನೆ-ಅಂಗ ಪದ್ಧತಿಗಳ ಪಳಯುಳಿಕೆಗಳೆಂದು ಇಂದು ತೋರಿ ಬರು ತ್ತಿವೆ. ಹೀಗೆ ಕೊಡಗು ಸಂಬಂಧದ ಒಬ್ಬ ಮೂಲ ಪುರುಷನಿಗೆ ದೇವತ್ವವನ್ನು ಜತನಗೊಳಿಸುವ, ವೃಕ್ಷಗಳ ದೇವನೆಲೆಯನ್ನು ಆರಾಧಿಸುವ ಪ್ರಾಚೀನ ಪರಂಪರೆ ಕೊಡಗಿನ ಪ್ರತಿಗ್ರಾಮಗಳಲ್ಲಿ ಕಂಡುಬರುತ್ತದೆ. ಅಂತಾಗಿ ವಿಶೇಷವೆನಿಸಿರುವ ಇಲ್ಲಿನ ದೇವರ ಕಾಡುಗಳ ಸ್ವರೂಪ, ನಿರ್ವಹಣಾ ನಿಯಮ, ವರ್ಗೀಕರಣ, ಸ್ಥಿತಿಗತಿ ಇತ್ಯಾದಿ ವಿವರಗಳತ್ತ ಗಮನಿಸಬೇಕು.

ಈ ಕಾಡಿನಲ್ಲಿನ ಮರಗಳ ಬಗ್ಗೆ ಜನರೇ ಸ್ವತಃ ಕೆಲವು ನಿಯಮಗಳನ್ನು ವಿಧಿಸಿಕೊಂಡಿರುತ್ತಾರೆ. ಅವು ಗಳೆಂದರೆ : ದೇವರ ಕಾಡಿನ ಮರಗಳನ್ನು ಕಡಿಯ ಬಾರದು. ಬಿದ್ದ ಮರಗಿಡದೆಲೆಗಳು ಅಲ್ಲಿನ ಸಸ್ಯಗಳಿ ಗೆಲ್ಲ ಎಲೆಗೊಬ್ಬರವಾಗಬೇಕು. ಒಣಗಿ ಬಿದ್ದ ಅಥವಾ ಮಳೆಗಾಳಿಗೆ ಬಿದ್ದ ಮರಗಳನ್ನು ಅಲ್ಲಿಯೇ ಗೆದ್ದಲು ಹಿಡಿಯಲಿ ತೆಗೆಯಬಾರದು. ಮಕ್ಕಳೂ ಕೂಡ ಅಲ್ಲಿನ ರೆಂಬೆಕೊಂಬೆ ಮುರಿಯಬಾರದು. ಯಾವ ಗಿಡ, ಪೊದೆಯನ್ನೂ ಉರುವಲಿಗೆ ಬಳಸಬಾರದು. ವಾರ್ಷಿಕ ಹಬ್ಬದಾಚರಣೆಗಳು ಇಲ್ಲಿ ನಡೆಯಬೇಕು. ತುಲಾ ಸಂಕ್ರಮಣದಲ್ಲಿ 'ಬೊತ್ತು' (ಬಿದಿರು ಕೋಲು ಅಥವಾ ಕಾಂಡ ಗಿಡಕ್ಕೆ ಕೈಬಳ ಬಳ್ಳಿ ಸುತ್ತಿಡುವುದು), ಹುತ್ತರಿಯಲ್ಲಿ ಕದಿರು ತಂದು ಇಲ್ಲಿ ಇಡಬೇಕು. ಹುತ್ತರಿ ಕೋಲಾಟ ಇತ್ಯಾದಿಗಳು ಈ ಕಾಡಿನ ಸನಿಹದ 'ಮಂದ್' ನಲ್ಲಿ ನಡೆಯಬೇಕು. ಹೊಸದಾಗಿ ಹರಕೆ ಮಾಡಿ ಕೊಂಡಂತೆ ದೇವರ ಕಾಡನ್ನು ರೂಪಿಸಬೇಕೆಂದರೆ 'ತಿರುವಳ'ದ ದೇವರ (ಆವೇಶ ಬಂದವರು) ಆದೇಶದಂತೆ ತಮಗೆ ದತ್ತವಾಗಿರುವ ಬಾಣೆಯ ಎತ್ತರದ ಜಾಗದಲ್ಲಿ ನೆಲೆಯನ್ನು ಅದಕ್ಕಾಗಿ ಮೀಸಲಿಡಬೇಕು ; ಎಲ್ಲರ ಪೂಜೆಗೆ ಅದು ಅನುವಾಗಿರಬೇಕು. ಹಾಲು ಬರುವ ಮರ ಒಂದಾದರೂ ಅಲ್ಲಿರಬೇಕು.

ಸುಗ್ಗಿದೇವರ ಬನಗಳಾದರೆ ಸುಗ್ಗಿ ಕಟ್ಟಿ ಹಬ್ಬ ದಲ್ಲಿ ಅಲ್ಲಿ ಹಾಲು ಬರುವ ಮರಕ್ಕೆ ಮೂರು ಏಟು ಹಾಕಿ ಕಾಡಿಗೆ ಕಲ್ಲು ಎಸೆದು ನಮಿಸಿ ಬರಬೇಕು. ಗ್ರಾಮೀ ಣಾದಿಯಾಗಿ ದೇವಚಾರ ನಿರ್ವಹಣೆಯ ಮುಖ್ಯಸ್ಥರಾದ ದೇವತಕ್ಕರು, ಬಂಧಾರ ನಿರ್ವಹಣೆಯ ಮುಖ್ಯಸ್ಥರಾದ ಬಂಧಾರ ತಕ್ಕರು, ಅರ್ಚಕರು ಅಥವಾ ಶಾಂತಿಕಾರರು

---

3 M.G. ChandraKanth ane JeffRomm : 'Sacred forests, secular forests policies and people's Actions', Natural Resources Journal, New-Mexico 1991, P. 744

ದೇವರ ಕಾಡಿನ ರಕ್ಷಣೆಯನ್ನೂ ನೈತಿಕ ಹೊಣೆಯಿಂದ ಮಾಡಬೇಕು. ಅರ್ಚಕರು, ವೀರಶೈವ, ಬ್ರಾಹ್ಮಣ, ಐರೀರ, ಗೊಲ್ಲ, ಗೌಡ, ಕೆಂಬಟ್ಟ ಹರಿಜನ ಸಂಗಡದಿಂದ ಸ್ಥಳೀಯ ಪದ್ಧತಿ-ದೇವರಿಗನುಗುಣವಾಗಿ ಇರಬಹುದು.[4] ಹೀಗಿದ್ದೂ ಗೊತ್ತಿಲ್ಲದೆ ದೇವರ ಕಾಡಿನಲ್ಲಿ ಮರ ಕಡಿದರೆ ಗ್ರಾಮ ಸಭೆಯ ಮುಂದೆ ಬಂದು ಕ್ಷಮೆ ಕೇಳಿ ತಪ್ಪು ದಂಡ ತೆರಬೇಕಿತ್ತು.[5] ಇಂದು ಸಂದರ್ಭ ಹಾಗು ಅಗತ್ಯಕ್ಕನುಗುಣವಾಗಿ ಕೆಲವು ರಿಯಾಯಿತಿಗಳೇನೋ ಇವೆ. ಧಾರ್ಮಿಕ, ನೈತಿಕ ನಂಬಿಕೆಗಳು ಅನೇಕ ಕಾರಣ ಗಳಿಂದ ಸಡಿಲವಾದರೂ ಇಂದೂ ಈ ದೇವರ ಕಾಡುಗಳ ಅಸ್ತಿತ್ವಕ್ಕೆ ಅಷ್ಟೇನೂ ಧಕ್ಕೆಯಾಗದಿರುವುದು ಸಮಾ ಧಾನದ ಸಂಗತಿ. ಸರ್ಕಾರ ಹಾಗು ಜನತೆ ಬಹುತೇಕ ಕಡೆ ಸಾಧ್ಯವಿದ್ದಷ್ಟು ಈ ನಿಯಮಗಳನ್ನು ಪಾಲಿಸಿದರೂ ಮುಂದಿನ ಅಪಾಯಗಳ ದೃಷ್ಟಿಯಿಂದ ಎಲ್ಲೆಡೆ ಪಾಲ ನೆಯ ಅಗತ್ಯವಿದೆ. ಈ ದಿಸೆಯಲ್ಲಿ ಕೊಡಗೇತರ ನೆಲೆ ಗಳಲ್ಲಿ ಕಾಣಬರುವ ದೇವಾರಣ್ಯಗಳನ್ನು ಗಮನಿಸಿದರೆ ತೌಲನಿಕ ಕಲ್ಪನೆ ಒದಗುತ್ತದೆ.

**ಕೊಡಗಿನಾಚೆಯ ದೇವರ ಕಾಡುಗಳು :** ಚೈನಾ ದೇಶದಲ್ಲಿ ಬೌದ್ಧ ಮತ್ತು ತಾವೋ ಪೂಜಾ ಗೃಹ ಗಳ ಸುತ್ತಲೂ[6], ಥೈಲಾಂಡಿನಲ್ಲಿ ಸನ್ಯಾಸಿಗಳ ಜೀವನ ನಿರ್ವಹಣೆಗಾಗಿ[7] ವನಗಳಲ್ಲಿ ಕಾಡುಗಳನ್ನು ಬೆಳೆಸು ತ್ತಾರೆ. ಇಲ್ಲಿ ಬೇಟೆಯಾಡುವಂತಿಲ್ಲ. ಮಹಾರಾಷ್ಟ್ರ ದಲ್ಲಿ ಜನ್ನಿ ದೇವತೆಗೆ, ರಾಜಸ್ಥಾನದಲ್ಲಿ ಜೋಗ ಮಾಯಿ ದೇವತೆಗೂ[8] ನೇಪಾಳದಲ್ಲಿ ಧಾರ್ಮಿಕ ಸಂಸ್ಕಾರ ಸಂಬಂಧದ ಗುಡಿಕಾಡುಗಳು ಕಾಣಬರುತ್ತವೆ. ಇವೇ ಅಲ್ಲದೆ ಇಥಿಯೋಪಿಯ, ನೈಜೀರಿಯಾ, ಘಾನಾ, ಸಿರಿಯ, ಹಾಗು ಟರ್ಕಿಯಲ್ಲಿಯೂ ಪವಿತ್ರ ಕಾಡುಗಳಿವೆ. ಉತ್ತರ ಅಮೆರಿಕದಲ್ಲಿ ಸಮಾಧಿ ವನಗಳೂ ಉಂಟು.

ಕೇರಳದ ತಿರುವಾಂಕೂರಿನಲ್ಲಿ ಮೂಲಮನೆಯಾದ 'ತರವಾಡ್'ನ ತೋಟದ ನೈರುತ್ಯ ಭಾಗದಲ್ಲಿ 'ಸರ್ಪ ಕಾವು' (ನಾಗಬನ–ನಾಗಾರಣ್ಯ)ಗಳು ಪೌರಾಣಿಕ ಉಗಮದ ಕತೆ ಹೊಂದಿ ಅಸ್ತಿತ್ವದಲ್ಲಿವೆ.[9] ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಂಜುರ್ಲಿ, ಕೊರತಿ, ಶಾಸ್ತ, ಖಡ್ಗೇಶ್ವರಿ ಮುಂತಾದ ದೈವಗಳಿಗೆ ಕಾಡುಗಳುಂಟು. ಉತ್ತರ ಕನ್ನಡ ಜಿಲ್ಲೆಯಲ್ಲಿ ಜಟ್ಟನ ಕಾಡು, ಚೌಡೀ ಕಾಡು ಹಾಗ ಪಂಜುರ್ಲಿ ದೈವದ ಮೀಸಲು ಕಾಡುಗಳಿವೆ ಜನತೆಯೇ ರಕ್ಷಿಸಿಕೊಂಡು ಬರುತ್ತಿರುವ ಜಾಲೀಹಾಳದ ಬಳಿಯ ಹುಲಿಗವ್ವನ ಅಡವಿ, ಅರಹುಣಸಿಯ ಬನದವ್ವನ ಅಡವಿ, ನರಗುಂದದ ಪತ್ರವನ, ಉತ್ತರ ಕರ್ನಾಟಕದ ದೇವರ ಕಾಡುಗಳ ಕ್ವಚಿತ್ ಉದಾಹರಣೆ ಎನ್ನಬಹುದು. ಹಾಸನ ಜಿಲ್ಲೆಯ ಚಿಕ್ಕ ಕಾಡನೂರು ಗ್ರಾಮದ ದೇವತೆ ಕರಿಯಮ್ಮನಿಗೆ ಮಠದ ತೋಪು ಇದೆ. ಒಂದು ಕಾಲಕ್ಕೆ ದೇವರ ಕಾಡನ್ನು ಹೊಂದಿದ್ದ ಶಿವಮೊಗ್ಗ ಜಿಲ್ಲೆಯ ತರೀಕೆರೆ ಸಾಲು ಮರದಮ್ಮನಿಗೆ ಇಂದು ಏಕ ವೃಕ್ಷ ಮಾತ್ರ ಉಳಿದಿದೆ. ತುಮಕೂರು ಜಿಲ್ಲೆಯ ಬಿದಿರೆಯ ಬಿದಿರಮ್ಮನಿಗೆ ಬಿದಿರು ಕಾಡು ಇಂದಿಲ್ಲ. ಉತ್ತರ ಕನ್ನಡ ಜಿಲ್ಲೆಯ ಹುಣಸೆ ಹೊಂಡದ ವೆಂಕಟರಮಣ ದೇವರ ಕಾಡು ಅನ್ವಯಾರ್ಥಕವಾಗಿ ಅಸ್ತಿತ್ವ ಉಳಿಸಿ ಕೊಂಡಿಲ್ಲ. ಬಯಲು ಸೀಮೆಯ ಶೃಂಗಾರ ತೋಟ, ತುಳಸಿ ತೋಟದ ಇತಿಹಾಸ ಹಾಗು ಸ್ಥಿತಿಗತಿ[10] ಗಮ

---

4 ಬ್ರಹ್ಮಗಿರಿ : ಕೊಡವ ಭಾಷಾ ವಾರಪತ್ರಿಕೆ, ಮಡಿಕೇರಿ, ೩-೮-೧೯೯೨, ಪು. ೧೦

5 ಶಕ್ತಿ : ರವಿವಾರದ ರಸಮಂಜರಿ, ಮಡಿಕೇರಿ, ೫-೭-೧೯೯೨, ಪು. ೯

6 N.K. Menzies : 'Frees, fields and people, the forests of China from seventeenth to Ninteeth Century' unpublished ph.D. thesis, University of California 54-56 (1988)

7 Dusit Wechait : 'Buddist Monks and Social forestry in Thailand', Odi, Summer 1990, p. 3

8 Madhav Gadgil and V D Varthak : 'Social Groves of India—A plea for continued conservation' Journal of Bomday Natural History society, Vol. 72, No. 2, p. 315-318

9 Madras Govt. Museum Bulletin, Vol. III, No. 1, Anthropology, 1900, p. 279

10 ಲಕ್ಷ್ಮಣ ತೆಲಗಾವಿ : 'ಚಿತ್ರದುರ್ಗ ಬೆಟ್ಟದ ಪೆರುಮಾಳಪುರ : ಮರುಶೋಧನೆ', ಇತಿಹಾಸ ದರ್ಶನ (ಸಂ) ಸೂರ್ಯನಾಥ ಕಾಮತ್, ಸಂ. ೫, ೧೯೯೦, ಪು. ೧೩೭-೧೩೯

ನಿಸಿದರೆ ಅವುಗಳ ಒಂದು ಕಾಲದ ಹೂ ಕಾಡಿನ ಸ್ವರೂಪ ಇಂದಿಲ್ಲವೆಂದು ಸ್ಪಷ್ಟ. ಮಠಗಳ ಬಿಲ್ವಪತ್ರೆವನಗಳ ಸ್ಥಿತಿಯೂ ಹೀಗೆಯೇ. ಅಲ್ಲದೆ ಇಲ್ಲೆಲ್ಲ ದೇವರ ಕಾಡಿನ ಸಂರಚನೆಯ ಬಗ್ಗೆ ಮಾಹಿತಿ ಸಾಲದೆನಿಸುತ್ತದೆ.

ನಮ್ಮ ೧೯೫೨ರ ರಾಷ್ಟ್ರೀಯ ಅರಣ್ಯ ನೀತಿಯ ಪ್ರಕಾರ ವೃಕ್ಷಾಧಾರಿತ ಭೂಮಿ, ರಕ್ಷಿತ ಅರಣ್ಯ, ರಾಷ್ಟ್ರೀಯ ಹಾಗು ಗ್ರಾಮೀಣ ಅರಣ್ಯ ಎಂಬ ವಿಂಗಡಣೆ ಇದೆ ; ಪವಿತ್ರ ವನ ಮತ್ತು ದೇವರ ಕಾಡುಗಳನ್ನು ಅಭಿವೃದ್ಧಿಗೊಳಿಸುವುದೂ ಇದೆ. ೧೯೮೮ ರ ಅರಣ್ಯ ನೀತಿಯ ಪ್ರಕಾರ ನೈಸರ್ಗಿಕ ಕಾಡುಗಳನ್ನು ಯಾವುದೇ ಕಾರಣಕ್ಕಾಗಿಯೂ ಕಡಿಯುವಂತಿಲ್ಲ, ಎಂದಿದೆ. ಈ ವಿಂಗಡನೆಯಲ್ಲಿ ಧಾರ್ಮಿಕ ವೃಕ್ಷಗಳು, ಅಧ್ಯಾತ್ಮಿಕ ನಿಸರ್ಗ ನೆಲೆಗಳು ಎಂಬುದೂ ಉಂಟು.

ರಾಷ್ಟ್ರೀಯ ಅರಣ್ಯ ನೀತಿಯಲ್ಲಿ ಹೇಳಿರುವ ರಕ್ಷಿತ ಅರಣ್ಯಗಳ ಅಭಿವೃದ್ಧಿಯ ಉದ್ದೇಶಗಳು ಹೀಗಿವೆ— ಅರಣ್ಯದ ಭೂಮಿ, ಜಲ ಹಾಗು ಭೂಸಾರವನ್ನು ಕಾಪಿಟ್ಟುಕೊಳ್ಳುವುದು ; ವಿಶಿಷ್ಟ ಸಸ್ಯ ತಳಿಗಳನ್ನು ರಕ್ಷಿಸುವುದು ; ಬಡ ಜನತೆಯ ಸೌದೆಯ ಅವಶ್ಯಕತೆಗಳನ್ನು ಪೂರೈಸುವುದು ; ಬಡ ಗ್ರಾಮೀಣರಿಗೆ ಉದ್ಯೋಗಾವಕಾಶವನ್ನು ಕಲ್ಪಿಸುವುದು.[11] ಕೊಡಗಿನಲ್ಲಿ ಮೊದಲಿನ ಎರಡೂ ಉದ್ದೇಶಗಳು ದೇವರ ಕಾಡಿನಲ್ಲಿ ಅನ್ವಯವಾಗಿಯೇ ಬಂದಿವೆ. ಉಳಿದವು ಅಲ್ಲಲ್ಲಿನ ಮೌಲ್ಯ ಗೌರವಕ್ಕನುಗುಣವಾಗಿ ರಿಯಾಯಿತಿಗಳನ್ನೂ ಹೊಂದಿರುವ ಸಂದರ್ಭಗಳಿವೆ. ಪವಿತ್ರ ವನ-ವೃಕ್ಷಗಳು, ಅಧ್ಯಾತ್ಮಿಕ ನಿಸರ್ಗರಮಣೀಯ ನೆಲೆಗಳೂ ಕೊಡಗಿನಲ್ಲಿ ಸಾಕಷ್ಟಿವೆ.

**ಕೊಡಗಿನ ಶಾಸನಗಳಲ್ಲಿ ದೇವರ ಕಾಡುಗಳು**[12]

೫ನೆಯ ಶತಮಾನದ ಮಡಿಕೇರಿ ಶಾಸನದಲ್ಲಿ ಶ್ರೀವಿಜಯ ಜಿನಾಲಯಕ್ಕೆ ಕಾಡನ್ನು ದಾನವಾಗಿ ನೀಡಿರುವಂತಿದೆ. (ಆದರಲ್ಲಿ ಉಲ್ಲೇಖವಿರುವ ಅನೇಕ ಊರುಗಳ ಹೆಸರುಗಳು ಇಂದಿಗೂ ಕೊಡಗಿನಲ್ಲಿವೆ.) ನಾಲ್ದಿಸೆಯಲ್ಲಿರುವ ವೃಕ್ಷಗಳು, ತಟಾಕಗಳು, ಬಹುಮೂಲಿಕಾ ಪಂಕ್ತಿಯೂ ಜಿನಾಲಯಕ್ಕೆ ಇದೆ. ಇದನ್ನು ಜಿನಕಾಡು ಬಸದಿಕಾಡು ಅಥವಾ ಪಳ್ಳಿ ಕಾಡು ಎನ್ನುವುದುಂಟು. ಕ್ರಿ.ಶ. ೧೨೭೮ರ ನಿಡುತ ಶಾಸನದಲ್ಲಿ ಸಿರಹದ ಮಲ್ಲಿಕಾರ್ಜುನ ದೇವರಿಗೆ ದೇವರಕೆರೆ ಹೂವಿನ ಗದ್ದೆ ನೀಡಿರುವ ಸಂಗತಿ ಇದೆ. ಕ್ರಿ.ಶ. ೧೩೭೧ರ ಪಾಲೂರು (ಮಹಾದೇವರು) ಹಾಗು ಭಾಗಮಂಡಲ (ಭಗಂಡೇಶ್ವರ) ದೇಗುಲ ಶಾಸನಗಳ ರೀತ್ಯಾ ಆಯಾ ದೇವರಿಗೆ ಬೋಧರೂಪ ಭಾಗವರ್ ಎಂಬ ರಾಜ ೧೮ ನಾಡಿನ ಬ್ರಾಹ್ಮಣರು, ೧೮ ದೇಶದ ವೈಷ್ಣವರು, ವರ್ತಕರು ನಿರ್ವಹಿಸಿ ರಕ್ಷಿಸಬೇಕಾದ 'ಪೂವಿಸ್ಥಾನ'ಗಳನ್ನು ನೀಡಿದ್ದಾನೆ. ಇದು ಅಲ್ಲಿಯ ಹೂವಿನ ಕಾಡುಗಳ ಅಸ್ತಿತ್ವವನ್ನೂ ಸೂಚಿಸುವಂತಿವೆ. ೧೬೭೨ರ ಮುದಾಪುರ ಮಠದ ಶಾಸನವನ್ನು ಉಲ್ಲೇಖಿಸುವಲ್ಲಿ ಅಲ್ಲಿದ್ದ ಮಠದ ಕಾಡು, ಕೆರೆಗಳ ಬಗ್ಗೆ ಸೂಚನೆ ಇದೆ. ಹಾರಂಗಿ ಶಾಸನವನ್ನು ಉಲ್ಲೇಖಿಸುವಲ್ಲಿ 'ಚಿಕ್ಕ ಮಠದ ಬಿದಿರು ಕಾಡು' ಎಂದೂ ಇದೆ. ಪಾಡಿ ಇಗ್ಗುತಪ್ಪ ದೇವರಿಗೆ ಇತ್ತ ಕ್ರಿ.ಶ. ೧೮೧೦ರ ಹಸ್ತಿ ಶಾಸನದ ಆನೆ ಕುರಿತಾದ ಕತೆಯ ಹಿನ್ನೆಲೆಯಲ್ಲಿ ಲಿಂಗರಾಜ ಒಡೆಯನು ದೇವರಿಗೆ (ಬಲ್ಯಾಟರೆ !) ದೊಡ್ಡ ಕಾಡನ್ನು ಬಿಟ್ಟುಕೊಟ್ಟಿರುವ ಸೂಚನೆ ಇದೆ. ಅಲ್ಲದೆ ಕ್ರಿ.ಶ. ೧೯೦೮ರಲ್ಲಿ ದೇಗುಲವು ಮುಜರಾಯಿಗೆ ಸೇರುವ ಮುನ್ನ ದೇವರಿಗೆ ೧೧೦ ಎಕರೆ ದೇವರ ಕಾಡು ಇತ್ತು ಎಂಬ ಮಾತಿದೆ.[13] ಕ್ರಿ.ಶ.ಸು. ೧೦೦೧ರ ಕಾಲದಿಂದಲೂ ಇರುವ ಇರ್ಪು ರಾಮೇಶ್ವರ ದೇವರಿಗೆ ಪರಂಪರೆಯಲ್ಲಿ ಮೊತ್ತಗೊಂಡ ದೇವರಕಾಡು ಮತ್ತು ಕ್ರಿ.ಶ. ೧೮೪೦-೪೧ರ ಜೀರ್ಣೋದ್ಧಾರ ಸಮಯದಲ್ಲಿ ಬಹುಶಃ ಕಿಗ್ಗಟ್ಟು ನಾಡಿನ ರೈತರು ದೇವರಿಗೆ ಕಾಡಿನ ಜಾಗ ಬಿಟ್ಟು ಕೊಟ್ಟ ಕಾಡೂ ಇದೆ. ಇಂದು ಅದಕ್ಕೆ ಸು. ೧೩೦ ಎಕರೆಗೂ ಮೀರಿ ಇರುವ ಬೃಹತ್ ದೇವಾರಣ್ಯವೇ ಸಾಕ್ಷಿ ಎನಿಸುತ್ತದೆ.

**ದೇವರಕಾಡಿನ ದೇವತೆಗಳಲ್ಲಿ** : ಭಗವತಿ, ಭದ್ರಕಾಳಿ, ದುರ್ಗೆ, ಪನ್ನಂಗಾಲತಮ್ಮೆ, ಚಾಮುಂಡಿ-ಕರಿಚಾವುಂಡಿ, ಪುಲಿಚಾವುಂಡಿ, ನಡೆಚಾವುಂಡಿ, ಮುಂಜಾವುಂಡಿ, ಚೌಡಮ್ಮ, ಮಾರಮ . ಮುಂದತವ್ವ

11 Janaaranya, Samaj Parivaratana Samudaya, Dharwad etal. 1991, p. 11

12 ಎ.ಕ. ಸಂಪುಟ ೧. (ಪರಿಷ್ಕೃತ) ೧೯೭೨, ಮಡಿಕೇರಿ, ಪಾಲೂರು, ನಿಡ್ತ ಇತ್ಯಾದಿ ಶಾಸನಗಳು

13 ಪರದಂಡ ಚಂಗಪ್ಪ : ಶ್ರೀ ಇಗ್ಗುತಪ್ಪ ದೇವರು, ಕೊಡಗು, ೧೯೯೨, ಪು. ೭೮ ; ರಿಚ್‌ಟರ್ ೧೮೭೦ ಕೊಡಗು ಗ್ಯಾಸೆಟಿಯರ್ (ಪು. ೧೬೬)

(ಪಾರ್ವತಿ), ದಬ್ಬಚ್ಚವ್ವೆ, ಕಾವೇರಮ್ಮ, ಮಹಾಲಕ್ಷ್ಮಿ, ದೇವಿರಮ್ಮ, ನಾಡಮ್ಮ, ಕೆಂಚಮ್ಮ, ಪೂವ್ವದಿ, ಕುಂತಿಯಮ್ಮ, ನೀಲಮ್ಮ, ಸಜ್ಜಲವ್ವೆ, ಸಬತಾಯಿ (ಸುಗ್ಗಿ ದೇವರು) ಜೆಂಬಳೂರಮ್ಮ, ಪಿರಿಯಾಪಟ್ಟಣದಮ್ಮ, ಪೊನ್ನಿ, ಕುಕ್ಕಲಚ್ಚಿ, ಸಪ್ತಮಾತ್ರಿಕೆ, ಮಾಸ್ತಮ್ಮ ಮುಂತಾದವರು ಕಂಡು ಬರುತ್ತಾರೆ.

ಪುರುಷ ದೇವತೆಗಳಲ್ಲಿ ಶಿವಲಿಂಗ ಅಥವಾ ತ್ರಿಶೂಲ ಸಂಕೇತ ರೂಪದಲ್ಲಿರುವ ಐಯ್ಯಪ್ಪ (ಕೇರಳದ ಶಾಸ್ತಾವು ಅಯ್ಯಪ್ಪನಲ್ಲ) ಬಸವೇಶ್ವರ, ಗಣಪತಿ, ಮಹಾದೇವರು ಮಹಾಲಿಂಗೇಶ್ವರ ಪಂಚಲಿಂಗೇಶ್ವರ, ನಂಜುಂಡೇಶ್ವರ, ರಾಮೇಶ್ವರ ಕನ್ನೇಶ್ವರ, ಗೆಜ್ಜೇಶ್ವರ, ಸೋಮೇಶ್ವರ, ಮಲ್ಲಿಕಾರ್ಜುನ, ವೀರಭದ್ರ, ಕಾಲಭೈರವ (ಕಾಕೋಟಚ್ಚಪ್ಪ) ಬೀರೇದೇವರು, ಹರಿದೇವರು, ಬ್ರಹ್ಮದೇವರು ವೈತಲೆಯಪ್ಪ ಕೃಷ್ಣದೇವರು, ಸಾರ್‍ತಾವು ಅಯ್ಯಪ್ಪ, ಕೋಪಟ್ಟಿಯಪ್ಪ, ಇಗ್ಗುತಪ್ಪ, ತಾತಪ್ಪ ದೇವರು, ಶ್ರೀರಂಗ, ಭದ್ರಮೂರ್ತಿ, ವಿಷ್ಣುಮೂರ್ತಿ, ಕಲ್ಲಾಳಮೂರ್ತಿ, ಕುಂಟೀರ‍್ಲು, ಕ್ಷೇತ್ರಪ್ಪ, ಮುತ್ತಪ್ಪ, ಭೂತ ದೇವರು ಮಲೆದೇವರು, ಕಮ್ಮಕಟಪ್ಪ, ಚೆನ್ನತಪ್ಪ, ಮಂಜುನಾಥ, ಕುಮಾರಲಿಂಗೇಶ್ವರ ಮುಂತಾದವರು ದೇವರ ಕಾಡಿನಲ್ಲಿ ನೆಲೆಸಿರುವ ದೇವರುಗಳಲ್ಲಿ ಮುಖ್ಯರು. ಕೆಲವೆಡೆ ವೀರರ ವನವಿದ್ದು ದೇವರಂತೆ ಆರಾಧಿತರಾಗಿದ್ದಾರೆ. ದೇವರ ಕಾಡುಗಳ ಅತ್ಯಂತ ಜನಪ್ರಿಯ ದೇವತೆ ಐಯ್ಯಪ್ಪ ಶೇ. ೮೦ರಷ್ಟು ದೇವರ ಕಾಡುಗಳಲ್ಲಿ ಇವನಿಗೆ ಆರಾಧನೆ, ವಾರ್ಷಿಕಾಚಾರಗಳಿವೆ. ಸ್ತ್ರೀದೇವತೆಗಳಲ್ಲಿ ಭಗವತೀ ಪಾರ್ವತಿ, ಬಹು ಜನಪ್ರಿಯ ದೇವತೆ, ಮುಂದಿನವಳು ಭದ್ರಕಾಳಿ, ಹರಿಜನರಲ್ಲಿ ಪನ್ನಂಗಾಲತಮ್ಮೆ ಮುಖ್ಯ ದೇವತೆ.

**ದೇವರ ಕಾಡಿನಲ್ಲಿ ಕಂಡುಬರುವ ಮರಗಳು** : ಇಲ್ಲಿನ ಮರ ಗಿಡಗಳ ಎಲೆ, ತೊಗಟೆ, ಬಳ್ಳಿಗಳಲ್ಲಿ ರುಚಿಕರವಾಗಿ ಕಡಬು ಬೇಯಿಸಲು, ಉಷ್ಣದಖಾಯಿಲೆ, ಹುಳುಕಡ್ಡಿ ಹಾಗು ಅನೇಕ ಖಾಯಿಲೆಗಳಿಗೆ ಮದ್ದು ಮಾಡಲು, ಹಬ್ಬಗಳಲ್ಲಿ ಪವಿತ್ರ ಸಂಕೇತವಾಗಿ ಬಳಸಲು ಆಗುವ ಸಸ್ಯ ಮಾದರಿಗಳಿವೆ ಅವಕ್ಕಿರುವ ರಕ್ಷಣೆಯ ಕಾರಣ ಆ ಸಸ್ಯ ತಳಿಗಳು ಉಳಿದು ಬಂದಿವೆ, ಎನ್ನಬೇಕು. ಆದರೂ ಸಂದರ್ಭದ ಮಹತ್ವ ಅಗತ್ಯಕ್ಕನುಗುಣವಾಗಿ ಒಮ್ಮೊಮ್ಮೆ ಅವುಗಳ ಸದುಪಯೋಗಕ್ಕೆ ಅಡ್ಡಿ ಕಾಣಬರುವುದಿಲ್ಲ. ಇಲ್ಲಿನ ಮರಗಳು ೯೦-೧೦೦ ಅಡಿ ಎತ್ತರ ಮೀರಿ ಬೆಳೆದಿರುವುದುಂಟು. ೧೫ ಅಡಿ ಸುತ್ತಳತೆ ಮೀರಿದ ಕಾಂಡಗಳನ್ನು ಹೊಂದಿರುವುದುಂಟು. ಈ ಸಹಜ ಎತ್ತರದ ಬೆಳಸಿನ ಕಾರಣ ಮಳೆ ಬಿರುಗಾಳಿಗೆ ಸಿಕ್ಕಿ ಮುರಿದು ಬಿದ್ದು ಗೆದ್ದಲು ಹಿಡಿದಿರುವುದೂ ಉಂಟು. ಬೇಕಾದ ತಾಪಮಾನ, ಎಲೆ ಗೊಬ್ಬರ, ಸೂರ್ಯಕಿರಣ, ಮಳೆಯ ಪುಷ್ಟಿ ಹಾಗು ರಕ್ಷಣೆ ಲಭ್ಯವಾಗಿ ಇಲ್ಲಿ ಅಭಿವೃದ್ಧಿಗೊಂಡಿರುವ ಸಂಗತಿ ಇದ್ದರೂ ಇಂದು ಆ ಹೆಚ್ಚಿನ ಗಮನ ನೀಡಬೇಕಾದ ಅವಶ್ಯಕತೆ ಒದಗಿದೆ. ಆ ಗಿಡ-ಮರಗಳ ಸಮೂಹ ಹೀಗಿದೆ :

ಹೆಬ್ಬಲಸು, ಧೂಪ, ಆದಿನಿ, ಮತ್ತಿ, ಬೂರುಗ ನೊಗಮರ, ನಂದಿ, ಹೊನ್ನೆ, ಆಲಂದೆ, ಬೆಳ್ಳಂದಿ, ಕೇದಗೆ, ಗೋಳಿಅತ್ತಿ, ಮಂಜ, ಚಪ್ಪ, ಬೈನೆ, ಭಂಗಿ, ಬಸರಿ, ಬಿಲ್ಲಿ, ಚಾಲೆ, ಪಾಲೆ, ಗೇರು, ಬಾಗೆ, ಕಕ್ಕೆ ಉಪ್ಪುಳಿ, ಪಣಿಯತಾಳಿ, ತಡಲೆ, ಪೂಮತ್ತಿ, ಆಲ, ಬಲ್ವಾರ, ಅರಳಿ, ಪಾರತ, ನಾಗಸಂಪಿಗೆ ಚೆಟ್ಟುವ (ಬೆಂದು), ಕಾಡು ಅಂಬಟ್ಟೆ, ನೀರಳತ್ ಕಾಯಿ, ಚಿಕ್ಕ ಹೂ, ಗರಿಕೆ, ಕೊಕ್ಕೆಕಾಯಿ ಮರಗಳಲ್ಲದೆ, ನೀಲಿ ಮರ, ಕೈಬಳಬಳ್ಳಿ, ಪೊಂಗ ಮರವೂ ಸಾಮಾನ್ಯವಾಗಿ ಇಲ್ಲಿ ಕಂಡು ಬರುತ್ತವೆ.

**ದೇವರ ಕಾಡುಗಳಿಂದ ಪ್ರಯೋಜನಗಳು** : ಪರಿಸರಕ್ಕೆ ತಂಪು ಒದಗುತ್ತದೆ. ವನ್ಯಪ್ರಾಣಿಗಳಿಗೆ ರಕ್ಷಣೆ ಒದಗಿ ಪರಿಸರ ಸಮತೋಲನವಿರುತ್ತದೆ. ಮಳೆ ಚೆನ್ನಾಗಿ ಆಗುತ್ತದೆ. ಈ ಕಾಡಿನ ನೆರೆಗೆ ಇರುವ ಕೃಷಿಗದ್ದೆ, ತೋಟಗಳಿಗೆ ಮಳೆ ಬಿದ್ದಾಗ ಕೊಳೆತ ಎಲೆಗಳ ಸಾವಯವ ಜಲ-ಗೊಬ್ಬರ ಲಭ್ಯವಾಗುತ್ತದೆ. ಹತ್ತೂ ಜನರಿಗೆ ಬೇಕಾದ್ದು ಈ ಕಾಡು. ಆದ್ದರಿಂದ ಅದರ ರಕ್ಷಣೆಯಲ್ಲಿ ಸಾಮೂಹಿಕ ಹೊಣೆಗಾರಿಕೆ ಇದ್ದು, ಸೌಹಾರ್ದ ಬೆಳೆಯುತ್ತದೆ. ಸ್ವಂತ ಬಾಣೆ, ಜಮೀನು ಆಗಿ ಮಾರ್ಪಟ್ಟಿದೆ, ಆಕ್ರಮಿತವಾದರೆ ಕೇವಲ ಆರ್ಥಿಕ ದೃಷ್ಟಿ ಪ್ರಧಾನವಾಗುತ್ತದೆ. ಕೈಕೈ ಬದಲಾಯಿಸುತ್ತ ಮೌಲ್ಯ ನಶಿಸುತ್ತದೆ. ಇರುವಷ್ಟು ದೇವರ ಕಾಡುಗಳನ್ನಾದರೂ ಉಳಿಸಿದರೆ-ಉಳಿದರೆ ನೆರೆಯ ಕಾಡುಗಳ ರಕ್ಷಣೆ, ಶುದ್ಧಗಾಳಿ, ದೈವಿಕ ಮೌಲ್ಯದ ಅರಿವು

ಒದಗುತ್ತದೆ. ಕರ್ನಾಟಕದ ಕೊಡಗಿನ ಸಂಸ್ಕೃತಿ ಉಳಿಯುತ್ತದೆ. ಇದಲ್ಲದೆ ಒಂದು ಎಕರೆ ಅರಣ್ಯ ಪ್ರದೇಶ ಋತುವೊಂದರಲ್ಲಿ ೩೦೦೦ ಘನ ಮೀಟರು ಗಳಷ್ಟು ತೇವಾಂಶ ಸಂಗ್ರಹಿಸುತ್ತದೆ. ರಕ್ಷಣೆಗೊಂಡ ಅರಣ್ಯದಿಂದ ಭೂಸವೆತದ ಪ್ರಮಾಣ ಕಡಿಮೆ ಆಗುತ್ತದೆ.[14] ಕೊಡಗಿನ ಎಲ್ಲ ಅರಣ್ಯಗಳಲ್ಲಿ ಆಯುರ್ವೇದ ಹಾಗು ಸಿದ್ಧ ಪದ್ಧತಿಗೆ ಒದಗುವ ಔಷಧೀಯ ಗಿಡ ಮರಗಳು ಸುಮಾರು ೭೪೭ ಮಾದರಿ ಗಳಷ್ಟು ಹೊಂದಿವೆ, ಎಂದು ಈಚೆಗೆ ಗುರುತಿಸಿರುವುದು[15] ತುಂಬ ಗಮನಾರ್ಹವಾಗಿದೆ.

**ದೇವರ ಕಾಡುಗಳ ಉಪ ವಿಂಗಡನೆ :**
೧. ಬಸದಿ ಅಥವಾ ಜಿನ ಕಾಡುಗಳು : ಮಡಿಕೇರಿ ಶಾಸನ ಹಾಗು ೯-೧೦ನೇ ಶತಮಾನಗಳ ಶಾಸನಗಳಿಂದ ಜಿನಾಲಯಕ್ಕೆ ಕೊಟ್ಟ ದಾನದಲ್ಲಿ, ಮಲೆಪರು ಹಾಗು ಮಲೆಸಾಸಿರ್ವರು ಸಾಕ್ಷಿಗಳು ಹಾಗು ರಕ್ಷಕರು ಆಗಿರಲು ರಾಜ ನಿಯಮ ಸೂಚಿಸಿದೆ. ಕ್ರಿ.ಶ. ೧೪೯೦ರ ಮುಳ್ಳೂರು ಶಾಸನ ರೀತ್ಯಾ ಬಸದಿಗೆ ಆಲದ ಹಾಗು ಇತರೆ ವೃಕ್ಷಗಳ ಕಾಡನ್ನು ನೀಡಿರುವ ಅಂಶವಿದೆ.

೨. ಸಮುದಾಯದ ದೇವರ ಕಾಡುಗಳು : ಗ್ರಾಮೀಣ ಕುಟುಂಬಗಳು ತಮಗೆ ಸೇರಿದ ನೆಲೆಯ ಕೆಲವು ಭಾಗ ಬಿಟ್ಟುಕೊಟ್ಟು ಅಲ್ಲಿ ಕಾಡು, ಕೆರೆ, (ಕೊಳ) ದೇವನೆಲೆ ರೂಪಿಸಿ ಮಾಡಿದ ಕಾಡುಗಳಿವು. ಕಾಲಾನಂತರ ಸಾಮೂಹಿಕ ಆಚಾರಗಳು ಮೇಳೈಸು ತ್ತವೆ; ಅವುಗಳ ರಕ್ಷಣೆ ಸಮುದಾಯದಲ್ಲಿ ಪರಂಪರಾಗತ ವಾಗಿ ನಡೆದು ಬರುತ್ತದೆ.

೩. ದೇವರ ಪೈಸಾರಿ ಕಾಡು : ಸರ್ಕಾರದ ನಿರ್ವಹಣೆಗಿದ್ದು ಸರ್ವೆ ಆಗಿರುವ ಕಾಡುಗಳಿವು. ನಿರ್ದಿಷ್ಟ ಸಂದರ್ಭಗಳಲ್ಲಿ ದೇವರ ಆಚಾರಗಳಿಗೆ ಎಲೆ, ಬಳ್ಳಿ ಮರಗಳ ಭಾಗಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ಅನುಮತಿ ಪಡೆದು ತೆಗೆದುಕೊಳ್ಳಲು ಇಲ್ಲಿ ಅವಕಾಶವಿದೆ.

೪. ಖಾಸಗಿ ನಿರ್ವಹಣೆಯ ದೇವರ ಕಾಡುಗಳು: ನಿರ್ದಿಷ್ಟ ಮನೆತನ ಅಥವಾ ಕುಟುಂಬವು ತನ್ನ ಜಾಗ ದಲ್ಲಿ ರೂಪಿಸಿ ಕೊಂಡ ದೇವರ ಕಾಡನ್ನು ನೆರೆಯವರ ಸಹಕಾರವನ್ನು ಪಡೆದು ರಕ್ಷಿಸುವುದು. ಗುಹ್ಯ ಹಾಗೂ ಮುಂಚಳ್ಳಿಯ ದೇವರ ಕಾಡು ಈ ವರ್ಗಕ್ಕೆ ಸೇರುತ್ತದೆ.

೫. ಪವಿತ್ರವನ-ಕಾಡು-ಕಟ್ಟೆಗಳು : ಹಾಲು ಬರುವ ಮರಗಳಾದ ಗೋಳ, ಅತ್ತಿ ಮುಂತಾದ ಮರ ಗಳಲ್ಲದೆ 'ಅರಳಿ-ನೆಲ್ಲಿ' ಮರಗಳನ್ನು ಬೆಳಸಿ ಕಟ್ಟೆ ಕಟ್ಟಿ ನಿಯಮ ಪಾಲಿಸಿ, ಹಬ್ಬ, ಕುಣಿತ ನಡೆಸುತ್ತಾರೆ. ಈ ಕಟ್ಟೆಗಳ ಮೇಲೆ ಕೂರುವಂತಿಲ್ಲ.

೬. ಹೊಲೆ ದೇವರ ಕಾಡುಗಳು . ಜಮಾಬಂದಿ ಯಲ್ಲಿ ಇದೇ ಹೆಸರಿನಲ್ಲಿದ್ದು ಸರ್ವೇನಂಬರುಗಳನ್ನು ಹೊಂದಿವೆ. ಕೊಡಗಿನ ಮೂಲನಿವಾಸಿ ಹರಿಜನರಾದ ಕೇಂಬಟ್ಟೆ ಹರಿಜನರಿಗೆ ಇಂತಹ ಕಾಡುಗಳಿದ್ದು ಪನ್ನಂಗಾಲ ತಮ್ಮೆ ಅಲ್ಲಿನ ಮುಖ್ಯ ದೇವತೆ ಆಗಿದ್ದಾಳೆ. ಮೇದರಿಗೂ ಐಯ್ಯಪ್ಪ-ಚಾವುಂಡಿ ದೇವರ ಕಾಡುಗಳಿವೆ. ಸವರ್ಣೀಯರೂ ಭಾಗ ವಹಿಸುವ ಇಲ್ಲಿನ ಹಬ್ಬ-ದೇವರ ನೆಲೆಯ ಪೂಜಾರಿಗಳು ಹರಿಜನರೇ.

೭. ಕೈಮಡ ಕಾಡು ಅಥವಾ ಕಾರೊಣ ಕಾಡು : ವಂಶದ ಮೂಲ ಹಿರಿಯನ ಸ್ಮಾರಕ ನೆಲೆಯಾದ ಕೈಮಡದ ಗುರುಕಾರೊಣರ ಹೆಸರಲ್ಲಿ ಅಲ್ಲಲ್ಲಿ ಕಾಡು ಗಳುಂಟು.

೮. ಸುಗ್ಗಿ ದೇವರ ಕಾಡು-ಬನಗಳು : ಸೋಮವಾರಪೇಟೆ ತಾಲೂಕಿನಲ್ಲಿ ಹೆಚ್ಚಾಗಿ ಕಂಡು ಬರುವ ಇವು ಹೆದ್ದೇವರಬನ ಗ್ರಾಮದೇವತಾಬನ, ಬೀರೇದೇವರ ಬನವನ್ನು ಒಳಗೊಂಡಿರುವುದುಂಟು. ಸಪ್ತ ಮಾತೃಕೆಯರು ಹಾಗು ಪಾರ್ವತಿ ಇಲ್ಲಿ ಪೂಜೆ ಗೊಳ್ಳುತ್ತಾರೆ.

೯. ಮಠದ ಕಾಡುಗಳು : ಮಠಗಳಿಗೆ ಮೀಸ ಲಾದ ಕಾಡುಗಳು. ಇವೂ ಸೋಮವಾರ ಪೇಟೆ ತಾಲೂಕಿ ನಲ್ಲಿ ಹೆಚ್ಚಾಗಿ ಕಾಣಬರುತ್ತವೆ.

---

14 ಅಜ್ಜಂಪುರ ಕೃಷ್ಣಸ್ವಾಮಿ : ಅದೇ, ಪು. XVIII

15 K.R. Keshava Murthy & S.N. Yoga Narasimhan : Flora of Coorg, Bangalore, 1990, 563-623

೧೦. ವೀರರ ವನ: ವೀರರ ಹೆಸರಿನಲ್ಲಿ ನಿರ್ವಹಿಸಿ ಕೊಂಡ ವನ.

೧೧. ಪಳ್ಳಿ ಕಾಡುಗಳು: ಕೊಡಗಿನ ಜಮ್ಮ ಮಾಪಿಳ್ಳೆಗಳಿಗೆ ಮಸೀದಿಗೆ (ಪಳ್ಳಿ) ಸಂಬಂಧಿಸಿದಂತೆ ಇವೆ. ದೇವರ ಕಾಡಿನ ನಿಯಮಗಳೂ ಇಲ್ಲುಂಟು. ಮೇಲ್ವಿಚಾರಣೆಗೆ ಪಳ್ಳಿತಕ್ಕರೂ ಉಂಟು. ಹುತ್ತರಿಯಲ್ಲಿ ಇಲ್ಲಿಗೆ ಕದಿರು ಹಾಕುತ್ತಾರೆ. ಶ್ರೀಮಂಗಲ, ಪೊನ್ನಂಪೇಟೆ ಹೋಬಳಿ, ಹಾಗು ಮೈತಾಡಿ ಚಾಮಿಯಾಲ್‌ನಲ್ಲಿ ಇವು ಕಾಣಬರುತ್ತವೆ. ಮೈತಾಡಿ ಚಾಮಿಯಾಲ್‌ನ ಪಳ್ಳಿಕಾಡಿನಲ್ಲಿ ಖಬರ್‌ಸ್ಥಾನವು ಅಳವಡಿಕೆಯಾಗಿದೆ.

೧೨. ಹೂವಿನ ಕಾಡುಗಳು: ೧೧ನೆಯ ಶತಮಾನದ ಪಾಲೂರು, ಭಾಗಮಂಡಲ ಶಾಸನಗಳಲ್ಲಿ ಬರುವ 'ಪೂವಿಸ್ಥಾನ' ಈ ಕಾಡುಗಳ ಪ್ರಾಚೀನ ಅಸ್ತಿತ್ವ ತೋರುವಂತಿದೆ. ದೇವರಿಗೆ ಬೇಕಾದ ಹೂಗಿಡ ಮರಗಳನ್ನು ಬೆಳೆಸಲು ಬೇಕಾದ ಕಾಡುಗಳು ಇವಾಗಿರಬೇಕು. ಕುಟ್ಟದ ಬಳಿ 'ಹೂವಿನ ಕಾಡು' ಹೆಸರು ಇರುವ ನೆಲೆ ಇಂದೂ ಇದೆ. ಇವಲ್ಲದೆ ಅಯ್ಯಪ್ಪ ದೇವರ ಕಾಡಿಗೆ ಸ್ತ್ರೀಯರ ಪ್ರವೇಶವಿಲ್ಲ ಎನ್ನುವುದರ ಅಪವಾದವಾಗಿ ಬಲ್ಲಮಾವಟಿಯ ಕುರ್ಚಂಡಲೆ ಅಯ್ಯಪ್ಪ ದೇವರ ಕಾಡು ಸ್ತ್ರೀಯರಿಗೇ ಮೀಸಲಾಗಿದೆ. ನಾಗಾರಾಧನೆ ಇದೆ. ಒಟ್ಟಾರೆ ಈ ಎಲ್ಲ ಬಗೆಯ ದೇವರ ಕಾಡುಗಳ ವಿಸ್ತೀರ್ಣ ೦.೩ ಸೆಂಟಿನಿಂದ ೧೩೫ ಎಕರೆಗಳನ್ನು ಮೀರಿ ವಿಸ್ತರಿಸಿ ಇರುವುದು ಕೊಡಗಿನಲ್ಲಿ ಕಾಣಬರುತ್ತದೆ.

**ದೇವರ ಕಾಡುಗಳ ಸರ್ವೆ ಹಾಗು ರಿಯಾಯಿತಿಗಳು**: ೧೮೭೩-೭೦ರ ಅವಧಿಯಲ್ಲಿ ಮದ್ರಾಸ್ ಟೋಪೋಗ್ರಾಫಿಕಲ್ ಅಂಡ್ ವಿಲೇಜ್ ಬೌಂಡರಿ ಸರ್ವೆ ಇಲಾಖೆಯು ಆಂದಿನ ದೇವರ ಕಾಡುಗಳ, ೧೮ ಕಾಡಿಟ್ಟ ಅರಣ್ಯಗಳ, ಕಾಫಿ ಎಸ್ಟೇಟುಗಳ ಸರ್ವೆ ನಡೆಸಿತು. ನಂತರ ಕರ್ನಾಟಕ ಸರ್ಕಾರದಿಂದಲೂ ನಡೆದ ಕಾರಣ ಜಮಾಬಂದಿಯಲ್ಲಿ ಎರಡೂ ಸರ್ವೆ ನಂಬರುಗಳು ದೇವರ ಕಾಡುಗಳಿಗಿವೆ. ಈಗ ರೆವೆನ್ಯು ಹಾಗು ಅರಣ್ಯ ಇಲಾಖೆಗಳ ದ್ವಯ ನಿರ್ವಹಣೆಗಿರುವ ಈ ಕಾಡುಗಳನ್ನು ಪೂರ್ಣವಾಗಿ ಅರಣ್ಯ ಇಲಾಖೆಗೆ ಒಪ್ಪಿಸಲು ಈಗ ಇರುವ ದೇವರ ಕಾಡುಗಳ ಸರ್ವೆಯು ಆ ಇಲಾಖೆಗಳಿಂದ ನಡೆಯುತ್ತಿದೆ. ಕೊಡಗಿನ ಪ್ರಪ್ರಥಮ ಜನರಲ್ ಸೆನ್ಸಸ್ ವರದಿಯ ರೀತ್ಯಾ ೧೮೭೧ರಲ್ಲಿ ಗ್ರಾಮಗಳ ಸಂಖ್ಯೆ ೪೯೫ ಆಗಿತ್ತು[16] ಅಂದರೆ ಗ್ರಾಮಕ್ಕೊಂದು ದೇವರ ಕಾಡಿದ್ದರೆ ಅವು ಕನಿಷ್ಠ ೪೯೫ ಆದರೂ ಇದ್ದಿರಬೇಕು. ಇಂದು ನಡೆದಿರುವ ಸರ್ವೆಯ ರೀತ್ಯಾ ದೇವರ ಕಾಡುಗಳ ಸಂಖ್ಯೆ ಮಡಿಕೇರಿ ತಾಲ್ಲೂಕು ೭೦ಕ್ಕೆ ಸೋಮವಾರಪೇಟೆ ತಾಲ್ಲೂಕು ೧೩೮ಕ್ಕೇ ವಿರಾಜಪೇಟೆ ತಾಲ್ಲೂಕುಗಳ ಸೇರಿದಂತೆ ಒಟ್ಟು ೩೮೭ ಇದ್ದು, ಅವುಗಳ ವಿಸ್ತೀರ್ಣ ೧೯೯೩ ಹೆಕ್ಟೇರುಗಳಷ್ಟಿದೆ. ಈ ದೇವರ ಕಾಡುಗಳಿಗೆ, ಖಾಸಗಿ ನಿರ್ವಹಣೆಯ ಕಾಡುಗಳು ಹಾಗು ಇಂದೂ ಗಮನಕ್ಕೆ ಬಾರದಿರುವ ದೇವರ ಕಾಡುಗಳನ್ನು ಸೇರಿಸಿಕೊಂಡರೆ ಆ ಸಂಖ್ಯೆ ೫೨೫ನ್ನು ಮೀರುತ್ತದೆ. ೧೮೮೧ರ ಕೊಡಗು ಸೆನ್ಸಸ್ ವರದಿಯಲ್ಲಿ ಗ್ರಾಮಗಳ ಸಂಖ್ಯೆ ೫೨೫ ಇದ್ದದ್ದು ಈ ದೃಷ್ಟಿಯಿಂದ ಗಮನಾರ್ಹವೆ.

೧೯೧೦ರ ಕೂರ್ಗ್ ರೆವಿನ್ಯೂ ಸೆಟಲ್‌ಮೆಂಟ್ ರಿಪೋರ್ಟ್ ರೀತ್ಯಾ ದೇವಾರಾಧನೆ, ದೇಗುಲ ರಿಪೇರಿ ದೇವ ವೇದಿಕೆ ನಿರ್ಮಾಣಕ್ಕೆ ವಿಶೇಷ ಅನುಮತಿ ಪಡೆದು ದೇವರ ಪೈಸಾರಿ ಕಾಡುಗಳಿಂದ ಮರ ಗಿಡಗಳ ಭಾಗಗಳನ್ನು ಕಡಿದು ಬಳಸಲು ಅವಕಾಶವಿತ್ತು. ಈ ಕಾಡಿನ ಮೂಲಕ ಗ್ರಾಮೀಣರು ಹಾದಿ ಮಾಡಿ ಕೊಳ್ಳಲು, ನೀರಿನ ಆಸರೆಯಿಂದ ನೀರು ಪಡೆಯಲು ಹಾಗು ಅಲ್ಲಿ ದನ ಮೇಯಿಸಲು, ಕೈಲ್ ಮುಹೂರ್ತ ಮತ್ತು ಹುತ್ತರಿ ಹಬ್ಬದ ಸಮಯದಲ್ಲಿ ಬೇಟೆಗೆ ಹೋಗಲೂ ಅವಕಾಶವಿತ್ತು. ಆದರೆ ತೋಟ, ಮನೆ ರೂಪಿಸಲು ಅನುಮತಿ ಇರಲಿಲ್ಲ. ಪರಂಪರೆಯ ನಿಯಮ ಜಾರಿಯಲ್ಲಿದ್ದ ದೇವರ ಕಾಡಿನಿಂದಲೂ ಮರ ಪಡೆಯುವ ರಿಯಾಯಿತಿ ಇಂದು ಕೆಲವೆಡೆ ಇದೆ.

---

16 Major A. W. C. Lindsay: Coorg General Census 1871, Bangalore-1874, p. 86

**ದೇವರ ಕಾಡಿನ ಆಕ್ರಮಣದ ಅಪಾಯಗಳು ಹಾಗು ಪರಿಹಾರಗಳು** : ನೀರಿನ ಚಿಲುಮೆಗಳು ಒಣಗುತ್ತವೆ. ಗಾಳಿಯ ತೇವಾಂಶ ಕಡಿಮೆ ಆಗುತ್ತದೆ. ಹೊಸ ಮಿಡಿತೆಗಳು ಮೂಡುತ್ತವೆ. ತಾಪಮಾನದಲ್ಲಿ ಏರುಪೇರಾಗುತ್ತದೆ. ಮಳೆಯ ಸರಾಸರಿಯಲ್ಲಿ ವ್ಯತ್ಯಾಸವಾಗಿ ಕಾಫಿ ಏಲಕ್ಕಿ ತೋಟ, ಭತ್ತದ ಗದ್ದೆಗಳ ಫಲದ ಇಳುವರಿಯಲ್ಲಿ ಕಡಿಮೆ ಆಗುತ್ತದೆ. ರಾಷ್ಟ್ರೀಯ ಅರಣ್ಯ ನೀತಿಗನುಗುಣವಾಗಿ ಕೊಡಗಿನಂತಹ ಗುಡ್ಡ ಗಾಡು ಪ್ರದೇಶದಲ್ಲಿ ಶೇಕಡ ಅರವತ್ತು ಭಾಗ ಅರಣ್ಯ ವಿರಬೇಕು. ಈಗ ಇರುವುದು ಶೇಕಡ ೩೨ ಭಾಗ ಅಥವಾ ಇನ್ನೂ ಕಮ್ಮಿ, ಅಲ್ಲಿ ಕೊರತೆ ಬೀಳುವ ಸುಮಾರು ಶೇ. ೨೮ ಭಾಗವನ್ನು ತುಂಬಲು ದೇವರ ಕಾಡುಗಳ ನಿರ್ವಹಣೆ ಹಾಗು ಅಭಿವೃದ್ಧಿಯ ಕಾರಣ ವಾಗುತ್ತದೆ.

ಈ ಹಿನ್ನೆಲೆಯಲ್ಲಿ ದೇವರ ಕಾಡುಗಳ ಆಕ್ರಮಣ ವನ್ನು ಇನ್ನಾದರೂ ನಿಲ್ಲಿಸಿ, ಇರುವಷ್ಟನ್ನಾದರೂ ಉಳಿಸಿಕೊಳ್ಳಬೇಕು. ಆಕ್ರಮಿತ ದೇವರ ಕಾಡುಗಳ ಸಮಸ್ಯೆಯನ್ನು ವ್ಯಕ್ತಿ ಹಾಗು ಸಮುದಾಯದ ಮನ ವೊಲಿಸಿ, ಬದುಕಿನ ನಿರ್ವಹಣೆಗೆ ಮಾನವೀಯ ಪರ್ಯಾಯಗಳನ್ನು ಅರ್ಹರಿಗೆ ಒದಗಿಸಬೇಕು. ದೇವರ ಕಾಡುಗಳನ್ನು ಆರ್ಥಿಕ ಉತ್ಪನ್ನ ಕೇಂದ್ರಗಳನ್ನಾಗಿಸದೆ ಪರಿಸರ ಶುದ್ಧಿಯ ನೈಸರ್ಗಿಕ ತಾಣಗಳಾಗಿ ಉಳಿಯು ವಂತೆ ಮಾಡಬೇಕು. ಕೊಡಗು ಮುಂದಿನ ಶತಮಾನ ಗಳಲ್ಲಿ ಬೋಳು ಬಯಲಾಗಬಾರದು ಎನ್ನುವುದಾದರೆ ಈ ದೇವರ ಕಾಡುಗಳನ್ನು ಕಾಪಿಡುವ ಅವಶ್ಯಕತೆಯಿದೆ.

* ಈ ಸಂದರ್ಭದಲ್ಲಿ ಕೆಲವು ದೇವರ ಕಾಡುಗಳನ್ನು ನೋಡಲು ನೆರವಾದ ಕರ್ನಾಟಕ ರಾಜ್ಯ ಅರಣ್ಯ ಇಲಾಖೆಯ ಪಿಸಿಸಿಎಫ್ ಶ್ರೀ ಎಸ್. ಪರಮೇಶ್ವರಪ್ಪ ಹಾಗು ಅಧೀನ ಅಧಿಕಾರಿಗಳಿಗೆ ಮತ್ತು ರೆವಿನ್ಯೂ ಇಲಾಖೆಗೆ, ಲೇಖನಕ್ಕೆ ಬೇಕಾದ ಮಾಹಿತಿ ನೀಡಿದ ಸ್ಥಳೀಯ ಮಿತ್ರರಿಗೆ ನಾವು ಆಭಾರಿ.

ಕೆ. ಎನ್ ಚಿಟ್ನೀಸ್*

# ತೊರಗಲ ಸಂಸ್ಥಾನದಲ್ಲಿಯ ಭೂಕಂದಾಯ ಪದ್ಧತಿ

೧೭೩೧ರಲ್ಲಿಯ ವಾರಣಾ ಒಪ್ಪಂದದಿಂದ ಕೊಲ್ಹಾಪುರ ರಾಜ್ಯವು ಅಸ್ತಿತ್ವದಲ್ಲಿ ಬರುವುದಕ್ಕಿಂತ ಮೊದಲೇ ಒಂದು ಸ್ವತಂತ್ರ ರಾಜ್ಯವೆಂದು ತೊರಗಲ ಸಂಸ್ಥಾನವು ಇದ್ದಿತ್ತು. ನರಸೋಜಿ ಶಿಂದೆಯು ತೊರಗಲ ಜಹಗೀರಿನ ಸಂಸ್ಥಾಪಕನು. ಇವನ ಮಗಳು ಜೀಜಾ-ಬಾಯಿಯು ಲಗ್ನವು ಕೊಲ್ಹಾಪುರದ ರಾಜಪುತ್ರ ಸಂಭಾಜಿಯೊಡನೆ ಆಯಿತು. ಸಂಭಾಜಿಯು ನರಸೋಜಿ ಶಿಂದೆಯ ಮಗನಾದ ಸುಭಾನರಾವಶಿಂದೆ ಇವನಿಗೆ 'ಸೇನಾಖಾಸಕೇಲ' ಎಂಬ ಪದವಿಯನ್ನು ಕೊಟ್ಟು ತನ್ನ ಸೈನ್ಯದಲ್ಲಿ ಸೇರಿಸಿಕೊಂಡನು. ಹಾಗೂ ತೊರಗಲ ಜಹಗಿರೀನ ಹೊರಗಿನ ಪ್ರದೇಶದಿಂದ 'ಮೊಕಾಸ' ಮತ್ತು 'ಚೌಥಾಯಿ' ಈ ಸರಂಜಾಮೀ ತೆರಿಗೆಗಳನ್ನೆತ್ತಲು ಅಧಿಕಾರವನ್ನು ಕೊಟ್ಟನು. ಈ ಪ್ರಕಾರ ತೊರಗಲ್ಲಿನ ರಾಜರು ಕೊಲ್ಹಾಪುರ ಛತ್ರಪತಿಯ ಮಾಂಡಲಿಕರಾದರು.ಈ ಮೊದಲು ಅವರು ವಿಜಾಪುರ ಆದಿಲಶಾಹಿಯ ಮಾಂಡಲಿಕರಿದ್ದರು. ಸುಭಾನ ರಾವನನಂತರ ಲಕ್ಷ್ಮಣ ರಾವನು ರಾಜ್ಯಕ್ಕೆ ಅಧಿಕಾರಿಯಾದನು.

೧೮೦೦ ರಲ್ಲಿ ತೊರಗಲ ಜಹಗೀರನಲ್ಲಿ ಒಟ್ಟು ೩೯ ಹಳ್ಳಿಗಳಿದ್ದು ಅವುಗಳಲ್ಲಿ ೬ ಪೂರ್ಣವಾಗಿ ಜಹಗೀರಿನಲ್ಲಿ ಇನ್ನೂ ಬಂದಿದ್ದಿಲ್ಲ. ಉಳಿದ ೩೩ ಮಾತ್ರ ಜಹಗೀರಿನ ಅವಿಭಾಜ್ಯ ಭಾಗಗಳಾಗಿದ್ದವು. ತೊರಗಲ ಸಂಸ್ಥಾನಿಕರ ಆಧಿಪತ್ಯದಲ್ಲಿ ಆದರೆ ಇನ್ನೂ ಸಂಸ್ಥಾನದ ಅವಿಭಾಜ್ಯ ಭಾಗಗಳಾಗದೆ ಇದ್ದ ೬ ಹಳ್ಳಿಗಳು ಈ ಕೆಳಗಿನಂತೆ ಇದ್ದವು ; ಮಲ್ಲಾಪುರ, ಬೀಜಕುಪ್ಪಿ, ರಾಮಾಪೂರ, ಗುದಗೊಪ್ಪ, ತೋಟಗಟ್ಟಿ ಮತ್ತು ಚಿಲಮೂರ ಕರ್ಜತ. ಉಳಿದ ೩೩ ಹಳ್ಳಿಗಳು ಖಾಲಸಾತ ಅಂದರೆ ಸಂಪೂರ್ಣವಾಗಿ ಸಂಸ್ಥಾನದಲ್ಲಿ ವಿಲೀನಗೊಂಡಿದ್ದವು. ಈ ಹಳ್ಳಿಗಳಲ್ಲಿ ೨೭ ಹಳ್ಳಿಗಳನ್ನು ೪ ಶಾಸಕೀಯ ವಿಭಾಗಗಳಲ್ಲಿ ವಿಂಗಡಿಸಲ್ಪಟ್ಟಿದವು. ಉಳಿದ ೬ ಹಳ್ಳಿಗಳಲ್ಲಿ ೩ ಪೇಟೆಗಳಿದ್ದವು. ಶಾಸಕೀಯ ವಿಭಾಗಗಳಿಗೆ 'ತರ್ಫ' ಎನ್ನುತ್ತಿದ್ದರು. 'ತರ್ಫ' ಎಂದರೆ ಸಾಧಾರಣ ತಾಲೂಕೆಂದು ತಿಳಿಯಬಹುದು. ಈ ೪ ತರ್ಫಗಳಾವವೆಂದರೆ ಹರಲಾಪುರ, ಚಂದರ್ಗಿ, ಬನ್ನೂರ ಮತ್ತು ಕಟಕೋಳ. ಬನ್ನೂರಿಗೆ ಕರ್ಯಾತ ಬನ್ನೂರೆಂದೂ ಕರೆಯುತ್ತಿದ್ದರು. ಕರ್ಯಾತವೂ ಸಹ ತಾಲೂಕಿನಂತೆಯೇ ಇತ್ತು. ಈ ೪ ತರ್ಫುಗಳೂ ಹಾಗೂ ಅವುಗಳಲ್ಲಿಯ ಹಳ್ಳಿಗಳೂ ಈ ಕೆಳಗಿನಂತೆ ಇದ್ದವು:

**ಹರಲಾಪೂರ ತರ್ಫ**

೧ ಹರಲಾಪೂರ
೨ ಹಾಲಹೊಳ್ಳಿ
೩ ಸುನಾಳ
೪ ಆರಿಬೆಂಚಿ

**ಚಂದರ್ಗಿ ತರ್ಫ**

೧ ಕಸಬಾ ಚಿಂದರ್ಗಿ
೨ ಕೆಸರಗೊಪ್ಪ
೩ ಸಿದನಾಳ
೪ ಗೊಡಚಿ

| ಕರ್ಯಾತ ಬನ್ನೂರ ತರ್ಫ | ಕಟಕೋಳ ತರ್ಫ |
|---|---|
| ೧ ಬನ್ನೂರ | ೧ ಕಟಕೋಳ |
| ೨ ಚನಹಟ್ಟಿ | ೨ ಮುಂಡಾರಹಳ್ಳಿ |
| ೩ ಕಂದಾಪೂರ | ೩ ಬೋಚಬಾಳ |
| ೪ ಗುಡ್ಡಗಮುನಾಳ | ೪ ಜಖಬಾಳ |
| ೫ ಗುಡಕಟ್ಟಿ | ೫ ತೋರಣಕಟ್ಟಿ |
| ೬ ದಾಡಿಭಾಂವಿ | ೬ ಭಡಕಲೂರ |
| ೭ ಕುಳೂರ | ೭ ಯುರಕಟನಾಳ |
| ೮ ಬುಧನೂರ | ೮ ಚಂದರ್ಗಿಹಳ್ಳಿ |
| ೯ ಕಾಮುನಕೊಪ್ಪ | |
| ೧೦ ಉದಪುಡಿ | |
| ೧೧ ಬಿಡಕಿ | |

ಇವುಗಳಲ್ಲಿ ಬುಧನೂರ ಮತ್ತು ಕಾಮುನಕೊಪ್ಪ ಇವು ಇನಾಮು ಹಳ್ಳಿಗಳಿದ್ದು ದೇಸಗತಿನಲ್ಲಿ ಒಳಗೊಂಡಿದ್ದವು. ಚಂದರ್ಗಿಯು ಎರಡು ಸಲ ಬಂದಿದ್ದು ಚಂದರ್ಗಿ ತರ್ಫಿನಲ್ಲಿ ಕಸಬಾ ಚಂದರ್ಗಿಯೂ ಮತ್ತು ಕಟಕೋಳ ತರ್ಫಿನಲ್ಲಿ ಹಳ್ಳಿ ಚಂದರ್ಗಿಯೂ ಬಂದಿವೆ.

ಜೀಜಾಪೂರ, ಸಂಭಾಪೂರ, ಖಾನಪೇಟ ಇವು ಮೂರು ಪೇಟೆಗಳಿದ್ದು ಜೀಜಾಪುರವು ಹಳೇಪೇಟೆಯೂ ಸಾಂಭಾಪುರವು ಹೊಸ ಪೇಟೆಯೂ ಇದ್ದವು.

ಉಳಿದ ಮೂರು ಹಳ್ಳಿಗಳೆಂದರೆ ಮಾಗಣೂರ, ಗೊಣಗನೂರು ಮತ್ತು ಕಂಕಣವಾಡಿ[1]. ಗಳಾಗಿದ್ದು ಇವು ಕಾಲಾಂತರದಲ್ಲಿ ಕಟಕೋಳ ತರ್ಫಿನ ಬದಲಾಗಿ ಸಿಂದೋಗಿ ತರ್ಫನ್ನು ನಿರ್ಮಿಸಲಾಯಿತು. ಇದಲ್ಲದೆ ತರ್ಫಿನೊಳಗಿನ ಹಳ್ಳಿಗಳ ಸಂಖೆಗಳಲ್ಲಿಯೂ ಬದಲಾವಣೆಗಳನ್ನು ಮಾಡಲಾಯಿತು.

ಈ ಜಹಗೀರಿನ ಕೇಂದ್ರ ಹಾಗೂ ದಕ್ಷಿಣ ಭಾಗಗಳು ಮೊದಲು ವಿಜಯನಗರ ಸಾಮ್ರಾಜ್ಯದಲ್ಲಿದ್ದು ಆದರ ಪತನಾನಂತರ ಎಲ್ಲ ಜಹಗೀರು ಕ್ರಮವಾಗಿ ವಿಜಾಪುರದಆದಿಲಶಹನ, ಸವಣೂರಿನ ನವಾಬನ, ಮುಘಲರ, ಕೊನೆಗೆ ಮರಾಠರ ಆಧಿಪತ್ಯದಲ್ಲಿತ್ತು. ಅಂತೆಯೇ ತೊರಗಲ ಜಹಗೀರಿನ ಕಂದಾಯ ವ್ಯವಸ್ಥೆಯಲ್ಲಿ ಬೇರೆ ಬೇರೆ ಪದ್ಧತಿಗಳ ಮಿಶ್ರಣವು ತೋರುತ್ತದೆ.

೧೮೨೭ ರಲ್ಲಿ ತೊರಗಲ ಜಹಗೀರಿನ ವಾರ್ಷಿಕ ಉತ್ಪನ್ನವು ೨೧,೩೨೫ ರೂ. ಇದ್ದು ಬೇರೆ ಬೇರೆ ತರ್ಫುಗಳಿಂದ ಈ ಪ್ರಕಾರ ಉತ್ಪನ್ನವು ಬರುತ್ತಿತ್ತು.[2]

| | |
|---|---|
| ತೊರಗಲ ಪೇಠಾ | ೧೨೦೦ |
| ಹರಲಾಪುರ ತರ್ಫ | ೩೧೨೫ |
| ಚಂದರ್ಗಿ ತರ್ಫ | ೩೬೨೫ |
| ಬನ್ನೂರ ತರ್ಫ | ೧೬೫೦ |
| ಶಿಂದೋಗಿ ತರ್ಫ | ೧೩೨೫ |
| ಸ್ಫುಟ ಹಳ್ಳಿಗಳು | ೨೦೦೦ |

ಒಟ್ಟು: ೨೧,೩೨೫

ಬಹಳಷ್ಟು ಭೂಮಿಗಳು ಜಮೀನದಾರರ ಮತ್ತು ವತನದಾರರ ಕೈಯಲ್ಲಿದ್ದು ಕೆಲವಷ್ಟೇ 'ಖಾಲಸಾ' ಅಂದರೆ ರೈತರ ಕೈಯಲ್ಲಿದ್ದವು. ಈ ಖಾಲಸಾ ಭೂಮಿಗಳ ಮೇಲೆ ಜನರು ಭೂಕಂದಾಯವನ್ನು ಕೊಡಬೇಕಾಗುತ್ತಿತ್ತು. ತೊರಗಲ ಸರಕಾರದಲ್ಲಿಯ ಕಡಕೋಳ ಸಮಿತಿಯಲ್ಲಿದ್ದ ಜಖಬಾಳ ಹಳ್ಳಿಯಲ್ಲಿ ಒಟ್ಟು ೨೫

1 File No. 480, Extract No. 4, Ferist No. 269

2 ಕೊಲ್ಹಾಪುರ ಪತ್ರಾಗಾರ, T-9, File No. 480, Extracct 7-679

ಮಾರು ಹೊಲಗಳಿದ್ದು ಅವುಗಳಲ್ಲಿನ ೨೩, ಮಾರು ಮತ್ತು ೧ ಬೆಳೆಯು ಇನಾಮದಾರ ಮತ್ತು ವತನದಾರರ ಕಡೆಗಿದ್ದು, ಕೇವಲ ೧ ಮಾರು, ೩ ಹಾಗ ಮತ್ತು ೨ ವೀಸಗಳು ಖಾಲಸಾ ಹೊಲಗಳಿದ್ದವು.[3] ಭಂಡಾರ ಹಳ್ಳಿಯಲ್ಲಿ ಒಟ್ಟು ೧೯ ಮಾರು ೩ ಹಾಗ ಹೊಲಗಳಿದ್ದು, ೧೬ ಮಾರು ೨ ವೀಸಗಳು ಇನಾಮದಾರ ಮತ್ತು ವತನದಾರರು ಉಪಭೋಗಿಸುತ್ತಿದ್ದು ೩ ಮಾರು, ೨ ಹಾಗ, ೩ ಬೇಳೆ, ೨ ವೀಸ ಹೊಲಗಳು ಮಾತ್ರ ಖಾಲಸಾ ಹೊಲಗಳಾಗಿದ್ದ.ವು

ಒಂದು ಮಾರು ಹೊಲವೆಂದರೆ ೩೬ ಬೀಘಾಗಳು ಕಂಪನಿ ಸರಕಾರದ ಕಾಲದಲ್ಲಿ ಒಂದು ಮಾರು ಹೊಲದಲ್ಲಿ ೮ ಕೂರಗಿಗಳಿದ್ದು ಪ್ರತಿಯೊಂದು ಕೂರಗಿಯಲ್ಲಿ 4½ ಬೀಘಾಗಳಿದ್ದವು. ವಿಜಯ ನಗರದ ಪರಂಪರೆಯಲ್ಲಿ ಒಂದು ಮಾರು ಹೊಲದೊಳಗೆ ೪ ಹಾಗಗಳೂ, ಒಂದು ಹಾಗದಲ್ಲಿ ೪ ವೀಸಗಳೂ ಇದ್ದವು. ವಿಜಯನಗರದ ನಾಣ್ಯಪದ್ಧತಿಯಲ್ಲಿಯ ಭಾಗಗಳ ಹೆಸರನ್ನೇ ಹೊಲಗಳ ಬೇರೆ ಬೇರೆ ವಿಸ್ತಾರಗಳಿಗೆ ಬಳಸಿರುವುದು ಕಂಡು ಬರುತ್ತದೆ. ಒಂದು ಹಾಗವು ಒಂಬತ್ತು ಬೀಘಾಗಳಷ್ಟಿದು, ಪ್ರತಿಯೊಂದು ವೀಸದಲ್ಲಿ 2¼ ಬೀಘಾಗಳಿದ್ದವು 'ಹಾಗ' ಮತ್ತು ವೀಸದ ನಡುವೆ ಬೇಳೆಯಿದ್ದು ಅದರಲ್ಲಿ 4½ ಬೀಘಾಗಳಿದ್ದವು. ಕಂಪನಿ ಸರ್ಕಾರದ ಒಂದು ಬೇಳೆ ಹೊಲಕ್ಕೆ ಒಂದು ಕೂರಗಿ ಹೊಲ ಎನ್ನುತ್ತಿದ್ದರು. ಹೊಲಗಳ ಭಾಗಗಳಿಗೆ ವಿಜಯನಗರ ಸಂಪ್ರದಾಯದ ಪ್ರಕಾರ ನಾಣ್ಯದ ಭಾಗಗಳ ಹೆಸರನ್ನೇ ಇಟ್ಟಿದ್ದರೂ ಪ್ರತ್ಯಕ್ಷವಾಗಿ ವೀಸ, ಬೇಳೆ ಈ ಎರಡೇ ಶಬ್ದಗಳು ಬಳಕೆಯಲ್ಲಿದ್ದು, ವರಹದ ಬದಲಾಗಿ 'ಮಾರು' ಶಬ್ದವನ್ನು ಬಳಸುತ್ತಿದ್ದರು. ಒಂದು 'ಹಾಗ' ಭೂಮಿಗೆ ಎರಡು ಬೇಳೆಗಳೆನ್ನುತ್ತಿದ್ದರು.

ಬಿಟ್ಟುಕೊಟ್ಟ ಇಲ್ಲವೆ ಇನಾಮು ಜಮೀನುಗಳು ದೇವಸ್ಥಾನದ ಪೂಜಾರಿಗಳು, ದೇವಸ್ಥಾನಗಳ ಕಾರಭಾರಿಗಳು, ಬ್ರಾಹ್ಮಣರು, ದೇಸಾಯಿ ಮತ್ತು ದೇಶಪಾಂಡೆಗಳಂತಹ ಇನಾಮದಾರರು, ಮಾನ್ಯ, ಸರ್ವಮಾನ್ಯ ಜಮೀನುಗಳನ್ನು ಉಪಭೋಗಿಸುತ್ತಿದ್ದ ವತನದಾರರು, ತಳವಾರ ಮತ್ತು ಮಹಾರರಂತಹ ಸ್ಥಳೀಯ ಸಂರಕ್ಷಣ ದಳದ ಸದಸ್ಯರು ಹಾಗೂ ಮಠಾಧಿಪತಿಗಳು ಇವೇ ಮೊದಲಾದ ಜನರ ಹತ್ತಿರ ಇದ್ದವು.

ಚಾಲಿಗುತ್ತಿಗೆ ಇಲ್ಲವೆ ಕಟ್ಟುಗುತ್ತಿಗೆ, ಮಕ್ತಾಗುತ್ತಿಗೆ ಮತ್ತು ಕೌಲ ಎಂದು ಭೂ ಹಿಡುವಳಿಯ ವಿವಿಧ ಪ್ರಕಾರಗಳಿದ್ದವು. ಚಾಲಿ ಮತ್ತು ಗುತ್ತಿಗೆ ಹಿಡುವಳಿಗಳಲ್ಲಿಯ ಭೂಮಿಗಳು ಶ್ರೇಷ್ಠಪ್ರತಿಯ ಭೂಮಿಗಳಾಗಿದ್ದವು. ಸಾಮಾನ್ಯವಾಗಿ ಚಾಲಿ ಜಮೀನಿನ ಮೇಲೆ ಅತಿ ಹೆಚ್ಚು ಕಂದಾಯವಿದ್ದು, ತದನಂತರ ಗುತ್ತಿಗೆ ಜಮೀನಿನ ಮೇಲೆ ಹೆಚ್ಚು ಕಂದಾಯವನ್ನು ಹೇರುತ್ತಿದ್ದರು. ಆಮೇಲೆ ಮಕ್ತಾ, ಕೌಲ ಮತ್ತು ಇತರ ಹೊಲಗಳು ಬರುತ್ತಿದ್ದವು. ಎಷ್ಟೋ ಸಲ ಚಾಲಿ ಮತ್ತು ಗುತ್ತಿಗೆ ಹೊಲಗಳಿಗೆ ಕಂದಾಯದ ಒಂದೇ ದರವು ಇರುತ್ತಿತ್ತು. ಜಖಬಾಳದಲ್ಲಿ ಗುತ್ತಿಗೆ ಹೊಲಗಳಿಗೆ ಕಂದಾಯದ ದರವು 'ಮಾರಿ'ಗೆ ಎಂಟು ರೂಪಾಯಿಗಳಿದ್ದು ಮಕ್ತಾ ಹೊಲಗಳಿಗೂ ಅದೇ ದರವಿತ್ತು. ಆದರೆ ಇವುಗಳಲ್ಲಿ ಒಂದು ವ್ಯತ್ಯಾಸವಿತ್ತು. ಗುತ್ತಿಗೆ ಹೊಲಗಳ ಮೇಲೆ ಕಂದಾಯದ ಎರಡು ಪಟ್ಟಿನಂತೆ ೧೬ ರೂಪಾಯಿಗಳ "ಪಟ್ಟಿ"ಯನ್ನು ಸರ್ಕಾರವು ತೆಗೆದು ಕೊಳ್ಳುತ್ತಿತ್ತು. ಆದರೆ ಮಕ್ತಾಹೊಲಗಳಿಗೆ ಇಂತಹ "ಪಟ್ಟಿ" ಇದ್ದಿದ್ದಿಲ್ಲ.

ಈ ಭಾಗದಲ್ಲಿ ಮೊದಲು "ರೇಖೆ" ಇಲ್ಲವೆ "ರಾಯರೇಖೆ"ಯೆಂದು ಭೂಕಂದಾಯವಷ್ಟೇ ಇದ್ದಿತೆಂದು ತೋರುತ್ತದೆ. ಆ ಮೇಲೆ ಬೇರೆ ಬೇರೆ ಕರಗಳನ್ನು ಇದರ ಜೊತೆಗೆ ತೆಗೆದುಕೊಳ್ಳಲಾಯಿತು. ಸವಣೂರ ನವಾಬರ ಕಾಲದಲ್ಲಿ ಬೇರೆ ಬೇರೆ ಕರಗಳಿದ್ದದರಿಂದ ಅವೆಲ್ಲವುಗಳನ್ನೂ ಒಂದುಗೂಡಿಸಿ ಪ್ರಮಾಣಬದ್ಧವಾದ ಒಂದೇ ಒಂದು ಭೂಕಂದಾಯವನ್ನು ನವಾಬ ಮಜೀದಖಾನನ ದಿವಾಣ ಅಲೀಖಾನನು ನಿಶ್ಚಿತಪಡಿಸಿದನು. ಇದಕ್ಕೆ "ಐನಾತಿ" ಯೆಂದು ಅನ್ನುತ್ತಿದ್ದರು. ಆದರೆ ಇವನನಂತರ ಬಂದ

---

3 Torgal Jamabandi, Diwan O. A. Rumal No. 273-1310

4 ಕೊಲ್ಹಾಪುರದ ಪತ್ರಾಗಾರ

ಎರಡನೆಯ ದಿವಾಣ ಹಾತಮಖಾನನು ಈ ಐನಾತಿ ಯನ್ನು ಎರಡು ಪಟ್ಟು ಮಾಡಿದನು. ಈ ಎರಡನೇ ಪಟ್ಟು ಕರಕ್ಕೇ "ಪಟ್ಟಿ" ಎಂದು ಅನ್ನುತ್ತಿದ್ದರು. ಭೂಕಂದಾಯವನ್ನು ಧಾನ್ಯ ಸ್ವರೂಪದಲ್ಲಿಯೇ ಹೆಚ್ಚಾಗಿ ತೆಗೆದುಕೊಂಡು ಹಣದ ಸ್ವರೂಪದಲ್ಲಿ ಕಡಿಮೆ ತೆಗೆದು ಕೊಳ್ಳುತ್ತಿದ್ದರು. ಜಖಬಾಳ ಹಳ್ಳಿಯಲ್ಲಿ ಒಂದು 'ಮಾರು' ಗುತ್ತಿಗೆ ಜಮೀನಿಗೆ ೨೪ ರೂಪಾಯಿ ಕರವಿದ್ದು ಕೇವಲ ಮೂರು ರೂ ಹಣದ ಸ್ವರೂಪದಲ್ಲಿ ತೆಗೆದು ಕೊಂಡು ಉಳಿದ ೨೧ ರೂಪಾಯಿಗಳನ್ನು ಧಾನ್ಯದ ಸ್ವರೂಪದಲ್ಲಿ ತೆಗೆದುಕೊಳ್ಳುತ್ತಿದ್ದರು.

ಈ ದುಪ್ಪಟ್ಟು ಪಟ್ಟಿಯನ್ನು ಸಾಮಾನ್ಯವಾಗಿ 'ಚಾಲಿ'ಯೆಂಬ ಶ್ರೇಷ್ಠ ಹೊಲಗಳ ಮೇಲೆ ತೆಗೆದು ಕೊಳ್ಳಲಾಗುತ್ತಿತ್ತು. 'ಗುತ್ತಿಗೆ' ಮತ್ತು 'ಮಕ್ತಾ' ಹೊಲಗಳಿಗೆ ಕಡಿಮೆ ಪಟ್ಟಿಯನ್ನು ತೆಗೆದುಕೊಳ್ಳು ತ್ತಿದ್ದರು. 'ಕೌಲ' ಹೊಲಗಳಿಗೆ ಮಾತ್ರ ಯಾವ ಪಟ್ಟಿಯನ್ನೂ ತೆಗೆದುಕೊಳ್ಳುತ್ತಿದ್ದಿಲ್ಲ. 'ಚಾಲಿ' ಭೂಧಾರಕರ ಹತ್ತಿರ ಗುತ್ತಿಗೆ ಹಾಗೂ ಮಕ್ತಾ ಭೂಮಿ ಗಳೂ ಇರುತ್ತಿದ್ದವು. ಕೆಲವರ ಹತ್ತಿರ ಬರೀ ಗುತ್ತಿಗೆ ಹಾಗೂ ಮಕ್ತಾ ಜಮೀನುಗಳಷ್ಟೇ ಇದ್ದವು. ಮತ್ತೆ ಕೆಲವು ಸ್ಥಳಗಳಲ್ಲಿ ಗುತ್ತಿಗೆ ಹಾಗೂ ಮಕ್ತಾ ಜಮೀನ ಧಾರಕರ ಕಡೆಗೆ ಕೌಲ ಜಮೀನುಗಳನ್ನೂ ಕೊಡಲಾಗಿ ದ್ದಿತು.

ಇನಾಮ ಜಮೀನುಗಳಲ್ಲಿ ಇನಾಮ ಮತ್ತು ಜುಡಿ ಇನಾಮು ಎಂದು ಎರಡು ಪ್ರಕಾರಗಳಿದ್ದವು. ಇನಾಮ ಜಮೀನುಗಳಿಗೆ ಕಂದಾಯವನ್ನು ಪೂರ್ಣ ಸೂಟು ಬಿಟ್ಟು ಜುಡಿ ಇನಾಮ ಜಮೀನುಗಳಿಗೆ ಕಡಿಮೆ ಕಂದಾಯವನ್ನು ತೆಗೆದುಕೊಳ್ಳುತ್ತಿದ್ದರು.

ಭಂಡಾರಹಳ್ಳಿಯಲ್ಲಿ ಹಿಂದೆಯೇ ಹೇಳಿದಂತೆ ಇನಾಮತಿ ಮತ್ತು ಖಾಲಸಾ ಎಂದು ಜಮೀನಿನ ಎರಡು ಪ್ರಕಾರಗಳಿದ್ದವು. ಸಮವಸಾತ ಜಮೀನ, ಇನಾಮದಾರ ಜಮೀನ, ದೇವಸ್ಥಾನ ಜಮೀನ ಮತ್ತು ಧರ್ಮಾದಾವ ಜಮೀನ ಎಂದು ಇನಾಮತಿ ಜಮೀನಿನಲ್ಲಿ ನಾಲ್ಕು ಉಪ ಪ್ರಕಾರಗಳಿದ್ದವು. ಸಮವಸಾತ ಭೂಮಿ ಗಳಲ್ಲಿ ಸೈನಿಕರಿಗೆ ಮತ್ತು ಇತರರಿಗೆ ಕೊಟ್ಟ ಜಮೀನ ಗಳಿದ್ದವು. ಇನಾಮದಾರ ಭೂಮಿಗಳಲ್ಲಿ ವತನದಾರರ ಜಮೀನು, ಮಠಮಾನ್ಯ ಜಮೀನು ಮತ್ತು ಸನದಿ ಇನಾಮದಾರ ಜಮೀನು ಎಂದು ಮತ್ತೆ ಮೂರು ಪ್ರಕಾರಗಳಿದ್ದವು. ವತನದಾರರಲ್ಲಿ ದೇಸಾಯಿ, ಕಡ ಕೋಳ ಸಮ್ಮತಿನ ದೇವರಾವ ಆನಂದ ದೇಶಪಾಂಡೆ, ನಾಯಿಕ ಕಡಕೋಳ ಸಮ್ಮತಿನ ಜಿವಾಜಿ ದೇವರಾವ ಕುಲಕರ್ಣಿ, ಪಾಟೀಲ, ಮತ್ತು ಬಡಿಗ, ಕಮ್ಮಾರ, ಡೊಂಬರು, ಮಹಾರ ಮುಂತಾದ ಬಾಜಿ ಇನಾಮದಾರ ರಿದ್ದರು. ಈ ಹೊಲಗಳಲ್ಲಿ ಸರ್ವಮಾನ್ಯ ಮತ್ತು ಜುಡಿಮಾನ್ಯ ಈ ಎರಡೂ ಪ್ರಕಾರಗಳಿದ್ದವು. ಇದಾ ಯಿತು ವತನದಾರರ ಜಮೀನು. ಮಠಮಾನ್ಯ ಜಮೀನುಗಳನ್ನು ಸಿದರಾಮಯ್ಯನು ಉಪಭೋಗಿಸು ತ್ತಿದ್ದು ಅವು ಜುಡಿ ಜಮೀನುಗಳಿದ್ದವು. ಕೊನೆಗೆ, ಸನದಿ ಜಮೀನುಗಳನ್ನು ಉಪಭೋಗಿಸುತ್ತಿದ್ದ ಸನದಿ ಇನಾಮದಾರರಲ್ಲಿ ಗುರುವನಕೊಳ್ಳ ನಾಯಿಕ ಮತ್ತು ವ್ಯೆಂಕಪ್ಪ ನಾಯಿಕರಿದ್ದರು. ಅವರದು ಸರ್ವಮಾನ್ಯ ಜಮೀನುಗಳಿದ್ದವು. ಈ ಜಮೀನುಗಳ ಮೇಲೆ ಯಾವ ಪಟ್ಟಿಯನ್ನೂ ಕರವನ್ನೂ ತೆಗೆದುಕೊಳ್ಳುತ್ತಿದ್ದಿಲ್ಲ. ದೇವಸ್ಥಾನ ಜಮೀನುಗಳಲ್ಲಿ ಶ್ರೀ ಮಾರುತಿ, ಶ್ರೀ ಲಕ್ಷ್ಮಿ ಮತ್ತು ಶ್ರೀ ಕಲ್ಮೇಶ್ವರ ಈ ದೇವರ ಗುಡಿಗಳಿಗೆ ಬಿಟ್ಟು ಕೊಟ್ಟ ಜಮೀನುಗಳಿದ್ದವು. ಕೊನೆಗೆ, ಧರ್ಮಾದಾವ ಜಮೀನು ರಾಮಗಿರಿ ಬಾವಾನಿಗೆ ಬಿಟ್ಟುಕೊಟ್ಟ ಜಮೀನುಗಳಿದ್ದವು.

ಒಟ್ಟು ಇನಾಮತಿ ಹೊಲಗಳು ೧೬ 'ಮಾರು', ಎರಡು ವೀಸ (೧೬-೦-೦-೨) ಗಳಷ್ಟಿದ್ದು, ಅವುಗಳಲ್ಲಿ ಸಮವಸಾತ ಹೊಲಗಳು ಐದು ಮಾರು, ಮೂರು ಬೇಳೆ, ಎರಡು ವೀಸಗಳೂ (೫-೦-೩-೨), ಇನಾಮ ದಾರ ಹೊಲಗಳು ೧೦ ಮಾರು, ಮೂರು ಬೇಳೆಗಳೂ (೧೦-೦-೩-೦) ದೇವಸ್ಥಾನ ಹೊಲಗಳು ಎರಡು ಹಾಗ, ಒಂದು ಬೇಳೆಯೂ (೦-೨-೧-೦), ಹಾಗೂ ಧರ್ಮಾದಾವ ಹೊಲಗಳು ಒಂದು ಬೇಳೆಯೂ (೦-೦-೧-೦) ಇದ್ದವು.

ಖಾಲಸಾ ಹೊಲಗಳು ಮೂರು ಮಾರು, ಎರಡು ಹಾಗ, ಮೂರು ಬೇಳೆ, ಎರಡು ವೀಸ (೩-೩-೩-೨) ಗಳಷ್ಟಿದ್ದು ಅವು ರೈತರ ಕಡೆಗಿದ್ದವು. ಈ ಖಾಲಸಾ ಹೊಲಗಳಲ್ಲಿ ಮೂರು ಮಾರು, ಎರಡು ಹಾಗ, ಎರಡು ಬೇಳೆ, ಎರಡು ವೀಸ (೩-೨-೨-೨)

ಚಾಲಿ ಹೊಲಗಳಿದ್ದು ಉಳಿದ ಒಂದು ಹಾಗ, ಒಂದು ಬೇಳೆಯು (೦-೧-೧-೦) ಕೌಲ ಹೊಲವಿತ್ತು. ಎಲ್ಲ ಚಾಲಿ ಹೊಲಗಳ ಮೇಲೆ ಒಟ್ಟು ೧೦೩ವರೆ ರೂಪಾಯಿ ಕಂದಾಯವಿದ್ದು ಎಲ್ಲ ಕೌಲ ಹೊಲಗಳ ಮೇಲೆ ಎರಡು ರೂಪಾಯಿ ಭೂಕಂದಾಯವಿತ್ತು. ಒಟ್ಟು ಖಾಲಸಾ ಹೊಲಗಳ ಮೇಲೆ ೧೦೫ವರೆ ರೂ ಭೂಕಂದಾಯವಿತ್ತು. ಚಾಲಿ ಹೊಲಗಳ ಮೇಲೆ ಮೂಲ ಭೂಕಂದಾಯದ ಜೊತೆಗೆ ಅದರ ದುಪ್ಪಟ್ಟು ಪಟ್ಟಿಯನ್ನೂ ತೆಗೆದುಕೊಳ್ಳಲಾಯಿತು. ಮೂಲಕಂದಾಯವು ೩ಳವರೆ ರೂ ಇದ್ದು ಅದರ ದುಪ್ಪಟ್ಟು ಅಂದರೆ ೭ ರೂ. ಪಟ್ಟಿಯಿತ್ತು. ಇವೆರಡೂ ಸೇರಿ ಒಟ್ಟು ೧೦೩ವರೆ ರೂ. ಆಯಿತು. ಇದಕ್ಕೆ ಕೌಲ ಹೊಲಗಳ ಮೇಲಿನ ಎರಡು ರೂ. ಭೂಕಂದಾಯವನ್ನು ಕೂಡಿಸಿ ಒಟ್ಟು ೧೦೫ವರೆ ರೂಗಳನ್ನು ಖಾಲಸಾ ಹೊಲಗಳ ಮೇಲೆ ಭೂಕಂದಾಯವೆಂದು ತೆಗೆದುಕೊಳ್ಳಲಾಯಿತು.

ಇನಾಮತಿ ಜಮೀನುಗಳಲ್ಲಿ ಕೆಲವು ಜುಡಿ ಜಮೀನುಗಳಿದ್ದು ಉಳಿದವು ಸರ್ವಮಾನ್ಯ ಜಮೀನುಗಳಿದ್ದವು. ಜುಡಿ ಜಮೀನುಗಳ ಮೇಲೆ ಕಡಿಮೆ ಭೂಕಂದಾಯವಿತ್ತು. ಕೆಳಗೆ ಹೇಳಿದ ಮೂರು ಪ್ರಕಾರದಲ್ಲಿ ಪಟ್ಟಿಯು ಭೂಕಂದಾಯದಷ್ಟೇ ಇರುತ್ತಿತ್ತು. ಚಾಲಿ ಜಮೀನುಗಳಿಗಿದ್ದಂತೆ ದುಪ್ಪಟ್ಟಲ್ಲ. ಈ ಮೂರು ಪ್ರಕಾರಗಳೆಂದರೆ ನಾಯಿಕ ಜುಡಿ ಜಮೀನು, ಮಹಾರ ಜುಡಿ ಜಮೀನು, ಮಠಮಾನ್ಯ ಜುಡೀ ಜಮೀನು. ಉಳಿದ ಎಲ್ಲ ಜುಡಿ ಜಮೀನುಗಳಿಗೆ ಭೂಕಂದಾಯವು ಕಡಿಮೆ ಇದ್ದರೂ ಪಟ್ಟಿ ಮಾತ್ರ ಅದರ ದುಪ್ಪಟ್ಟು ಇರುತ್ತಿತ್ತು. ಮಠಮಾನ್ಯ ಜುಡಿ ಜಮೀನಿಗೆ ಒಂದು ಪಟ್ಟು 'ಪಟ್ಟಿ' ಇದ್ದರೆ ಮಠಮಾನ್ಯ ಜಮೀನುಗಳಿಗೆ 'ಪಟ್ಟಿ'ಯೇ ಇದ್ದಿದ್ದಿಲ್ಲ, ಆದರೆ ಮೂಲ ಭೂಕಂದಾಯವು (ಅದಕ್ಕೆ 'ಐನ' ಎನ್ನುತ್ತಿದ್ದರು) ಮಾತ್ರ ಇರುತ್ತಿತ್ತು.[5]

ಈ ಪ್ರಕಾರ ತೊರಗಲ ಜಹಗೀರಿನಲ್ಲಿ ಭೂಕಂದಾಯದ ಬೇರೆ ಬೇರೆ ಪದ್ಧತಿಗಳ ಮಿಶ್ರಣವು ಕಂಡು ಬರುತ್ತದೆ.

೫ ಕೊಲ್ಹಾಪುರ ಪತ್ರಾಗಾರ, ತಾಳೆಬಂದ ; ಮೌಜೆ ಭಂಡಾರಹಳ್ಳಿ, ಸಮುತ ಕಡಕೋಳ, ಸರ್ಕಾರ ತೊರಗಲ

ಎಂ. ವೈ. ಸಾವಂತ*

# ಹುಬ್ಬಳ್ಳಿ : ಮರಾಠಾ ಕಾಲದಲ್ಲಿಯ ಒಂದು ವ್ಯಾಪಾರ ಕೇಂದ್ರ

ಹುಬ್ಬಳ್ಳಿಯು ಪ್ರಾರಂಭದಿಂದಲೂ ಉತ್ತರ ಕರ್ನಾಟಕದ ಪ್ರಮುಖ ವ್ಯಾಪಾರ ಹಾಗೂ ಉದ್ದಿಮೆಯ ಕೇಂದ್ರವಾಗಿತ್ತು. ರಾಷ್ಟ್ರಕೂಟರ ಕಾಲದಿಂದ ಇಂದಿನ ವರೆಗೆ ಹುಬ್ಬಳ್ಳಿಯು ಈ ಭಾಗದ ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಗಮನಾರ್ಹ ಪಾತ್ರ ವನ್ನು ವಹಿಸಿದೆ. ವಾಣಿಜ್ಯ ವ್ಯಾಪಾರಗಳಿಗೆ ಯೋಗ್ಯ ಅನುಕೂಲಗಳನ್ನು ಹೊಂದಿದ್ದು ಸಂಪದ್ಭರಿತ ನಗರವಾಗಿ ಬೆಳೆದಿದೆ.

ಮರಾಠರ (ಪೇಶ್ವೆಯರ) ಕಾಲದಲ್ಲಿ (೧೭೫೫–೧೮೧೮) ಹುಬ್ಬಳ್ಳಿಯು ದೊಡ್ಡ ವ್ಯಾಪಾರ ಕೇಂದ್ರವಾಗಿ ಚಟುವಟಿಕೆಯಿಂದ ಕೂಡಿತ್ತು. ಅದರ ಅಧ್ಯಯನವೇ ಈ ಪ್ರಬಂಧದ ಮುಖ್ಯ ಉದ್ದೇಶ. ಈ ಪ್ರಬಂಧ ರಚನೆಗೆ ಪ್ರಮುಖ ಆಧಾರ ಪುಣೆಯ ಪತ್ರಾಗಾರ ದಲ್ಲಿರುವ ಮೋಡೀ ದಾಖಲೆಗಳು.[1] (ತಾಳೇಬಂದು, ಯಾದಿ, ಜಮಾಖರ್ಚು, ವಸೂಲಿ ಬಾಕಿ ಇತ್ಯಾದಿ). ಇವುಗಳಲ್ಲಿ ಆಗಿನ ಕಾಲದ ವ್ಯಾಪಾರದ ಬಗ್ಗೆ ಮಾಹಿತಿ ಸಿಗುತ್ತದೆ.

ವಿಜಯನಗರದ ಕಾಲದಿಂದಲೂ ಹುಬ್ಬಳ್ಳಿಯು ವಾಣಿಜ್ಯ ನಗರವಾಗಿಯೂ ವ್ಯಾಪಾರ ಕೇಂದ್ರ ವಾಗಿಯೂ ಪ್ರಸಿದ್ಧಿ ಪಡೆದಿತ್ತು. ಈ ಕಾಲದಲ್ಲಿ ಸಾಧಿಸಿದ ಪ್ರಗತಿಯ ಸಂಕೇತವಾಗಿ ಹುಬ್ಬಳ್ಳಿಗೆ ಇಂದಿಗೂ 'ರಾಯರ ಹುಬ್ಬಳ್ಳಿ' ಎಂಬ ರೂಢನಾಮ ಬಳಕೆಯಲ್ಲಿದೆ. ರಾಯರೆಂದರೆ ವಿಜಯನಗರದ ಅರಸರು. ಕ್ರಿ.ಶ. ೧೫೪೭ರಲ್ಲಿ ವಿಜಯನಗರದ ಅರಸನಿಗೂ ಪೋರ್ಚುಗೀಸರಿಗೂ ಆದ ಒಪ್ಪಂದದಲ್ಲಿ ಹುಬ್ಬಳ್ಳಿಯಲ್ಲಿ ಸೋರುಪ್ಪಿನ ವ್ಯಾಪಾರ ಬಹಳ ನಡೆಯುತ್ತಿತ್ತೆಂಬ ಬಗ್ಗೆ ದಾಖಲೆ ಇದೆ.

ವಿಜಯನಗರದ ಪತನದ ನಂತರ ಹುಬ್ಬಳ್ಳಿಯು ಬಿಜಾಪುರದ ಆದಿಲ್‌ಶಾಹಿ ರಾಜರ ಆಡಳಿತಕ್ಕೆ ಒಳ ಪಟ್ಟಿತು. ಆದರೆ ಕ್ರಿ. ಶ. ೧೬೭೩ರಲ್ಲಿ ಶಿವಾಜಿಯ ಸರದಾರನಾದ ಅಣ್ಣಾಜಿ ದತ್ತೊ ಬಿಜಾಪುರ ರಾಜ್ಯವನ್ನು ಹಾಳು ಮಾಡುತ್ತ ಹುಬ್ಬಳ್ಳಿಗೆ ಬಂದು ಆದನ್ನು ಸುಲಿದನು. ಮುಂದೆ ಕ್ರಿ.ಶ. ೧೬೭೫ರಲ್ಲಿ ಔರಂಗಜೇಬ್ ಇದನ್ನು ಸ್ವಾಧೀನಪಡಿಸಿಕೊಂಡನು. ಸವಣೂರಿನ ನವಾಬರು ಕೆಲಕಾಲ ಹುಬ್ಬಳ್ಳಿಯ ಮೇಲೆ ಪ್ರಭಾವ ವನ್ನಿರಿಸಿಕೊಂಡಿದ್ದರು. ಕ್ರಿ.ಶ. ೧೭೨೭ರ ಸುಮಾರಿಗೆ ಇದೇ ಮನೆತನಕ್ಕೆ ಸೇರಿದ ನವಾಬ ಅಬ್ದುಲ್ ಮಜಿದ ಖಾನನು ಹೊಸ ಹುಬ್ಬಳ್ಳಿ ಎಂಬ ವಸಾಹತನ್ನು ಸ್ಥಾಪಿಸಿದನು. ನವಾಬನು ಬಸಪ್ಪ ಕಾಡಪ್ಪ ಶೆಟ್ಟರ ಇವರ ಪ್ರಭಾವದಿಂದ ಹಳೇ ಹುಬ್ಬಳ್ಳಿಗೆ ಹೊಂದಿದ

* ಲಕ್ಷ್ಮೀನಗರ, ವಿದ್ಯಾಗಿರಿ, ಧಾರವಾಡ–೫೮೦೦೦೪

1 ಪುಣೆ ಪತ್ರಾಗಾರ, ಕರ್ನಾಟಕ ಜಮಾವ, ರುಮಾಲ ಸಂ. ೧೫೯

ಹೊಲಗೇರಿ ಪ್ರದೇಶವನ್ನು ಕಾಣಿಕೆಯಾಗಿ ನೀಡಿದನು. ಹೊಸ ಹುಬ್ಬಳ್ಳಿಯ ಒಂದು ಭಾಗಕ್ಕೆ ಈಗಲೂ ಮಜೀದಪುರವೆಂದೇ ಹೆಸರಿದೆ. ಶೆಟ್ಟರು ತಮಗೆ ನವಾಬ ರಿಂದ ದೊರೆತ ಭೂಮಿಯನ್ನು ವರ್ಷಕ್ಕೆ ಇಂತಿಷ್ಟು ಬೆಲ್ಲ, ಉಪ್ಪು, ಅಕ್ಕಿ ಹೀಗೆ ಬೇರೆ ಬೇರೆ ವಸ್ತುಗಳನ್ನು ಕೊಡಬೇಕೆಂಬ ಕರಾರಿನ ಮೇಲೆ ವಿತರಣೆ ಮಾಡಿ ವ್ಯಾಪಾರೋದ್ದಿಮೆಗಳು ಬೆಳೆಯುವಂತೆ ಪ್ರೋತ್ಸಾಹಿಸಿ ದನು. ಆದರೆ ಕ್ರಿ.ಶ. ೧೭೫೫ರಲ್ಲಿ ಆ ನವಾಬನು ಹುಬ್ಬಳ್ಳಿ ಪಟ್ಟಣವನ್ನು ಮಾಧವರಾವ ಪೇಶ್ವನಿಗೆ ಕೊಟ್ಟನು. ಬಾಜೀರಾಯನ ಆಳ್ವಿಕೆಯಲ್ಲಿ ಇದು ಸಾಂಗಲಿಯ ಪಟವರ್ಧನನ ರಾಜ್ಯಕ್ಕೆ ಸೇರಿತ್ತು. ನಂತರ ಕ್ರಿ.ಶ. ೧೮೧೮ರಲ್ಲಿ ಮೂರನೆ ಮರಾಠಾ ಯುದ್ಧದಲ್ಲಿ ಜಯಗಳಿಸಿದ ಬ್ರಿಟಿಷರು ಜ|| ಮನ್ರೋನ ನೇತೃತ್ವದಲ್ಲಿ ಹುಬ್ಬಳ್ಳಿಯನ್ನು ಸ್ವಾಧೀನಪಡಿಸಿಕೊಂಡರು. ೧೮೨೦ ರಲ್ಲಿ ಸಾಂಗಲಿಯ ಚಿಂತಾಮಣಿರಾವ ಅಪ್ಪಾ ಸಾಹೇಬ ಇಂಗ್ಲೀಷರಿಗೆ ರಾಹುತರನ್ನು ಇಡುವುದಕ್ಕೆ ಬದಲಾಗಿ ಕೆಲವು ಸೀಮೆಯನ್ನು ಕೊಟ್ಟನು. ಅದರಲ್ಲಿ ಹುಬ್ಬಳ್ಳಿಯೂ ಸೇರಿತ್ತು. ೧೮೪೪ರಲ್ಲಿ ಕ್ಯಾಪ್ಟನ್ ವಿಂಗೇಟ್ ಎಂಬುವವರು, ಹುಬ್ಬಳ್ಳಿಯು ೩೩ ಸಾವಿರ ಜನಸಂಖ್ಯೆಯಿದ್ದ ೫೪೫೮ ಮನೆತನಗಳಿಂದ ಕೂಡಿದ ಪ್ರಮುಖ ವ್ಯಾಪಾರ ಕೇಂದ್ರವಾಗಿದ್ದು ಮುಂಬೈ, ಮದ್ರಾಸ್ ಮುಂತಾದ ಕೇಂದ್ರಗಳೊಂದಿಗೆ ಇಲ್ಲಿಯ ವ್ಯಾಪಾರ ವಹಿವಾಟು ನಡೆಯುತ್ತಿದೆ[2] ಎಂದು ಬರೆ ದಿರುವನು.

ಪೇಶ್ವೆಯರ ಕಾಲದಲ್ಲಿ ಹುಬ್ಬಳ್ಳಿಯು ಪ್ರಾಮು ಖ್ಯತೆಯನ್ನು ಪಡೆಯಿತು. ಕ್ರಿ. ಶ. ೧೭೫೩ರಲ್ಲಿ ಪುಣೆಯ ಪೇಶ್ವೆಯರು ಧಾರವಾಡ ಸುಭೆಯನ್ನು ವಶ ಪಡಿಸಿಕೊಂಡ ಮೇಲೆ ಹುಬ್ಬಳ್ಳಿಯು ಸಾಕಷ್ಟು ಬೆಳೆದು ಕಸಬಾ ಹುಬ್ಬಳ್ಳಿ ಎಂದು ಹೆಸರು ಪಡೆಯಿತು. ಆಗಿನ ಕಾಲದ ಸಂತೆ, ಅಂಗಡಿ, ವ್ಯಾಪಾರ ಮಾರ್ಗ, ಸಾಧನ ಸಾಗಾಣಿಕೆ, ಸರಕು, ವ್ಯಾಪಾರ ವಿಧಾನ, ಒಳನಾಡು-ಹೊರನಾಡಿನ ವ್ಯಾಪಾರದ ಬಗ್ಗೆ ಮಾಹಿತಿ ಸಂಗ್ರಹಿಸ ಲಾಗಿದೆ.

ವಾರಕ್ಕೊಮ್ಮೆ ಬಜಾರ ಅಥವಾ ಸಂತೆ ನಡೆಯು ತಿತ್ತು.[3] ಇದರಿಂದ ಪಟ್ಟಣವು ಬೆಳೆಯುತ್ತಾ ಹೋಯಿತು. ಇಂಥ ಸಂತೆಗಳು ಮಧ್ಯಕಾಲೀನ ಕರ್ನಾಟಕದ ಪ್ರತಿಯೊಂದು ಪಟ್ಟಣದಲ್ಲಿಯೂ ಜರುಗು ತ್ತಿದ್ದವು ಎಂದು ನಾವು ತಿಳಿದಿದ್ದೇವೆ. ಪೇಟೆಯನ್ನು ಸ್ಥಾಪಿಸುವಾಗ ಸ್ಥಳೀಯ ವರ್ತಕರಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡಲಾಗುತ್ತಿತ್ತು. ಅಂದರೆ ಅವರಿಗೆ ಕೌಲ (ಒಪ್ಪಂದ) ಪ್ರಕಾರ ಪೇಟೆಯನ್ನು ಸ್ಥಾಪಿಸಲು ಅನುಮತಿ ಕೊಡಲಾಗುತ್ತಿತ್ತು. ಪೇಟೆಯ ಮುಖ್ಯ ಸ್ಥಳದಲ್ಲಿ ಧ್ವಜವನ್ನು ನಿಲ್ಲಿಸಲಾಗುತ್ತಿತ್ತು. ಒಂದು ಯಾದಿಯ[4] ಪ್ರಕಾರ ಮಂಗಳವಾರ ಪೇಟೆಯಲ್ಲಿ ಧ್ವಜ ವನ್ನು ನಿಲ್ಲಿಸಲು ತಗುಲಿದ ಖರ್ಚು ೧-೪-೦ ಧಾರವಾಡೀ ಹೊನ್ನು. ಪಾಸೋಡಿ (ಶಾಲು) ತೆಂಗಿನಕಾಯಿ, ಅರಿಸಿನ ಕುಂಕುಮ ಹಾಗೂ ಅಕ್ಕಿ ತಂದು ಬ್ರಾಹ್ಮಣ ರಿಗೆ ಪೂಜೆ ಮಾಡಲಾಯಿತು. ಹಾಗೂ ಬ್ರಾಹ್ಮಣರಿಗೆ ಮತ್ತು ಜಂಗಮರಿಗೆ ದಕ್ಷಿಣೆಯನ್ನು ನೀಡಲಾಯಿತು. ಈ ಪದ್ಧತಿ ಎಲ್ಲಾ ಪೇಟೆಗಳಲ್ಲಿ ಅನುಸರಿಸಲಾಗುತ್ತಿತ್ತು. ಹೀಗೆ ಮಂಗಳವಾರ ಪೇಟೆ, ಕಸಬಾ ಪೇಟೆ, ಜವಳಿ ಸಾಲ, ಕೌಲ ಪೇಟೆ, ಅಕ್ಕಿ ಪೇಟೆ, ಪಾನ ಬಜಾರ, ಜಂಗ್ಲಿ ಪೇಟೆ, ದಾಜಿಬಾನ ಪೇಟೆ ಇತ್ಯಾದಿ ಮಾರುಕಟ್ಟೆ ಗಳು ಸ್ಥಾಪಿತವಾದವು.[5]

ಕಸಬಾ ನಿರ್ಮಾಣದ ಮೂಲೋದ್ದೇಶ ವರ್ತಕರಿಗೆ ಪ್ರೋತ್ಸಾಹ ಕೊಟ್ಟು ವಾಣಿಜ್ಯೋದ್ಯಮ ಬೆಳೆಸುವುದು. ಹೊಸದಾಗಿ ನಿರ್ಮಿಸಿದ ಪೇಟೆಗಳಲ್ಲಿ, ಪಟ್ಟಣದಲ್ಲಿ ಬಂದು ವಾಸಿಸುವ ವರ್ತಕರಿಗೆ ವಿಶೇಷ ಸೌಲಭ್ಯ ಕರ

---

2 ಪ್ರ ಬ್ರಿಟಿಷ್ ರಿಕಾರ್ಡ್ಸ್, ಫಾಯಿಲ ನಂ. ೧

3 ಈಗ ಹುಬ್ಬಳ್ಳಿಯಲ್ಲಿ ಪ್ರತಿ ಶನಿವಾರ ಸಂತೆ ಜರುಗುತ್ತದೆ.

4 ಪು.ಪ.ಕ.ಜ. ಯಾದಿ. ನಂ. ೪೯

5 ಅದೇ

ವಿನಾಯಿತಿ ಒದಗಿಸುತ್ತಿದ್ದರು.

ಪೇಟೆಯ ಮೇಲ್ವಿಚಾರಣೆಗೆ ಪಟ್ಟಣ ಶೆಟ್ಟಿ ಮತ್ತು ಅಗೋತಿ ಎಂಬ ಅಧಿಕಾರಿಗಳನ್ನು ನೇಮಿಸಲಾಗುತ್ತಿತ್ತು.[6] ಪೇಟೆಯ ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವುದು, ವರ್ತಕರ ನಡುವಿನ ವ್ಯಾಜ್ಯಗಳನ್ನು ಬಗೆಹರಿಸುವುದು, ತಪ್ಪಿತಸ್ಥರನ್ನು ದಂಡಿಸುವುದು, ವ್ಯಾಪಾರ ಒಪ್ಪಂದಗಳಿಗೆ ಸಹಿ ಹಾಕುವುದು ಇವು ಪಟ್ಟಣ ಶೆಟ್ಟಿಯ ಕರ್ತವ್ಯ ಹಾಗೂ ಅಧಿಕಾರಗಳು ತೂಕ ಮತ್ತು ಮಾಪನಗಳ ಮೇಲೆ ನಿಗಾ ಇಟ್ಟು ವರ್ತಕರಿಗೆ ಸರಿಯಾದ ತೂಕ ಮತ್ತು ಮಾಪನಗಳನ್ನು ಪೂರೈಸುವುದು ಅಗೋತಿಯ ಕರ್ತವ್ಯ ಆಗಿತ್ತು. ಇವರಿಗೆ ಅನೇಕ ಸೌಲಭ್ಯಗಳನ್ನು ನೀಡಲಾಗಿತ್ತು. ಪ್ರತಿಯೊಬ್ಬ ವರ್ತಕನಿಂದ ಅವರಿಗೆ ಒಂದು ಮುಷ್ಠಿ ಧ್ಯಾನ ಕಾಳು–ಕಡ್ಡಿ ಬೆಣ್ಣೆ ಇತ್ಯಾದಿ ಮುಟ್ಟುತ್ತಿತ್ತು. ಇದಕ್ಕೆ 'ಹತ್' ಎನ್ನುತ್ತಿದ್ದರು. ಇವರಲ್ಲದೆ ದೇಸಾಯಿ. ದೇಶಪಾಂಡೆ, ಪತಕಿ, ಗುಣಾರಿ, ಜಂಗಮ, ಬಲಸಾಯಿ ಫಕೀರ, ಸರನಾಡಗೌಡಾ, ಪೀರಜಾದೆ, ಚಲವಾದಿ, ಪಾಟೀಲ, ಕುಲಕರ್ಣಿ ಹಾಗೂ ಖಾಜಿ ಇವರು ಪೇಟೆಯ ಹಕ್ಕುದಾರರಾಗಿದ್ದರು.[7]

ಹುಬ್ಬಳ್ಳಿಯ ಮಾರುಕಟ್ಟೆಗೆ ಮುಂಬೈಯ ನೂಲು, ರೇಶಿಮೆ, ಕಸ್ತೂರಿ, ಕೇಶರ, ಜೀರಿಗೆ, ತೆಂಗಿನಕಾಯಿ, ಕೊಬ್ಬರಿ, ಗಾಂಜಾ, ಸಕ್ಕರೆ, ಬೆಲ್ಲ, ಕಂಬಳಿ, ಮೆಣಸಿನಕಾಯಿ, ತಂಬಾಕು, ಅಡಿಕೆ, ಯಾಲಕ್ಕಿ, ಮುಂತಾದವುಗಳು ಹೊರಗಿನಿಂದ ಬರುತ್ತಿದ್ದವು. ಅರಳೆ, ಕುಸುಬೆ, ಸೀರೆ, ಖಣ, ಮುಂತಾದ ದೇಶಿ ವಸ್ತ್ರ, ತಾಮ್ರ ಹಿತ್ತಾಳೆಗಳ ಪಾತ್ರೆಗಳು ಉಳ್ಳಾಗಡ್ಡಿ ಬೆಳ್ಳುಳ್ಳಿ ಮುಂತಾದವುಗಳನ್ನು ರಫ್ತು ಮಾಡಲಾಗುತ್ತಿತ್ತು. ಪೇಟೆಗೆ ಬರುವ ಮುಖ್ಯ ಕೃಷಿ ಉತ್ಪನ್ನಗಳಲ್ಲಿ ಅಕ್ಕಿ, ಗೋಧಿ, ಕಡಲೆ, ಉದ್ದು, ಮೆಣಸಿನಕಾಯಿ, ಶುಂಠಿ, ಹುಣಿಸೆ, ಅವಲಕ್ಕಿ, ದ್ರಾಕ್ಷಿ, ಬೆಲ್ಲ, ಜೀರಿಗೆ, ಕರಿಮೆಣಸು, ಕೊಬ್ಬರಿ, ಸಾಸುವೆ, ಜೇನುತುಪ್ಪ, ಹಿಂಗು, ಲವಂಗ ಹಾಗೂ ಯಾಲಕ್ಕಿ ಮುಖ್ಯವಾದವು.

ಗದಗ, ಬ್ಯಾಡಗಿ, ಮುಂಡರಗಿ, ಹಾವೇರಿ, ಧುಂಡಿಸಿ, ಧಾರವಾಡ, ನರಗುಂದ, ಗುಳೇದಗುಡ್ಡ, ಗಜೇಂದ್ರಗಡ, ಮುಂತಾದ ವಾಣಿಜ್ಯ ಕೇಂದ್ರಗಳಿಂದ ವ್ಯಾಪಾರದ ಸಾಮುಗ್ರಿಗಳನ್ನು ಪೂರೈಸಲಾಗುತ್ತಿತ್ತು. ಹಾವೇರಿ, ಮಿಶ್ರಕೋಟೆ, ಕಲಘಟಗಿ, ಮತ್ತು ಧಾರವಾಡ ಕಡೆಯಿಂದ ವರ್ತಕರು ಹುಬ್ಬಳ್ಳಿಗೆ ವ್ಯಾಪಾರ ಮಾಡಲು ಬರುತ್ತಿದ್ದರು. ಹಾವೇರಿಕರ, ಮಿಶ್ರ ಕೋಟಕರ, ಕಲಘಟಗಿಕರ, ಮೊರಬಕರ, ನೆಗಳೂರಕರ ಹೊಸೂರಕರ, ದೇವಗಿರಿಕರ, ಕಡಕೋಳಕರ, ಕೋಳೀ ವಾಡಕರ, ಮತ್ತು ಹಾವನೂರಕರ ಅಂಗಡಿಕರ, ಮುಂತಾದ ಊರಿನ ವಿಶೇಷಣಗಳು ಇಲ್ಲಿಗೆ ಬರುತ್ತಿದ್ದ ವ್ಯಾಪಾರಸ್ಥರ ಸ್ಥಳಗಳನ್ನು ನಿರ್ದೇಶಿಸುತ್ತದೆ. ಇವರಿಂದ ಕಾಪತ್ ಎಂಬ ತೆರಿಗೆಯನ್ನು ವಸೂಲು ಮಾಡಲಾಗುತ್ತಿತ್ತು.[8]

ಕೋಷ್ಠಿ, ಜವಳಿ, ಸರಾಫ್, ಸೋನಾರ್, ತೇಲಿ, ಕಾಸಾರ, ಸಿಂಪಿ, ಜಾಲಗಾರ, ಪರೀಟ, ಚನಾದಿ, ನೀಲಾರಿ, ಚಾಂಬಾರ, ಪರಪೇಟಕರ, ತಾಂಬೋಳಿ, ಬಾಗವಾನ್ ಇವರಿಂದ ಮೊಹತರ್ಫಾ ಎಂಬ ತೆರಿಗೆಯನ್ನು ಮತ್ತು ವ್ಯಾಪಾರಸ್ಥರ ಕಡೆಯಿಂದ ಜಕಾತಿಯನ್ನೂ ವಸೂಲ ಮಾಡಲಾಗುತ್ತಿತ್ತು. ಅಲ್ಲಲ್ಲಿ ಜಗೂತ ಕಟ್ಟೆಗಳು ಇದ್ದವು.[9]

ಹುಬ್ಬಳ್ಳಿಯಿಂದ ಗೋವಾಕ್ಕೆ ಗಂಧದ ಕಟ್ಟಿಗೆ ಹಾಗೂ ಹಸ್ತಿದಂತ ರಫ್ತಾಗುತ್ತಿತ್ತು ಮತ್ತು ಅಲ್ಲಿಂದ ರೇಷ್ಮೆ, ಉಣ್ಣೆ ಹಾಗೂ ಅಕ್ಕಿಯನ್ನು ಆಮದು ಮಾಡಲಾಗುತ್ತಿತ್ತು. ಇಲ್ಲಿಯ ಅನೇಕ ಶ್ರೀಮಂತ ವ್ಯಾಪಾರಿಗಳಾದ ಶೆಟ್ಟರು, ಬಣಜಿಗರು, ಜೈನರು, ಮಾರವಾಡಿಗಳು, ನಾರ್ವೇಕರರು,

---

6 ಪು. ಪ. ಕೆ. ಜ. ತಾಳೀಬಂದು. ನಂ. ೫

7 ಅದೇ.

8 ಪು. ಪ. ಕೆ. ಜ. ಆಕಾರ ಜಮಾ ನಂ. ೧೮

9 ಅದೇ.

ಶೀಲವಂತರು, ಕೋಮಟಿಗರು ಮುಂತಾದರು ಉತ್ತರದಲ್ಲಿ ಸೂರತ್, ಪೂರ್ವಕ್ಕೆ ಹೈದರಾಬಾದ ಹಾಗೂ ದಕ್ಷಿಣಕ್ಕೆ ಶ್ರೀರಂಗಪಟ್ಟಣದ ವರೆಗೆ ಸಂಪರ್ಕವನ್ನಿಟ್ಟು ಕೊಂಡಿದ್ದರು. ಕೆಲವು ದಾಖಲೆಗಳಲ್ಲಿ ವಸ್ತುಗಳ ದರವನ್ನು ತಿಳಿಸಲಾಗಿದೆ. ೧೮೧೬ರ ಒಂದು ಘಡನಿಯ[10] ಪ್ರಕಾರ ದರ ಈ ಕೆಳಗಿನಂತೆ ಇತ್ತು. ದರ ಒಂದು ರೂಪಾಯಿಗೆ ಜೋಳ ೧೬ ಸೇರು, ಅಕ್ಕಿ ೭.೫೦, ಗೋದಿ ೬.೭೫, ಬೆಲ್ಲ ೧೦.೧೦ ಸೇರು ಕಚ್ಚಾ, ಕಡಲೆ ೪, ಸಕ್ಕರೆ ೫, ತೆಂಗಿನಕಾಯಿ ೧೦.

ತೂಕ ಮತ್ತು ಮಾಪುಗಳ ವಿವರ ಆಗಿನ ಕಾಲದ ತೂಕ ಮಾಪುಗಳ ಹೆಸರುಗಳು ಒಂದೇ ಇದ್ದು, ಅವುಗಳ ಪರಿಮಾಣಗಳು ಬೇರೆ ಬೇರೆ ಇರುತ್ತಿದ್ದವು. ಇದರಿಂದ ಜನಸಾಮಾನ್ಯರಿಗೆ ಮೋಸ ಆಗುತ್ತಿತ್ತು. ಅಕ್ಕಿ, ಜೋಳ, ಕಡಲೆ ಮುಂತಾದ ಕಾಳು-ಕಡ್ಡಿಗಳನ್ನು ಗಲಾಕೈಲಿ (ಕಾಯಲಿ) ಎಂಬ ಮಾಪನದಿಂದ ಅಳೆಯುತ್ತಿದ್ದರು. ತುಪ್ಪ, ಬೆಲ್ಲ, ಎಣ್ಣೆ, ಅಡಿಕೆ ಮುಂತಾದವುಗಳಿಗೆ ವಜನೀ, ವಜನ ಎಂಬ ಮಾಪು, ಹಣ್ಣು, ಬಟ್ಟೆ, ತೆಂಗಿನಕಾಯಿ ಇವುಗಳಿಗೆ ಸುಮಾರೀ, ಸುಮಾರ ಎಂಬ ಮಾಪನ ಬಳಕೆಯಲ್ಲಿ ಇತ್ತು.[11]

೧ ಖಂಡಿ-೨೦ ಮಣ, ೧ ಮಣ-೧೨ ಪಾಯಲಿ, ೧ ಪಾಯಲಿ-೪ ಸೇರು, ೧ ಸೇರು-೧೬ ಚಟಾಕುಗಳು, ೧ ಚಟಾಕು-೬ ಟಕಾಗಳು ಹೀಗೆ ಪರಿಮಾಣ ಇತ್ತು. ಸೇರಿನಲ್ಲಿ ಪಕ್ಕಾ (ಪಕೆ) ಮತ್ತು ಕಚ್ಚಾ (ಕಚೆ) ಎಂಬ ಎರಡು ಪ್ರಕಾರಗಳು. ಪಕ್ಕಾ ಸೇರು ಕಚ್ಚಾ ಸೇರಿಗಿಂತ ಮೂರು ಪಟ್ಟು ಇರುತ್ತಿತ್ತು. ಕಚ್ಚಾ ಸೇರು ೨೪ ಟಕೆಗಳಿಗೆ ಸಮನಾಗಿರುತ್ತಿತ್ತು.

ಕಸಬಾ ಹುಬ್ಬಳ್ಳಿಯಲ್ಲಿ ಹುಂಡೀ ವ್ಯವಹಾರ ನಡೆಯುತ್ತಿತ್ತು. ಹುಂಡೀ ಸಾಹುಕಾರರ ದಲಾಲರು ಬೇರೆ ಬೇರೆ ಪಟ್ಟಣಗಳಿಗೆ ಹೋಗಿ ವ್ಯವಹರಿಸುತ್ತಿದ್ದರು. ಹುಬ್ಬಳ್ಳಿಯ ಸಾಹುಕಾರರು ಪರಸ್ಪರರ ಮೇಲೆ ಹುಂಡಿಗಳನ್ನು ಕೊಡುವುದಲ್ಲದೆ, ಮುಂಬೈ, ಪುಣೆ, ಸಾತಾರಾ, ವೆಂಗುರ್ಲಾ, ಚಿಪಳೂಣ, ಮುಂತಾದ ಪಟ್ಟಣಗಳಲ್ಲಿ ಹುಂಡಿಗಳನ್ನು ಕೊಟ್ಟದ್ದ ಬಗ್ಗೆ ದಾಖಲೆ ಇದೆ.[12]

ಹುಬ್ಬಳ್ಳಿಯಲ್ಲಿ ನಾನಾ ಪ್ರಕಾರದ ಬಂಗಾರ, ಬೆಳ್ಳಿ, ತಾಮ್ರಗಳ ನಾಣ್ಯಗಳು ಚಲಾವಣೆಯಲ್ಲಿ ಇದ್ದವು. ಶಿವಾಜಿಯು 'ಹೋನ್' ಎಂಬ ಸುವರ್ಣ ನಾಣ್ಯ ಮತ್ತು 'ಶಿವರಾಯಿ' ಎಂಬ ತಾಮ್ರದ ನಾಣ್ಯ ಹೊರ ತಂದನು. ಪೇಶ್ವೆಯರು ಬೆಳ್ಳಿ ಹಾಗೂ ತಾಮ್ರದ ನಾಣ್ಯಗಳನ್ನು ಹೊರತಂದರು. ವಾಡಿಕೆಯಾಗಿ 'ವರಹ' ಅಥವಾ 'ಹೊನ್ನು' ಎಂಬ ನಾಣ್ಯಗಳು ನಡೆಯುತ್ತಿದ್ದವು. ಶಹಾಪುರೀ, ಧಾರವಾಡೀ, ನಿಲುಕಂಠೀ, ಚಾಂದೋಡಿ, ಪಿರಖಾನಿ ಇವು ಬೆಳ್ಳಿಯ ನಾಣ್ಯಗಳು 'ಶಾಹೂಪೈಸಾ' ಎಂಬ ತಾಮ್ರದ ನಾಣ್ಯವು ಎಲ್ಲ ಕಡೆಗೆ ನಡೆಯುತ್ತಿತ್ತು. ಅದಕ್ಕೆ ದುಡ್ಡು ಎನ್ನುತ್ತಿದ್ದರು. ಬೇರೆ ನಾಣ್ಯಗಳ ವಿನಿಮಯ ಮಾಡಬೇಕಾದರೆ ಸರ್ಕಾರಕ್ಕೆ ಬಟ್ಟಾ ಅಥವಾ ಕಮಿಶನ್ ಕೊಡಬೇಕಾಗುತ್ತಿತ್ತು. ಇದರ ಮೇಲಿಂದ ಈ ಪ್ರದೇಶದಲ್ಲಿ ವ್ಯಾಪಾರ ಭರದಿಂದ ಸಾಗುತ್ತಿತ್ತೆಂಬ ಸಂಗತಿ ತಿಳಿದುಬರುತ್ತದೆ.

ಹೀಗೆ ಪೇಶ್ವೆಯರ ಕಾಲವಲ್ಲಿ ಹುಬ್ಬಳ್ಳಿಯು ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿತ್ತು. ವ್ಯಾಪಾರದಿಂದಲೇ ಈ ನಗರವು ಬೆಳೆದು ಮಹಾ ನಗರವಾಗಿದೆ. ಈಗ ಹುಬ್ಬಳ್ಳಿಯು ಕರ್ನಾಟಕ ರಾಜ್ಯದಲ್ಲಿ ಸುಪ್ರಸಿದ್ಧ ವಾಣಿಜ್ಯೋದ್ಯಮ ಕೇಂದ್ರ ಎಂದು ಹೆಸರು ಪಡೆದಿದೆ. ಇದು ಪ್ರಮುಖ ರೈಲ್ವೆ ಕೇಂದ್ರ ಹಾಗೂ ಉತ್ತರ ಕರ್ನಾಟಕದ ಹೃದಯ ಸ್ಥಾನ ಮತ್ತು ಅತ್ಯಂತ ಮಹತ್ವದ ಉದ್ದಿಮೆ ಕೇಂದ್ರವಾಗಿ ಬೆಳೆಯುತ್ತಿದೆ.

10 ದಕ್ಷಿಣ ಕಮೀಶನರ ದಫ್ತರ-ಮರಾಠಿ. ರುಮಾಲ ನಂ. ೧೫೯

11 ಪ್ರ.ಪ.ಕ.ಜ. ಘಡಣಿ. ರುಮಾಲ ನಂ. ೧

12 ಅದೇ

# ಗ್ರಂಥಋಣ


೧ ಗ್ಯಾಝೆಟೀಯರು—ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ವೆಂಕಟ ರಂಗೋ ಕಟ್ಟಿ, ಮುಂಬೈ ೧೮೯೩

೨ 'ರಜತ ರಶ್ಮಿ' ರಜತ ಮಹೋತ್ಸವ ಸ್ಮರಣ ಸಂಚಿಕೆ ಹುಬ್ಬಳ್ಳಿ—ಧಾರವಾಡ ಮಹಾನಗರ ಸಭೆ, ಹುಬ್ಬಳ್ಳಿ, ೧೯೮೭

೩ ಬಿ.ಆರ್, ಹಿರೇಮಠ, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಧಾರವಾಡ, ೧೯೮೬

೪ ಚೊಕ್ಸಿ ಆರ್.ಡಿ, ಎಕೊನೊಮಿಕ್ ಲಾಯಫ್ ಇನ್ ದಿ ಬೊಂಬೈಯಿ ಕರ್ನಾಟಕ (೧೮೧೮-೧೯೩೯) ಮುಂಬೈ, ೧೯೬೨

೫ ಚಿಟ್ನಿಸ್ ಕೆ.ಎನ್. ಸೊಸಿಯೊ ಎಕೊನೊಮಿಕ್ ಅಸ್ಪೆಕ್ಟ್ಸ್ ಆಫ್ ಮಿಡಿವಲ್ ಇಂಡಿಯಾ, ಪೂನಾ ೧೯೭೯

ಶ್ರೀನಿವಾಸ ಹಾವನೂರ*

# ಕಳೆದ ಶತಮಾನದಲ್ಲಿ ಬ್ರಿಟಿಷರಿಂದ ಕರ್ನಾಟಕಕ್ಕೆ ಆದ ಅನ್ಯಾಯ

ಕಳೆದ ಶತಮಾನದ ಆರಂಭದಿಂದ ಬ್ರಿಟಿಷರು ಕರ್ನಾಟಕದ ವಿವಿಧ ಪ್ರದೇಶಗಳನ್ನು ಆಳತೊಡಗಿದರಷ್ಟೆ. ಆರಂಭದಲ್ಲಿಯೆ ನಾಡು ವಿಭಿನ್ನ ಆದಿಪತ್ಯಗಳಲ್ಲಿ ಹಂಚಿ ಹೋಗಿ, ಒಟ್ಟಿನ ವಿಕಾಸಕ್ಕೆ ಪೆಟ್ಟು ಬಿದ್ದಿತು. ಜೊತೆಗೆ ಆಡಳಿತದ ನಿಮಿತ್ತ ಮಾಡಿಕೊಂಡು ನಡೆಸಿದ ಅನೇಕ ಬದಲಾವಣೆಗಳಿಂದಾಗಿ ಜನತೆಗೆ ಇನ್ನಷ್ಟು ಅನ್ಯಾಯ ವಾಯಿತು. ಉದಾಗೆ : ವಂಶಪಾರಂಪರ್ಯದಿಂದ ಇದ್ದ ಹಕ್ಕುಗಳನ್ನು ಕಸಿದುಕೊಂಡದ್ದು, ಕೆನರಾ ಜಿಲ್ಲೆಯನ್ನು ಇಬ್ಭಾಗಿಸಿದ್ದು, ಜಿಲ್ಲೆ ಹಾಗೂ ತಾಲೂಕುಗಳ ಕೇಂದ್ರ ಸ್ಥಳಗಳನ್ನು ಬೇಕಾದಂತೆ ಬದಲಿಸುತ್ತಿದ್ದುದ್ದು–ಇಂಥವು ಒಂದೆರಡೇನಲ್ಲ.

ಇತ್ತ ಮಾಡಬೇಕೆಂದು ಯೋಜಿಸಿದ್ದ ಒಂದು ಒಳ್ಳೆಯ ಮಾರ್ಪಾಟನ್ನು ಕೈ ಬಿಟ್ಟರೆ ಅದೂ ಅನ್ಯಾಯದ್ದೇ ಆಗುವುದು. ಕಿತ್ತೂರು ಹಾಗೂ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಹೊಸ ಮಾಹಿತಿ ಗಾಗಿ ಬ್ರಿಟಿಷರ ದಾಖಲೆಗಳನ್ನು ಪರಿಶೀಲಿಸುತ್ತಿದ್ದಾಗ ಅಕಸ್ಮಾತ್, ಈ ಮುಂದೆ ನಿರೂಪಿಸಲಿರುವ ಘಟನೆಯ ವಿವರಗಳು ದೊರೆತುವು.

ಕ್ರಿ.ಶ. ೧೮೧೮ರಲ್ಲಿ ಬ್ರಿಟಿಷರು ಪೇಶ್ವೆಯವರನ್ನು ಸೋಲಿಸಿದ ಕಾಲಕ್ಕೆ, ಅವರ ದಕ್ಷಿಣದ ಭಾಗವನ್ನು ಥಾಮಸ್ ಮನ್ರೋ ಸದ್ದು ಗದ್ದಲವಿಲ್ಲದೆ ವಶಪಡಿಸಿ ಕೊಂಡನು. ಈ ಭಾಗವನ್ನು 'ಸದರ್ನ್ ಮರಾಠಾ ಕಂಟ್ರಿ' (ಎಸ್. ಎಂ. ಸಿ) ಎಂದು ಅವನೇ ಕರೆದದ್ದು. ಅದು ಮುಖ್ಯವಾಗಿ ನಮ್ಮ ಧಾರವಾಡ, ಬೆಳಗಾಂವಿ ಮತ್ತು ವಿಜಾಪುರ ಜಿಲ್ಲೆಗಳನ್ನು ಒಳಗೊಂಡಿದ್ದಿತು. ಕೆಲವು ದಶಕಗಳು ಕಳೆದ ಮೇಲೆ 'ಮುಂಬಯಿ ಕರ್ನಾಟಕ'ವಾಗಿ ಪರಿಣಮಿಸಿತು.

ಈ ಎಸ್. ಎಮ್. ಸಿ. ಯ ಆಡಳಿತವನ್ನು ಬ್ರಿಟಿಷರು ವಹಿಸಿಕೊಂಡ ಪ್ರಾರಂಬದಲ್ಲಿ, ಎಂದರೆ ೧೮೨೦–೧೮೩೦ರ ದಶಕಗಳಲ್ಲಿ ಇವರ ಆಡಳಿತೆಯ ಪ್ರತಿಭಟನಾರ್ಥವಾಗಿ ದಂಗೆಗಳೆದ್ದವು. ಕಿತ್ತೂರಿನ ದಂತೂ ಸರಿಯೇ (ನವೆಂ. ೧೮೨೪) ಅದರ ಮರು ತಿಂಗಳು ಸಿಂದಗಿಯಲ್ಲಿ ; ಅನಂತರ ನಿಪ್ಪಾಣಿ, ಖಾನಾ ಪುರ, ಹಲಗಲಿ, ಬೈಲಹೊಂಗಲ, ಮುಂಡರಗಿ ಮುಂತಾದ ಕಡೆಗಳಲ್ಲಿ ತಲೆದೋರಿದುವು. ಎಲ್ಲವೂ ಚಿಕ್ಕ ಪ್ರಮಾಣ ದವು. ಆದರೆ ಹೊಸದಾಗಿ ಆಡಳಿತವನ್ನು ಆರಂಭಿಸಿದ್ದ ಬ್ರಿಟಿಷರಿಗೆ ಅವುಗಳ ಹಿನ್ನೆಲೆ ಮತ್ತು ವ್ಯಾಪ್ತಿ ತಿಳಿಯದಿದ್ದಾಗ ಹೌ ಹಾರುತ್ತಿದ್ದರು. ಆಗ ಮದ್ರಾಸ ಪ್ರಾಂತದ ಬಳ್ಳಾರಿ ಮುಂತಾದ ಠಾಣೆಗಳಿಂದ ಸೈನ್ಯದ ತುಕಡಿಗಳನ್ನು ತರಿಸುತ್ತಿದ್ದರು. ಸೈನ್ಯ ಮಾತ್ರವಲ್ಲ ; ಅಧಿಕಾರಿಗಳೂ ಸಹ ! ಮೇಲೆ ಹೇಳಿದ ಥಾಮಸ್ ಮನ್ರೊ, ಕನ್ನಡ ಪ್ರೇಮಿ ವಾಲ್ಟರ್ ಎಲಿಯೆಟ್, ಈ ಭಾಗದ ಕಮಿಶನರ್ ಚಾಪ್ಲಿನ್–ಇವರೇ ಮೊದಲಾದ ವರು ಮದ್ರಾಸ ಪ್ರಾಂತದಿಂದ ಬಂದವರಾಗಿದ್ದರು.

ಈ ಚಾಪ್ಲಿನ್ನನಿಗೆ ಆಡಳಿತದ ದೃಷ್ಟಿಯಿಂದ ಈ

* 'ಶುಭತಾರ' ಭಾಪೇಕರ್‌ಮಾರ್ಗ, ಪುಣೆ-೪೧೧೦೦೪

ಪ್ರದೇಶವು ತಾಪದಾಯಕವಾಗಿ ಕಂಡಿತು. ಆಡಳಿತ ವಿಚಾರವಾಗಿ ಆದಾಗಲೇ ನೆಲೆಗೊಂಡಿದ್ದ ಮದ್ರಾಸ ಪ್ರಾಂತಕ್ಕೆ ಈ ಭಾಗವನ್ನೇಕೆ ಹಸ್ತಾಂತರಿಸಬಾರದು ? ಎಂದು ಯೋಚಿಸಿ, ಮುಂಬಯಿಯ ಗವರ್ನರ್ ಎಲ್ಫಿನ್‌ಸ್ಟನ್ನನಿಗೆ ಪತ್ರ ಬರೆದ (೧೮೨೬ ಏಪ್ರಿಲ್ ೧). ಆವನು ಕೊಟ್ಟ ಕಾರಣಗಳಿವು–

೧. ಇಲ್ಲಿಯ ಗಲಭೆಗಳನ್ನು ಹತ್ತಿಕ್ಕಲು ಮದ್ರಾಸದವರ ಸೈನಿಕ ಸಹಾಯವನ್ನು ಹೇಗೂ ಪಡೆಯುತ್ತಿದ್ದೇವೆ. ೨. ಇಲ್ಲಿಯ ಜನ ಕನ್ನಡ ಮಾತಾಡುತ್ತಾರೆ-ಮದ್ರಾಸ ಪ್ರಾಂತದ ಪೂರ್ವ ಭಾಗದವರಂತೆಯೇ. ೩. ಇಲ್ಲಿರುವ ಸಂಸ್ಥಾನಿಕರು, ವತನದಾರ ಮುಂತಾದವರು ಮರಾಟಿಗರು. ಪೇಶ್ವೆಯವರಿಂದಾಗಿ ಅಸ್ತಿತ್ವದಲ್ಲಿರುವ ಮರಾಟಿಗರ ಪ್ರಾಬಲ್ಯವನ್ನು ತುಸು ಮಟ್ಟಿಗೆ ತಗ್ಗಿಸಬಹುದು.

ಆದರೆ ಮುಂಬಯಿ ಪ್ರಾಂತ್ಯದ ಆಡಳಿತ ಕೌನ್ಸಿಲ್‌ನ ಸದಸ್ಯರಲ್ಲಿ ಒಬ್ಬನಾದ ವಾರ್ಡೆನ್ ಇದನ್ನು ವಿರೋಧಿಸಿ, ಈ ಕೆಳಗಿನ ಆಕ್ಷೇಪಗಳನ್ನು ಮುಂದೆ ಮಾಡಿದ.

೧. ಗಲಭೆಗಳಾದಾಗ ಮುಂಬಯಿ ಕಡೆಯಿಂದಲೇ ಮಿಲಿಟರಿ ಸಹಾಯ ಹೆಚ್ಚು ಸುಗಮವಾದದ್ದು. [ಅದಕ್ಕೆ ಏನೇನೊ ಕಾರಣ ಕೊಟ್ಟಿದ್ದಾನೆ]. ೨. ಇಲ್ಲಿಯ ಜನರಲ್ಲಿ ಅರ್ಧದಷ್ಟು ಜನ ಮರಾಟಿಗರು ; ಮರಾಟಿಯನ್ನೆ ಮಾತಾಡ್ತಾರೆ. ೩. ಇಲ್ಲಿಯ ಸಂಸ್ಥಾನಿಕರ ಹಾಗೂ ಇನಾಂದಾರ ಜನರು ಮರಾಟಿಗರಿರುವರೆಂದೇ ಅವರನ್ನು ಮುಂಬಯಿ ಪ್ರಾಂತದಲ್ಲಿ ಉಳಿಸಿಕೊಳ್ಳಬೇಕು. ಅನವಶ್ಯಕವಾಗಿ ಏಕೆ ಅಗಲಿಸುವುದು ?

ಎಲ್ಫಿನ್‌ಸ್ಟನ್ನನಿಗೆ ಉಭಯ ಸಂಕಟ ! ಸೂಚನೆಯು 'evenly balanced' ಎಂದು ಸುರುವಿಗೆ ಹೇಳಿ, ಅದನ್ನು ಮದ್ರಾಸದ ಗವರ್ನರ್ ಆಗಿದ್ದ ಪೂರ್ವೋಕ್ತ ಮನ್ರೋನಿಗೆ ಅಭಿಪ್ರಾಯಾರ್ಥವಾಗಿ ಕಳಿಸಿಕೊಟ್ಟನು. ಇಲ್ಲಿಯ ಜನ ಎಷ್ಟರ ಮಟ್ಟಿಗೆ ಮರಾಟಿಗರು–ಎಂಬೊಂದು ವಿಷಯದಲ್ಲಿ ಮಾತ್ರ ಎಲ್ಫಿನ್‌ಸ್ಟನ್ ತನ್ನ ಸ್ಪಷ್ಟ ಅಭಿಪ್ರಾಯವನ್ನು ಹೇಳಿದನು.

The first fact that the country in question...where the language and people are canerese, does not appear to me to admit of a doubt. I never heard it supposed that half the population were Mahrattas and it is extremely different, made on a person passing through the country, though it may be admitted that Mahrattee is the language of the upper classes and of revenue functionaries

ದಿ. ೧-೫-೧೮೨೬ರಂದು ಕಳಿಸಲಾದ ಮನ್ರೋನ ಉತ್ತರ ಸಾಕಷ್ಟು ದೀರ್ಘವಾಗಿದೆ. ಅದರಲ್ಲಿ ಅವನ ರಾಜಕೀಯ ಪರಿಣತಿಯನ್ನೂ ನಮ್ಮ ಜನತೆಯ ಬಗ್ಗೆ ಅವನಿಗಿದ್ದ ಕಳಕಳಿಯನ್ನೂ ಕಾಣಬಲ್ಲೆವು.

ಎಸ್.ಎಮ್.ಸಿ.ಯಲ್ಲಿ ತನ್ನ ಅನುಭವ ಸೀಮಿತವಾದದ್ದು ಎಂದು ಆರಂಭಿಸಿ, ಹಸ್ತಾಂತರ ಯೋಜನೆಗೆ ತನ್ನ ಸಮ್ಮತಿಯನ್ನು ಸೂಚಿಸಿದ್ದಾನೆ. ಅವನ ಸಮರ್ಥನೆ ಇಂತಿದೆ :

೧. ಆಗೀಗ ಕಂಡು ಬರುವ ದಂಗೆಗಳು ತಾತ್ಪೂರ್ತಿಕ. ಅವುಗಳ ನಿಜ ಕಾರಣವನ್ನು ಕಂಡು ಹಿಡಿದು ಸ್ವಲ್ಪದರಲ್ಲಿಯೆ ಬಗೆ ಹರಿಸಬಹುದು. ೨. ಈ ಪ್ರದೇಶದ ಬಹ್ವಂಶದ ಸೀಮೆಯು ಮದ್ರಾಸ ಪ್ರಾಂತದಿಂದ ಸುತ್ತುವರಿದಿದ್ದು, ಈ ಸಂಲಗ್ನತೆಯು ಆಡಳಿತಕ್ಕೆ ಅನುಕೂಲವಾದುದು. ೩. ಇಲ್ಲಿಯ ಜನರಾಡುವ ಭಾಷೆ ಕೆನರೀಸ್ ಎಂಬುದಕ್ಕೆ ಎರಡು ಮಾತಿಲ್ಲ. ಅಲ್ಲದೆ ಅವರ ಕೌಟುಂಬಿಕ ಹಾಗೂ ವ್ಯಾಪಾರೀ ಸಂಬಂಧವು ಬಳ್ಳಾರಿ ಮತ್ತು ಸೋದಾ (ಎಂದರೆ ಈಗಿನ ಉ. ಕ. ಜಿಲ್ಲೆಯ ಘಟ್ಟದ ಮೇಲಿನ ಪ್ರದೇಶ)–ಈ ಪ್ರದೇಶಗಳೊಡನೆಯೇ ಹೆಚ್ಚಾಗಿ ಇದೆ. ಈ ಸಂಬಂಧದ ಅವನ ಮುಂದಿನ ಹೇಳಿಕೆಯನ್ನು ಅವಶ್ಯವಾಗಿ ಗಮನಿಸತಕ್ಕದು: It would give more satisfaction to the people to be united to their own, than to transferred to a country of Mahrattas with whom they have no natural collection.

ಕನ್ನಡಿಗರು ಒಂದೇ ಆಧಿಪತ್ಯದ ಕೆಳಗೆ ಇರಬೇಕೆನ್ನುವುದರ-ಎಂದರೆ ಏಕೀಕರಣದ-ಸೂತ್ರವೇ ಇಲ್ಲಿದೆ. ಕೊನೆಯಲ್ಲಿ ಅವನು ಹೇಳಿದ್ದೇನೆಂದರೆ 'ಸದ್ಯ ಮಿಲಿಟರಿ ಆಡಳಿತವು ಬಹು ಮಟ್ಟಿಗೆ ಮದ್ರಾಸಿನವರದ್ದಾಗಿದೆ. ಸಿವಿಲ್ ಆಡಳಿತವು ಮುಂಬಯಿ ಸರಕಾರಕ್ಕೆ ಸೇರಿದೆ. ಆಡಳಿತದ ಈ ರೀತಿಯ ವಿಭಜನೆ ಸಲ್ಲದು. ಎರಡೂ ಒಂದೇ ಅಧಿಕಾರಕ್ಕೆ ಒಳಪಟ್ಟಿರತಕ್ಕದು.' ಈ ಉತ್ತರ ಬಂದ ಮೇಲೆ ಎಲ್‌ಫಿನ್‌ಸ್ಟನ್ ಹಸ್ತಾಂತರದ ಆರ್ಥಿಕ ಪರಿಣಾಮವನ್ನು ಪರಿಶೀಲಿಸಲೆಂದು ಒಂದು ಸಮಿತಿಯನ್ನು ನಿಯಮಿಸಿದನು. ಅವರು ಎತ್ತಿದ ಸಂದೇಹಗಳಿಗೆ, ಕೇಳಿದ ಮಾಹಿತಿಗೆ ಉತ್ತರವಾಗಿ ಮನ್ರೊ ಇನ್ನೆರಡು ಪತ್ರಗಳನ್ನು ಬರೆದಿದ್ದಾನೆ.

ಈ ಎಲ್ಲಾ ಕಾಗದ ಪತ್ರಗಳ ದೊಡ್ಡ ಕಟ್ಟು, ಕಲಕತ್ತೆಯಲ್ಲಿದ್ದ ಗವರ್ನರ್ ಜನರಲ್‌ನಿಗೆ ಹೋಯಿತು. ಅವನು ತನ್ನ ಶಿಫಾರಸಿನೊಂದಿಗೆ ಲಂಡನ್ನಿಗೆ-ಈಸ್ಟ್ ಇಂಡಿಯಾ ಕಂಪನಿಯ ಕೇಂದ್ರ ಕಚೇರಿಗೆ ಕಳಿಸಿಕೊಟ್ಟನು. ಐದಾರು ತಿಂಗಳ ಮೇಲೆ, ಎಂದರೆ ಮರುವರ್ಷದ ಎಪ್ರಿಲ್ ತಿಂಗಳಲ್ಲಿ ಬಂತು ಉತ್ತರ-

'ಹಸ್ತಾಂತರದ ಆಗತ್ಯವಿಲ್ಲ' !

ಯಾಕೆ ಹೀಗಾಯಿತು ? ಮುಖ್ಯ ಕಾರಣವೆಂದರೆ ಮನ್ರೋ ಒಬ್ಬನನ್ನುಳಿದು ಯಾರಿಗೂ ಈ ವಿಚಾರವಾಗಿ ನಿಜವಾದ ಆಸ್ಥೆಯಾಗಲೀ, ಅದರಿಂದಾಗುವ ಪ್ರಯೋಜನದ ಕಲ್ಪನೆಯಾಗಲಿ ಇರಲಿಲ್ಲ. ಚಾಪ್ಲಿನ್ ಯೋಜನೆಯನ್ನು ಮಂಡಿಸುವಾಗಲೂ ಆಳವಾಗಿ ಆಲೋಚಿಸಿದಂತೆ ಕಾಣಲಿಲ್ಲ. ಕನ್ನಡ ಮಾತನಾಡುವವರು ಒಂದುಗೂಡುವರೆಂಬ ಕಾರಣವನ್ನು ಕಾಣಿಸಿದ್ದರೂ ಕರ್ನಾಟಕ ಏಕೀಕರಣದ ಕಲ್ಪನೆಯೇನೂ ಆವರಿಸಿರಲಿಲ್ಲ. ಆದರೆ ಯಾವ ಕಾರಣಕ್ಕಾಗಿ ಭಾಷಿಕ ಏಕೀಕರಣವಾಗಬೇಕು ಎಂದು ನಾವು ತಿಳಿದಿದ್ದೇವೆಯೊ ಅದು ತಂತಾನೆ ಕೈಗೂಡುತ್ತಿತ್ತು. ಈ ಹಸ್ತಾಂತರವಾಗಿದ್ದರೆ— 'ಕೆನರಾ'ದ ೨ ಜಿಲ್ಲೆಗಳು ಮತ್ತು ಬಳ್ಳಾರಿ, ೧೮೩೪ರಲ್ಲಿ ವಿಲೀನವಾದ ಕೊಡಗು ಮತ್ತು, ಧಾರವಾಡ, ಬೆಳಗಾಂವಿ, ವಿಜಾಪುರ ಜಿಲ್ಲೆಗಳು

ಒಟ್ಟಿಗೆ ೭ ಜಿಲ್ಲೆಗಳು ಒಂದೇ ಆಡಳಿತಕ್ಕೆ ಒಳಪಡುತ್ತಿದ್ದವು. ಕ್ಷೇತ್ರಮಾನದಲ್ಲಿ ಇದಿಷ್ಟು ಆಗಿನ ಮೈಸೂರ ಸಂಸ್ಥಾನಕ್ಕೆ ಸಮಾನವಾಗಿದ್ದಿತು. ಮೈಸೂರು ಸಂಸ್ಥಾನವಾದರೂ ಮದ್ರಾಸ ಪ್ರಾಂತದವರಂತೆಯೇ ತನ್ನ ಆಡಳಿತವನ್ನು ನಡೆಸುತ್ತಿದ್ದಿತು. ಸಂಸ್ಥಾನದ ಹೆಚ್ಚಿನ ಹಿರಿಯ ಅಧಿಕಾರಿಗಳು ಮದ್ರಾಸ ಪ್ರಾಂತದಿಂದಲೇ ಬಂದವರಾಗಿದ್ದರು. ಒಟ್ಟಿನ ಪರಿಣಾಮವೆಂದರೆ ನಿಜಾಮರ ೩ ಜಿಲ್ಲೆಗಳನ್ನು ಬಿಟ್ಟರೆ, ಕನ್ನಡ ಮಾತನಾಡುವ ಎಲ್ಲರೂ ಒಂದೇ ಬಗೆಯ ಆಡಳಿತಕ್ಕೆ ಒಳಪಡುತ್ತಿದ್ದರು (ನಕಾಶವನ್ನು ನೋಡುವುದು). ಪ್ರಾಂತದಲ್ಲಿ ಆಗ ತಮಿಳು, ತೆಲುಗು, ಮಲೆಯಾಳಿಗರೂ ಇದ್ದರೆನ್ನುವುದು ನಿಜ. ಆದರೆ ಅಲ್ಲಿ ಕನ್ನಡಿಗರು ಮುಂದಿನ ೧೩೦ ವರ್ಷಗಳ ಕಾಲ (೧೮೨೬-೧೯೫೬) ಅಲ್ಪ ಸಂಖ್ಯಾತರಾಗಿ ಉಳಿಯುತ್ತಿದ್ದಿಲ್ಲ. ತಮ್ಮ ಯಾವುದೇ ಬೇಡಿಕೆಯನ್ನು ಸಮರ್ಥವಾಗಿ ಮಂಡಿಸುವುದು ಸಾಧ್ಯವಿತ್ತು. ಅಂತೂ ಶಿಕ್ಷಣ, ಸಾಹಿತ್ಯ ರಚನೆ, ಸಾಮಾಜಿಕ ಅಂತಸ್ತು, ವಾಣಿಜ್ಯ ರಂಗ, ಅನಂತರದ ರಾಜಕೀಯ ಹೋರಾಟ-ಇವೆಲ್ಲವುಗಳಲ್ಲಿ ಕನ್ನಡಿಗರು ಅಭಿವೃದ್ಧಿಯನ್ನು ಹೊಂದುವ ಅವಕಾಶ ತಪ್ಪಿತು.

* * *

ಕ್ರಿ.ಶ. ೧೮೭೯ರಲ್ಲಿ ಬೇರೊಂದು ಬಗೆಯ ಹಸ್ತಾಂತರದ ಸೂಚನೆ ಮುಂದೆಬಂದಿತು. ಈ ಹಿಂದಿನದರದಲ್ಲಿ ಮುಂಬಯಿಯ ಕನ್ನಡ ಪ್ರದೇಶವನ್ನು ಮದ್ರಾಸಿಗೆ ಸೇರಿಸುವುದೆಂದಿದ್ದರೆ, ಈಗ ಮದ್ರಾಸ ಆಧಿಪತ್ಯದಲ್ಲಿದ್ದ ಕೆಲ ಭಾಗವನ್ನು ಮುಂಬಯಿ ಪ್ರಾಂತಕ್ಕೆ ಸೇರಿಸಬೇಕೆಂಬ, ತದ್ವಿರುದ್ಧದ, ಸೂಚನೆ ಆದಾಗಿತ್ತು. ಸೂಚನೆ ಬಂದದ್ದು ಮುಂಬಯಿ ಪ್ರಾಂತದ ಆಗಿನ ಗವರ್ನರ್ ಜಾನ್ ಮಾಲ್ಕಮ್‌ನಿಂದ ಹಸ್ತಾಂತರ ಹೊಂದಬೇಕಾಗಿದ್ದ ಭಾಗವೆಂದರೆ. ಈಗಿನ ಉತ್ತರ ಕನ್ನಡ ಜಿಲ್ಲೆಯ ಘಟ್ಟದ ಮೇಲಿನ ಪ್ರದೇಶ.

ಸೂಪಾ ತಾಲೂಕಿನಿಂದ ಸಿರ್ಸಿಯೂ ಸೇರಿದ್ದಂತೆ ಸಿದ್ದಾಪುರದವರೆಗಿನ ಈ ಎತ್ತರ ತಪ್ಪಲಿನ ಪ್ರದೇಶವು ಹಾಗೂ ಕರಾವಳಿಯ ಸೀಮೆ ಇವುಗಳ ಮಧ್ಯೆ ಸಹ್ಯಾದ್ರಿ ಪರ್ವತ ಶ್ರೇಣಿ ಇದ್ದು, ಸಾರಿಗೆ ಸಂಪರ್ಕವು ಈಗಿನ ದಿನಗಳಲ್ಲೂ ದುರ್ಗಮವಾದದ್ದು. ಆದರೆ ಘಟ್ಟದ ಮೇಲಿನ ಪ್ರದೇಶಕ್ಕೆ ಸಮಪಾತಳಿಯಲ್ಲಿರುವ ಧಾರವಾಡ,

ಬೆಳಗಾವಿ ಜಿಲ್ಲೆಗಳಲ್ಲಿಯ ಸಂಪರ್ಕವು ಎಷ್ಟೊಂದು ಸಸಾರ ಸುಲಭ! ಆಡಳಿತದ ದೃಷ್ಟಿಯಿಂದ ನೋಡಿದಾಗ, ಕೋರ್ಟು-ಕಚೇರಿಯ ಕೆಲಸಗಳಿಗೆ ಈ ಪ್ರದೇಶದ ಜನ ಘಟ್ಟದ ಕಣಿವೆಯ ರಸ್ತೆಗಳಲ್ಲಿ ಹಾದು, ತೀರ ಕೆಳ ತುದಿಯಲ್ಲಿಯ ಮಂಗಳೂರಿಗೆ ಹೋಗಬೇಕು. ಇದಕ್ಕೆ ಪ್ರತಿಯಾಗಿ, ಅದೇ ಕೆಲಸಕ್ಕಾಗಿ ಧಾರವಾಡಕ್ಕೆ ಹೋಗುವುದಾದರೆ ಅದು ಸಹಜ ಸಂಗತಿಯೇ ಆದೀತು. ಅಂತೂ ಸಹ್ಯಾದ್ರಿ ಪರ್ವತ ಶ್ರೇಣಿಯನ್ನು ಧಾರವಾಡ ಮತ್ತು ಕೆನರಾ ಜಿಲ್ಲೆಗಳ ಸೀಮಾ ರೇಖೆಯಾಗಿ ಮಾಡಿದರೆ, ಅದು ಅತ್ಯಂತ ಸ್ಪೃಹಣೀಯವಾದ ಪ್ರಾಕೃತಿಕವಿಭಾಗ ಎನಿಸೀತು.

ಆಡಳಿತಕ್ಕೆ ಸಂಬಂಧಿಸಿದ ಒಂದೆರಡು ವ್ಯವಹಾರಿಕ ಕಾರಣಗಳೂ ಈ ಸೂಚನೆಯ ಹಿಂದೆ ಇದ್ದುವು ಹರಣತಿ ಉದಾಹರಣೆಗೆ ಒಂದು ಪ್ರಾಂತದವರು ಚಿಕ್ಕ ಅಪರಾಧ ವನ್ನೆಸಗಿಯೂ, ಸರಕಾರೀ ನಿಯಮವೊಂದನ್ನು ಉಲ್ಲಂಘಿಸಿಯೊ ಕೂಡಲೇ ಬದಿಯ ಪ್ರಾಂತದ ಸ್ಥಳಕ್ಕೆ ಸುಸೂತ್ರವಾಗಿ ಹೋಗಿ ಬಿಟ್ಟರೆಂದರೆ ಅವರನ್ನು ಹಿಡಿಯುವುದು ಸಾಧ್ಯವಾಗುತ್ತಿದ್ದಿಲ್ಲ. ಅಂತೂ ಮದ್ರಾಸ ಪ್ರಾಂತದವರೊಂದಿಗೆ ಪತ್ರ ವ್ಯವಹಾರ ನಡಿಯಿತು. (ಆ ವೇಳೆಗೆ ಮನ್ರೋ ತೀರಿಕೊಂಡಿದ್ದನು). ಆದರೆ ಅವರಿಗೆ, ವಿಶೇಷತಃ ಕೆನರಾದ ಕಲೆಕ್ಟರನಿಗೆ ಈ ಹಸ್ತಾಂತರ ಇಷ್ಟ ವಿರಲಿಲ್ಲ. ಒಂದರ ಮೇಲೊಂದು ಆಕ್ಷೇಪದ ದನಿ ಎತ್ತಿದ. ಅವನ ವಿರೋಧದ ಒಂದು ಕಾರಣವೆಂದರೆ, ಘಟ್ಟದ ಮೇಲಿನವರಿಗೆ ಕರಾವಳಿಯ, ಬಂದರದ ಸಂಪರ್ಕವು ತಪ್ಪಿ ಬಿಡುವುದು ಎಂಬುದಾಗಿತ್ತು. ಧಾರವಾಡದ ಕಲೆಕ್ಟರ್ ಡನ್‌ಲಪ್ ಕೊನೆಗೊಮ್ಮೆ ಖಂಡ ತುಂಡ ರೀತಿಯಲ್ಲಿ ಎಲ್ಲ ಆಕ್ಷೇಪಗಳಿಗೂ ಉತ್ತರ ಕೊಟ್ಟದ್ದ ದಿ. ೭-೫-೧೮೩೭ರಂದು. ಆಗಿನ ಗವರ್ನರ್ ಜನರಲ್ ಕೂಡ ಸಹಮತಿಸಿದ್ದ. ಆದರೂ ಹಸ್ತಾಂತರ ಸೂಚನೆ ಮೂಲೆಗುಂಪಾಯಿತು.

ಮುಂದೆ ೨೫ ವರ್ಷಗಳ ಅನಂತರ ೧೮೬೨ರಲ್ಲಿ ಇಡೀ ಉತ್ತರ ಕನ್ನಡ ಜಿಲ್ಲೆಯನ್ನು ಮುಂಬಯಿ ಕರ್ನಾಟಕಕ್ಕೆ ಸೇರಿಸಲೇಬೇಕಾದ ಪ್ರಸಂಗ ಒದಗಿದಾಗ ಈ ೧೮೨೯-೩೭ರ ಎತ್ತುಗಡೆಯನ್ನು ಪೀಠಿಕೆಯಾಗಿ ಬಳಸಿಕೊಂಡರು ! ಹಾಗೆ ನೋಡಿದರೆ ಕೆನರಾದ ಉತ್ತರ ಭಾಗವನ್ನು ಮುಂಬಯಿ ಕರ್ನಾಟಕಕ್ಕೆ ಸೇರಿಸುವ ಆಗತ್ಯ ಇರಲಿಲ್ಲ. ಮದ್ರಾಸ ಆಡಳಿತದವರು ಆಗಲೂ ವಿರೋಧಿಸಿದರು. ಆದರೇನು, ಇಂಗ್ಲೆಂಡಿನ ಹತ್ತಿಯ ರಾಜಕೀಯ, ಅಮೆರಿಕೆಯ ಯಾದವೀ ಕಲಹ ಮುಂತಾದ ತೀರಾ ದೂರದ ಹೊರಗಿನ ಕಾರಣಗಳಿಂದ ಆ ಘಡನೆ ನಡೆದು ಹೋಯಿತು.

ಜಿ.ಎಸ್. ದೀಕ್ಷಿತ್*

# ಕರ್ನಲ್ ಮಾರ್ಕ್ ವಿಲ್ಕ್ಸ್-ಆಧುನಿಕ ಕರ್ನಾಟಕದ ಪ್ರಥಮ ಇತಿಹಾಸಕಾರ

ಕರ್ನಲ್ ಮಾರ್ಕ್ ವಿಲ್ಕ್ಸ್ ಬರೆದ "History of Mysore" ಪುಸ್ತಕವನ್ನು ಸರ್ ಜೇಮ್ಸ್ ಮ್ಯಾಕಿಂಟಾಷ್ ಎನ್ನುವ ವಿಮರ್ಶಕನು ಭಾರತೀಯ ಇತಿಹಾಸದ ಮೇಲೆ ಆಧಾರಗಳನ್ನು ಅನುಮಾನಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಬರೆದ ಮೊದಲ ಗ್ರಂಥ ವೆಂದು ಹೇಳಿದ್ದಾನೆ. ಈ ಪುಸ್ತಕವನ್ನು ಬರೆಯುವುದಕ್ಕೆ ಅವನಿಗೆ ಎರಡು ತರಹ ಅನುಕೂಲಗಳಿದ್ದವು. ಒಂದನೆಯದು ಅವನು ವರ್ಣಿಸಿದಂಥ ಮೂರು ಮತ್ತು ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧಗಳಲ್ಲಿ ಭಾಗವಹಿಸಿದವರ ನಿಕಟ ಪರಿಚಯ ಮತ್ತು ಶ್ರೀರಂಗ ಪಟ್ಟಣದ ಕೊನೆಯ ಮುತ್ತಿಗೆಯಲ್ಲಿ ಅವನೇ ಭಾಗವಹಿಸಿದ್ದು.

ವಿಲ್ಕ್ಸ್‌ನಿಗೆ ಇದ್ದ ಎರಡನೆಯ ಅನುಕೂಲ- ಅಮೂಲ್ಯ ಆಧಾರಗಳು ಅವನಿಗೆ ಲಭ್ಯವಿದ್ದವು. ಇವು ಯಾಕೆಂದರೆ ೧) ಅವನ ಸ್ನೇಹಿತ ಪೂರ್ಣಯ್ಯನು ತನ್ನ ಕೆಳಗಿನ ಅಧಿಕಾರಿ ಬಚ್ಚೆರಾಯನಿಗೆ ಹೇಳಿ ಅವನ ಸಹಾಯದಿಂಪ ಯಾರ ಯಾರ ಹತ್ತಿರ ತಮ್ಮ ಮನೆತನದ ದಾಖಲೆಗಳಿರುತ್ತವೆಯೊ ಅಂಥವರಿಗೆ ವರದಿಗಳನ್ನು ಬರೆಯಕೊಡಲು ಹೇಳಿದನು. ಆ ವರದಿಗಳನ್ನು ಆಧರಿಸಿ ಒಂದು ಚಾರಿತ್ರಿಕ ದಾಖಲೆಯನ್ನು ನಿರ್ಮಿಸಲಾಯಿತು. ೨) ಚಿಕ್ಕದೇವರಾಯನ ಕಾಲದಲ್ಲಿ ಸಂಗ್ರಹಿಸಿದ ಶಾಸನಗಳನ್ನು ಮತ್ತು ಹಸ್ತಪ್ರತಿಗಳನ್ನು ಆಧರಿಸಿ ಬರೆದ ಕನ್ನಡ ಕಡತದ ಪರ್ಶಿಯನ್ ಭಾಷಾಂತರದ ಹಸ್ತಪ್ರತಿ ೩) ಮೆಕಿಂಜಿಯು ಸಂಗ್ರಹಿಸದ ೧೬೦೦ ಶಾಸನಗಳ ಪ್ರತಿಗಳು ಮತ್ತು ೬೦೦ ಹಸ್ತ ಪ್ರತಿಗಳು ೪) ಮದ್ರಾಸಿನಲ್ಲಿ ಫೋರ್ಟ್ ಸೇಂಟ್‌ಜಾರ್ಜನಲ್ಲಿದ್ದ ಸರ್ಕಾರೀ ಕಾಗದ ಪತ್ರಗಳು, ಅವನು ಉಪಯೋಗಿಸಿದ ಆಧಾರಗಳಲ್ಲಿ ಪ್ರಮುಖ ವಾದವು. ಇನ್ನು ಈ ಗ್ರಂಥದಿಂದ ನಮಗೆ ಆಗುವ ಉಪಯೋಗಗಳನ್ನು ನೋಡೋಣ.

ಸುಮಾರು ೧೮೦೦ರಲ್ಲಿ ಕನ್ನಡ ಮಾತನಾಡುವ ಪ್ರದೇಶಗಳ ಅಥವಾ ಕರ್ನಾಟಕದ ಮೇರೆಗಳನ್ನು ಗುರುತಿಸಿರುವುದು ಈ ಗ್ರಂಥದಿಂದ ಕನ್ನಡಿಗರಿಗೆ ಆಗುವ ಮಹದುಪಕಾರ ಬೀದರ್ ಊರಿನಿಂದ ಆರಂಭಿಸಿ ನೈಋತ್ಯ ದಿಕ್ಕಿನಲ್ಲಿ ನಡೆದು ಆದವಾನಿಗೆ ಬಂದು ಅಲ್ಲಿಂದ ಗುತ್ತಿಯ ಪಶ್ಚಿಮಕ್ಕೆ ಮತ್ತು ಅನಂತಪುರದ ಹತ್ತಿರ ಬಂದು ನಂದೀದುರ್ಗದ ಮಾರ್ಗವಾಗಿ ಪೂರ್ವಘಟ್ಟ ವನ್ನು ತಲುಪಬೇಕು. ಅಲ್ಲಿಂದ ದಕ್ಷಿಣಕ್ಕೆ ತಿರುಗಿ ಕೊಯಮತ್ತೂರು ಜಿಲ್ಲೆಯಲ್ಲಿರುವ ಗಜ್ಜಲಹಟ್ಟಿಯ ಮಾರ್ಗವಾಗಿ ಪಶ್ಚಿಮಘಟ್ಟಗಳ ಒಂದು ಕಣಿವೆಯಲ್ಲಿರುವ ಇರುವ ಕೊಯಮತ್ತೂರು, ಪೊಲ್ಲಾಚಿ ಮತ್ತು ಪಾಲ್ಘಾಟ್‌ಗಳ ಮಾರ್ಗವಾಗಿ ಬಂದು ವಾಯುವ್ಯ ದಿಕ್ಕಿನಲ್ಲಿ ಪಶ್ಚಿಮ ಘಟ್ಟಗಳಗುಂಟಾ ಉತ್ತರದಲ್ಲಿರುವ ಕೃಷ್ಣಾನದಿಯ ಉಗಮದವರೆಗೂ ಬರಬೇಕು. ಅಲ್ಲಿಂದ

* ಕೈಲಾಸ್ ಅಪಾರ್ಟ್‌ಮೆಂಟ್ಸ್ ೮ನೆಯ ಮುಖ್ಯ ರಸ್ತೆ, ಮಲ್ಲೇಶ್ವರ, ಬೆಂಗಳೂರು-೫೬೦ ೦೦೩

ಮೊದಲು ಪೂರ್ವಕ್ಕೂ ನಂತರ ನೈಋತ್ಯದ ದಿಕ್ಕಿನಲ್ಲೂ ಬಂದು ಬೀದರನ್ನು ಸೇರಬೇಕು ಇವು ಕರ್ನಾಟಕ ಗಡಿಗಳು. ಕೇರಳದ ನೀಲೇಶ್ವರದಿಂದ ಉತ್ತರದ ಸದಾಶಿಗಡದವರೆಗೂ ಇರುವ ತೀರ ಪ್ರದೇಶವನ್ನು ವಿಲ್ಕ್ಸ್ ತುಳುವ ದೇಶವೆನ್ನುತ್ತಾನೆ. ಅಲ್ಲಿಂದ ಉತ್ತರ ಪ್ರದೇಶ ಮಹಾರಾಷ್ಟ್ರವೆಂದು ಅವನ ಹೇಳಿಕೆ.

ಮೈಸೂರಿನ ರೈತರ ಬಗೆಗೆ ವಿಲ್ಕ್ಸ್‌ನಿಗೆ ಬಹಳ ಕಳಕಳಿ ಇತ್ತು. ಭೂಮಿಯ ಒಡೆಯ ಯಾರು ಭೂಮಾಲೀಕನೊ ಅಥವಾ ಆ ದೇಶದ ರಾಜನೊ–ಈ ವಾದವನ್ನು ಎಲ್ಕ್ಸ್‌ನು ಆಧುನಿಕ ಯುಗದಲ್ಲಿ ಮೊದಲು ಅಭ್ಯಸಿಸಿದನು ಎರಡೂ ಪಕ್ಷಗಳ ವಾದಗಳನ್ನು ಚೆನ್ನಾಗಿ ಮಂಡಿಸಿರುವುದು ಈ ಗ್ರಂಥದ ವೈಶಿಷ್ಟ್ಯ ಅವನು ಆರಂಭಿಸಿದ ಈ ಚರ್ಚೆಯು ಇಂದಿಗೂ ನಡೆದಿದೆ.

ಭಾರತೀಯ ರೈತನ ಬಗೆಗೆ ವಿಲ್ಕ್ಸ್‌ನ ಅಭಿಪ್ರಾಯವು ಖಚಿತವಾಗಿತ್ತು ಕೆಲವರು ರೈತರು ದಡ್ಡರು, ಸೋಮಾರಿಗಳೆಂದು ಹೇಳುತ್ತಿದ್ದರು. ವಿಲ್ಕ್ಸ್‌ನ ಮತದಲ್ಲಿ ಇಂಥ ಅಭಿಪ್ರಾಯಗಳು ಸರಿಯಾದದ್ದಲ್ಲ. ಅವರು ಬುದ್ಧಿವಂತರು. "ಅವರ ಜತೆಗೆ ನಾನು ಅನೇಕ ಸಲ ಅವರು ಕೈಕೊಳ್ಳುತ್ತಿದ್ದ ಕಾರ್ಯಕ್ರಮಗಳ ಉದ್ದೇಶವೇನೆಂದು ವಿಚಾರಿಸಿದಾಗ ಅವರ ಉತ್ತರಗಳು ಅತ್ಯಂತ ಸಮಂಜಸವಾಗಿರುತ್ತವೆ ಎಂದು ಹೇಳಿದ್ದಾನೆ.

ಬಾರಾ ಬಲೂತಿ ಪದ್ಧತಿಯ ಅವನ ವರ್ಣನೆಯನ್ನು ಮುಂದೆ ಬರೆದ ವಿದ್ವಾಂಸರೆಲ್ಲಾ ಪುನರುಚ್ಚರಿಸಿದ್ದಾರೆ. ಪಟೇಲ, ಶ್ಯಾನುಭೋಗ, ತಳವಾರ, ನೀರಗಂಟಿ ಇತ್ಯಾದಿ ಇವರ ಕೆಲಸಗಳ ಬಗ್ಗೆ ಇವನ ವರ್ಣನೆ ನಮಗೆ ಅವರ ಅಂದರೆ ಬಾರಬಲೂತಿ ಅಥವಾ ಆಯಗಾರರ ಕೆಲಸಗಳ ಕೈಪಿಡಿ ಎಂದು ಹೇಳಬಹುದು.

ಅದೇ ರೀತಿಯಾಗಿ ಬ್ರಿಟಿಷರು ಬರುವ ಮುಂಚೆ ನಮ್ಮ ಗ್ರಾಮಗಳು ಸ್ವಾಯತ್ತವಾಗಿದ್ದವೆನ್ನುವ ಅವನ ಹೇಳಿಕೆಯು ಪ್ರಸಿದ್ಧ ಅವನ ಪ್ರಕಾರ. ಯುದ್ಧ, ಜಯ, ಅಪಜಯ, ಕ್ರಾಂತಿ, ಇವು ಯಾವುವೂ ಗ್ರಾಮಗಳ ಆಂತರಿಕ ವ್ಯವಸ್ಥೆಯನ್ನು ಬದಲಾಯಿಸುತ್ತಿರಲಿಲ್ಲ ಹೊಸದಾಗಿ ಬಂದ ರಾಜ ಅಥವಾ ಅವನ ಪ್ರತಿನಿಧಿ ಗ್ರಾಮಗಳಲ್ಲಿ ಹಿಂದೆ ಇದ್ದ ಅಧಿಕಾರಿಗಳನ್ನು ಆ ಗ್ರಾಮದ ಮೇರೆಗಳನ್ನು ಅದರ ಒಳಾಡಳಿತವನ್ನು ಸ್ವಲ್ಪವೂ ಬದಲಾಯಿಸುತ್ತಿರಲಿಲ್ಲ. ಅವನ ಅಭಿಪ್ರಾಯದಲ್ಲಿ ಆಗ ಭಾರತವು ಇಂಥ ಅನೇಕ ಗಣರಾಜ್ಯಗಳನ್ನೊಳಗೊಂಡ ರಾಜ್ಯವಾಗಿತ್ತು.

ವಿಲ್ಕ್ಸ್ ಮತ್ತು ಪೂರ್ಣಯ್ಯ ಬಹಳ ಅನ್ಯೋನ್ಯವಾಗಿದ್ದರು. ಪೂರ್ಣಯ್ಯನ ಸಹಾಯದಿಂದ ವಿಲ್ಕ್ಸ್‌ನು ಈ ಗ್ರಂಥವನ್ನು ಬರೆಯುವುದು ಸುಗಮವಾಯಿತು. ಇದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು. ಹೈದರನು ತನ್ನ ಅಂತರಂಗದಲ್ಲಿರುವುದನ್ನು ಯಾರಿಗೂ ತಿಳಿಸುತ್ತಿರಲಿಲ್ಲ. ಮೊದಲನೆ ಆಂಗ್ಲೊ ಮೈಸೂರು ಯುದ್ಧ ಮುಗಿದ ಮೇಲೆ ಅವನಿಗೆ ಅದರಲ್ಲಿ ಜಯವಾಗಿದ್ದರೂ ಇಂಗ್ಲೀಷಿನವರ ಮೇಲೆ ಯುದ್ಧ ಮಾಡಿದ್ದು ತಪ್ಪೆಂದು ಅವನ ಅಂತರಂಗ ಅವನಿಗೆ ಹೇಳಿತು, ಅದನ್ನು ಅವನು ಪೂರ್ಣಯ್ಯನಿಗೆ ಮಾತ್ರ ಹೇಳಿದನು. "ನನಗೂ ಇಂಗ್ಲೀಷಿನವರಿಗೂ ಅಷ್ಟು ವ್ಯತ್ಯಾಸಗಳಿಲ್ಲ, ವಿನಾಕಾರಣ ಅವರ ಮೇಲೆ ಯುದ್ಧ ಮಾಡಿದೆ. ಹೀಗೆ ಮಾಡಿದ್ದು ಶುದ್ಧ ತಪ್ಪು ಎಂಥ ದೊಡ್ಡ ತಪ್ಪು ಎಂದರೆ ೧ ಕಾಸಿನಸೇಂದಿಗೆ ೧ ಲಕ್ಷ ರೂಪಾಯಿ ಕೊಟ್ಟು ಕೊಂಡುಕೊಂಡ ಹಾಗೆ ಹೀಗೆ ಮಾಡಿದ್ದಕ್ಕೆ ನಾನು ಮುಂದೆ ಕೆಟ್ಟದ್ದನ್ನು ಅನುಭವಿಸಬೇಕು. ಯಾಕೆಂದರೆ ನಾನು ಅವರ ಚೀಲಗಳನ್ನು ಬ್ರತ್‌ವೇಟರುಗಳನ್ನು ಸೋಲಿಸಬಹುದು. ಆದರೆ ಸಮುದ್ರವನ್ನು ಒಣಗಿಸಲಿಕ್ಕೆ ಆಗುವುದಿಲ್ಲ." ಅವನ ಅಭಿಪ್ರಾಯವೇನಾಗಿತ್ತೆಂದರೆ ಇಂಗ್ಲೀಷಿನವರ ಸಾಮರ್ಥ್ಯವೆಲ್ಲಾ ಅವರು ಸಮುದ್ರದ ಅಧಿಪತಿಗಳಾಗಿದ್ದುದರಿಂದ ಬಂದಿತ್ತು. ಎಷ್ಟೇ ಭೂಸೈನ್ಯಗಳನ್ನು ಸೋಲಿಸಿದರೂ ಸಮುದ್ರದ ಮೇಲಿನಿಂದ ಹೊಸಸೈನ್ಯಗಳನ್ನು ಅವರು ತರಿಸಿಕೊಳ್ಳಬಲ್ಲವರಾಗಿದ್ದರು. ಇಂಥ ತನ್ನ ಆಲೋಚನೆಗಳನ್ನು ಹೈದರ್ ಯಾರಿಗೂ ಹೇಳುತ್ತಿರಲಿಲ್ಲ. ಪೂರ್ಣಯ್ಯನಿಗೆ ಮಾತ್ರ ಹೇಳಿದ ಅವನು ತನ್ನ ಸ್ನೇಹಿತ ವಿಲ್ಕ್ಸ್‌ಗೆ ಹೇಳಿದ.

ಇಷ್ಟೆಲ್ಲ ಆದರೂ ಹೈದರ್ ಪೂರ್ಣಯ್ಯನನ್ನು ಸಂಪೂರ್ಣವಾಗಿ ನಂಬಲಿಲ್ಲ. ಹೈದರನ ಇನ್ನೊಬ್ಬ

ಮಂತ್ರಿ ಕೃಷ್ಣರಾವ್ ಇಬ್ಬರೂ ಚಾಣಾಕ್ಷರು. ಹೈದರ್ ಒಬ್ಬರ ಮೇಲೆ ಇನ್ನೊಬ್ಬನು ನಿಗಾ ಇಡುವ ಹಾಗೆ ಮಾಡಿ ಇಬ್ಬರನ್ನು ಹತೋಟಿಯಲ್ಲಿ ಇಟ್ಟುಕೊಂಡ.

ಟೀಪ್ಪುಗೆ ಇಷ್ಟು ಬುದ್ಧಿವಂತಿಕೆ ಇರಲಿಲ್ಲ. ಪೂರ್ಣಯ್ಯನಷ್ಟು ನಿಷ್ಠಾವಂತ ಸೇವಕರು ಅವನಿಗಿರಲಿಲ್ಲ ಆದರೂ ಅವನನ್ನು ತನ್ನ ಮತಕ್ಕೆ ಸೇರಿಸಿಕೊಳ್ಳ ಬೇಕೆಂದು ಇಚ್ಛಿಸಿದನು, ಬೇಡವೆನ್ನುವ ಧೈರ್ಯ ಪೂರ್ಣಯ್ಯನಿಗಿರಲಿಲ್ಲ ಟೀಪ್ಪೂನ ತಾಯಿ ಮಧ್ಯೆ ಬರದಿದ್ದರೆ ಇತಿಹಾಸವೇ ಬದಲಾಗುತ್ತಿತ್ತು.

ವಿಲ್ಕ್‌ಸ್‌ನ ಬರವಣಿಗೆಯಲ್ಲಿ ಹೈದರನ ಮತ್ತು ಟಿಪ್ಪುವಿನ ಗುಣದೋಷಗಳ ಹೋಲಿಕೆ ಅತ್ಯದ್ಭುತ ವಾಗಿದೆ. ನಮ್ಮ ಇತಿಹಾಸದಲ್ಲಿ ಅದಕ್ಕೆ ಬಹಳ ಮೇಲಿನ ಸ್ಥಾನ ಸಿಗುತ್ತದೆ. ಈ ಹೋಲಿಕೆಯ ಕೊನೆಗೆ ವಿಲ್ಕ್‌ಸ್‌ನ ತೀರ್ಮಾನ ಎಲ್ಲರೂಮೆಚ್ಚುವಂಥದ್ದು Hyder was an improving monarch and exihibited few innovations Tippu was innovating monarch and made no improvements. ಹೈದರ್ ಸುಧಾರಣೆಗಳನ್ನು ಮಾಡಿದ ; ಬದಲಾವಣೆಗಳನ್ನು ಮಾಡಲಿಲ್ಲ. ಟಿಪ್ಪು ಬದಲಾವಣೆ ಗಳನ್ನು ಮಾಡಿದ, ಸುಧಾರಣೆಗಳನ್ನು ಮಾಡಲಿಲ್ಲ. Hyder was Seldom wrong and Tippu Seldom right in his estimate of charcter, ಇತರರ ಯೋಗ್ಯತೆಯನ್ನು ತಿಳಿದುಕೊಳ್ಳುವುದರಲ್ಲಿ ಹೈದರ್ ಯಾವಾಗಲೂ ತಪ್ಪಲಿಲ್ಲ, ಟಿಪ್ಪು ಎಲ್ಲಾ ಸಂದರ್ಭಗಳಲ್ಲಿಯೂ ತಪ್ಪುತ್ತಿದ್ದ.

ಇವರಿಬ್ಬರ ಬಗೆಗೂ ವಿಲ್ಕ್‌ಸ್‌ನ ಕೊನೆಯ ತೀರ್ಮಾನ ಆಗಿನ ಕಾಲದ ಜನಾಭಿಪ್ರಾಯವೇ ಆಗಿತ್ತು "ಹೈದರನು ಒಂದು ಸಾಮ್ರಾಜ್ಯವನ್ನು ಕಟ್ಟಲಿಕ್ಕೆ ಹುಟ್ಟಿದ ; ಟಿಪ್ಪು ಅದನ್ನು ಕಳೆಯಲಿಕ್ಕೆ ಹುಟ್ಟಿದ."

**ಟಿಪ್ಪಣಿ**

ವಿಲ್ಕ್‌ಸ್ ಬರೆದ "History of Mysore" ಇದರ ಪೂರ್ಣ ಹೆಸರು, Historical Sketches of the south of India" in on attempt to trace the "Histony of Mysore" from the origion of the Hindoo Government of that State, to the extinction of the Mohammedan dynasty in 1799 Founded chiefly on Indian authorities Collected by the author while officiatng for several years of Politcial Resident at the Court of Mysore ಮೂರು ಸಂಪುಟಗಳಲ್ಲಿ ೧೮೧೦ ರಿಂದ ೧೮೧೭ ರೊಳಗೆ ಪ್ರಕಟ ವಾದ ಈ ಗ್ರಂಥವನ್ನು ಮತ್ತೆ ಹ್ಯಾಮಿಕ್ ಎನ್ನುವವನು ೧೯೩೦ರಲ್ಲಿ ೨ ಸಂಪುಟಗಳಲ್ಲಿ ವಿಸ್ತೃತವಾದ ಟಿಪ್ಪಣಿ ಗಳೊಂದಿಗೆ ಸಂಪಾದಿಸಿದ ಪುನರ್ ಮುದ್ರಣವನ್ನು ಮೈಸೂರು ಸರ್ಕಾರದವರು ಪ್ರಕಟಿಸಿದ್ದಾರೆ. ಸಂಪಾದಕನು ಪ್ರಸ್ತಾವನೆಯಲ್ಲಿ ವಿಲ್ಕ್‌ಸ್‌ನ ಜೀವನ ಚರಿತ್ರೆಯನ್ನೂ ಮತ್ತು ಗ್ರಂಥದ ಉದ್ದಕ್ಕೂ ಅದರಲ್ಲಿ ಬರುವ ಊರುಗಳ, ಸಂಸ್ಥೆಗಳ, ವ್ಯಕ್ತಿಗಳ ಬಗ್ಗೆ ಉಪಲಬ್ಧವಿರುವ ಮಾಹಿತಿಯನ್ನು ಹಿನ್ನೆಲೆಯಾಗಿ ಟಿಪ್ಪಣಿಗಳಲ್ಲಿ ಕೊಟ್ಟಿರುವುದರಿಂದ, ಇದೊಂದು ದಕ್ಷಿಣ ಭಾರತದ ಇತಿಹಾಸ ವಿದ್ಯಾರ್ಥಿಗಳಿಗೆ ಅತ್ಯಂತ ಉಪಯುಕ್ತವಾದ ಕೈಪಿಡಿಯಾಗಿದೆ. ನಾನು ಈ ಎರಡನೆಯ ಆವೃತ್ತಿಯನ್ನು ಉಪಯೋಗಿಸಿದ್ದೇನೆ.

ವಿಲ್ಕ್‌ಸ್‌ನ ಇನ್ನೊಂದು ಬರವಣಿಗೆಯು ಆಗಿನ ಕಾಲದ ಮೈಸೂರಿನ ಸ್ಥಿತಿಗಳನ್ನು ಅಂಕಿ ಸಂಖ್ಯೆಗಳ ಸಹಾಯದಿಂದ ವಿವರಿಸುತ್ತದೆ. ಈ ವರದಿಯ ಹೆಸರು A Report on the interior administration, resources and expendinture of the Government of Mysore, under the system Prescribed by the orders of the Governor general in Council, dated 4th September 1799 ಇದನ್ನು ೧೮೦೫ರಲ್ಲಿ ಬ್ರಿಟಿಷ್ ಸರ್ಕಾರದವರು ಪ್ರಕಟಿಸಿದ್ದಾರೆ. ಭಾರತವನ್ನು ಗೆದ್ದ ಹೊಸದರಲ್ಲಿ ಬ್ರಿಟಿಷ್ ಆಡಳಿತಗಾರರ ಮೊದಮೊದಲ ವರದಿಗಳು ಭಾರತೀಯರ ಬಗೆಗೆ ಸಹಾನುಭೂತಿ ಪರವಾಗಿ ಮತ್ತು ವಿವರವಾಗಿ ಇರುತ್ತಿದ್ದವು. ನಂತರದ ವರದಿಗಳಲ್ಲಿ ಇವೆರಡೂ ಗುಣಗಳು ಕಡಿಮೆಯಾದವು ವಿಲ್ಕ್‌ಸ್‌ನ ಬರವಣಿಗೆಯಲ್ಲಿ ಈ ಎರಡೂ ಗುಣಗಳೂ ಇವೆ. ಅವನು ಇಂಗ್ಲೆಂಡಿನ ದಕ್ಷಿಣಕ್ಕಿರುವ ಮ್ಯಾನದ್ವೀಪದವನು ಅವನ ದಾಖಲೆಗಳು ಆ ದ್ವೀಪದಲ್ಲಿ ಅಥವಾ ಬ್ರಿಟಿಷ್ ಮ್ಯೂಜಿಯಂನಲ್ಲಿ ಅಥವಾ ಇಂಡಿಯಾ ಆಫೀಸ್ ಲೈಬ್ರೆರಿಯಲ್ಲಿ ಇನ್ನೂ ಲಭ್ಯವಿರುವ ಸಾಧ್ಯತೆ ಇದೆ.

ವಸಂತಕುಷ್ಟಗಿ*

# ಹೈದರಾಬಾದ್ ಕರ್ನಾಟಕದ ಕನ್ನಡ ಪತ್ರಿಕೋದ್ಯಮದ ಇತಿಹಾಸ (೧೯೫೬ರವರೆಗೆ)

ಪತ್ರಿಕೆಗಳು ಪ್ರಪಂಚವನ್ನು ಕ್ರಿಯಾತ್ಮಕವಾಗಿ ಬಾಳಿಸುವಲ್ಲಿ ಅತ್ಯಂತ ಮಹತ್ತ್ವದ ಪಾತ್ರವನ್ನು ವಹಿಸಿವೆ. ಸ್ವಾವಲಂಬತ್ತ್ವ, ಸ್ವಾಭಿಮಾನ, ಸ್ವಾತಂತ್ರ್ಯಗಳ ಘನತೆಗೌರವಗಳನ್ನು ತಿಳಿಸುವುದರಲ್ಲಿ ಹಿರಿದಾದ ಸೇವೆಯನ್ನು ಮಾಡುತ್ತ ಬಂದಿವೆ. ಮೊದ ಮೊದಲು ಕರಪತ್ರಗಳ ಮೂಲಕ ಮೊಳಕೆಯೊಡೆದದ್ದು, ಈಗ ಜೀವನದ ನಾನಾ ಮುಖಗಳಿಗೆ ಕನ್ನಡಿಯನ್ನು ಹಿಡಿದು, ವಾಸ್ತವ ಚಿತ್ರಗಳನ್ನು ತೋರಿಸಲು ಈ ಪತ್ರಿಕೆಗಳು ಬೃಹದಾಕಾರವಾಗಿ ಬೆಳೆಯ ತೊಡಗಿವೆ.

ಆರಂಭದಲ್ಲಿ ಧರ್ಮಪ್ರಸಾರ, ದೇಶಾಭಿಮಾನಗಳನ್ನು ಪತ್ರಿಕೆಗಳು ಜಾಗೃತ ಗೊಳಿಸಿದರೆ, ಈಗ ಅವು ದೈನಂದಿನ ವಿಶ್ವಕೋಶಗಳಾಗಿವೆ. ಆಂತೆಯೇ ಇತ್ತೀಚೆಗೆ 'ಪತ್ರಿಕೆಗಳು' ಒಂದು ಉದ್ದಿಮೆಯಾಗಿ ಬೆಳೆಯ ತೊಡಗಿವೆ. ಭಾರತದಲ್ಲಿ ಇಂದಿನ ಪತ್ರಿಕೆಗಳ ರೂಪಕ್ಕೆ ಕ್ರಿ.ಶ. ೧೭೮೦ರಲ್ಲಿ, ಜೆವರ್ಸ್‌ಆಗಸ್ಟಸ್ ಹಿಕ್ಕಿ (ಜನೇವರಿ ೨೦, ೧೭೮೦) ಬೆಂಗಾಲ್ ಗೆಜಿಟ್ ಅಥವಾ ಕಲ್ಕತ್ತಾ ಜನರಲ್ ಆಡ್ವಟೈಜರ್ ಎಂಬ ಪತ್ರಿಕೆಯನ್ನು ಆರಂಭಿಸಿ ನಾಂದಿಯಾದನು. ಆದರೆ ರಾಜಾರಾಮಮೋಹನ ರಾಯನು ಸಂಬಾದ ಕೌಮುದಿ, ಮೀರತ್-ಉಲ್-ಅಕಬಾರ್ ಮತ್ತು ಬ್ರಾಹ್ಮನಿಕಲ್‌ಮಾಗಝಿನ್ ಮೊದಲಾದವುಗಳನ್ನು ಭಾರತೀಯ ಭಾಷೆಗಳಲ್ಲಿ ಆರಂಭಿಸಿ, ಭಾರತೀಯ ಭಾಷಾ ಪತ್ರಿಕೋದ್ಯಮಕ್ಕೆ 'ಪಿತಾಮಹ' ನೆಂದೆನ್ನಿಸಿಕೊಂಡನು. ಮುಂದೆ ಈ ಮಾಧ್ಯಮವನ್ನು ದೇಶದ ಸ್ವಾತಂತ್ರ್ಯ ಸಂಪಾದನೆಗಾಗಿ ಬಹಳ ಅರ್ಥಪೂರ್ಣವಾಗಿ ಬಳಸಲಾಯಿತು. ಈದಿಸೆಯಲ್ಲಿ ಕರ್ನಾಟಕವೂ ಹಿಂದೇಟು ಹಾಕಲಿಲ್ಲ. ಆದನ್ನು, ಕನ್ನಡ ಭಾಷಾ ಪತ್ರಿಕೋದ್ಯಮಕ್ಕೆ ಇರುವ ಸುಮಾರು ೧೫೦ ವರ್ಷಗಳ ಇತಿಹಾಸವು ಬಿಚ್ಚಿಟ್ಟಿದೆ.

ಈ ಕಾಲದ, ಭಾರತದ ಮುಖ್ಯ ಪ್ರವಾಹಕ್ಕೆ ಸೇರಿಕೊಂಡು 'ಮಂಗಳೂರು ಸಮಾಚಾರ' 'ಕನ್ನಡ ಸಮಾಚಾರ' ವಿಚಿತ್ರವರ್ತಮಾನ ಸಂಗ್ರಹ' 'ಹಿತ ಬೋಧನಿ' ಇತ್ಯಾದಿ ಕನ್ನಡ ಪತ್ರಿಕೆಗಳು ಜನರನ್ನು ಬಡಿದೆಬ್ಬಿಸಲು ಪ್ರಯತ್ನಿಸಿದುವು. ಉತ್ತರ ಕರ್ನಾಟಕದಲ್ಲಿ ಬಾಲಗಂಗಾಧರತಿಲಕರ ಪ್ರಭಾವದಿಂದಾಗಿ ಸ್ವಾತಂತ್ರ್ಯದ ಆಂದೋಲನದತ್ತ ಜನ ಆಕರ್ಷಿತರಾಗ ತೊಡಗಿದಾಗ, ಹಿತೇಚ್ಛು, ಕರ್ನಾಟಕಪತ್ರ, ಧನಂಜಯ, ಸಚಿತ್ರಭಾರತ, ಧನುರ್ಧಾರಿ, ಕರ್ನಾಟಕ ವೈಭವ, ರಾಜಹಂಸ, ಕರ್ನಾಟಕ ಭಾಷಾಸೇವಕ, ವಿದ್ಯಾದಾಯಿನಿ ಮೊದಲಾದಪತ್ರಿಕೆಗಳು ಬಂದವು. ಅವು ಸಾಹಿತ್ಯಿಕ ಸಾಂಸ್ಕೃತಿಕ ಮೌಲ್ಯಗಳನ್ನು

*ಪ್ರಿನ್ಸಿಪಾಲರು, ಎಸ್. ವಿ. ಡಿಗ್ರಿ ಕಾಲೇಜು, ಕಲಬುರಗಿ ೫೮೫ ೧೦೩

ಒರೆಗೆ ಹಚ್ಚಿತೋರಿಸಿದುವಲ್ಲದೆ, ಸ್ವಾತಂತ್ರ್ಯ ಸಂಪಾದನೆಗಾಗಿ ಕಹಳೆಯನ್ನೂ ಊದಿದುವು.

ಈಗ ಈ ಸಂದರ್ಭದಲ್ಲಿ ಹೈದರಬಾದ್ ಕರ್ನಾಟಕ ಭಾಗವು ಕನ್ನಡ ಪತ್ರಿಕೋದ್ಯಮಕ್ಕೆ ತನ್ನ ಕಾಣಿಕೆಯನ್ನು ಸಲ್ಲಿಸಿದೆಯೆ ? ಎಂಬ ಪ್ರಶ್ನೆಗೆ ಉತ್ತರ ಹುಡುಕಬೇಕಾಗಿದೆ. ಹೈದರಾಬಾದ್ ಕರ್ನಾಟಕವೆಂದರೆ ನಿಜಾಂ ಸಂಸ್ಥಾನದ ಕಲಬುರಗಿ, ಬೀದರ, ರಾಯಚೂರು ಈ ಮೂರು ಜಿಲ್ಲೆಗಳ ಪ್ರದೇಶ. ಇದರಲ್ಲಿ ಇಂದಿನ ಮಹಾರಾಷ್ಟ್ರದ ಉದ್ಗೀರ, ಹಾಗೂ ಇಂದಿನ ಆಂಧ್ರ ಪ್ರದೇಶದ ಆಲಂಪುರ, ಜಹೀರಾಬಾದ್, ಮುಕ್ತಲ್ ಮೊದಲಾದ ತಾಲ್ಲೂಕುಗಳೂ ಸಮಾವೇಶವಾಗುತ್ತವೆ. ಈ ನಿಜಾಂ ಸಂಸ್ಥಾನದ ಮೂಲಪುರುಷ ನಿಜಾಂ ಮುಲ್‌ಮುಲ್ಕಾ ಎಂಬುವನು. ಮೊಗಲರ ಆಳ್ವಿಕೆಗೆ ಸಂಬಂಧಪಟ್ಟವನು. ಈ ಸಂಸ್ಥಾನದ ಏಳನೇಯ ಅರಸು ಆಲಾಹಜರತ್ ಎಂಬುವನು. ಆತನ ಕಾಲದಲ್ಲಿ ಹೈದರಾಬಾದ್ ನಿಜಾಂ ಸಂಸ್ಥಾನವು ಸೆಪ್ಟೆಂಬರ್ ೧೯೪೮ ರಲ್ಲಿ ಭಾರತ ಒಕ್ಕೂಟದಲ್ಲಿ ಸೇರಿ ಹೈದರಾಬಾದ್ ಪ್ರಾಂತವಾಯಿತು. ಹೀಗೆ ಸಂಸ್ಥಾನವೊಂದು ಪ್ರಾಂತವಾದದ್ದು ಸಹಜವಾದ ಪ್ರಕ್ರಿಯೆಯಾಗಿರಲಿಲ್ಲ. ವಿಶೇಷ ಆಂದೋಲನ ನಡೆದು ಪೋಲಿಸ್ ಕಾರ್ಯಾಚರಣೆಯಾಗಬೇಕಾಯಿತು. ಈ ಸಂದರ್ಭದಲ್ಲಿ ಈ ಭಾಗದಲ್ಲಿ ಪತ್ರಿಕಾಪ್ರಪಂಚವು ತನ್ನ ಕರ್ತವ್ಯವನ್ನು ನಿಭಾಯಿಸಲಿಲ್ಲವೆ ? ಜನತೆಗೆ ಸ್ಫೂರ್ತಿಚಿಲುಮೆಯಾಗಿ ಕಾರ್ಯಪ್ರವೃತ್ತವಾಗಿರಬೇಕಾಗಿರಲಿಲ್ಲವೆ ? ಈ ಎಲ್ಲ ಪ್ರಶ್ನೆಗಳು ನಮ್ಮನ್ನು ಕಾಡುತ್ತಿವೆ. ಹಾಗಾದರೆ, ಕರ್ನಾಟಕ ಪತ್ರಿಕಾ ಅಕಾಡೆಮಿಯು ಕನ್ನಡ ಪತ್ರಿಕೋದ್ಯಮದ ೧೫೦ನೆಯ ವರ್ಷದ ರಾಷ್ಟ್ರೀಯ ವಿಚಾರ ಸಂಕೀರ್ಣವನ್ನು ನಡೆಸಿ ಆ ಸಂದರ್ಭದಲ್ಲಿ ಪ್ರಕಟಿಸಿದ ಸ್ಮರಣ ಸಂಚಿಕೆಯಲ್ಲಿ ಹೈದರಬಾದ್ ಕರ್ನಾಟಕದ ಪತ್ರಿಕೆಗಳ ಬಗ್ಗೆ, ಕೆಲವನ್ನಾದರೂ ಆಯ್ದು ಉಲ್ಲೆಖಿಸಬಹುದಾಗಿತ್ತು! ಈ ಬಗೆಗೆ ಅದು ಹೇಗೆ ಕಣ್ಣು ತಪ್ಪಿತೊ ಈಗಂತೂ ನಮಗೆ ತಿಳಿಯದು. ಆದ್ದರಿಂದ ಈ ಪ್ರಬಂಧವು ಮರೆತು ಹೋದ ವಿಷಯಗಳನ್ನು ಉಪಲಬ್ಧವಿರುವ ಆಧಾರಗಳ ಮೇಲಿಂದ, ಕ್ರೋಡಿಕರಿಸಿ ಒಂದು ರೂಪವನ್ನು ಕೊಡುವುದರಲ್ಲಿ ಕಿಂಚಿತ್ತಾದರೂ ಪ್ರಯತ್ನಿಸುತ್ತಿದೆಯೆಂಬುದು ನಮ್ಮ ಅಭಿಪ್ರಾಯ.

ಹೈದರಾಬಾದ್ ಕರ್ನಾಟಕದ ಭಾಗ ಎಂದು ಹೆಸರು ಪಡೆದಿರುವ, ಮೇಲೆ ಹೆಸರಿಸಿದ ಕಲಬುರಗಿ ಬೀದರ, ರಾಯಚೂರು ಜಿಲ್ಲೆಗಳೂ ಸಾಹಿತ್ಯ ಸಂಸ್ಕೃತಿ ಜನ ಜೀವನಗಳಿಗಾಗಿ ಕ್ರಿಸ್ತ. ಪೂರ್ವದಿಂದಲೂ ತಮ್ಮ ಅಸ್ತಿತ್ವವನ್ನು ಜಾಗೃತವಾಗಿಟ್ಟುಕೊಂಡು ಬಂದಿರುವುದು ಸತ್ಯ. ನೃಪತುಂಗನ ಕಾಲದ 'ಕವಿರಾಜಮಾರ್ಗ' ಗ್ರಂಥವು ಈ ದಿಸೆಯಲ್ಲಿಯೂ ಅಪರೂಪವಾದ ಗ್ರಂಥ ಏಕೆಂದರೆ ಸಮೃದ್ಧ ಆಡಳಿತವು ಇದ್ದಕಾಲದಲ್ಲಿ ಸುದ್ದಿ ಪ್ರಸಾರಮಾಧ್ಯಮವು ಇರಲೇಬೇಕಲ್ಲವೆ ? ಅಂದಿನ ಆಸ್ಥಾನವು ಕಾವ್ಯ ಪ್ರಸಾರಕ್ಕೆ ಆದ್ಯತೆಯನ್ನು ನೀಡಿತ್ತೆಂಬುದನ್ನು ಗಮನಿಸಿದಾಗ ಕಾವ್ಯಪ್ರಸಾರದ ಮೂಲ ಕವೇ ಸುದ್ದಿ ಪ್ರಸಾರ ಮಧ್ಯಮವು ಆ ಕಾಲದಲ್ಲಿ ಅಸ್ತಿತ್ತ್ವದಲ್ಲಿರಲೇ ಬೇಕು ! ಇಲ್ಲದೇ ಹೋದಲ್ಲಿ ಕವಿ, ಗಮಕಿ, ವಾದಿ, ವಾಗ್ಮಿಗಳು ಅಸ್ಥಾನದಲ್ಲಿ ವಿಶಿಷ್ಟವಾದ ಸ್ಥಾನಗಳನ್ನು ಪಡೆಯಲು ಸಾಧ್ಯವೇ ? ಆದ್ದರಿಂದ ಕವಿರಾಜಮಾರ್ಗ'ದಲ್ಲಿಯೂ, ಪೂರ್ಣ 'ಲಕ್ಷಣಗಳನ್ನು ಪಡೆಯದೇ ಇರುವ ಪತ್ರಿಕೋದ್ಯಮಕ್ಕೆ ಸಂಬಂಧಪಟ್ಟ ನಾಡಿಗಳು ಸುದ್ದಿಪ್ರಸಾರ ಮಾಧ್ಯಮದ ಚಿಹ್ನೆಗಳನ್ನೊಳಗೊಂಡು ಗುಪ್ತ ಗಾಮಿನಿಯೂ ಮಿಡಿದಿರಬೇಕು! ಅದರಂತೆ ನಾಗಾಯಿಯ ಶಾಸನ, ಸನ್ನತಿಯ ಅವಶೇಷಗಳು, ಹಿಂದಿನ ಕಾಲದ ಸುದ್ದಿ ಪ್ರಸಾರ ಮಧ್ಯಮದ ಬಳಕೆಯ ಬಗ್ಗೆ ಶೋಧನೆ ಮಾಡುವವರಿಗೆ ಆಹ್ವಾನವನ್ನು ನೀಡಲು ಸಾಧ್ಯ. ಮುಂದುವರಿದ ಕಾಲಗಳಲ್ಲಿ ಚಿಂತನ ಮಂಥನಗಳಿಂದ ಮೂಡಿಬಂದ ವಚನಗಳ ಶಿವಶರಣರಾಗಲೀ,ಬದುಕಿನಲ್ಲಿ ವಿಶ್ವಾಸ ಮೂಡಿಸಲು ಗುಡಿಸಲು ಗುಡಿಸಲು ಗಳಲ್ಲಿಯೂ ಜೀವನ ದೀಪ್ತಿಯನ್ನು ಮುಡಿಸಿ ಕೀರ್ತನೆ ಗಳನ್ನು ಹಾಡಿ ಬೆಳಗಿಸಿದ ಹರಿದಾಸರಾಗಲೀ-ಒಂದರ್ಥದಲ್ಲಿ ಬದುಕಿನ ಒಳಿತಿಗೆ ಸಂದೇಶವನ್ನು ಬೀರಿದವರು. ಆದ್ದರಿಂದ ಅತ್ಯಾಧುನಿಕ ಕಾಲವು ಬರುವ ಮುನ್ನಿನಿಂದಲೇ ಈ ಪ್ರದೇಶದಲ್ಲಿ ಪತ್ರಿಕೋದ್ಯಮಕ್ಕೆ ಬೇಕಾಗುವ ಮೂಲ ಸಂಪತ್ತು ಸಿದ್ಧವಾಗತೊಡಗಿತ್ತೆಂಬುದನ್ನು ಊಹಿಸ ಬಹುದಾಗಿದೆ. ಈ ಲಕ್ಷಣವನ್ನು

ಆಧರಿಸಿಯೇ, ಸ್ವಾತಂತ್ರ್ಯೋತ್ತರ ಕಾಲದಿಂದಲೇ ಈ ಭಾಗದಲ್ಲಿ ಪತ್ರಿಕೆಗಳು ಜನ್ಮತಳೆದಿದ್ದುವೆಂಬುದನ್ನು ಸಾಬೀತುಗೊಳಿಸಲು ಇನ್ನೂ ಹೆಚ್ಚಿನ ಪ್ರಮಾಣಗಳಿವೆ.

ಈ ದಿಸೆಯಲ್ಲಿ ಖಚಿತವಾಗಿ ನಿಂತಿರುವ ಮಾಹಿತಿಗಳನ್ನಾದರೂ ಸಂಗ್ರಹಿಸಿ ೧೯೫೬ರ ವರೆಗೆ ಅರ್ಥಾತ್ ನವ ಮೈಸೂರು (ವಿಶಾಲ ಮೈಸೂರು) ಪ್ರಾಂತ ಪುನರ್ ರಚನೆಯಾಗಿ, ಕಲಬುರ್ಗಿ, ಬೀದರ್, ರಾಯಚೂರು, ಜಿಲ್ಲೆಗಳು ಅದರಲ್ಲಿ ಸೇರ್ಪಡೆಯಾಗುವ ವರೆಗೆ ಮಾತ್ರ ನಮ್ಮ ಈ ಪ್ರಬಂಧಕ್ಕೆ ಸಂಬಂಧಪಟ್ಟ ವಿಷಯ ಸಂಗ್ರಹಕಾರ್ಯವು ಸೀಮಿತವಾಗಿರುತ್ತವೆ. ೧೮೫೭ರ ಸಂದರ್ಭದಲ್ಲಿ ಹೈದರಬಾದ್ ಕರ್ನಾಟಕ ಭಾಗದಲ್ಲಿ ಬರುವ ಕೊಪ್ಪಳ, ಮುಂಡರಗಿ, ಸುರಪುರಗಳು ಸ್ವಾತಂತ್ರ್ಯ ಸಂಗ್ರಾಮಕ್ಕೆ ಹೆಚ್ಚು ಒತ್ತು ನೀಡಿ, ಒಂದು ಅರ್ಥದಲ್ಲಿ ಗೆಲುವನ್ನೇ ತಂದುಕೊಟ್ಟು ಜಗತ್ತಿನ ಕಣ್ಣುಗಳನ್ನು ತಮ್ಮತ್ತ ಸೆಳೆದು ಕೊಂಡುವು. ಈ ಅದ್ಭುತ ಕಾರ್ಯವನ್ನು ಯಶಸ್ವಿಯಾಗಿ ಮಾಡಿದರು. ಈ ವೃತ್ತಿಯನ್ನು ಎಸಗಿದ ಮನೆತನಗಳಲ್ಲಿ ಕಾಗದ ಪತ್ರಗಳ ಪರಿಶೀಲನೆಯಿಂದ ಈ ದಿಸೆಯಲ್ಲಿ ವಿಶೇಷಸಂಗತಿಗಳನ್ನು ಹೊರತೆಗೆದು ಬೆಳಕು ಚೆಲ್ಲಲು ಸಾಧ್ಯವಿದೆ.

೧೯೪೨ರ ಚಳುವಳಿಯ ಪ್ರಭಾವದಿಂದಾಗಿ ಇಡೀ ಭರತಖಂಡದಲ್ಲಿ ಸ್ವಾತಂತ್ರ್ಯವನ್ನು ಪಡೆದೇ ತೀರುತ್ತೇವೆಂಬ ವಿಶ್ವಾಸ ಮೂಡಿಬಂದಾಗ, ನಿಜಾಂನ ಹಿಡಿತದಲ್ಲಿದ್ದ ಹೈದಾರಾಬಾದ್ ಸಂಸ್ಥಾನದಲ್ಲಿಯೂ ಸ್ವಾತಂತ್ರ್ಯದ ಆಂದೋಲನದ ಗಾಳಿ ಬೀಸದೇ ಇರಲಿಲ್ಲ. ತತ್ ಪರಿಣಾಮವಾಗಿ ಸಾಮಾನ್ಯ ಜನತೆಯಲ್ಲಿ ಒಳಗುದಿ ಆರಂಭವಾಗಿ ಉಕ್ಕಿಬರುತ್ತಿರುವ ಸಂದರ್ಭದಲ್ಲಿ ೧೯೪೫ರ ಸಮಯಕ್ಕೆ ಒಂದು ರೂಪ ತಾಳಿತು. ಕಲಬುರಗಿಯಲ್ಲಿ ೧೩ ಜನರು, ಅಂದಿನ ನಿಜಾಂಶಾಹಿಗೆ ಧಿಕ್ಕಾರ ಹೇಳಿ ಅಂದಿನ ತಮ್ಮ ಸರಕಾರಿ ಅರೆಸರಕಾರಿ ನೌಕರಿಗಳನ್ನು ತ್ಯಜಿಸಿ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ಸನ್ನು ಕಟ್ಟಲು ಹೊರಬಂದರು. ಅವರು ಯಾರೆಂದರೆ, ಸರ್ವಶ್ರೀ ಅನಂತಾದಿ ದತ್ತಾತ್ರೇಯರಾವ್, ಪ್ರೊ. ವ್ಹಿ. ಸಿ.- ದೇವುಳಗಾಂವಕರ್, ಎಸ್. ಹನುಮಂತರಾವ್, ಶಂಕರರಾವ್ ವಾಂರ್ಝರೇ, ತುಕಾರಾಮ ಕುಲಕರಣಿ, ಅನಂತಶರ್ಮಾ, ನಾರಾಯಣರಾವ್ ಕಾನ್ಯಾಳ ಅವರು ಅಮೃತ ಬಝಾರ ಪತ್ರಿಕೆಯ ಬಳಗದ ದಿವಗಂತ ರಾಮುಜಾಗೀರದಾರರ ಜೊತೆ ಸೇರಿ, ಸ್ವಾತಂತ್ರ್ಯ ಚಳುವಳಿಯ ಕುರಿತಾದ ಕರಪತ್ರಗಳನ್ನು ಬರೆದು ಸೈಕ್ಲೋಸ್ಟೈಲ್‌ಮಾಡಿ, ಮತ್ತೆ ಕೆಲವುಸಲ ಕಲ್ಲಚ್ಚಿನಲ್ಲಿ ಬರೆದು ಪ್ರತಿಗಳನ್ನು ತೆಗೆದು ಮನೆ ಮನೆಗೆ ಹಂಚಿ ಕ್ರಾಂತಿಯ ಕಿಡಿಯನ್ನು ಎಬ್ಬಿಸಿದರು. ದಿವಗಂತ ಅನಂತಾಧಿ ದತ್ತಾತ್ರೇಯರಾವ್ ಮತ್ತು ಎಸ್. ಹನುಮಂತರಾಯರು ಸೇರಿ 'ನಾಗರಿಕ' ಎಂಬ ವಾರ ಪತ್ರಿಕೆಯನ್ನು ಆರಂಭಿಸಿದರು. ತ್ರಿವರ್ಣಝುಂಡಾದಿಂದ ವೈಭವಯುತವಾಗಿ ವರ್ಣರಂಜಿತವಾಗಿ ಬಂದ ಈ ಪತ್ರಿಕೆಯು ಕಲಬುರಗಿಯಲ್ಲಿ ಝುಂಝಾವಾತವನ್ನೇ ಎಬ್ಬಿಸಿತು. ಅನಂತಾದಿ ದತ್ತಾತ್ರೇಯರಾಯರುನಾಗರಿಕದ ಸಂಪಾದನಾಕಾರ್ಯದಲ್ಲಿ ತೊಡಗಿರುವಾಗಲೇ ರಾಜಕೈದಿಯಾಗಿ ಬಂಧಿತರಾದರು. ಈ ಪತ್ರಿಕೆಯಲ್ಲಿಯ ಲೇಖನಗಳಿಗೆ ಆಕರ್ಷಿತರಾಗಿ ಜನತೆ ರಾಜಕೀಯ ಕ್ರಾಂತಿಯಲ್ಲಿ ಸಕ್ರಿಯವಾಗಿ ಪಾಲುಗೊಳ್ಳತೊಡಗಿದ್ದರು ಈ ಕಾರಣದಿಂದ ಅನಂತಾದಿಯವರನ್ನು ನಿಜಾಂಸರಕಾರ ಬಂಧಿಸಿ ಬಹುಪರಿಯಿಂದ ತೊಂದರೆಗಳನ್ನು ಅವರಿಗೆ ಕಾರಾಗೃಹದಲ್ಲಿ ನೀಡಿತು. ಅದೇ ಸಂದರ್ಭದಲ್ಲಿ ಹೇರೂರ ದತ್ತಾತ್ರೇಯರಾಯರು ರಾಷ್ಟ್ರಭಕ್ತಿಯನ್ನು ಜಾಗೃತಗೊಳಿಸುವ ಹಿನ್ನೆಲೆಯ ಸಾಹಿತ್ಯಿಕ ಸಾಂಸ್ಕೃತಿಕ ಮಹತ್ತ್ವವನ್ನು ತಿಳಿಸಿಕೊಡುವ ಕೈಬರಹದ ಸಂಚಿಕೆಗಳನ್ನು ತಂದರು. ಆ ಪ್ರೇರಣೆಯಿಂದಾಗಿ ವಸಂತ ಕುಷ್ಟಗಿ ಮತ್ತು ಲಕ್ಷ್ಮೀಕಾಂತಪಟ್ಟಣಕಾರ್ ಅವರು ಸೇರಿ ಸತತವಾಗಿ ಮೂರು ವರ್ಷ ೧೯೪೭-೫೦ರ ವರೆಗೆ 'ಉದಯ' ಎಂಬ ಕೈಬರಹದ ಪತ್ರಿಕೆಯನ್ನು ತಂದರು. ಈ ಇಬ್ಬರು ಆಗ ಮಿಡ್ಲಿಸ್ಕೂಲಿನ ವಿದ್ಯಾರ್ಥಿಗಳು. ಈ ಪತ್ರಿಕೆಗಳಲ್ಲಿ ಆಗಿನ ದೇಶದ್ರೋಹಿರಜಾಕಾರ ಹಾವಳಿಯ ಶಬ್ದ ಚಿತ್ರಗಳಿವೆ. ಈ ಪತ್ರಿಕೆಯ ಒಂದೆರಡು ಸಂಚಿಕೆಗಳ ಝೆರಾಕ್ಸ್ ಪತ್ರಿಗಳನ್ನು ರಾಜ್ಯ ಪತ್ರಾಗಾರದಲ್ಲಿ ದಾಖಲಿಸಲಾಗಿದೆಯೆಂದು ತಿಳಿದು ಬಂದಿದೆ. ಇದೇ ರೀತಿ ಮುಂದೆ ಹನುಮಂತರಾವ್ ಕಾನ್ಯಾಳ ಅವರು 'ಪ್ರಕಾಶ' ಎಂಬ ಕೈಬರಹದ ಪತ್ರಿಕೆಯನ್ನು ಕೆಲಕಾಲ ನಡೆಸಿದರು.

ಸುರಪುರ ಮತ್ತು ಶಹಾಪುರಗಳಲ್ಲಿ ೧೯೪೨ರ

ಸಂದರ್ಭದಲ್ಲಿ ರಾಘವೇಂದ್ರ ಕುಷ್ಟಗಿ "ಬತ್ತೀರೇಶ ಕಿಂಕರ", ಹೋಳಿ ಶೇಷಗಿರಿರಾವ್, ಭೀಮರಾವ್ ಮಾಸ್ತರ್ ಶಹಾಪುರ, ಗುರಾಚಾರ್ಯ ಬಂಡಿ, ಸಗರ ಕೃಷ್ಣಾಚಾರ್ಯ, ಎಂ. ಆರ್. ಬುದ್ಧಿವಂತಶೆಟ್ಟಿ ಮೊದಲಾದವರು ಕೈಬರಹದ ವಿಶೇಷ ಸಂಚಿಕೆಗಳನ್ನು ತಂದು, ಸಗರ ನಾಡಿನಲ್ಲಿ ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ ತಿಳಿವಳಿಕೆಯನ್ನು ಜನರಲ್ಲಿ ಜಾಗೃತಗೊಳಿಸಿದರು. ರಂಗಂಪೇಟೆಯ ಬುದ್ಧಿವಂತಶೆಟ್ಟರ ಮನೆಯಲ್ಲಿ ಆ ಕಾಲದ 'ಅರುಣ' ಪತ್ರಿಕೆಯ ಹಸ್ತಪತಿಗಳು ಇನ್ನೂ ನೋಡಲು ದೊರೆಯುತ್ತವೆ. ಸ್ವಾತಂತ್ರ್ಯದ ಅನಂತರ ಅರ್ಥಾತ್ ಅಂದಿನ ಉಪ ಪ್ರಧಾನಿ/ಗೃಹ ಸಚಿವರಾಗಿದ್ದ ಸರ್ದಾರ್ ವಲ್ಲಭಭಾಯ್ ಪಟೇಲರ ಸಕಾಲಿಕ ಉಪಕ್ರಮದಿಂದಾಗಿ ಹೈದರಾಬಾದ ಸಂಸ್ಥಾನದ 'ಪೋಲಿಸಯಾಕ್ಷನ್'ದ ಅನಂತರ, ದಿವಂಗತ ತವಗ ಭೀಮಸೇನರಾಯರು 'ಮಿಂಚು' ಎಂಬ ಪತ್ರಿಕೆಯನ್ನು ತಮ್ಮ ಶಿಕ್ಷಣ ಸಂಸ್ಥೆಯಿಂದ ತಂದು ಅನೇಕ ಯುವಕರಲ್ಲಿಯ ಪ್ರತಿಭೆಗಳನ್ನು ಅರಳಿಸಿದರು. ಈ 'ಮಿಂಚು' ಸಂಚಿಕೆಗಳು ಅಂದಿನ ಸಾಹಿತ್ಯಿಕ ಸಾಂಸ್ಕೃತಿಕ ಚಟುವಟಿಕೆಗಳ ಕ್ರಿಯಾಶೀಲತೆಗಳನ್ನೂ ಆಳೆತ್ತರಗಳ ನಿಲುವನ್ನು ಸ್ಥಾಪಿಸಲು ತುಂಬ ಸಹಕಾರಿಯಾಗಿವೆ. ಆಧ್ಯಾತ್ಮಿಕ, ಧಾರ್ಮಿಕ, ಸಾಹಿತ್ಯಿಕ ಮತ್ತು ವೈಚಾರಿಕ ಘನತೆಗಳನ್ನು ತೋರಿಸಿಕೊಡುವಲ್ಲಿ ಚಂದ್ರಶೇಖರ ಶಾಸ್ತ್ರಿಗಳ "ಅಮರವಾಣಿ" ಸಂಚಿಕೆಯನ್ನು ಮರೆಯಲು ಸಾಧ್ಯವೇ ಇಲ್ಲ. ಮುಂದೆ ಈ ಪತ್ರಿಕೆಯಿಂದ ನಿರ್ಮಾಣವಾದ ವಾತಾವರಣವು 'ವಿಶ್ವ ಕಲ್ಯಾಣದ ಬರುವಿಗೆ ನಾಂದಿ ಹೇಳಿತು.

ರಾಯಚೂರು ಜಿಲ್ಲೆಯನ್ನು ಕುರಿತು ಹೇಳುವುದಾದರೆ, 'ಧರ್ಮ ಸಂಜೀವಿನಿ' ಎಂಬ ಪತ್ರಿಕೆಯು ರಾಯಚೂರು ಜಿಲ್ಲೆಯಿಂದ ಜನಜಾಗೃತಿಯುನ್ನುಂಟು ಮಾಡುವಲ್ಲಿ ಸಾಕಷ್ಟು ಪರಿಶ್ರಮವನ್ನು ಪಟ್ಟಿರುವುದೆಂದು ತಿಳಿದು ಬಂದಿದೆ. ಆದರೆ ಆ ಪತ್ರಿಕೆಯ ಸಂಚಿಕೆಗಳು ನೋಡಲು ಸಿಕ್ಕಿಲ್ಲ. ಈ ರೀತಿಯ ಒಂದೆರಡು ಪರಿಶ್ರಮದ ಮೈಲುಗಲ್ಲುಗಳನ್ನು ಹೊರತುಪಡಿಸಿದರೆ ೧೯೪೮ರ ಮುನ್ನ ರಾಯಚೂರು ಜಿಲ್ಲೆಯಲ್ಲಿ ಪತ್ರಿಕೆಗಳ ಪ್ರಕಾಶನ ಕುರಿತಾದ ಪ್ರಯತ್ನಗಳು ವಿಶೇಷವಾಗಿ ಕಂಡುಬರುವುದಿಲ್ಲ. ಆಗ ಜನರು, ಮುಂಬಯಿ ಕರ್ನಾಟಕದಿಂದ ಪ್ರಕಟವಾಗುತ್ತಿದ್ದ ಪತ್ರಿಕೆಗಳನ್ನೇ ತರಿಸಿಕೊಂಡು ಓದುತ್ತಿದ್ದದು ತಿಳಿದು ಬರುತ್ತದೆ. ಈ ರೀತಿ ಪತ್ರಿಕಾ ವಾಚನಾಭಿರುಚಿಗಳನ್ನು ಬೆಳೆಸಲು ರಾಯಚೂರಿನ ಕರ್ನಾಟಕ ಸಂಘವು ವಿಶೇಷ ಏರ್ಪಾಟನ್ನು ಮಾಡಿದ್ದ ಸಂಗತಿಯು ಗಮನಾರ್ಹವಷ್ಟೇ ಅಲ್ಲ ಅಭಿನಂದನಾರ್ಹ. ಈ ಕರ್ನಾಟಕ ಸಂಘವು ೧೯೩೮ರಿಂದಲೇ ವಾಚನಾಭಿರುಚಿಯನ್ನು ಬೆಳೆಸುತ್ತ ಬಂದಿರುವುದನ್ನು ಕೂಡ ನೆನೆಯಲೇಬೇಕು. ಜನತೆಯಲ್ಲಿ ಕನ್ನಡ ವಾಚನಾಭಿರುಚಿ ಬೆಳೆದಂತೆಲ್ಲ ಮುಂದೆ, ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕವು ಹೆಚ್ಚು ಹೆಚ್ಚು ಜನಪ್ರಿಯವಾಯಿತು. ಈ ನಿಟ್ಟಿನ ಶ್ರೇಯಸ್ಸು ದಿವಂಗತ ರಾ. ಗು. ಜೋಶಿ ಅವರಿಗೆ ಸಲ್ಲುತ್ತದೆ. ಅವರೊಬ್ಬ ನುರಿತ ಅನುಭವಿ ಮತ್ತು ಮುತ್ಸದ್ದಿ ವರದಿಗಾರರಾಗಿದ್ದರು. ಅವರು ನೀಡಿದ ಅಂದಿನ ವರದಿಗಳು ಪತ್ರಿಕೋದ್ಯಮಕ್ಕೆ ವಿಶಿಷ್ಟ ಮಾದರಿಯ ಕೊಡುಗೆಗಳಾಗಿವೆ. ಹೀಗಾಗಿ ಅವರಿಂದ ಪತ್ರಿಕೋದ್ಯಮವು ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿತು. ಅಂತೆಯೇ ರಾಯಚೂರಿನಿಂದ ಹೈದರಬಾದ್ ಕರ್ನಾಟಕದ ಮೊತ್ತ ಮೊದಲನೆಯ ಪತ್ರಿಕೆ 'ದಕ್ಕನ್ ಪ್ರಭಾತ'ವು ಮೂಡಿ ಮೂಡಿ ಬರಲು ಸಾಧ್ಯವಾಯಿತು. ಈ ವಾರಪತ್ರಿಕೆಯ ಮೊದಲ ಸಂಚಿಕೆಯು ೯ನೆಯ ನವೆಂಬರ್ ೧೯೪೦ರಂದು ಹೊರಬಂದಿತು. ಈ ಪತ್ರಿಕೆಯ ಸಂಪಾದಕರು ಪಿ. ರಾಚೋಟಿಯ್ಯ ಎಂಬುವರು. ಅವರ ಸತತ ಪ್ರಯತ್ನದಿಂದ ಈ ವಾರಪತ್ರಿಕೆಯು ದಿನಪತ್ರಿಕೆಯಾಗಿಯೂ ಬೆಳಕು ಕಂಡಿತು. ಆದರೆ ಐದು ವರ್ಷಗಳ ಅನಂತರ ಅದು ಆರ್ಥಿಕ ಮುಗ್ಗಟ್ಟಿನಿಂದಾಗಿ ನಿಂತಿತು. ಅಷ್ಟರಲ್ಲಿ ಕಲಬುರ್ಗಿಯಿಂದ ರಾಯಚೂರಿಗೆ ಬಂದ "ನಾಗರಿಕ"ವು ತನ್ನ ಸಮರ್ಥ ಸಾಧನೆಯನ್ನು ಶ್ರೀ ಎಸ್. ಹನುಮಂತರಾಯರ ಸಂಪಾದಕತ್ವದಲ್ಲಿ ಸಾಧ್ಯಮಾಡಿಕೊಂಡರೂ, ಅದಕ್ಕೂ ಆರ್ಥಿಕ ಮುಗ್ಗಟ್ಟು ಒದಗಿ ಅದೂ ಕೂಡ ನಿಂತುಹೋಯಿತು. ಅದೇ ಸಂದರ್ಭದಲ್ಲಿ ರಾಯಚೂರು ಜಿಲ್ಲೆಯವರೇ ಆದ ಕಲಿಗಣನಾಥ ಹಿರೇಮಠ ಎಂಬುವರು, 'ಸೇವಾ' ಎಂಬ ಪತ್ರಿಕೆಯನ್ನು ಪೋಲಿಸ್ಯಾಕ್ಷನ್ ಅನಂತರ ಆರಂಭಿಸಿದರು.

ಅದು ನಾಲ್ಕೈದು ವರ್ಷಗಳವರೆಗೆ ಆ ಭಾಗದ ಜನರ ಆಶೋತ್ತರಗಳನ್ನು ಸ್ಪಂದಿಸಿಕೊಂಡು ಬೆಳೆಯಿತು. ಆದರೆ ಅದಕ್ಕೂ ಆರ್ಥಿಕ ಮುಗ್ಗಟ್ಟು ತಟ್ಟದೇ ಬಿಡಲಿಲ್ಲ.

ರಾಯಚೂರು ಜಿಲ್ಲೆಯ 'ಸಾಧನಾ' ಎಂಬ ವಾರ ಪತ್ರಿಕೆಯು ಹೈದರಾಬಾದ್ ಕರ್ನಾಟಕದಲ್ಲಿ ಬಹುಕಾಲ ಬಾಳಿದ ಪತ್ರಿಕೆ. ಹೈದರಾಬಾದು ಕರ್ನಾಟಕಕ್ಕೆ ಮಾತ್ರವಲ್ಲದೆ, ಕರ್ನಾಟಕದ ಉಳಿದ ಭಾಗಗಳ ಓದುಗರನ್ನೂ ಈ ಪತ್ರಿಕೆಯು ಆಕರ್ಷಿಸಿತ್ತು. ಸಾಮಾನ್ಯ ಜನರ ಒತ್ತಾಸೆಗಳನ್ನು ಬಿಚ್ಚುಮನಸ್ಸಿನಿಂದ ಬಿತ್ತರಿಸುವ ಪತ್ರಿಕೆಯಿದು ಎಂದು ಆಗ ಹೆಸರು ಪಡೆದಿತ್ತು. ಜೊತೆಗೆ ಹೊಸಗನ್ನಡದ ಸಾಹಿತ್ಯಿಕ ರೂಪಗಳಲ್ಲಿ ಹೊಸ ಹೊಸ ಲೇಖಕರಿಗೆ ಇಂಬು ನೀಡಿ, ಅವರ ಸಾಹಿತ್ಯದ ಬದುಕನ್ನು ಅರಳಿಸಿತು. ಮಾಸಿಕವಾಗಿಯೇ ಬಂದ ಈ ಪತ್ರಿಕೆಯ ಸಂಚಿಕೆಗಳು, ಅಖಿಲ ಕರ್ನಾಟಕದ ಮಟ್ಟದ ಪತ್ರಿಕೆಗಳ ಸಾಲಿನಲ್ಲಿ ಗೌರವವನ್ನು ಪಡೆದಿದ್ದುವು. ನಿಷ್ಠಾವಂತ ಕಾಂಗ್ರೆಸ್ ಧುರೀಣ ದಿವಂಗತ ಜಿ.ಕೆ. ಪ್ರಾಣೇಶಾಚಾರ್ಯರ ಸಂಪಾದಕತ್ವ ಮತ್ತು ಯಜಮಾನತ್ತ್ವದಲ್ಲಿ ಬಂದ ಈ ಪತ್ರಿಕೆಯು ಹೈದರಾಬಾದ ಸಂಸ್ಥಾನ/ಪ್ರಾಂತ್ಯದ ಜನತೆಯ ಮುಖವಾಣಿಯೇ ಆಗಿ ವಿಜೃಂಭಿಸಿತು. ಸಚಿತ್ರವಾಗಿದ್ದ ಈ ಪತ್ರಿಕೆಯು ಹಲವು ಹತ್ತಾರು ವಿನ್ಯಾಸಗಳಿಂದ ಓದುಗರನ್ನು ಹುರಿದುಂಬಿಸಿತ್ತು. ಈ ಪತ್ರಿಕೆಯು ರಾಜ್ಯಪುನರ್ ಘಟನೆಯಾಗುವವರೆಗೆ ಹೈದ್ರಾಬಾದಿನಿಂದಲೇ ಪ್ರಕಟವಾಗುತ್ತಿದ್ದು ಅನಂತರ ಬಹು ವರ್ಷ ರಾಯಚೂರಿನಿಂದ ಪ್ರಕಟವಾಗುತ್ತಿದ್ದು ಈಗ ನಿಂತುಹೋಗಿದೆ.

ಈ ಅವಧಿಯಲ್ಲಿ ಕೊಪ್ಪಳದಿಂದ ನಂದಳಿಕೆಯವರು 'ಲೋಕವಾಣಿ' ಎಂಬ ಪತ್ರಿಕೆಯನ್ನು ಪ್ರಕಟಿಸಿದರು. ಅದು ಕೆಲಕಾಲ ಕೊಪ್ಪಳದಿಂದ ಪ್ರಕಟಗೊಂಡು ಅನಂತರ ರಾಯಚೂರಿನಿಂದ ಪ್ರಕಟವಾಗತೊಡಗಿತು. ಇದೇ ಸಮಯದಲ್ಲಿ ಪಿ. ರಾಜೋಟಯ್ಯ ಮತ್ತು ಕೊಟ್ರಬಸ್ಸಯ್ಯನವರು ಸೇರಿ, 'ಸೇವಕ' ಎಂಬ ಪತ್ರಿಕೆಯನ್ನು ಸ್ವಲ್ಪ ಕಾಲ ನಡೆಸಿದರು.

ರಾಯಚೂರಿನ ಕರ್ನಾಟಕ ಸಂಘವು ೧೯೫೩-೫೪ರಲ್ಲಿ ಆರಂಭಿಸಿದ 'ವಿಜಯ' ಎಂಬ ಪತ್ರಿಕೆಯು ೫-೬ ವರ್ಷ ಉತ್ತಮ ಗುಣಮಟ್ಟವನ್ನು ಕಾಯ್ದುಕೊಂಡು ಉತ್ತಮ ಸಾಹಿತ್ಯ ನಿರ್ಮಾಣ ಮಾಡಿಸುವಲ್ಲಿ ಯಶಸ್ಸು ಪಡೆಯಿತು. ಈ ದಿಸೆಯಲ್ಲಿ ಶ್ರೀ ರಾಘವೇಂದ್ರರಾವ್ ಮತ್ತು ಶ್ರೀನಿವಾಸಚಾರ್ಯ ಹುಣಸಗಿ ಅವರ ಪ್ರಯತ್ನ ಮೆಚ್ಚಿಕೊಳ್ಳುವಂತಹದು.

೧೯೪೯ರ ಜನವರಿಯಲ್ಲಿ ಕಲಬುರಗಿ ಜಿಲ್ಲೆಯ ಯಾದವಗಿರಿಯಿಂದ ಆರಂಭವಾದ 'ಅಮರವಾಣಿ'ಯು ೧೯೫೪ರ ಡಿಸೆಂಬರದಲ್ಲಿ ರಾಯಚೂರಿಗೆ ಬಂದು, ವಿದ್ವಾನ್ ಬಿ.ಎಂ. ವೀರೇಶ್ವರ ಶಾಸ್ತ್ರಿಯವರ ಸಂಪಾದಕತ್ತ್ವದಲ್ಲಿ ಸಹೃದಯರ ಮೆಚ್ಚಿಗೆಯನ್ನು ಪಡೆಯಿತು. ಇದಕ್ಕೆ ಕಾರಣ ಸಂಪಾದಕರು ಸ್ವಂತ ಅಚ್ಚುಕೂಟವನ್ನು ಹೊಂದಿರುವುದೇ ಆಗಿದೆ.

ಸ್ವಾತಂತ್ರ್ಯದ ಆಂದೋಲನದ ಸಂದರ್ಭದಲ್ಲಿ ರಾಯಚೂರು ಜಿಲ್ಲೆಯ ಮುಖಾಂತರ ತಾರಾನಾಥರ ಪಾತ್ರವು ಬಹು ಪ್ರಮುಖವಾದುದು ಮತ್ತು ಜನತೆಯ ಸರ್ವೋತೋಮುಖ ಕಲ್ಯಾಣಕ್ಕಾಗಿ ಅವರ ಸೇವೆ ಅಪೂರ್ವವಾದುದು. ಬಹುಮುಖವಾದುದು. ವಿಶೇಷತಃ ಶಿಕ್ಷಣ ಕ್ಷೇತ್ರಕ್ಕೆ ರಾಷ್ಟ್ರೀಯ ಆಂದೋಲನದ ಹೇತುವಿನಿಂದಲೇ ಉತ್ತಮ ಶಿಕ್ಷಣ ನೀಡಲು ಹಮ್ದರ್ದ್ ಶಾಲೆಯನ್ನು ಆರಂಭಿಸಿದುದು ಈ ಮಾತಿಗೊಂದು ನಿದರ್ಶನ. ಅದೇ ರೀತಿ ಧೀರ ಗಂಭೀರ ಸ್ವಾರಸ್ಯದ ಪತ್ರಿಕೋದ್ಯಮಕ್ಕೂ ಅವರ ಸೇವೆ ಚಿರಸ್ಮರಣೀಯ. ಸ್ವಾತಂತ್ರ್ಯ ಆಂದೋಲನದಲ್ಲಿ ಪಾಲುಗೊಳ್ಳುತ್ತಿದ್ದಾರೆಂಬ ಗುಮಾನಿಯ ಮೇಲೆ ತಾರಾನಾಥರನ್ನು ಗಡಿಪಾರು ಮಾಡಿದ ಮೇಲೆ, ಅವರು ರಾಯಚೂರಿನ, ಹತ್ತಿರ ತುಂಗಭದ್ರ ನದಿಯ ತಡದ ಮೇಲೆ ಆಶ್ರಮ ಕಟ್ಟಿ ಅಲ್ಲಿಯೇ ನಿಂತರು. ಅಲ್ಲಿಂದಲೇ ಸೃಜನಶೀಲ ಕನ್ನಡ ಸಾಹಿತ್ಯಕ್ಕೆ, ರಾಷ್ಟ್ರಾಭಿಮಾನವನ್ನು ಹೊಡೆದೆಬ್ಬಿಸುವ ಸಾಹಿತ್ಯಕ್ಕೆ ಮೀಸಲಾಗಿರಿಸಿದ 'ಪ್ರೇಮ' ಎಂಬ ಪತ್ರಿಕೆಯನ್ನು ಹೊರಡಿಸಿದರು. ಅಂದಿನ ಅವರ ಸಂಪಾದಕತ್ತ್ವದ ಮತ್ತು 'ಪ್ರೇಮ'ದ ಸಂಚಿಕೆಗಳು ಇಂದಿನ ಕಾಲಕ್ಕೂ ಪ್ರೇರಕ ಶಕ್ತಿಯಾಗಿವೆ.

ಸುಮಾರು ೧೯೪೦ರಿಂದ ಈಚಿನ ಎಂದರೆ ೧೯೫೪ರ

ಮಧ್ಯದಲ್ಲಿ ವಿಜಾಪುರ ಜಿಲ್ಲೆಯ ಸಿಸು ಸಂಗಮೇಶ ಅವರು ಮಕ್ಕಳ ಸಾಹಿತ್ಯ ನಿರ್ಮಾಣದ ಕಡೆಗೆ ತಮ್ಮ ಸಂಪೂರ್ಣ ಒಲವನ್ನು ಇತ್ತು ಶಿಶುಸಾಹಿತ್ಯವನ್ನು ವೈವಿಧ್ಯಪೂರ್ಣವಾಗಿ ಬೆಳೆಸತೊಡಗಿದರು. ಸಹಜವಾಗಿಯೇ ವಿಜಾಪುರದ ಗಡಿಯ ರಾಯಚೂರಿನ ಭಾಗದಲ್ಲಿಯೂ ಸಿಸು ಸಂಗಮೇಶ ಅವರ ಚಟುವಟಿಕೆಗಳ ಪ್ರಭಾವವು ಬೀರಿತು. ಅನೇಕ ಪ್ರತಿಭಾವಂತ ಪ್ರಾಥಮಿಕ ಶಾಲೆಯ ಶಿಕ್ಷಕರು ಶಿಶು ಸಾಹಿತ್ಯ ನಿರ್ಮಾಣಕ್ಕೆ ತೊಡಗಿದರು. ಲಿಂಗಸುಗೂರು, ಮುದಗಲ್, ಸಿಂಧನೂರುಗಳಲ್ಲಿ ಮಕ್ಕಳ ಸಾಹಿತಿಗಳ ತಂಡವೇ ನಿರ್ಮಾಣವಾಯಿತು. ಉಕ್ಕಿ ಕುಪ್ಪೇರಾವ್, ಸೀನಾಮಾ ಮೊದಲಾದವರು ಮಕ್ಕಳಿಗಾಗಿ ಕೈಬರಹದ ಮಾಸ ಪತ್ರಿಕೆಗಳನ್ನು ಆರಂಭಿಸಿದರು. 'ಮಗು' ಮತ್ತು 'ಜ್ಯೋತಿ'—ಇವು ಆ ಕಾಲದ ಅಂತಹ ಪತ್ರಿಕೆಗಳು. ಕೆಲವು ಕಾಲ ಈ ಪತ್ರಿಕೆಗಳನ್ನು ಅಚ್ಚು ಮಾಡಿಯೂ ಪ್ರಕಟಿಸಿದರು. ಕೆಲವು ದಿವಸಗಳ ಅನಂತರ ಆರ್ಥಿಕ ಮುಗ್ಗಟ್ಟಿನಿಂದಾಗಿ ಆ ಪತ್ರಿಕೆಗಳು ನಿಂತುಹೋದವು.

ರಾಯಚೂರು ಜಿಲ್ಲೆಯವರೇ ಆಗಿದ್ದು, ಹೈದರಾಬಾದಿನಲ್ಲಿದ್ದುಕೊಂಡು, ಸ್ವಾತಂತ್ರ್ಯಪೂರ್ವದಿಂದಲೂ ತಮ್ಮ ಜೀವನವನ್ನು ಪತ್ರಿಕೋದ್ಯಮದ ವಿಕಾಸಕ್ಕಾಗಿ ಮುಡುಪಿಟ್ಟಿದ್ದ ರಾಘವೇದ್ರಾಚಾರ್ಯ ಜಾಗೀರದಾರರನ್ನು ನೆನೆಸದೇ ಹೋದರೆ ಅನ್ಯಾಯವಾಗುತ್ತದೆ. ಅವರು ಪ್ರಕಟಿಸುತ್ತಿದ್ದ 'ಪ್ರಜಾ' ಎಂಬ ಪತ್ರಿಕೆಯು ಮನಸ್ಸನ್ನು ಹೊಡೆದೆಬ್ಬಿಸುವ ಸ್ಫೂರ್ತಿದಾಯಕ ಲೇಖನಗಳಿಂದಲೂ, ಸುಂದರವಾದ ಮುದ್ರಣದಿಂದಲೂ ಸ್ವಾತಂತ್ರ್ಯದ ಆಂದೋಲನಕ್ಕೆ ಪುಟು ನೀಡುವಂತಹದಾಗಿತ್ತು. ಹೀಗಾಗಿ ಅಂದಿನ 'ಪ್ರಜಾ' ಪತ್ರಿಕೆಯ ಸಂಚಿಕೆಗಳು ಆಗಿನ ಜ್ವಲಂತ ಸಮಸ್ಯೆಗಳನ್ನು ಬಿತ್ತರಿಸಿ, ಆ ಮೂಲಕ ಪ್ರಜೆಗಳನ್ನು ಚಿಂತನಶೀಲರರನ್ನಾಗಿ ಮಾಡಿ, ಆ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸುವಲ್ಲಿಯೂ ಸಫಲವಾದುವು. ಈ ಜನಪ್ರಿಯತೆಯಿಂದಾಗಿ ಸಂಪಾದಕರು ಪ್ರಜಾಜಾಗೀರದಾರರೆಂದೇ ಖ್ಯಾತಿ ಪಡೆದರು.

ಈ ಅವಧಿಯಲ್ಲಿ ಬೀದರ್ ಜಿಲ್ಲೆಯಲ್ಲಿ ಮತ್ತೆ ಕನ್ನಡ ಚೇತರಿಸಿಕೊಳ್ಳತೊಡಗಿತ್ತು. ಹಿರಿಯರಲ್ಲಿ ಅನೇಕರು ಉರ್ದು ಮತ್ತು ಮರಾಠಿಗಳನ್ನೇ ಬಳಸುತ್ತಿದ್ದರು. ಪರಿಸ್ಥಿತಿ ಹೀಗಿದ್ದರೂ ಒಂದೆರಡು ಕಡೆ ಕೈಬರಹ ಕನ್ನಡ ಪತ್ರಿಕೆಗಳು ಬಂದುವು. ಈ ದಿಸೆಯಲ್ಲಿ ದಿಗ್ಗಾವಿ ಮತ್ತು ತಾಳೀಕೋಟಿ ಮಾಸ್ತರರ ಸೇವೆಯನ್ನು ನೆನೆಯಬೇಕೆಂದು ಬೀದರಿನ ಜನ ಹೇಳುತ್ತಾರೆ.

ನಾವು ಈ ಪ್ರಬಂಧಕ್ಕೆ ಸೀಮಿತಗೊಳಿಸಿಕೊಂಡಿರುವ ಅವಧಿಯಲ್ಲಿ, ಕನ್ನಡ ಪತ್ರಿಕೆಗಳ ಇತಿಹಾಸಕ್ಕೆ ಹೈದರಾಬಾದಿನಲ್ಲಿಯ ಉಸ್ಮಾನಿಯಾ ವಿಶ್ವವಿದ್ಯಾಲಯವು ತನ್ನ ಮಟ್ಟಿನ ಕೊಡುಗೆಗಳನ್ನು ಕೊಟ್ಟಿದೆ. ಆ ಕೊಡುಗೆಗಳನ್ನು ಗೌರವದಿಂದಲೇ ದಾಖಲಿಸಬೇಕು. ರಾಜ್ಯ ಪುನರ್‌ಘಟನೆಯಾಗುವುದಕ್ಕೆ ಮುಂಚಿನಿಂದಲೇ, 'ತಾವರೆ', 'ಸಂಜೆರಾಣಿ' ಮೊದಲಾದ ಕಾಲೇಜು ವಾರ್ಷಿಕಗಳು ಬಂದುವು. ಅವುಗಳಲ್ಲಿ ವಿಶೇಷವಾಗಿ ಉಸ್ಮಾನಿಯಾ ವಿಶ್ವವಿದ್ಯಾಲಯದ 'ತಾವರೆ' ಮತ್ತು ನಿಜಾಂ ಕಾಲೇಜಿನ ವಾರ್ಷಿಕ ಸಂಚಿಕೆಗಳು ಮೌಲಿಕವಾದ ಲೇಖನ ಸಂಚಯಗಳಿಂದ ಕೂಡಿವೆ. ಇವು, ಮೈಸೂರು ವಿಶ್ವವಿದ್ಯಾಲಯದ ಪ್ರಬುದ್ಧ ಕರ್ನಾಟಕದ ಮಾದರಿಯಲ್ಲಿ ಬಂದ ಸಂಚಿಕೆಗಳು. ಹೀಗಾಗಿ ಈ ನಿಟ್ಟಿನಲ್ಲಿ ಅಂದಿನ ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ಅಧ್ಯಾಪಕರ ಪ್ರಯತ್ನವನ್ನು ಮೆಚ್ಚಲೇಬೇಕು. ಏಕೆಂದರೆ ಕನ್ನಡವು ಅಲ್ಪಸಂಖ್ಯಾತರ ಭಾಷೆಯಾಗಿದ್ದು, ಅನೇಕ ಬಹು ಭಾಷಿಕರ ಒತ್ತಡದಲ್ಲಿದ್ದೂ ತನ್ನ ಧ್ವನಿಯನ್ನು ಅಲ್ಲಿ ಎತ್ತಲು ಪ್ರಯತ್ನಿಸಿದ್ದು ಕಡಮೆಯ ಸಾಧನೆಯ ಮಾತಲ್ಲ. ಯಾವ ತರಹದ ಬೆಂಬಲವಿಲ್ಲದೆ, ಒಂದು ಕಡೆ ರಾಜಭಾಷೆಯಾಗಿದ್ದ ಉರ್ದುವಿನ ದರ್ಪದಲ್ಲಿ ಕನ್ನಡವು ಬಡವಾಗಿತ್ತು. ಇನ್ನೊಂದು ಕಡೆ ಮಾಂಸಿ ಭಾಷೆಗಳಾದ ತೆಲಗು ಮರಾಠಿಗಳು ತಮ್ಮದೇ ಆದ ಧಾಟಿಯ ಒಲವಿನಲ್ಲಿ ಕನ್ನಡವನ್ನು ಸೊರಗುವಂತೆ ಮಾಡಿದ್ದುವು. ಇಂತಹ ಒತ್ತಡಗಳಲ್ಲಿ ಕನ್ನಡವು ಬಡವಾಯಿತೇನೋ ಎನ್ನಿಸಿದರೂ ಸ್ವಾಭಿಮಾನದ ಉಸಿರನ್ನು ಅದು ಬಿಡಲಿಲ್ಲ. ಅಂತೆಯೇ ಅದು ತನ್ನ ತನವನ್ನು ಉಳಿಸಿಕೊಂಡೇ ೧೯೫೬ರ ನವೆಂಬರ್ ೧ರಂದು ಕನ್ನಡದ ಹೆದ್ದೊರೆಯಲ್ಲೊಂದಾಗಿ ಪ್ರವಹಿಸತೊಡಗಿದೆ. ಆದರೆ ಆ ಕಾಲದಲ್ಲಿದ್ದ

ಪತ್ರಿಕೋದ್ಯಮದ ಅಸ್ತಿತ್ವ, ಸಾಧನೆ ಇತ್ಯಾದಿಗಳ ಬಗ್ಗೆ ಸಂಶೋಧನೆ ನಡೆದು—ಇತಿಹಾಸವು ಎಲ್ಲರ ಕಣ್ಣುಗಳಿಗೂ ಬೆಳಕು ನೀಡಬೇಕಾಗಿದೆ.

ಒಟ್ಟಾರೆ ಕರ್ನಾಟಕದ ಪತ್ರಿಕೋದ್ಯಮದ ಹೆದ್ದೊರೆಗೆ, ಹೈದರಾಬಾದ ಕರ್ನಾಟಕವು ತನ್ನ ಅವಕಾಶಗಳ ಸೀಮಿತಿಯಲ್ಲಿ ಸುಮ್ಮನಿರದೆ, ತನ್ನ ಸತ್ತ್ವಗಳನ್ನೊಳಗೊಂಡ ತನ್ನ ತೊರೆಗಳನ್ನು ಸಂಗಮಿಸಿಕೊಂಡು ಒಂದಾಗಿದೆ. ಆದರೆ ಸಂಪೂರ್ಣವಾಗಿ, ಇದೆಲ್ಲ ಅಧಿಕೃತ ದಾಖಲೆಗಳಾದ ಗೆಜೆಟಿಯರ್ ಮೊದಲಾದ ಆಕರ ಗ್ರಂಥಗಳಲ್ಲಿ ದಾಖಲೆಯಾಗಬೇಕಾದ ಕಾರ್ಯವು ಇನ್ನೂ ನಡೆಯಬೇಕಾಗಿದೆ.

ಲೀಲಾ .ಬಿ*

# ಸಾಮಾಜಿಕ ಸುಧಾರಣೆಯಲ್ಲಿ ರಾಮಕೃಷ್ಣ-ವಿವೇಕಾನಂದ ಸಂಸ್ಥೆಯ ಪಾತ್ರ; ಮೈಸೂರಿಗೆ ಸಂಬಂಧಿಸಿದಂತೆ

೧೯ನೇ ಶತಮಾನದ ಸಾಮಾಜಿಕ-ಮತೀಯ ಚಳುವಳಿಯಲ್ಲಿ ಅತ್ಯಂತ ಯಶಸ್ವಿ ಪಾತ್ರ ವಹಿಸಿ, ಇಂದಿಗೂ ಮಾರ್ಗದರ್ಶಿಯಾಗಿರುವ ರಾಮಕೃಷ್ಣ-ವಿವೇಕಾನಂದ ಸಂಸ್ಥೆಯು ಥಿಯಾಸಫಿ ಮತ್ತು ಬ್ರಹ್ಮ ಸಮಾಜ ಹಲವು ಉದ್ದೇಶ ಹೊಂದಿತಾದರೂ, ತನ್ನದೇ ಆದ ಮೂಲ ಭೂತ[1] ತತ್ವವನ್ನು ಹೊಂದಿದೆ. ದಿವ್ಯಜ್ಞಾನ (Theology) ಮತ್ತು ಬ್ರಹ್ಮ ಸಮಾಜಕ್ಕೆ ಒಲಿದ ಹಲವಾರು ತರುಣರು ನಿರಾಶೆಗೊಳಗಾದಾಗ ಆಶಾಕಿರಣವಾದದ್ದು ವಿವೇಕಾನಂದರ ವಾಣಿ.

ರಾಮಕೃಷ್ಣ ಪರಮಹಂಸರ ಅತ್ಯಂತ ಪ್ರಿಯ ಶಿಷ್ಯರಾದ ವಿವೇಕಾನಂದರು ತಮ್ಮ ಗುರುಗಳ ನಿಧನದ ಬಳಿಕ (೧೮೮೬), ಇಂಡಿಯಾ ದೇಶವನ್ನು ಸುತ್ತಿ ಕರ್ನಾಟಕಕ್ಕೆ ಬಂದದ್ದು ೧೮೯೩ರಲ್ಲಿ. ಈ ವೇಳೆಗೆ ವಿವೇಕಾನಂದರು ದೇಶ ಪರ್ಯಟಣೆ ಮಾಡಿ, ಉನ್ನತ ಶಿಕ್ಷಣ ಹೊಂದಿ ಭಾರತದ ಪುರಾತತ್ವದ ಅರಿಮೆ ಉಳ್ಳವರಾಗಿದ್ದರು. ವಿವೇಕಾನಂದರ ಆಕಸ್ಮಿಕ ಆಗಮನವನ್ನು ಗಮನಿಸಿದ ದಿವಾನ್ ಶೇಷಾದ್ರಿ ಐಯ್ಯರ್, ಮಹಾರಾಜರಾದ ಚಾಮರಾಜ ಒಡೆಯರಿಗೆ ವಿವೇಕಾನಂದರನ್ನು ಪರಿಚಯಿಸಿದರು. ವಿವೇಕಾನಂದರು ಚಾಮರಾಜ ಒಡೆಯರೊಡನೆ ನಿಕಟ ಸ್ನೇಹ ಹೊಂದಿದರು. ಮತ್ತು ಅತ್ಯಂತ ಪ್ರೀತಿಗೆ ಪಾತ್ರರಾದರು. ವಿವೇಕಾನಂದರು ತಮ್ಮ ನೆನಪಿನ ಕಾಣಿಕೆಯಾಗಿ ತಮ್ಮ ವಾಣಿಯನ್ನು ರೆಕಾರ್ಡ ಮಾಡಲು ಅವಕಾಶ ಇತ್ತರು. ಆದರೆ ದುರ್ದೈವದಿಂದ ಅವರ ಕಂಠಶ್ರೀಯು ಲಭ್ಯವಿಲ್ಲದಂತಾಗಿದೆ.[2]

ವಿವೇಕಾನಂದರು ಸರ್ವಧರ್ಮ ಸಮ್ಮೇಳನಕ್ಕೆ ಭಾರತದ ಪ್ರತಿನಿಧಿಯಾಗಿ ಹೋದದ್ದು ೧೮೯೩. ನಾಲ್ಕು ವರ್ಷಕಾಲ ಹಿಂದೂ ಧರ್ಮ ಮತ್ತು ವೇದಾಂತವನ್ನು ಪಾಶ್ಚಾತ್ಯ ದೇಶಗಳಲ್ಲಿ ಪ್ರಸಾರ ಮಾಡಿದರು. ವಿವೇಕಾನಂದರ ಪಾಶ್ಚಾತ್ಯ ಪ್ರವಾಸ ಅವರಿಗೆ ಪಾಶ್ಚಾತ್ಯ ದೇಶದ ಒಳಿತು ಕೆಡುಕನ್ನು ತಿಳಿಸಿಕೊಟ್ಟಿತು. ಮಾತ್ರ

---

* ಫ್ಲಾಟ್ ನಂ. ೪೬, 'ಶ್ಯಾಮಲ' ೧ನೆಯ ಮಹಡಿ, ಮಾತುಂಗ, ಮುಂಬಯಿ–೪೦೦ ೦೧೯

1 Propagate truth whieh Ramakrishna Paramahamsa advocated for the benefit of humanity for their temporal, Spiritual and mental Progress

2 The life of Swami Vivekananda in two volumes 1912 p. 291 it is stated the Maharaja requested Swamiji that he shold have something as a remembrance to which Swamiji obliged and allowed them to record his Voice. But recently it has come to my notice, the record is not available in the Mysore Palace.

ಭೂಮಿಯ ಹಿರಿತನವು ಮಹತ್ವವಾಗಿ ಕಂಡರೂ, ಇಂಡಿಯಾದ ಬಡತನ, ಮೂಢತನ, ನಿರಕ್ಷತೆಯೇ ಎಲ್ಲಾ ಹೀನತೆಗೆ ಕಾರಣ ಎಂದು ತಿಳಿದರು.

ವಿವೇಕಾನಂದರು ಮೈಸೂರು ಮಹಾರಾಜ ಚಾಮರಾಜ ಒಡೆಯರ ಸಹಾಯವನ್ನು ಸ್ಮರಿಸಿದ್ದಾರೆ. 'ಎಕೋ' ಎಂಬ ಪತ್ರಿಕೆಯ ಸಂಪಾದಕರಿಗೆ ಉತ್ತರ ಕೊಡುತ್ತಾ (೩ ಡಿಸೆಂಬರ್ ೧೮೯೬) "ಮೈಸೂರು ಮಹಾರಾಜ, ಮತ್ತಿತರ ಸ್ನೇಹಿತರ ಸಹಾಯದಿಂದ ಚಿಕಾಗೊ ಪಟ್ಟಣದ ಸರ್ವಧರ್ಮ ಸಮ್ಮೇಳನಕ್ಕೆ ಹೋಗುವದಕ್ಕೆ ಸಾಧ್ಯವಾಯಿತು ಎಂದಿದ್ದಾರೆ ಮತ್ತು ೧೮೯೫-೧೮೯೬ಹೊರದೇಶದಲ್ಲಿ ಧರ್ಮ ಪ್ರಚಾರಕಾರ್ಯ ಮಾಡಲು ಸಾಧ್ಯವಾದದನ್ನು ತಿಳಿಸಿದ್ದಾರೆ[3] ವಿವೇಕಾನಂದರು ಚಿಕಾಗೊದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ಯಶಸ್ವಿಯಾಗಿ ಭಾಗಿಯಾಗಿ ವಾಪಸ್ಸಾದನಂತರ ಬೆಂಗಳೂರಿನಲ್ಲಿ ಒಂದು ಸಾರ್ವಜನಿಕ ಸಭೆಯು ಸೆಂಟ್ರಲ್ ಕಾಲೇಜಿನಲ್ಲಿ ನಡೆಯಿತು. ಈ ಸಭೆಯ ಅಧ್ಯಕ್ಷತೆಯನ್ನು ದಿವಾನ್ ಶೇಷಾದ್ರಿ ಐಯ್ಯರವರು ವಹಿಸಿದ್ದರು. ಬೆಂಗಳೂರಿನ ಗಣ್ಯನಾಗರೀಕರಾದ ಚಂಚಲರಾವ್ ಪಂತುಲು, ನ್ಯಾಯಮೂರ್ತಿ ರಾಮಚಂದ್ರ ಐಯ್ಯರ್, ಮೀನಾಕ್ಷಿಐಯರ್, ವಿ.ಯನ್. ನರಸಿಂಹ ಐಯಂಗಾರ್, ವಿ.ಪಿ. ಮಾಧವರಾವ್ ಮತ್ತು ಆರ್ಕಾಟ್ ಶ್ರೀನಿವಾಸಾಚಾರ್ಲು ಸಭೆಯಲ್ಲಿ ಹಾಜರಿದ್ದರು. ಜಿ.ಜಿ. ನರಸಿಂಹಾಚಾರ್ಯರು ಅಧ್ಯಕ್ಷಭಾಷಣ ಮಾಡಿ ವಿವೇಕಾನಂದರ ಹಿಂದೂಧರ್ಮ ಪ್ರಚಾರವನ್ನು ಪ್ರಶಂಸಿದರು. ಮತ್ತು ಡಾ|| ಬರೋಸ್ (ಸರ್ವಧರ್ಮ ಸಮ್ಮೇಳನದ ಅಧ್ಯಕ್ಷ) ರವರಿಗೆ ಇಲ್ಲಿನ ನಾಗರೀಕರ ಅನಿಸಿಕೆಯನ್ನೂ ಮತ್ತು ವಿವೇಕಾನಂದರಿಗೆ ಈ ಒಕ್ಕೂಟದ ಗೊತ್ತುವಳಿಯನ್ನು ಸಭಾಧ್ಯಕ್ಷರ ಸಹಿಯೊಂದಿಗೆ ಕಳುಹಿಸುವುದೆಂದು ಸಭೆಯು ನಿಶ್ಚಯಿಸಿತು[4].

೧೮೯೭ರಲ್ಲಿ ವಿವೇಕಾನಂದರು ರಾಮಕೃಷ್ಣರ ಶಿಷ್ಯರನ್ನೆಲ್ಲಾ ಒಂದು ಗೂಡಿಸಿ 'ರಾಮಕೃಷ್ಣಾಶ್ರಮ' ಸ್ಥಾಪಿಸಿದರು. ೧೮೯೯ ಬೇಲೂರು ಮಠವನ್ನು ಶುರು ಮಾಡಿದರು. [೧೯೦೯ರಲ್ಲಿ ರಾಮಕೃಷ್ಣ ಮಿಷನ್ ಸಂಸ್ಥೆ ೧೮೬೦ರ ಕಾಯ್ದೆ ಪ್ರಕಾರ ದಾಖಲೆಗೊಂಡಿತು] ವಿವೇಕಾನಂದರು (೧೯೦೨) ನಿಧನರಾದರು. ವೇದಾಂತ ಸೊಸೈಟಿಯ ಆಶ್ರಮದಲ್ಲಿ ಸಂತಾಪ ಸೂಚಕ ಸಭೆಯು, ಕಾವಲರಿರೋಡನಲ್ಲಿರುವ ನಾರಾಯಣಸ್ವಾಮಿ ಪಿಳ್ಳೆಯವರ ಮನೆಯಲ್ಲಿ ನಡೆಯಿತು. ಅಸಂಖ್ಯಾತ ಜನ ಹಾಜರಿದ್ದರು. ಹೀಗೆ ಹಾಜರಿದ್ದವರಲ್ಲಿ ಯುರೇಷಿಯನ್ನರು, ಸ್ಥಳೀಯ ಕ್ರಿಶ್ಚಿನ್ನರು, ಮತ್ತು ಮುಸಲ್ಮಾನರೂ ಇದ್ದರು. ಈ ಸಂದರ್ಭದಲ್ಲಿ ಜಿ.ಜಿ. ನರಸಿಂಹಾಚಾರ್‌ರವರನ್ನು ಸಭೆಯು ವೈಸ್ ಪ್ರೆಸಿಡೆಂಟ್ ಆಗಲು ಒಪ್ಪಿಸಿತು. ಸಭೆಯಲ್ಲಿ ಮಾತನಾಡಿದ ತ್ಯಾಗರಾಜ್ ಐಯರ್ ಮತ್ತು ಗಣಪತಿ ನಾಯಕರ್, ವಿವೇಕಾನಂದರನ್ನು ಸ್ಮರಿಸಿ ಅವರು ಹಾಕಿಕೊಟ್ಟಿರುವ ದಾರಿಯಲ್ಲಿ ನಡೆಯಬೇಕೆಂದರು. ವಿವೇಕಾನಂದರ ತರುವಾಯ ರಾಮಕೃಷ್ಣರ ಶಿಷ್ಯರು ಬೆಂಗಳೂರಿನಲ್ಲಿ ರಾಮಕೃಷ್ಣ ಮಠವನ್ನು ಸ್ಥಾಪಿಸಿದ್ದಲ್ಲದೆ ಇಡೀ ದಕ್ಷಿಣ ಭಾರತದಲ್ಲಿ ತಮ್ಮ ಸಂಸ್ಥೆಗೆ ಪ್ರಚಾರ ಸಿಗುವಂತೆ ಮಾಡಿದರು.

ವಿವೇಕಾನಂದರ ಆಶೀರ್ವಾದದಿಂದ ಹುಟ್ಟಿದ ವೇದಾಂತ ಸೊಸೈಟಿಯಬೆಂಗಳೂರಿನ ಅಲಸೂರಿನಲ್ಲಿತ್ತು. ಸೊಸೈಟಿಯ ಮೂಲ ಉದ್ದೇಶ ೧. ವೇದಾಂತವನ್ನು ಅಭ್ಯಸಿಸುವುದು ೨. ಚಿಕ್ಕ ಹೊತ್ತಿಗೆಗಳನ್ನು ಸುಲಭದ ಬೆಲೆಯಲ್ಲಿ ದೊರಕಿಸುವದು ೩. ಧರ್ಮಾತ್ಮ ಕೆಲಸ ಮಾಡುವದು ೪. ಸೊಸೈಟಿ ಉದ್ದೇಶ ಸಫಲತೆಗಾಗಿ ಶ್ರಮಿಸುವದಾಗಿತ್ತು. ವೇದಾಂತ ಸೊಸೈಟಿಯು ದಂಡಿನಲ್ಲಿ ಪಾಠ ಪ್ರವಚನ ನಡೆಸುತ್ತಿತು. ಮತ್ತು

---

3 Please see letters of Swami Vivekananda to His Highness Maharaja of Mysore from Chicago 23 June 1894 & Indian Missionaries Mission to England. Echo 3rd Dec 1896

4 Bangalore Spectator, 27 Septmber, 1894 1896, ರಲ್ಲಿ ಟೌನ್‌ಹಾಲ್‌ನಲ್ಲಿ ೨೫ ಡಿಸಂಬರ್ ೧೮೯೬ ಸಾರ್ವಜನಿಕರ ಸಭೆಯೊಂದು ಸೇರಿ ವಿವೇಕಾನಂದರನ್ನು ಮೈಸೂರಿಗೆ ಬರಮಾಡಿಕೊಳ್ಳಬೇಕೆಂದೂ, ಮತ್ತು ಇದಕ್ಕೆ ಎಮ್. ವೆಂಕಟಕೃಷ್ಣಯ್ಯನವರು ಅಧ್ಯಕ್ಷರಾಗಬೇಕೆಂದೂ, ಮತ್ತು ವಿವೇಕಾನಂದಸ್ವಾಮಿಗಳಿಗೆ ರೈಲು ಖರ್ಚು ಇತ್ಯಾದಿ ಸೌಕರ್ಯ ಒದಗಿಸಬೇಕೆಂದೂ ತೀರ್ಮಾನಿಸಿತು.

ಶ್ರೀರಾಮಕೃಷ್ಣರ ಹುಟ್ಟಿದ ಹಬ್ಬವನ್ನು ಆಚರಿಸುತ್ತಿತ್ತು. ಜುಲೈ ೧೯೦೩ರಲ್ಲಿ ರಾಮಕೃಷ್ಣರ ಶಿಷ್ಯರಾದ ರಾಮಕೃಷ್ಣಾನಂದರನ್ನು[5] ಕಂಟೋನ್ಮೆಂಟ್ ಸ್ಟೇಷನ್ನಿನಲ್ಲಿ ಸ್ವಾಗತಿಸಿತು. ಸ್ವಾಮಿಗಳು ಬೆಂಗಳೂರಿನಲ್ಲಿದ್ದಾಗ ಬೆಂಗಳೂರಿನ ಸುತ್ತ ಮುತ್ತ ವೇದಾಂತ ಭಾಷಣವಿತ್ತರು. ಮೈಸೂರು ಮಹಾರಾಜರಾದ ಕೃಷ್ಣರಾಜ ಒಡೆಯರ್ ರವರನ್ನು ಸಂದರ್ಶಿಸಿದರು. ರಾಮಕೃಷ್ಣಾನಂದರು ಬೆಂಗಳೂರಿಗೆ ಭೇಟಿ ಇತ್ತರು. ೧೯೦೪ರಲ್ಲಿ ತಮ್ಮ ಶಿಷ್ಯರ ಇಚ್ಛಾನುಸಾರ ರಾಮಕೃಷ್ಣಾಶ್ರಮವನ್ನು ಬಾಡಿಗೆ ಮನೆಯಲ್ಲಿ ಸ್ಥಾಪಿಸಿದರು. ಆತ್ಮಾನಂದರು ಬೇಲೂರು ಮಠದ ಪರವಾಗಿ ಬೆಂಗಳೂರಿಗೆ ಬಂದು ೧೯೦೮ರ ವರೆಗೆ ವೇದಾಂತ ತರಗತಿಗಳನ್ನು ನಡೆಸುತ್ತಿದ್ದರು. ಇವರೇ ವಿವೇಕಾನಂದ ಸೊಸೈಟಿಯ ಸಂಸ್ಥಾಪಕರು. ಕೆಲವು ಕಾಲದ ಬಳಿಕ ವಿವೇಕಾನಂದ ಸೊಸೈಟಿ ಮತ್ತು ವೇದಾಂತ ಸೊಸೈಟಿ ಒಂದು ಗೂಡಿ 'ರಾಮಕೃಷ್ಣ' ಮಿಷನ್ ಎಂದಾಯಿತು.

ಚಾಮರಾಜಪೇಟೆಯಲ್ಲಿ ೧೯೦೬ರಲ್ಲಿ ಮೊದಲನೆಯ ರಾಮಕೃಷ್ಣಾಶ್ರಮ ಸ್ಥಾಪಿತವಾಗಿ ಆತ್ಮಾನಂದರು ಇದಕ್ಕೆ ಮುಖ್ಯಸ್ಥರಾದರು. ೧೯೦೬ರಲ್ಲಿ ಬೋಧಾನಂದರು ಇದರ ಮೇಲ್ವಿಚಾರಣೆಯನ್ನು ವಹಿಸಿಕೊಂಡರು ಬೋಧಾನಂದರು ನ್ಯೂಯಾರ್ಕ ರಾಮಕೃಷ್ಣ ಮಠಕ್ಕೆ ಹೋದಾಗ ವಿಮಲಾನಂದರು ಬೆಂಗಳೂರಿನ ಆಶ್ರಮಕ್ಕೆ ಬಂದು, ಆಶ್ರಮಕ್ಕೆ ಸ್ಥಿರವಾದ ಜಾಗವನ್ನು ಹೊಂದುವ ಪ್ರಯತ್ನ ಮಾಡಿದರು. ಬುಲ್‌ಟೆಂಪಲ್ ರಸ್ತೆಯ ಬಸವನಗುಡಿಯ ಈಗಿನ ರಾಮಕೃಷ್ಣಾಶ್ರಮ ಆರಂಭಿಸಿದ್ದು ಜನವರಿ ೧೯೦೯ರಲ್ಲಿ ಸ್ವಾಮಿ ಬ್ರಹ್ಮಾನಂದರಿಂದ[6] ರಾಮಕೃಷ್ಣ–ವಿವೇಕಾನಂದರ ಅಪಾರ ಶಿಷ್ಯವೃಂದ ಬೆಂಗಳೂರಿನಲ್ಲಿತ್ತು. ರಾಮಕೃಷ್ಣರ ನಿಕಟ ಶಿಷ್ಯರಾದ ಅಬೇಧಾನಂದರು ಬೆಂಗಳೂರಿಗೆ ಬಂದಾಗ (೧೯೦೬–೧೯೦೭) ಅವರನ್ನು ಬರಮಾಡಿಕೊಳ್ಳಲು ಮುಂದಾದವರಲ್ಲಿ ಎಮ್. ಎ. ನಾರಾಯಣ ಐಯಂಗಾರ್, ಮುಖ್ಯರು. ಇವರು ಯುವರಾಜರಿಗೆ ಗುರುಗಳಾಗಿ, ಎಕ್ಸೈಸ್ ಕಮಿಷನರ್ ಆಗಿದ್ದರು. ಇವರು ಶ್ರೀನಿವಾಸಾನಂದ ಎಂಬ ಹೆಸರಿನಲ್ಲಿ ಸನ್ಯಾಸವನ್ನು ಸ್ವೀಕರಿಸಿದರು.

ಅನೇಕ ಮಹನೀಯರು ರಾಮಕೃಷ್ಣಾಶ್ರಮದ ಸಂಪರ್ಕಕ್ಕೆ ಬಂದು ರಾಮಕೃಷ್ಣರ ತತ್ವಬೋಧೆ ಮುಂತಾದ ಕಾರ್ಯಗಳನ್ನು ಕೈಗೊಳ್ಳುತಿದ್ದರು. ಇವರಲ್ಲಿ ಮುಖ್ಯವಾಗಿ ವಕೀಲರಾಗಿದ್ದ ಎಂ.ಜಿ. ವರದಾಚಾರ್ಯರು ವಿವೇಕಾನಂದರ ಶಿಷ್ಯರಾದ ಹಾಗೂ ಸಂಸ್ಕೃತ ಪಂಡಿತರಾಗಿದ್ದ ಜಿ.ಜಿ. ನರಸಿಂಹಾಚಾರ್ಯರು ಮತ್ತು ವಿವೇಕಾನಂದರ ಆದೇಶದ ಮೇಲೆ ಬ್ರಹ್ಮವಾದಿನ್ ಎಂಬ ಉತ್ತಮವಾದ ಪತ್ರಿಕೆಯನ್ನು ಸ್ವಲ್ಪಕಾಲ ನಡೆಸಿದ ಅಳಸಿಂಗ ಪೆರುಮಾಳ್ ಮುಖ್ಯರಾದವರು* ಜಿ.ಜಿ. ನರಸಿಂಹಾಚಾರ್ಯರಿಗೆ ಅತ್ಯಂತ ದೇಶಾಭಿಮಾನ ಮತ್ತು ವಿದ್ವತ್ತು ಇದ್ದುದರಿಂದ ಬ್ರಹ್ಮವಾದಿನ್ ಪತ್ರಿಕೆಯಲ್ಲಿ ಉತ್ಸಾಹವಿತ್ತು. ಬ್ರಹ್ಮವಾದಿನ್ ಪತ್ರಿಕೆ ಬಹುಕಾಲ ನಡೆಯದೆ ವಿವೇಕಾನಂದರ ಜೀವಿತಕಾಲದಲ್ಲೆ ಮುಚ್ಚಲ್ಪಟಿತು.

ವಿವೇಕಾನಂದರ ಮತ್ತೊಬ್ಬ ಶಿಷ್ಯರು ಸೋಮಾನಂದರು. ಸೋಮಾನಂದರು ಬೆಂಗಳೂರಿನವರು. ವಿವೇಕಾನಂದರನ್ನು ನೋಡಲೇಬೇಕೆಂದು ಮಹತ್ವಾ

5 Shankari Prasad Basu & Sunil Bihari Ghosh ed. Vivekananda in Indian News Papers. p. 590. ವೇದಾಂತ ಸೊಸೈಟಿ ಅಧ್ಯಕ್ಷರಾಗಿದ್ದವರು ಎಮ್.ಎ. ನಾರಾಯಣ ಐಯಂಗಾರ್ ಮತ್ತು ಉಪಾಧ್ಯಕ್ಷರು : ಜಿ.ಜಿ. ನರಸಿಂಹಚಾರ್ಯ

6 ಸಿಸ್ಟರ್ ದೇವಮಾತರನ್ನು ಮದ್ರಾಸಿನಿಂದ ಕರೆಸಿ ಮಠದ ಕಟ್ಟಡಕ್ಕೋಸ್ಕರ ಪ್ರತಿದಿನ ಹಲವಾರು ಗಂಟೆಗಳ ಕಾಲ ಮನೆ ಮನೆಗೂ ಹೋಗಿ ಮಠಕ್ಕೋಸ್ಕರ ಯಾಚಿಸುತ್ತಿದ್ದುದುಂಟು. ಹಲವಾರು ಕಾಲ ನಿರಾಶೆ ಹೊಂದಿದರೂ ಪ್ರಯತ್ನ ಬಿಡದೆ ಶ್ರಮಿಸಿದ್ದರು.

* ಅಳಸಿಂಗ ಪೆರುಮಾಳರು ಮೂಲತ: ಮೈಸೂರಿನವರು. ತಂದೆ ನರಸಿಂಹಾಚಾರ್ಯರು ಚಿಕ್ಕಮಗಳೂರಿನಲ್ಲಿ ಗುಮಾಸ್ತರಾಗಿದ್ದರು. ತಮ್ಮ ಕುಟುಂಬ ಮದ್ರಾಸಿಗೆ ಹೋದಾಗ, ಅಳಸಿಂಗರು ೧೮೮೪ರಲ್ಲಿ ಪದವೀಧರರಾಗಿ ಪಚ್ಚೆಯಪ್ಪ ಸ್ಕೂಲಿನಲ್ಲಿ ಶಿಕ್ಷಕರಾಗಿ ಮುಂದೆ ಮದ್ರಾಸಿನ ಪಚಿಯಪ್ಪ ಕಾಲೇಜಿನಲ್ಲಿ ಉಪನ್ಯಾಸಕಾರರಾಗಿದ್ದರು. ಮದ್ರಾಸಿಗೆ ವಿವೇಕಾನಂದರು ಆಗಮಿಸಿದಾಗ ವಿಶೇಷವಾದ ಕೃಪೆಗೆ ಪಾತ್ರರಾದರು.

ಕಾಂಕ್ಷೆಯನ್ನು ಹೊಂದಿದ ಸೋಮಾನಂದರು ಮದ್ರಾಸಿಗೆ ಹೋದರು. ಆಗ ವಿವೇಕಾನಂದರು ಕಲ್ಕತ್ತಾಗೆ ತೆರಳಿದ್ದರು. ಇವರು ಕಲ್ಕತ್ತಾಗೆ ಹೋದಾಗ, ವಿವೇಕಾನಂದರು ಕಾಶ್ಮೀರಕ್ಕೆ ಹೋಗಿದ್ದಾರೆಂದು ತಿಳಿಯ ಬಂತು. ಇವರು ಪಟ್ಟು ಬಿಡದೆ ಕಾಶ್ಮೀರಕ್ಕೆ ಹೋದಾಗ ವಿವೇಕಾನಂದರು ಹಿಮಾಲಯಕ್ಕೆ ತೆರಳಿದ್ದರು. ಕಾಲ್ನಡಿಗೆಯಲ್ಲಿ ಹಿಮಾಲಯವನ್ನು ತಲಪಿ ತಮ್ಮ ಗುರುವನ್ನು ಕಂಡು ಸನ್ಯಾಸವನ್ನು ಪಡೆದರು. ಮತ್ತು ಬೆಂಗಳೂರಿಗೆ ಬಂದು ದಲಿತರ ಏಳ್ಗೆಗಾಗಿ ಶ್ರಮಿಸಿದರು. ನೇಯ್ಗೆಯವರ ಶ್ರೇಣಿಯಲ್ಲಿ ಒಂದು ಚಿಕ್ಕ ದೇವಸ್ಥಾನ ದಲ್ಲಿ ಸರ್ಕಾರವು ಸೋಮಾನಂದರಿಗೆ ವಸತಿಯನ್ನು ಕಲ್ಪಿಸಿಕೊಟ್ಟಿತ್ತು. ಮೈಸೂರು ಸರ್ಕಾರವು ೧೯೧೧ರಲ್ಲಿ ಸೋಮಾನಂದರನ್ನು ಬೆಂಗಳೂರಿನ ಸೆಂಟ್ರಲ್ ಜೈಲಿನ ಕೈದಿಗಳಿಗೆ ತರಗತಿಯನ್ನು ನಡೆಸಬೇಕೆಂದು ಕೋರಿತು. ಕನ್ನಡ ಮತ್ತು ತೆಲುಗು ಭಾಷೆಗಳ ಪರಿಚಯವಿದ್ದ ಸೋಮಾನಂದರು ಪ್ರತಿ ಭಾನುವಾರ ಬೆಳಗ್ಗೆ ಭಾಗವತ ರಾಮಾಯಣ ಮತ್ತು ಮಹಾಭಾರತ ಪುರಾಣದಿಂದ ಜೈಲಿನ ಕೈದಿಗಳಿಗೆ ಉಪದೇಶ ಮಾಡುತ್ತಿದ್ದರು. ಮಿಸ್ ಮಕ್ಲೀಡರ ಪ್ರೇರಣೆಯಂತೆ ಶ್ರೀರಾಮ ದೇವಾಲಯ ವನ್ನು ಗುಡಿಮೇಯ ಪೇಟೆಯಲ್ಲಿ ಕಟ್ಟಲ್ಪಟ್ಟು ಜೈಲಿನಿಂದ ಬಿಡಲ್ಪಟ್ಟ ಕೈದಿಗಳು ಸೋಮಾನಂದರೊಡಗೂಡಿ ಇಲ್ಲಿ ಭಜನೆ ನಡೆಸುತ್ತಿದ್ದರು. ಸೋಮಾನಂದರು ೨೫ ವರುಷಗಳ ಕಾಲಕ್ಕಿಂತ ಹೆಚ್ಚಾಗಿ ಕೈದಿಗಳ ಸೇವೆಯಲ್ಲಿ ತೊಡಗಿ, ಅವರನ್ನು ಸತ್ಪ್ರಜೆಗಳನ್ನಾಗಿ ಮಾಡಲು ಶ್ರಮಿ ಸಿದರು. ರಾಮಕೃಷ್ಣಾಶ್ರಮಕ್ಕೆ ರಾಜಾಶ್ರಯವಿದ್ದು, ಯುವರಾಜರು ಬೆಂಗಳೂರಿನ ರಾಮಕೃಷ್ಣಾಶ್ರಮಕ್ಕೆ ವಿವೇಕಾನಂದರ ಹುಟ್ಟಿದ ಹಬ್ಬಕ್ಕೆ ಪ್ರತಿ ವರ್ಷ ಧನ ಸಹಾಯ ಮಾಡಿರುತ್ತಾರೆ. ೧೯೧೧ರಲ್ಲಿ ಶಾರದ ದೇವಿ ಯವರು ಬೆಂಗಳೂರಿನ ರಾಮಕೃಷ್ಣ ಮಠದಲ್ಲಿ ಮೂರು ದಿವಸ ತಂಗಿದ್ದು ಹಲವರಿಗೆ ಸನ್ಯಾಸ ದೀಕ್ಷೆ ಕೊಟ್ಟರು. ಮತ್ತು ಗವಿಪುರದ ಗಂಗಾಧರೇಶ್ವರ ದೇವಸ್ಥಾನಕ್ಕೆ. ಭೇಟಿ ಇತ್ತರು.

೧೯೪೩ರಲ್ಲಿ ಬೆಂಗಳೂರಿನಲ್ಲಿ ರಾಮಕೃಷ್ಣ ವಿದ್ಯಾರ್ಥಿ ಸಂಘದಲ್ಲಿ ಬಡ ಹುಡುಗರಿಗಾಗಿ ವಿದ್ಯಾರ್ಥಿ ನಿಲಯವೊಂದು ಸ್ಥಾಪಿಸಿದೆ. ಇದು ವಿಶೇಷವಾಗಿ ಸುತ್ತಮುತ್ತಲಿರುವ ಹಳ್ಳಿಯಲ್ಲಿ ವಾಸಿಸುವ ಹುಡುಗರಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ವಿಶೇಷ ಉತ್ತೇಜನ ಕೊಟ್ಟಿತ್ತಲ್ಲದೆ ಊಟ, ವಸತಿ ಏರ್ಪಾಡು ಮಾಡಿದೆ. ಹಲವಾರು ಸಮಯ ಸ್ವಾಮಿ ತ್ಯಾಗಿಶಾನಂದರು ತಾವೇ ಅಡುಗೆ ಮಾಡಿ ವಿದ್ಯಾರ್ಥಿಗಳನ್ನು ಮೇಲ್ವಿಚಾರಣೆ ಯನ್ನು ನೋಡಿಕೊಂಡಿದ್ದು ಉಂಟು.

ಬೆಂಗಳೂರಿನ ೩೦ ಕಿಲೋಮೀಟರ್ ಸುತ್ತ ಇರುವ ಹಿಂದುಳಿದ ಹಳ್ಳಿಗಳಲ್ಲಿ ಎರಡನ್ನು ಆರಿಸಿ (ರಾಗಿಹಳ್ಳಿ, ಶಿವನಹಳ್ಳಿ) ಈ ಎರಡೂ ಹಳ್ಳಿಗಳಲ್ಲಿ ಸಂಚಾರಿ ಆಸ್ಪತ್ರೆ, ಔಷಧ ಸೌಲಭ್ಯ ಪ್ರಾಥಮಿಕ ಶಾಲೆ, ವಯಸ್ಕರ ಶಾಲೆ, ರೈತರಿಗೆ ತಿಳುವಳಿಕೆ ಮುಂತಾದ ಕಾರ್ಯಗಳನ್ನು ಹಮ್ಮಿಕೊಂಡಿದೆ.

ಮೈಸೂರಿನ ರಾಮಕೃಷ್ಣಾಶ್ರಮವನ್ನು ಶಾರದಾ ದೇವಿಯವರ ಶಿಷ್ಯರಾದ ವಾಸಾನಂದರು ೧೯೨೪ರಲ್ಲಿ ಆರಂಭಿಸಿದರು. ಸಿದ್ಧೇಶ್ವರಾನಂದರು ಪ್ರಥಮ ಅಧ್ಯಕ್ಷರು. ೧೯೩೦ರಲ್ಲಿ ಒಂಟಿಕೊಪ್ಪಲಿನಲ್ಲಿ ನಿವೇಶನ ವನ್ನು ಮಿರ್ಜಾಇಸ್ಮೇಲ್‌ರವರು ದಾನವಾಗಿ ಕೊಟ್ಟರು. ಚಿತ್ರಾನಂದರ ಪ್ರೋತ್ಸಾಹದಿಂದ ಭಾರತೀಯ ಪರಂಪರೆ ಯನ್ನು ಉಳಿಸಿಕೊಳ್ಳಲು ೧೯೩೨ರಲ್ಲಿ ಐದು ವಿದ್ಯಾರ್ಥಿ ಗಳಿಂದ ಆರಂಭವಾದ ಸಂಸ್ಥೆ, ಬಿನುಮಯ್ಯ, ಹೆಚ್.ಸಿ. ದಾಸಪ್ಪ ಇವರಿಂದ ಪ್ರೋತ್ಸಾಹಿಸಲ್ಪಟ್ಟಿತು. ೧೯೪೧ರಲ್ಲಿ ಶಾಂಭವಾನಂದ ಅಧ್ಯಕ್ಷರಾಗಿದ್ದಾಗ ಸ್ಟಡಿಸರ್ಕಲ್ ಆರಂಭಿಸಿದರು. ೧೯೪೩ರಲ್ಲಿ ಸೋಮನಾಥಾನಂದರಿಂದ ಸಮಗ್ರ ವಿವೇಕಾನಂದ ಗ್ರಂಥ ಪ್ರಕಟಣೆ ಕೈಗೊಂಡಿತು. ಇನ್ನೂ ಅನೇಕಾನೇಕ ಅಧ್ಯಾತ್ಮಿಕ ಕಿರುಹೊತ್ತಿಗೆಗಳನ್ನು ತರುತ್ತಿದೆ. ಮೈಸೂರಿನಲ್ಲಿರುವ ಮತ್ತೊಂದು ಆಕರ್ಷಣೆ "Ramarishna Institute of Moral and Spiritual Education," (RIMSE) ೧೯೭೭-೭೮ ಇದು ಇಂಡಿಯಾದಲ್ಲೆ ಪ್ರಪ್ರಥಮವಾದ ಅಧ್ಯಾತ್ಮಿಕ ವಾದ ವಿದ್ಯಾಕೇಂದ್ರ ಈ ಸಂಸ್ಥೆಯು ಮೈಸೂರಿನ ಯಾದವಗಿರಿಯಲ್ಲಿದ್ದು ಸಾಮಾನ್ಯರಿಗೂ ಮತ್ತು ಉಪಾಧ್ಯಾಯರಿಗೂ ನೈತಿಕ ಮತ್ತು ಅಧ್ಯಾತ್ಮಿಕವಾದ ತರಗತಿಯನ್ನು ನಡೆಸಲಾಗುತ್ತಿದೆ. ಇದು ವಸತಿ ಸ್ಕೂಲಾಗಿದ್ದು ಲೈಬ್ರರಿ, ದೃಕ್‌ಶ್ರವಣ ವಿದ್ಯಾಭ್ಯಾಸ, ಪ್ರಾರ್ಥನಾ ಮಂದಿರವನ್ನು ಒಳಗೊಂಡಿದೆ. ಇದಲ್ಲದೆ

ಪ್ರತ್ಯೇಕವಾದ ವಸ್ತು ಸಂಗ್ರಹಾಲಯವಿದ್ದು ಬೋಧನಾ ರೂಪದಲ್ಲಿ ಸರ್ವಧರ್ಮ ಸಮ್ಮೇಳನವನ್ನು ಈ ವಸ್ತು ಸಂಗ್ರಹಾಲಯದಲ್ಲಿ ನೋಡಬಹುದಾಗಿದೆ. ಸಂಸ್ಥೆಗೆ ತನ್ನದೇ ಆದ 'ಪ್ರಭೋದ' ಎಂಬ ವಾರ್ಷಿಕ ಪತ್ರಿಕೆಯಿದೆ.

ಮಂಗಳೂರಿನಲ್ಲಿ ರಾಮಕೃಷ್ಣ ಸಂಸ್ಥೆಯು ೧೯೪೭ರಲ್ಲಿ ಡಾ|| ಕೇಶವ ಪೈರವರ ಮುಂದಾಳತ್ವದಿಂದ ಆರಂಭಿಸಿತು. ೭ ಎಕರೆ ಜಾಗವನ್ನು ಮತ್ತು ತನ್ನದೇ ಆದ ಸ್ವಂತ ಕಟ್ಟಡವನ್ನೂ ಹೊಂದಿದೆ. ಇದಕ್ಕೆ ಹಿಂದೂ ಸೇವಾ ಸಂಘವು ಸಹಾಯವನ್ನು ನೀಡಿತು. ವಿದ್ಯಾರ್ಥಿ ನಿಲಯ ಮತ್ತು ಆಸ್ಪತ್ರೆಯನ್ನು (೧೯೫೫) ಹೊಂದಿದೆ. ಇದರಿಂದ ಸುಮಾರು (೧೯೫೫) ೫೪ ಜನ ವಿದ್ಯಾರ್ಥಿಗಳು ಸಹಾಯ ಹೊಂದಿದ್ದಾರೆ. ಸುತ್ತಮುತ್ತಲಿರುವ ಹಳ್ಳಿಯಿಂದ ಬರುವ ವಿದ್ಯಾರ್ಥಿಗಳಿಗೆ ವಿಶೇಷ ಸಹಾಯವಾಗಿದೆ.

ಸ್ವಾಮಿ ನಿರ್ಮಲಾನಂದರು ಕೊಡಗಿಗೆ ದರ್ಶನ ಕೊಟ್ಟಾಗ ಡಾ|| ಅಂಚಿಯಂಡ ಕಾಳಮ್ಮಯ್ಯನವರು ಮತ್ತಿತರು ಸ್ವಾಮಿಯವರಿಂದ ಪ್ರೇರೇಪಿತರಾಗಿ, ಹಾಗೂ ಅಂಚಿಯಂಡ ಕಾಳಮ್ಮಯ್ಯನವರು ೩ ಎಕರೆ ನೆಲವನ್ನು ದಾನವಾಗಿ ಕೊಟ್ಟದ್ದರಿಂದ ಪೊನ್ನಂಪೇಟೆಯಲ್ಲಿ ೧೯೨೭ರಲ್ಲಿ ನಿರ್ಮಲಾನಂದರು ಕೊಡಗಿನಲ್ಲಿ ರಾಮಕೃಷ್ಣಾಶ್ರಮವನ್ನು ಸ್ಥಾಪಿಸಿದರು. ನಿರ್ಮಲಾನಂದರ ಶಿಷ್ಯರಾದ ಸ್ವಾಮಿ ಶಾಂಭವಾನಂದ ಅವರು ನೇಮಕವಾದರು. ವಿದ್ಯಾರ್ಥಿನಿಲಯವೊಂದನ್ನು ಸ್ಥಾಪಿಸಿ ಆ ಕಾಲದಲ್ಲಿ ಭೀಕರವಾಗಿ ಹರಡಿದ್ದ ಮಲೇರಿಯಾ ಪಿಡುಗಿಗೆ ಸಮಾಜ ಪರಿಹಾರವಾದ ಸೂತ್ರವನ್ನು ಶಿಕ್ಷಣ ಕ್ರಮವಾಗಿ ಪ್ರಸಾರ ಮಾಡಿ ಕೊಡಗಿನಲೆಲ್ಲಾ ಸಂಚರಿಸಿದರು.

ಇದೇ ಸಮಯದಲ್ಲಿ ಕೊಡಗಿನ ಗುಡ್ಡಗಾಡಿನ ಜೇನು ಗೂಡುಗಳು ಬಹುಮುಂದಿಗೆ ಕೃಷಿಲಾಭದಾಯಕವಾಗಬಹುದು ಎಂಬ ಕಲ್ಪನೆ ಇಲ್ಲದಿದ್ದಾಗ, ಪಾಶ್ಚಿಮಾತ್ಯ ದೇಶದಲ್ಲಿ ಜೇನು ಕೃಷಿ ಉತ್ಪನ್ನ ಹೇಗೆ ಮಾಡುತ್ತಾರೆಂಬುದನ್ನು ಅಭ್ಯಾಸಿಸಿ ಕೊಡಗಿನಲ್ಲಿ ಪ್ರಾಯೋಗಿಕ ಕೇಂದ್ರವನ್ನು ಸ್ಥಾಪಿಸಿದರು. ಸ್ವಾಮಿಗಳು **ಜೇನುಮೇಣ ಉತ್ಪಾದಕರ ಸಂಘ** ಸಂಸ್ಥೆಯನ್ನು ಆರಂಭಿಸಿದರು. **ಹೋಮಿಯೋಪತಿ**, **ಅಲೋಪತಿ** ವೈದ್ಯಕೀಯ ಚಿಕಿತ್ಸಾಲಯ ಆರಂಭಿಸಿದ್ದು ಸ್ವಾಮಿ ವಿಶ್ವಂಭರಾನಂದರು. ಪೊನ್ನಪೇಟೆ ಸುತ್ತ ಮತ್ತು ಇರುವ ಹಳ್ಳಿಗಳಿಗೆ ಇದರಿಂದ ಸಹಾಯವಾಯ್ತು. ಆಶ್ರಮಕ್ಕೆ ಮಹಾತ್ಮಗಾಂಧಿ ವಿನೋಬಾ ಭಾವೆ, ಮುಂತಾದವರು ಆಶ್ರಮಕ್ಕೆ ಭೇಟಿ ಇತ್ತಿದ್ದಾರೆ.

ಸಾಮಾಜಿಕ ಕ್ರಾಂತಿಯನ್ನು ಮಾಡಲು ಹೊರಟ ರಾಮಕೃಷ್ಣ-ವಿವೇಕಾನಂದರು ತಮ್ಮ ಕಾರ್ಯ ಸಾಧನೆಯಲ್ಲಿ, ಯಶಸ್ವಿಯಾದರೆ ಎಂಬ ಪ್ರಶ್ನೆ ನಮ್ಮ ಮುಂದಿದೆ. ಸ್ವಾಮಿ ರಾಮಕೃಷ್ಣ-ವಿವೇಕಾನಂದರ ವಾಣಿ ಇಂಡಿಯಾದ ಮೂಲ ಭೂತ ಪ್ರಶ್ನೆಯಾದ ಬಡತನ, ನಿರಕ್ಷರತೆಯನ್ನು ಅತಿ ಸೂಕ್ಷ್ಮವಾಗಿ ಅವಲೋಕಿಸಿದಾಗ, ವಿವೇಕಾನಂದರು ಈ ಮೂಲ ಭೂತ ಪ್ರಶ್ನೆಗಳಿಗೆ ಸ್ವಲ್ಪ ಮಟ್ಟಿಗಾದರೂ ಕೊಟ್ಟಿರುವುದು ನಿಜ. ಯಾಕೆಂದರೆ ವಿವೇಕಾನಂದರ (೧೯೦೨) ನಿಧನದಿಂದ ಇಂದಿನವರೆಗೂ, ತನ್ನದೇ ಆದ ರೀತಿಯಲ್ಲಿ ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ, ಧರ್ಮ ಪ್ರಚಾರದ ಮೂಲಕ ನೈತಿಕ, ಸಾಮಾಜಿಕ ಜಾಗೃತಿಯನ್ನು ಉಂಟು ಮಾಡುತ್ತಾ ಕಾಲಕ್ಕೆ ತಕ್ಕಂತೆ ತಮ್ಮನ್ನು ತೊಡಗಿಸಿಕೊಂಡು ಬೇಲೂರು ಮಠದಿಂದ ಮೈಸೂರಿನಲ್ಲಿರುವ ಮಠದವರೆಗೆ, ಕರ್ತವ್ಯ ಪ್ರಜ್ಞರಾಗಿರುವ ಹಲವಾರು ಸ್ವಾಮಿಜಿಯವರನ್ನು ಸಂದರ್ಶಿಸಿದಾಗ ಇದರ ಅರಿವಾಗುವುದು.

ಸೂರ್ಯನಾಥ ಕಾಮತ್*

# ಮೈಸೂರಿನಲ್ಲಿ ಮಹಿಳಾ ಪುರೋಗಮನದ ಹರಿಕಾರ : ಅಂಬಿಲ್ ನರಸಿಂಹಯ್ಯಂಗಾರ್

ಮೈಸೂರು ಸಂಸ್ಥಾನವು ಮಹಿಳಾ ಶಿಕ್ಷಣದಲ್ಲಿ ಬಹಳ ಹಿಂದುಳಿದಿತ್ತು. ೧೮೮೦-೮೧ರಲ್ಲಿ ರಾಜ್ಯದಲ್ಲಿದ್ದ ೯೦೭ ಪ್ರಾಥಮಿಕ ಶಾಲೆಗಳಲ್ಲಿ ೩೮,೨೯೬ ವಿದ್ಯಾರ್ಥಿಗಳಿದ್ದು ಈ ಪೈಕಿ ೩,೦೭೭ ಮಾತ್ರ ವಿದ್ಯಾರ್ಥಿನಿಯರಿದ್ದರು. ಹತ್ತು ವರ್ಷಗಳ ನಂತರ ೧೮೯೦-೯೧ರಲ್ಲಿ ಶಾಲೆಗಳ ಸಂಖ್ಯೆ ೧,೩೦೬ ಆದಾಗ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ೪೭,೦೯೩ ಆಗಿ ಇವರಲ್ಲಿ ವಿದ್ಯಾರ್ಥಿನಿಯರು ೬೮೩.೨ ಇದ್ದರು. ೧೮೮೦-೮೧ರಲ್ಲಿ ಶೇಕಡಾ ೭ರಷ್ಟು ಇದ್ದ ಈ ಬಾಲಕಿಯರ ಪ್ರಮಾಣ ೧೮೯೦-೯೧ರಲ್ಲಿ ಶೇಕಡಾ ೧೩ರಷ್ಟು ಆಯಿತು. ಕಾಲ ಕಳೆದಂತೆ ಜನಜಾಗೃತಿ ಹೆಚ್ಚಿ ಮಹಿಳಾ ಶಿಕ್ಷಣದ ಬಗ್ಗೆ ಮಹಿಳೆಯರಲ್ಲಿ ಒಲವು ಬೆಳೆಯಿತೆಂಬುದು ನಿಜವಾದರೂ ಇಂಥ ಬದಲಾವಣೆಗಳಿಗೆ, ಜನಜಾಗೃತಿಗೆ ದುಡಿದವರಲ್ಲಿ ಮೈಸೂರಿನ ಅರಮನೆ ಬಕ್ಷಿ ಅಂಬಿಲ್ ನರಸಿಂಹಯ್ಯಂಗಾರರು ವಹಿಸಿದ ಪಾತ್ರ ಗಮನಾರ್ಹ. ಮಹಾರಾಷ್ಟ್ರದಲ್ಲಿ ಭಾರತರತ್ನ ಡಿ.ಕೆ. ಕರ್ವೆಯವರು ಹೇಗೋ ಹಾಗೆ ಕರ್ನಾಟಕದಲ್ಲಿ ಅಂಬಿಲ್ ನರಸಿಂಹಯ್ಯಂಗಾರರು. ತಾತ್ತ್ವಿಕವಾಗಿ ಅವರಿಗೆ ಪ್ರೇರಣೆ ದೊರೆತುದು ಮಹಾರಾಷ್ಟ್ರದ ಗಣ್ಯ ಸಮಾಜ ಸುಧಾರಕರಾದ ರಾನಡೆ, ಕರ್ವೆಯವರಿಂದಲೇ. ಈ ವಿಚಾರ ನಮಗೆ ಮಾಹಿತಿ ನೀಡುವವರು ಸಮಕಾಲೀನ ಖ್ಯಾತ ದಾಖಲೆಕಾರರಾದ ಕೆ. ಸುಬ್ಬರಾವ್. ಸುಬ್ಬರಾಯರು ಪತ್ರಕರ್ತರಾಗಿದ್ದು ಮುಂದೆ ಮೈಸೂರಿನಲ್ಲಿ ಅಸಿಸ್ಟಂಟ್ ಕಮೀಶನರರೂ ಆಗಿದ್ದು ೧೯೩೩ರಲ್ಲಿ ಪ್ರಕಟಿಸಿದ 'ರಿವೈವ್ಡ್ ಮೆಮರೀಸ್'ನಲ್ಲಿ ಈ ಸಂಗತಿಗಳನ್ನು ಹೇಳಿದ್ದಾರೆ. ಕರ್ವೆಯವರು ಮೈಸೂರಿಗೆ ಬಂದಾಗಲೆಲ್ಲ ನರಸಿಂಹಯ್ಯಂಗಾರರ ಅತಿಥಿಗಳಾಗಿರುತ್ತಿದ್ದರು ಎಂದಿದ್ದಾರೆ.[2]

ಇದೇ ಸುಬ್ಬರಾಯರು ನರಸಿಂಹಯ್ಯಂಗಾರರ ಬಗ್ಗೆ ಹೀಗೆ ಹೇಳಿದ್ದಾರೆ. "ಶ್ರೀಮಾನ್ ನರಸಿಂಹಯ್ಯಗಾರರು ಮೈಸೂರಿನಲ್ಲಿ ಮಹಿಳಾ ಶಿಕ್ಷಣದ ಪಿತಾಮಹ ಮತ್ತು ಅತೀ ಶ್ರೇಷ್ಠ ಪೋಷಕನೆಂದು ಅವರನ್ನು ವರ್ಣಿಸುವುದು ಸೂಕ್ತವಾದುದು. ಮೈಸೂರಿನ ಮಹಾರಾಣಿಯರ ಕಾಲೇಜಿನ ಅಸ್ತಿತ್ವಕ್ಕೆ ಬಹಳ ಮಟ್ಟಿಗೆ ಅವರೇ ಕಾರಣರು. ಅದರ ಬಗ್ಗೆ ಅವರ ಪಿತೃತುಲ್ಯ ಆಸ್ಥೆ ಹಾಗೂ ಅದಕ್ಕಾಗಿ ಅವರು ಮಾಡಿದ ಅಮೂಲ್ಯವಾದ ಆರ್ಥಿಕ ತ್ಯಾಗವೇ ಇದಕ್ಕೆ ಕಾರಣ" ಎಂದು ಸುಬ್ಬರಾಯರು ಹೇಳಿದ್ದಾರಲ್ಲದೆ ೧೯೧೦ರವರೆಗೆ ಆ ಕಾಲೇಜಿಗಾಗಿ ಅವರು ಎರಡು ಲಕ್ಷ ರೂ.ಗಳ ದೇಣಿಗೆ

* ಮುಖ್ಯ ಸಂಪಾದಕರು. ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಕಾವೇರಿಭವನ ಆನೆಯ ಮಹಡಿ, ಬೆಂಗಳೂರು-೫೬೦೦೦೯.

1 'ಕರ್ನಾಟಕ ಗ್ಯಾಸೆಟಿಯರ್' (ಇಂಗ್ಲಿಷ್) (೧೯೮೪) ಭಾಗ ೨, ಪು. ೫೪೦

2 ಸುಬ್ಬರಾವ್ ಕೆ. 'ರಿವೈವಡ್ ಮೆಮರೀಸ್' (ಇಂಗ್ಲಿಷ್) ೧೯೩೩ ಪು. ೩೯೦

ನೀಡಿದ್ದರೆಂದು ತಿಳಿಸಿದ್ದಾರೆ.[3] ಇದೆಲ್ಲವನ್ನೂ ಅವರು ತಮ್ಮ ಸಂಪಾದನೆಯಿಂದಲೇ ನೀಡಿದ್ದು. 'ಭಾರತವು ಎಂದಾದರೂ ಉಳಿಯುವುದಾದರೆ, ಅದು ರಾಷ್ಟ್ರಗಳ ಸಾಲಿನಲ್ಲಿ ಮುಂದೆ ಬರುವುದು ಸಾಧ್ಯವಾದರೆ, ಅದು ನಮ್ಮ ಮಹಿಳೆಯರು ಅದಕ್ಕೂ ಹೆಚ್ಚಾಗಿ ನಮ್ಮ ವಿಧವೆಯರ ದುಡಿಮೆಯಿಂದ, ಅವರ ಸಂಸ್ಕೃತಿಯಿಂದ ಮತ್ತು ಅವರ ಜ್ಞಾನಭರಿತವಾದ ಭಕ್ತಿಯ ಮತ್ತು ತ್ಯಾಗದ ಸಾಧನೆಯಿಂದ. ಇಂಥ ಪವಿತ್ರ ಕಾರ್ಯ ಸಾಧ್ಯವಾಗುವುದರ ಕುರಿತು ನಾನು ತಲ್ಲೀನತೆಯಲ್ಲಿ ಇದ್ದೇನೆ". ಅವರ ಈ ವಾಕ್ಯವನ್ನು ಉದ್ಧರಿಸಿದವರೂ ಸುಬ್ಬರಾಯರೇ.[4] ಇದರಲ್ಲಿ ಅವರ ಉದ್ದೇಶಕ್ಕೆ ವಿರುದ್ಧವಾದ ಅರ್ಥ ಹುಡುಕಬಾರದು. ವಿಧವೆಯರು ವಿಧವೆಯರಾಗಿಯೇ ಇರಬೇಕೆಂಬ ನಂಬಿಕೆಯವರು ಅವರಲ್ಲ. ಅವರು ಕರ್ವೆ, ರಾನಡೆಯವರ ಮಿತ್ರರು ಹಾಗೂ ಅನುಯಾಯಿಗಳು. ಆದರೆ ಒಬ್ಬ ಬ್ರಾಹ್ಮಣ ವಿಧವೆ ಪುನರ್ವಿವಾಹ ಮಾಡಿಕೊಳ್ಳಲು ಸಮಾಜದಲ್ಲಿ ಪಕ್ವ ವಾತಾವರಣವಿರಲಿಲ್ಲ. ಹಳೇ ಮೈಸೂರಿನ ನಂಜನಗೂಡು ತಿರುಮಲಾಂಬಾ, ಆರ್. ಕಲ್ಯಾಣಮ್ಮ ಮುಂತಾದ ವಿಧವೆಯರು ೨೦ನೆಯ ಶತಮಾನದ ಆರಂಭದಲ್ಲೂ ತಾವುಗಳು ಮಹಿಳಾಪರ ಚಳವಳಿಯ ಮುಂಚೂಣಿಯಲ್ಲಿ ಇದ್ದವರು. ಆದರೆ ವಿಧವಾ ವಿವಾಹವನ್ನು ಪ್ರಕಟವಾಗಿ ಪ್ರತಿಪಾದಿಸುವ ಧೈರ್ಯ ಮಾಡಿದವರಲ್ಲ. ವಿಧವೆ ಮೂಲೆ ಪಾಲಾಗಬಾರದು ಸಮಾಜಕ್ಕೆ ಉಪಯುಕ್ತಳಾಗಿ ಸಾರ್ವಜನಿಕ ರಂಗದಲ್ಲಿ ತಲೆಯೆತ್ತಿ ದುಡಿದು ಮುಂದೆ ಬರಬೇಕು ಎಂಬ ಸ್ಪಷ್ಟ ನಿಲುವು ನರಸಿಂಹಯ್ಯಗಾರರ ಮೇಲಿನ ಮಾತಿನಲ್ಲಿ ಧ್ವನಿತವಾಗುತ್ತದೆ.

ಈಗಾಗಲೇ ಮೈಸೂರು ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ಸ್ಪಷ್ಟಪಡಿಸಿರುವಂತೆ ಮೈಸೂರು ಮಹಾರಾಣಿ ಶಾಲೆ ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತದಲ್ಲಿ ೧೮೮೧ರಲ್ಲಿ ಮೈಸೂರು ಕೋಟೆಯ ದೇವಾಲಯವೊಂದರಲ್ಲಿ ೨೮ ವಿದ್ಯಾರ್ಥಿನಿಯರೊಂದಿಗೆ ಆರಂಭವಾಯಿತು. ಮುಂದೆ ಅದನ್ನು ಜಗನ್ಮೋಹನ ಅರಮನೆಯ ಪರಿಸರಕ್ಕೆ ವರ್ಗಾಯಿಸಲಾಯಿತು. ಚಾಮರಾಜೇಂದ್ರ ಒಡೆಯರೂ ಮಹಾರಾಣಿಯರೂ ಇದರ ಸ್ಥಾಪನೆಗೆ ಪ್ರೋತ್ಸಾಹ ನೀಡಿದ್ದರೂ ಅದರ ಮೂಲ ಕಾರಣಕರ್ತರು ಅರಮನೆ ಭಕ್ಷಿರಾಯ್ ಬಹದೂರ್ ಅಂಬಿಲ್ ನರಸಿಂಹಯ್ಯಂಗಾರರೇ. ಆರಂಭದಲ್ಲಿ ಇಬ್ಬರು ಪುರುಷ ಅಧ್ಯಾಪಕರೇ ಇದ್ದು ಇಬ್ಬರು ಮಹಿಳೆಯರು ಅವರಿಗೆ ಸಹಾಯಕರಾಗಿದ್ದರು. ೧೮೮೩ರಲ್ಲಿ ವಿದ್ಯಾರ್ಥಿನಿಯರ ಸಂಖ್ಯೆ ೨೧೦ಕ್ಕೆ ಏರಿತು. ೧೮೯೧ರಲ್ಲಿ ಶಾಲೆ ಸರಕಾರೀ ಶಾಲೆಯಾಗಿ ಹೈಸ್ಕೂಲಾಗಿ ಪರಿವರ್ತನೆ ಪಡೆಯಿತು. ೧೯೦೨ರಲ್ಲಿ ಅದು ಮಹಾರಾಣಿ ಕಾಲೇಜಾಯಿತು. ೧೯೨೦ರಲ್ಲಿ ಈ ಕಾಲೇಜಿನಲ್ಲಿ ಪದವಿ ತರಗತಿಗಳೂ ಆರಂಭವಾದವು.[5]

ಈ ಶಾಖೆಯು ಆರಂಭವಾದಾಗ ಸಂಪ್ರದಾಯಸ್ಥ ಮಹಿಳೆಯರು ಶಾಲೆಗೆ ಹೋಗಲು ಹಿಂದೇಟು ಹಾಕುವುದನ್ನು ತಪ್ಪಿಸಲು ಮೈಸೂರಿನ ಗಣ್ಯ ಪತ್ರಿಕೋದ್ಯಮಿ, ಸಾರ್ವಜನಿಕ ಧುರೀಣ ಹಾಗೂ ಅಧ್ಯಾಪಕ ಎಂ. ವೆಂಕಟಕೃಷ್ಣಯ್ಯ (ತಾತಯ್ಯ) ತಮ್ಮ ಪತ್ನಿಯನ್ನು ಈ ಶಾಲೆಗೆ ಸೇರಿಸಿದರು. ಶಾಲೆಗೆ ಮಹಿಳಾ ಅಧ್ಯಾಪಕಿಯರು ದೊರಕುವುದಿಲ್ಲವೆಂದು ಸರಕಾರವು ಅವರ ವೇತನವನ್ನು ಪುರುಷರಿಗಿಂತ ಶೇಕಡಾ ೨೫ ಹೆಚ್ಚಿಸಿತು. ಮಹಿಳಾ ಶಿಕ್ಷಕಿಯರಾಗಿ ತರಬೇತಿ ಪಡೆಯಬಯಸುವ ಖಾಸಗಿ ವಿದ್ಯಾರ್ಥಿನಿಯರಿಗೆ ನೀಡುತ್ತಿದ್ದ ಸ್ಟೈಪೆಂಡ್ ಅನ್ನು ರೂ. ೮ರಿಂದ ೧೦ಕ್ಕೂ, ಹೈಯರ್ ಸೆಕೆಂಡರಿ ಶಿಕ್ಷಣ ಪಡೆದ ಅಧ್ಯಾಪಕ ವಿದ್ಯಾರ್ಥಿನಿಗೆ ಇದನ್ನು ೧೨ಕ್ಕೂ ಹೆಚ್ಚಿಸಲಾಯಿತು. ರೂ. ೧೦೦ಕ್ಕಿಂತ ಕಡಿಮೆ ವಾರ್ಷಿಕ ಆದಾಯವಿರುವ ಪೋಷಕರ ಮಕ್ಕಳು ಶಾಲೆಗೆ ಸೇರುವಂತೆ ಮಾಡಲು ಪ್ರಾಥಮಿಕ ಶಾಲೆಗೆ ಬರುವ ವಿದ್ಯಾರ್ಥಿನಿಯರಿಗೆ ಅಟೆಂಡನ್ಸ್ ವೇತನವನ್ನು ಬಟ್ಟೆ, ಪುಸ್ತಕ, ಸ್ಲೇಟ್, ಸ್ಟೇಶನರಿ ರೂಪದಲ್ಲಿ ಕೊಡಲಾಗುತ್ತಿತ್ತು. ದಲಿತ ಮತ್ತು ಬುಡಕಟ್ಟಿನ ಹುಡುಗಿಯರಿಗೆ

---

3 ಅದೇ ಪು. ೩೮೪
4 ಅದೇ, ಪು. ೩೮೫
5 'ಮೈಸೂರು ಜಿಲ್ಲಾ ಗ್ಯಾಸೆಟಿಯರ್' (ಇಂಗ್ಲಿಷ್) ೧೯೮೫, ಪು. ೬೫೦

ಈ ವಿಚಾರದಲ್ಲಿ ಆದ್ಯತೆ ನೀಡಲಾಗುತ್ತಿತ್ತು.[6] ಈ ಹಿನ್ನೆಲೆಯಲ್ಲಿ ಮೈಸೂರಿನ ಇಬ್ಬರು ಮಹಿಳೆಯರು ಶೃಂಗಾರಮ್ಮ ಮತ್ತು ರುಕ್ಮಿಣಿಯಮ್ಮ ೧೯೦೯ರಲ್ಲಿ ಪ್ರಥಮ ಪದವೀಧರೆಯರಾದರು. ಒಕ್ಕಲಿಗ ಜಾತಿಯ ಶ್ರೀಮತಿ ಇಂದಿರಮ್ಮ ೧೯೨೪ರಲ್ಲಿ ಮೊದಲ ಪದವೀಧರೆಯಾದರು.[7] ಒಕ್ಕಲಿಗ ಜಾತಿಯ ಈ ಮಹಿಳೆ ಹೈಸ್ಕೂಲು ಸೇರುವುದು ಆಗ ಸುಲಭದ ಸಂಗತಿಯಾಗಿರಲಿಲ್ಲ. ಆ ವಿಚಾರ ಕೊನೆಗೆ ಪ್ರಸ್ತಾಪಿಸುವೆ.

ಹೇಗಿದ್ದರೂ ಈ ಮೇಲ್ಕಂಡ ಎಲ್ಲ ಸುಧಾರಣೆಗಳಿಗೆ ತೀವ್ರ ಬೆಂಬಲ, ಆರ್ಥಿಕ ನೆರವು ನೀಡಿದವರು ನರಸಿಂಹಯ್ಯಂಗಾರರೇ. ಅವರ ಬಗ್ಗೆ ಹೊಸದಾಗಿ ಸಂಗ್ರಹಿಸಿದ ಅಲ್ಪ ಸ್ವಲ್ಪ ಮಾಹಿತಿಯಂತೆ ('ಎನ್‌ಸೈಕ್ಲೊಪೀಡಿಯಾ ಆಫ್ ದಿ ಮೆಡ್ರಾಸ್ ಪ್ರೆಸಿಡೆನ್ಸಿ ಅಂಡ್ ದಿ ಎಜೆಸೆಂಟ್ ಸ್ಟೇಟ್ಸ್'ನಿಂದ) ಅವರ ಜೀವಿತ ಕಾಲ ೧೮೪೪ರಿಂದ ೧೯೨೦. ಮೈಸೂರಿನಲ್ಲಿ ಹುಟ್ಟಿದವರಾದ ಅವರು ಮೂಲತಃ ಕೊಯಮುತ್ತೂರು ಬಳಿಯ ಅಂಬಿಲ್ ಎಂಬ ಹಳ್ಳಿಯವರು. ಬಾಲ್ಯದ ೭–೮ ವರ್ಷಗಳನ್ನು ಮೈಸೂರಿನಲ್ಲಿ ಕಳೆದು ಮುಂದೆ ಎಂಟನೇಯ ವರ್ಷದಲ್ಲಿ ಅಂಬಿಲ್ ಗ್ರಾಮದಲ್ಲಿ ದೇವಾಲಯದ ಪರಿಚಾರಕರಾಗಿ ಕಳುಹಿಸಲಾಯಿತು (ಚಿಕ್ಕಪ್ಪನ ಮನೆಯ ದನಗಳನ್ನೂ ಕಾಯುತ್ತಿದ್ದರು). ಆಗ ಅಲ್ಪ ಸ್ವಲ್ಪ ತಮಿಳು, ಇಂಗ್ಲಿಷ್ ಕಲಿತರು. ತಮ್ಮ ೧೩ನೇಯ ವರ್ಷದಲ್ಲಿ (೧೮೫೭) ಕುಂಭಕೋಣಂಗೆ ಬಂದು, ಅಲ್ಲಿಂದ ಮುಂದೆ ೧೮ನೇಯ ವಯಸ್ಸಿನಲ್ಲಿ ಮೈಸೂರಿಗೆ ಬಂದರು.[8]

ಈ ಕಾಲದಲ್ಲಿ ನರಸಿಂಹಯ್ಯಂಗಾರರಲ್ಲಿ ಸ್ತ್ರೀಪರ ನಿಲುವು ಬೆಳೆದುದು ಹೇಗೆಂದು ತಿಳಿಯಲು ಯಾವ ವಿವರಗಳೂ ಇಲ್ಲ. ಆದರೆ ಸ್ತ್ರೀಯರ ಬಗ್ಗೆ, ವಿಧವೆಯರ ಬಗ್ಗೆ ಅವರಿಗೆ ಅಪಾರ ಅನುಕಂಪ ಇದ್ದಿರಬೇಕು. ೧೮ನೇಯವಯಸ್ಸಿನಲ್ಲಿ ಅವರಿಗೆ ಮದುವೆ ಮಾಡಬೇಕೆಂದು ವ್ಯವಸ್ಥೆ ಮಾಡಿ ದಿಬ್ಬಣವು ಬಂಡಿಗಳಲ್ಲಿ ಶ್ರೀರಂಗಪಟ್ಟಣಕ್ಕೆ ಹೊರಟಿರಲು ಗಾಡಿಯಿಂದ ಹಾರಿ ಮೈಸೂರಿಗೆ ಮರಳಿ ಬಂದವರು ಅವರು. ಈ ಪ್ರಸಂಗಕ್ಕೆ ಯಾವುದೇ ಅರ್ಥ ಕಟ್ಟಲು ಸಾಧ್ಯ ಆಗುತ್ತಿಲ್ಲ. ತಮ್ಮ ಶಿಕ್ಷಣದ ಕಡೆ ಗಮನ ಕೊಡುವ ವಿಚಾರವೇ ಇದಕ್ಕೆ ಕಾರಣವಿರಬಹುದು. ಮುಂದೆ ಅವರು ಎಫ್.ಎ. ಪಾಸು ಮಾಡಿ ಖಾಸಗಿ ಶಾಲೆಯೊಂದನ್ನು ತೆರೆದು ಮುಂದೆ ಹುಜೂರು ಶಾಲೆಯಲ್ಲಿ ಅಸಿಸ್ಟೆಂಟ್ ಮಾಸ್ಟರ್ ಆದರು. ೧೮೭೦ರಲ್ಲಿ ಬಾಲಕ ಚಾಮರಾಜೇಂದ್ರ ಒಡೆಯರಿಗೆ ಒಬ್ಬ ಅಧ್ಯಾಪಕರನ್ನು ನೇಮಿಸುವ ವಿಚಾರಕ್ಕೆ ಸ್ಪರ್ಧಾತ್ಮಕ ಪರೀಕ್ಷೆಯನ್ನು ಕರ್ನಲ್ ಮಲ್ಲೆಸನ್ ಎಂಬ ಅಧಿಕಾರಿಯು ನಡೆಸಲು ಇವರೇ ಆ ಪರೀಕ್ಷೆಯಲ್ಲಿ ಸರ್ವ ಪ್ರಥಮ ಸ್ಥಾನ ಪಡೆದು ಮಹಾರಾಜರ ಶಿಕ್ಷಕರಾದರು. ಅವರ ಆರಂಭದ ವೇತನ ರೂ. ೬೦. ಅರಮನೆಯಲ್ಲಿ ರಾಜರ, ಬ್ರಿಟಿಷ್ ಅಧಿಕಾರಿಗಳ ವಿಶ್ವಾಸಕ್ಕೆ ಪಾತ್ರರಾಗಿ ಸ್ಥಾನ ಮಾನದಲ್ಲಿ ಮೇಲೇರಿ, ೧೮೮೧ರಲ್ಲಿ ಮಹಾರಾಜರಿಗೆ ಅಧಿಕಾರ ಪ್ರಧಾನವಾದಾಗ ಮಹಾರಾಜರ 'ಆಫೀಸರ್–ಇನ್–ವೇಟಿಂಗ್' ಹುದ್ದೆಗೆ ನೇಮಕವಾಗಿ, ಮುಂದೆ ದರ್ಬಾರ್ ಬಕ್ಷಿಗಳೂ ಆದರು.[9] ಈ ಎಲ್ಲ ಕಾಲದಲ್ಲಿ ತಮಗೆ ಬಂದ ವೇತನದ ಬಹುಪಾಲು ಮಹಾರಾಣಿಯರ ಕಾಲೇಜಿಗೂ ತಾವು ಸ್ಥಾಪಿಸಿದ್ದ ವಿಧವೆಯರ ಆಶ್ರಮಕ್ಕೂ ಸಂದಿತು. ೧೮೯೪ರಲ್ಲಿ ಮಹಾರಾಜರು ದಿವಂಗತರಾದಾಗ ಅವರು ಪ್ಯಾಲೆಸ್ ಬಕ್ಷಿ ಹುದ್ದೆಯಿಂದ ನಿವೃತ್ತರಾದರು. ಮುಂದೆ ಬೆಂಗಳೂರಲ್ಲಿ ನೆಲಸಿದ ಅವರು ಮಹಿಳಾ ಶಿಕ್ಷಣದ ವಿಸ್ತರಣೆಗಾಗಿ ದಿವಾನರಿಗೆ ಸಲಹೆ ನೀಡುತ್ತ, ಒತ್ತಾಯ ಮಾಡುತ್ತ ಇದ್ದರು.[10] ಸಂಸ್ಕೃತ ಶಿಕ್ಷಣ, ಕನ್ನಡ ಪಾಂಡಿತ್ಯಕ್ಕೆ ಪ್ರೋತ್ಸಾಹ, ಸಂಗೀತ ನಾಟಕಗಳ ಬೆಳವಣಿಗೆಗಾಗಿ ಅವರು ದುಡಿಯುತ್ತಿದ್ದರಾದರೂ ಅವರು

---

6 'ಮೈಸೂರು ಜಿಲ್ಲಾ ಗ್ಯಾಸೆಟಿಯರ್' (ಇಂಗ್ಲಿಷ್) ೧೯೮೫, ಪು. ೬೫೪

7 ಅದೇ

8 'ಎನ್‌ಸೈಕ್ಲೊಪೀಡಿಯಾ ಆಫ್ ದಿ ಮೆಡ್ರಾಸ್ ಪ್ರೆಸಿಡೆನ್ಸಿ ಅಂಡ್ ದಿ ಎಜೆಸೆಂಟ್ ಸ್ಟೇಟ್ಸ್ ಮದ್ರಾಸು, ೧೯೨೪, ಪು.೭೧೪.

9 ಅದೇ

10 ಅದೇ

ಮಹಿಳೆಯರಿಗಾಗಿ ಮಾಡಿದ ಕಾಯಕ ಅಪಾರ.[11] ಬೆಂಗಳೂರಲ್ಲಿ ನಡೆಯುತ್ತಿದ್ದ ಡಿಪ್ರೆಸ್ಡ್ ಕ್ಲಾಸಸ್ ಮಿಶನ್‌ನ ಕಾರ್ಯಕರ್ತೆ (ಕಾರ್ಯದರ್ಶಿ) ಶ್ರೀಮತಿ ರಂಗಮ್ಮ ನನ್ನು ಸರ್ವ ರೀತಿಯಲ್ಲಿ ಪ್ರೋತ್ಸಾಹಿಸಿದವರೂ ಅವರೇ.[12] ಅವರು ನಿವೃತ್ತಿ ಜೀವನದ ಬಹು ಕಾಲವೆಲ್ಲ ಮೈಸೂರಿನ ಇಂಥ ಸಂಸ್ಥೆಗಳಿಗೆ ಆದರ್ಶಪ್ರಾಯವೆನಿಸಿದ ಬ್ರಾಹ್ಮಣ ವಿಧವೆಯರ ಆಶ್ರಮವನ್ನು ನಡೆಸುವುದರಲ್ಲಿ ಕಳೆಯಿತು. ಇದನ್ನು ಮಾದರಿಯಾಗಿಟ್ಟುಕೊಂಡು ಮದ್ರಾಸ್ ಮತ್ತು ಇತರ ಕಡೆಗಳಲ್ಲಿ ಇಂಥ ಆಶ್ರಮಗಳ ಸ್ಥಾಪನೆಯಾಯಿತು. ಅವರ ದೊಡ್ಡ ಮೊತ್ತದ ಪೆನ್ಷನನ ಎಲ್ಲ ಹಣವು ಈ ಸಂಸ್ಥೆಗೇ ಸಲ್ಲುತ್ತಿತ್ತು.[13] "ಅರಮನೆಯಲ್ಲಿ ಅವರು ಸಲ್ಲಿಸಿದ ಸೇವೆ ಆದಕ್ಕೂ ಹೆಚ್ಚಾಗಿ, ಮಹಿಳೆಯ ಶಿಕ್ಷಣಕ್ಕಾಗಿ, ಹಾಗೂ ವಿಶೇಷತಃ ವಿಧವೆಯರಿಗಾಗಿ ಅವರು ಮಾಡಿದ ಕೆಲಸಕ್ಕಾಗಿ ಮೈಸೂರಿನ ಜನ ಅವರಿಗೆ ಋಣಿಯಾಗಿರಬೇಕು", ಎಂದು ಮೇಲೆ ಹೇಳಿದ ಎನ್‌ಸೈಕ್ಲೋಪೀಡಿಯ ಅವರನ್ನು ಸ್ತುತಿಸಿದೆ.[14]

"ಶ್ರೀ ನರಸಿಂಹಯ್ಯಂಗಾರರ ಮಹಿಳಾ ಶಿಕ್ಷಣದ ಬಗೆಗಿನ ತೀವ್ರ ಉತ್ಸಾಹವೇ ಮದ್ರಾಸ್, ಮುಂಬೈ, ಕಲ್ಕತ್ತಾದಂಥ ಪ್ರಾಂತೀಯ ಕೇಂದ್ರಗಳಲ್ಲಿನ ಅನೇಕ ಗಣ್ಯ ವ್ಯಕ್ತಿಗಳು ಅವರ ಸ್ನೇಹಿತರಾಗಲು ಮತ್ತು ಅವರುಗಳಿಗೆ ಇವರು ತೀರಪ್ರಿಯರಾದವರಾಗಲು ಕಾರಣವಾಗಿತ್ತು. ಅವರು ತಮ್ಮ ವೇತನ ಮತ್ತು ವಿಶ್ರಾಂತಿ ವೇತನವನ್ನು ಶಿಕ್ಷಣ ಮುಂದುವರಿಸಲು ಉತ್ಸುಕರಾದ ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನ ನೀಡಲು ಬಳಸುತ್ತಿದ್ದರು. ಯೋಗ್ಯರಾದ ವಿಧವೆಯರಿಗೆ ದಾದಿ ಮತ್ತು ಸೂಲಗಿತ್ತಿಯಾಗಿ ತರಬೇತಿ ಪಡೆಯಲು ಸಹಾಯ ಮಾಡುತ್ತಿದ್ದರು" ಎಂದು ಅವರ ಬಗ್ಗೆ ಸುಬ್ಬರಾವ್ ಹೇಳಿದ್ದಾರೆ.[15] ಮಹಿಳೆಯರ ಶಿಕ್ಷಣಕ್ಕೆಂದೇ ಮೀಸಲಾದ ದೇವರಾಜ ಬಹದ್ದೂರ್ ದತ್ತಿಗೆ ಅವರು ಜೀವನ ಪರ್ಯಂತ ಕಾರ್ಯದರ್ಶಿಗಳಾಗಿದ್ದರು.[16]

ವಾಸ್ತವವಾಗಿ ಮಹಾರಾಣಿ ಶಾಲೆಯು "ಮಹಾರಾಣಿ ಹೈ ಕಾಸ್ಟ್ ಗರ್ಲ್ಸ್ ಸ್ಕೂಲ್" ಎಂದೇ ಆರಂಭವಾಗಿತ್ತು. ೧೯೦೨ರಲ್ಲಿ ಇಂದಿರಮ್ಮ ಎಂಬ ಒಕ್ಕಲಿಗ ತರುಣಿ ಹಾಗೂ ಅವರ ಸೋದರಿ ಈ ಶಾಲೆ ಸೇರಬಯಸಿದಾಗ ಬ್ರಾಹ್ಮಣ ವಿದ್ಯಾರ್ಥಿನಿಯರು ಇದನ್ನು ವಿರೋಧಿಸಿದ್ದರು. ಆದರೆ ಒಂದು ಚಳವಳಿಯ ರೂಪದ ಒತ್ತಡ ಬಂದಾಗ ಅವರನ್ನು ಶಾಲೆಗೆ ಸೇರಿಸಿದರು.[17] ಈ ಇಂದಿರಮ್ಮ ಖ್ಯಾತ ಒಕ್ಕಲಿಗರ ನಾಯಕ ಬಿ. ಪುಟ್ಟಯ್ಯನವರ ತಂಗಿ; ಮುಂದೆ ಈಕೆ ಬೆಂಗಳೂರಿನ ಪ್ರಥಮ ಮಹಿಳಾ ಮೇಯರ್ ಕೂಡ ಆದರು.

---

12 'ಎನ್‌ಸೈಕ್ಲೋಪೀಡಿಯಾ ಅಫ್ ದಿ ಮೆಡ್ರಾಸ್ ಪ್ರೆಸಿಡೆನ್ಸಿ ಅಂಡ್ ದಿ ಎಜೆಸೆಂಟ್ ಸ್ಟೇಟ್ಸ್' ಮದ್ರಾಸು, ೧೯೩೪, ಪು. ೭೧೪

13 ಅದೇ

14 ಅದೇ ಪು. ೭೧೫

15 ಸುಬ್ಬರಾವ್, ಪು. ೩೮೪

16 ಅದೇ,

17 ರಾಧಾಕೃಷ್ಣ, ಬಿ.ಪಿ. 'ನನ್ನ ತಂದೆ' ಬೆಂಗಳೂರು ೧೯೪೯, ಪು. ೧೬

ಎಂ.ಬಿ. ಪಾಟೀಲ*

# ಗ್ರಾಮೀಣ ಆರ್ಥಿಕ ವ್ಯವಸ್ಥೆಯಲ್ಲಿ ಸಹಕಾರಿ ದವಸ ಭಂಡಾರಗಳು (ಗ್ರೇನ್ಸ್‌ಬ್ಯಾಂಕ್ಸ್)

ಒಂದು ದೇಶದ ಸಮಗ್ರ ಆರ್ಥಿಕ ವ್ಯವಸ್ಥೆಯಲ್ಲಿ ಅವಿಭಾಜ್ಯ ಅಂಗವಾದ ಗ್ರಾಮೀಣ ಆರ್ಥಿಕ ವ್ಯವಸ್ಥೆಯು ಇಡೀ ಆರ್ಥಿಕ ವ್ಯವಸಾಯ ಬೆನ್ನೆಲುಬು ಎಂದು ಹೇಳುವರು. ಇದೇ ಮಾತನ್ನು ವ್ಯವಹಾರಿಕವಾಗಿ 'ಹಳ್ಳಿಯಿಂದ ದಿಲ್ಲಿಯ ಉದ್ಧಾರ' ಎಂದು ಹೇಳಿದರು. ಗಾಂಧೀಜಿಯವರು ಭಾರತದ ನಿಜವಾದ ಆತ್ಮ ಹಳ್ಳಿಗಳಲ್ಲಿ ಇದೆ ಎಂದು ನಂಬಿ ಗ್ರಾಮೋದ್ಧಾರದ ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಅವುಗಳಲ್ಲಿ ಪ್ರತಿ ಗ್ರಾಮದ ಆರ್ಥಿಕ ಸ್ವಾವಲಂಬನೆಯೂ ಒಂದಾಗಿತ್ತು. ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ನಂತರದ ದಶಕಗಳಲ್ಲಿ ಗ್ರಾಮೀಣ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಸರ್ವಾಂಗ ಸುಂದರವಾಗಿ ರೂಪಿಸಲು ಅನೇಕ ಯೋಜನೆಗಳನ್ನು ಪ್ರಾರಂಭಿಸಿ ಅವುಗಳನ್ನು ಮುಂದುವರೆಸಿಕೊಂಡು ಬರಲಾಗುತ್ತಿದೆ.

ನಮ್ಮ ಇಂದಿನ ಗ್ರಾಮೀಣರ ಬದುಕಿನಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ವ್ಯವಹರಿಸಬೇಕಾದ ಎರಡು ಅತೀ ಮಹತ್ವದ ಸಂಸ್ಥೆಗಳೆಂದರೆ 'ಗ್ರಾಮ ಪಂಚಾಯಿತಿ' ಮತ್ತು ಸಾಲ ನೀಡುವ ಸಹಕಾರಿ ಸಂಘ ಅಥವಾ ಪ್ರಾಥಮಿಕ ವ್ಯವಸಾಯ ಪತ್ತಿನ ಸಹಕಾರಿ ಸಂಘ. ಇವು ಒಂದಕ್ಕೊಂದು ಪೂರಕವಾದ ಸಂಸ್ಥೆಗಳು. ಮೊದಲನೆಯ ಸಂಸ್ಥೆಯು ಆಡಳಿತ ವಿಕೇಂದ್ರಿಕರಣವನ್ನು ಜನ ಸಮುದಾಯಕ್ಕೆ ಮುಟ್ಟಿಸುವಲ್ಲಿ ಶ್ರಮಿಸಿದರೆ ಎರಡನೆಯ ಸಂಸ್ಥೆಯು ಗ್ರಾಮೀಣ ಬಡಜನತೆಗೆ ಆರ್ಥಿಕ ಭದ್ರತೆಯ ನೆಲೆಗಟ್ಟನ್ನು ಒದಗಿಸುವಲ್ಲಿ, ಸಂಘ ಜೀವನ ಸಹಬಾಳ್ವೆಯನ್ನು ಪೋಷಿಸಿಕೊಂಡು ಬರುವಲ್ಲಿ ಸಹಾಯಕವಾಗಿವೆ ಎಂದು ಹೇಳಬಹುದು.

ನಮ್ಮ ಗ್ರಾಮೀಣ ಪರಿಸರದಲ್ಲಿ ಅಥವಾ ಲೇವಾದೇವಿಯೊಂದಿಗೆ ಆಹಾರ ಧಾನ್ಯಗಳ ಕೊಡುಕೊಳ್ಳುವಿಕೆ ಸರ್ವೆಸಾಮಾನ್ಯವಾಗಿ ಕಂಡುಬರುವುದು. ಹಣದ ಲೇವಾದೇವಿ ವ್ಯವಹಾರವು ಶ್ರೀಮಂತ ರೈತಾಪಿ ವರ್ಗದಲ್ಲಿ ಮತ್ತು ರೈತರಲ್ಲಿದ್ದ ಸಿರಿವಂತ ವರ್ಗದಲ್ಲಿ ಮಾನ್ಯತೆಯನ್ನು ಗೌರವವನ್ನು ಪಡೆದಂತೆ ಮತ್ತು ಒಂದು ಲಾಭದಾಯಕ ಉಪ ಉದ್ಯೋಗ ವ್ಯವಹಾರವೆಂದು ಪರಿಗಣಿತವಾದಂತೆ, ಆಹಾರ ಧಾನ್ಯಗಳ ಕೊಡುಕೊಳ್ಳುವಿಕೆಯ ವ್ಯವಹಾರವೂ ಹಣದ ವ್ಯವಹಾರದಂತೆ ಲಾಭದಾಯಕ ಮತ್ತು ಶೋಷಣೆಯಿಂದ ಕೂಡಿದ ವ್ಯವಹಾರ ಎಂದು ತಿಳಿದುಬರುವುದು.

ಹಣದ ಲೇವಾದೇವಿಯಲ್ಲಿ ಪ್ರಾರಂಭದಿಂದಲೂ ನಡೆದುಕೊಂಡು ಬಂದಿರುವ ಅತೀ ಹೆಚ್ಚಿನ ಬಡ್ಡಿಯನ್ನು ವಿಧಿಸುವ ಶೋಷಣೆ ಮುಂತಾದ ಅವ್ಯವಹಾರಗಳನ್ನು

* ಸಂಪಾದಕರು, ಕರ್ನಾಟಕ ಗ್ಯಾಜೆಟಿಯರ್ ಕಾವೇರಿ ಭವನ ಆನೆಯ ಮಹಡಿ, ಬೆಂಗಳೂರು–೫೬೦೦೦

ನಿಯಂತ್ರಿಸಲು ಸಾಲಿಗನಿಂದ ಸಾಲಗಾರನಿಗೆ ಉಂಟಾಗ ಬಹುದಾದ ಅನೇಕ ತೊಂದರೆಗಳನ್ನು ತಪ್ಪಿಸಲು ಸಹಾಯಕವಾಗುವಂತೆ ಸರ್ಕಾರವು ಅನೇಕ ಕಾನೂನುಗಳನ್ನು ರಚಿಸಿದೆ, ಬಡ್ಡಿ ದರಗಳನ್ನು ಕಾಲದಿಂದ ಕಾಲಕ್ಕೆ ನಿಗದಿಗೊಳಿಸಲಾಗಿದೆ. ಸಹಕಾರಿ ವ್ಯವಸ್ಥೆಯಲ್ಲಿ ಸಾಂಸ್ಥಿಕ ಹಣಕಾಸು ಸಂಸ್ಥೆಗಳು ಈ ದಿಶೆಯಲ್ಲಿ ಬಡ ರೈತರಿಗೆ ತುಂಬಾ ಸಹಾಯಕವಾಗಿವೆ. ದವಸಗಳ ಲೇವಾದೇವಿಯಲ್ಲಿ ವಿಧಿಸುತ್ತಿರುವ ಅತಿ ಹೆಚ್ಚಿನ ಬಡ್ಡಿದರವನ್ನು ಮತ್ತು ಇತರೇ ಶೋಷಣೆಗಳನ್ನು ತಪ್ಪಿಸಿ ಬಡ ಜನರಿಗೆ ಸಹಾಯ ಮಾಡುವದೇ ದವಸದ ಭಂಡಾರಗಳ ಮುಖ್ಯ ಉದ್ದೇಶ. ಸಾಮಾನ್ಯವಾಗಿ ಸುಗ್ಗಿಯ ಪೂರ್ವದ ಹಲವಾರು ತಿಂಗಳ ಮೊದಲು, ಸಣ್ಣ ಹಿಡುವಳಿದಾರರು, ಕೃಷಿಕಾರ್ಮಿಕರು ಮುಂತಾದವರು ಆಹಾರ ಧಾನ್ಯಗಳನ್ನು ಉಳ್ಳವರಿಂದ ಪಡೆದು ಸುಗ್ಗಿಯ ನಂತರ ಅದನ್ನು ಹೆಚ್ಚುವರಿ ಧಾನ್ಯದೊಂದಿಗೆ ಹಿಂದಕ್ಕೆ ಕೊಡುವರು. ಈ ವ್ಯವಹಾರವನ್ನು ಸಾಮಾನ್ಯವಾಗಿ 'ಕಡ'ಅಥವಾ ಕೈಗಡ ಎಂದು ಕರೆಯುವರು. ಸಾಮಾನ್ಯವಾಗಿ ಇಂತಹ ಒಂದು ವ್ಯವಹಾರದಲ್ಲಿ ಸಾಲಕ್ಕೆ ಪ್ರತಿಯಾಗಿ ಹಿಂದಕ್ಕೆ ಕೊಡಬೇಕಾದ ಧಾನ್ಯದ ಪ್ರಮಾಣವನ್ನು ಪ್ರಚಲಿತ ಇದ್ದ ಮಾರುಕಟ್ಟೆಯ ದರದಲ್ಲಿ ಲೆಖ್ಖ ಹಾಕಿದರೆ ಬಡ್ಡಿಯ ಪ್ರಮಾಣ ಅತೀ ಹೆಚ್ಚೆಂದು ಕಂಡುಬರುವುದು. ಕೆಲವು ವಿಶೇಷ ಸಂದರ್ಭಗಳಲ್ಲಿ ಈ ಪ್ರಮಾಣ ಶೇ. ೨೫೦ ರಿಂದ ೩೦೦ರವರೆಗೆ ಎಂದು ಕಂಡುಬರುವುದು. ಆದರೆ ಈ ಕೊಡುಕೊಳ್ಳುವಿಕೆ ಹಣದ ರೂಪದಲ್ಲಿ ಸಾಲಕ್ಕೆ ಯಾವುದೇ ಕಾನೂನಿನ ಕಟ್ಟಳೆ, ಭದ್ರತೆ, ನಿಯಂತ್ರಣ ಇಲ್ಲದೇ ಇರುವುದರಿಂದ, ಸುಗ್ಗಿಯ ಸಮಯದಲ್ಲಿ ಸಾಕಷ್ಟು ಧಾನ್ಯದ ಸಂಗ್ರಹ ಇರುವುದರಿಂದ, ಸಾಲಗಾರನು ಸಾಲದ ಮೇಲಿನ ಬಡ್ಡಿಯನ್ನು ಅಷ್ಟೊಂದು ತೀವ್ರತರವಾದ ಹೆಚ್ಚಳ ಎಂದು ಮಾನಸಿಕವಾಗಿ ಪರಿಗಣಿಸುವುದಿಲ್ಲ—ಆದರೆ ಕೂಲಂಕಷವಾಗಿ ವಿಶ್ಲೇಷಿಸಿದರೆ ಈ ವ್ಯವಹಾರದಲ್ಲಿ ಅಡಕವಾಗಿರುವ ಶೋಷಣೆಯ ಅರಿವಾಗುವುದು. ಬಡರೈತರಿಗೆ ಸುಲಭ ಬಡ್ಡಿಯ ಹಣಕಾಸಿನ ನೆರವು ಮತ್ತು ಇತರ ವ್ಯವಸಾಯ ಪರಿಕರಗಳನ್ನು ಪೂರೈಸಲು ಪ್ರಾಥಮಿಕ ವ್ಯವಸಾಯ ಸಂಘಗಳು ನೆರವಾಗುವಂತೆ ದವಸ ಭಂಡಾರಗಳು ಸಹಾಯಕವಾಗುವವು ಎಂದು ಮನಗಂಡು ನಮ್ಮ ರಾಜ್ಯದ ಹಲವು ಜಿಲ್ಲೆಗಳಲ್ಲಿ ಈ ಸಂಸ್ಥೆಗಳನ್ನು ಬಹು ಹಿಂದೆಯೇ ಪ್ರಾರಂಭಿಸಲಾಯಿತು.

ದವಸದ ಬಡ್ಡಿದರ :– ೧೯೬೧ರ ಜನಗಣತಿಯ ಅಂಗವಾಗಿ ಪ್ರಕಟಗೊಂಡ ನಮ್ಮ ರಾಜ್ಯವು ಕೆಲವು ಆಯ್ದ ಗ್ರಾಮಗಳ ಆರ್ಥಿಕ, ಸಾಮಾಜಿಕ ವರದಿಗಳು ಈ ವ್ಯವಹಾರದಲ್ಲಿ ಕಂಡುಬಂದಿರುವ ಬಡ್ಡಿಯನ್ನು ಕುರಿತು ಈ ರೀತಿ ಸೂಚಿಸುತ್ತವೆ :–

ಗುಲಬರ್ಗ ಜಿಲ್ಲೆಯಲ್ಲಿ (ಕೊಡಗನೂರು, ಅಫಜಲ್‌ಪುರ ತಾಲ್ಲೂಕು) ಈ ವ್ಯವಹಾರವನ್ನು 'ವಾಟದ ಜೋಳ' ಎಂದು ಕರೆಯಲಾಗುವುದು. ಸುಗ್ಗಿಯ ಪೂರ್ವದಲ್ಲಿ ೬೪ ಸೇರು ಕಡಕೊಟ್ಟು ೯ ತಿಂಗಳ ನಂತರ ೯೬ ಸೇರು ಹಿಂದಕ್ಕೆ ಪಡೆಯುತ್ತಿದ್ದರು, ವಿಶೇಷ ಸಂದರ್ಭಗಳಲ್ಲಿ ೪೫ ಸೇರು ಹೆಚ್ಚಿಗೆ ಬಡ್ಡಿಯ ರೂಪದಲ್ಲಿ ಪಡೆದ ಉದಾಹರಣೆ ಉಂಟೆಂದು ವರದಿಯಲ್ಲಿ ಸೂಚಿಸಲಾಗಿದೆ. ಬಡ್ಡಿದರ ಲೆಖ್ಖದಲ್ಲಿ ಇದು ಶೇ. ೭೫ ಎಂದು ತಿಳಿದುಬರುವುದು. ಅನೇಕ ಸಂದರ್ಭಗಳಲ್ಲಿ ಬಿತ್ತುವ ಬೀಜಗಳನ್ನು ಸಹ ಕಡದ ರೂಪದಲ್ಲಿ ಪಡೆಯಲಾಗುವುದು. ಇದನ್ನು 'ಬೀಜದಕಡ' ಎಂದು ರೂಢಿಯಲ್ಲಿ ಹೇಳುವರು. ಗುಲಬರ್ಗ ಜಿಲ್ಲೆಯ ಗ್ಯಾಜೆಟಿಯರ್‌ನಲ್ಲಿ ವರದಿಯಾಗಿರುವಂತೆ ಈ ಜಿಲ್ಲೆಯ ಕೆಲವು ಭಾಗಗಳಲ್ಲಿ ಸಾಹುಕಾರರು ಕೆಲವು ಹಳ್ಳಿಗಳನ್ನು ತಮ್ಮ ತಮ್ಮಲ್ಲಿ ಹಣದ ಲೇವಾದೇವಿ ವ್ಯವಹಾರಕ್ಕೆ ಮತ್ತು ಧಾನ್ಯಗಳ ಲೇವಾದೇವಿಗೆಂದೇ ಹಂಚಿಕೊಂಡಿದ್ದ ವಿಷಯ ತಿಳಿದುಬರುವುದು. ಇದರಿಂದ ಈ ವ್ಯವಹಾರದಲ್ಲಿ ಅಡಕವಾಗಿದ್ದ ಲಾಭಾಂಶ ಮತ್ತು ಬಡವರ ಮೇಲಿನ ಹಿಡಿತದ ಕಲ್ಪನೆ ಮೂಡುವದು. ಹೈದರಾಬಾದ್ ಕರ್ನಾಟಕದಲ್ಲಿ ಸಹಕಾರಿ ಚಳುವಳಿಯು ೧೯೧೪ರಲ್ಲಿ ಪ್ರಾರಂಭವಾದರೂ ದವಸದ ಬ್ಯಾಂಕುಗಳು ಮೊದಲಿಗೆ ಪ್ರಾರಂಭವಾದದ್ದು ೧೯೪೪ರಲ್ಲಿ

ಇವುಗಳನ್ನು ಪ್ರಾರಭಿಸಿದ ಹಲವಾರು ಉದ್ದೇಶಗಳಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರಲ್ಲಿ ಧಾನ್ಯಗಳ ಉಳಿತಾಯ ಮನೋಭಾವನೆಯನ್ನು ಪ್ರೇರೇಪಿಸುವುದು

ಮತ್ತು ಉಳಿತಾಯದ ಧಾನ್ಯವನ್ನು ಬೀಜದ ರೂಪದಲ್ಲಿ ನೀಡುವುದು ಮುಖ್ಯವಾಗಿದ್ದವು ಎಂದು ತಿಳಿದು ಬರುವುದು.

ಉತ್ತರ ಕನ್ನಡ ಜಿಲ್ಲೆಯಲ್ಲಿ (ಹಳದಿಪುರ, ಬನವಾಸಿ) ಒಂದು ನೂರು ರೂಪಾಯಿ ಸಾಲಕ್ಕೆ ಒಂದೂವರೆ ಕ್ವಿಂಟಾಲ್ ಭತ್ತವನ್ನು ಹಿಂದಕ್ಕೆ ನೀಡುವ ಪದ್ಧತಿ ರೂಢಿಯಲ್ಲಿತ್ತು ಎಂಬುದಾಗಿ ವರದಿಯಿಂದ ತಿಳಿದು ಬರುವುದು.

ಬೀದರ್ ಜಿಲ್ಲೆಯ (ಕಮಲನಗರ) ಭಾಗಗಳಲ್ಲಿ ಕಡ ಪಡೆದ ಧಾನ್ಯದ ಸಾಲಕ್ಕೆ ಶೇ. ೭೫ರಷ್ಟು ಸೇರಿಸಿ ಕೊಡುವ ವ್ಯವಸ್ಥೆ ಇತ್ತೆಂದು ತಿಳಿದುಬರುವುದು.

ಬೆಂಗಳೂರು ಗ್ರಾಮೀಣ ಜಿಲ್ಲೆಯ ಹಲವಾರು ಸ್ಥಳಗಳಲ್ಲಿ (ಚಕ್ರಭಾವಿ, ಅರಳು ಮಲ್ಲಿಗೆ) ಸಾಲ ಪಡೆದ ಧಾನ್ಯಕ್ಕೆ ಅಷ್ಟೇ ಪ್ರಮಾಣದಲ್ಲಿ ಬಡ್ಡಿಯನ್ನು ಸೇರಿಸಿ ಅಂದರೆ ಶೇ. ೧೦೦ ಬಡ್ಡಿಯನ್ನು ವಿಧಿಸುತ್ತಿದ್ದಾಗಿ ತಿಳಿದುಬರುವುದು. ಈ ವರದಿಗಳು ಕೇವಲ ಉದಾಹರಣೆಗಳು. ಆದರೆ ಪ್ರತಿ ಒಂದು ಹಳ್ಳಿಯಲ್ಲಿಯೂ ಇಂದಿಗೂ ಈ ವ್ಯವಹಾರ ಹೆಚ್ಚು ಕಡಿಮೆ ಇದೇ ಬಡ್ಡಿಯ ದರದಲ್ಲಿ ಮುಂದುವರೆದುಕೊಂಡು ಬರುತ್ತಿದೆ. ಕಾನೂನಿನ ಪ್ರಕಾರ ಪ್ರಚಲಿತ ಇರುವ ಹಣದ ಲೇವಾದೇವಿಯ ಬಡ್ಡಿದರಗಳು ಪರಮಾವಧಿ ಶೇ. ೨೧ ಆಧಾರ ರಹಿತ ಸಾಲಕ್ಕೆ ಇದ್ದರೆ, ಆಧಾರ ಹೊಂದಿದ ಸಾಲಕ್ಕೆ ಶೇ. ೧೮ ಸರಳಬಡ್ಡಿ. ಆದರೆ ಖಾಸಗಿಯಾಗಿ ವಿಧಿಸುವ ಬಡ್ಡಿದರ ಯಾವುದೇ ಸಂದರ್ಭದಲ್ಲಿ ಶೇ. ೩೬ ರಿಂದ ೪೮ಕ್ಕೆ ಹೆಚ್ಚಿರಲಾರದು ಎಂದು ತಿಳಿದುಬರುವುದು— ಹಣದ ಲೇವಾದೇವಿಯಲ್ಲಿರುವ ಮಾನವೀಯ ಅಂಶ ಆಹಾರ ಧಾನ್ಯಗಳ ವಿಷಯದಲ್ಲಿ ಬೇಡವೆ? ಬಹು ಹಿಂದೆ ಭತ್ತದ ಖಣಜ ಎಂದು ಹೆಸರಾಗಿದ್ದ ಕೊಡಗು ಜಿಲ್ಲೆಯಲ್ಲಿ ೧೮೮೦ರ ಒಂದು ವರದಿ ತಿಳಿಸುವಂತೆ ಒಂದು ಬಟ್ಟೆಗೆ ಪ್ರತಿಯಾಗಿ ಎರಡರಿಂದ ಮೂರು ಬಟ್ಟೆ ಭತ್ತವನ್ನು ಹಿಂದಕ್ಕೆ ಪಡೆಯುವುದು ರೂಢಿಯಲ್ಲಿ ಇತ್ತು ಎಂದು ವರದಿಯಾಗಿದೆ. ಹಣದ ರೂಪದಲ್ಲಿ ಇದನ್ನು ಶೇ. ೨೫೦ ರಿಂದ ೩೦೦ ಎಂದು ಪರಿವರ್ತಿಸಬಹುದು. ಬಹುಶಃ ಇದೇ ಕಾರಣದಿಂದ ನಮ್ಮ ರಾಜ್ಯದಲ್ಲಿ ದವಸ ಭಂಡಾರಗಳು ಪ್ರಪ್ರಥಮವಾಗಿ ಕೊಡಗಿನಲ್ಲಿ ಮೂಡಿ ಬಂದಂತೆ ತೋರುವುದು.

ಇತ್ತೀಚಿನ ವರದಿ ತಿಳಿಸುವಂತೆ (ಸಹಕಾರಿ ಇಲಾಖೆಯ ಆಡಳಿತ ವರದಿ ೧೯೬೨) ಈ ದಶಕದ ಸಹಕಾರಿ ಸಂಸ್ಥೆಗಳು ಬಹುಪಾಲು ಗುಲಬರ್ಗ, ರಾಯಚೂರು ಮತ್ತು ಕೊಡಗು ಜಿಲ್ಲೆಯಲ್ಲಿ ಇದ್ದುದಾಗಿಯೂ, ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಇವುಗಳನ್ನು ಎರಡನೆಯ ಮಹಾಯುದ್ಧದ ಸಮಯದಲ್ಲಿ (೧೯೩೯–೧೯೪೫) 'ಲೆವಿ' ವಸೂಲಿಯನ್ನು ಪ್ರಾರಂಭ ಮಾಡಿದ ಸಂದರ್ಭದಲ್ಲಿ ಪ್ರಾರಂಭಿಸಲಾಯಿತು ಎಂದು ತಿಳಿಸುತ್ತದೆ.

೧೯೬೯ರಲ್ಲಿ ರಾಯಚೂರು ಜಿಲ್ಲೆಯಲ್ಲಿನ ಒಟ್ಟು ೧೩೩೮ ಸಹಕಾರಿ ಸಂಘಗಳಲ್ಲಿ ಪ್ರಾಥಮಿಕ ವ್ಯವಸಾಯ ಪತ್ತಿನ ಸಂಘಗಳ ನಂತರದ ಎರಡನೆಯ ಸ್ಥಾನ ಗ್ರೇನ್ಸ್ ಬ್ಯಾಂಕ್‌ಗಳದ್ದಾಗಿತ್ತು. ಅಂದರೆ ೩೮೩ ಗ್ರೇನ್ಸ್ ಬ್ಯಾಂಕುಗಳು ಈ ಜಿಲ್ಲೆಯಲ್ಲಿ ಇದ್ದವು (ರಾ. ಜಿ. ಗ್ಯಾ) ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿರುವ ಗ್ರಾಮೀಣ ಸಾಲದ ಹೊರೆಯನ್ನು ಕಡಿಮೆ ಮಾಡುವಲ್ಲಿ ಮತ್ತು ಆಹಾರ ಧಾನ್ಯದ ಸಂಗ್ರಹ ಉಳ್ಳ ಶ್ರೀಮಂತರು ಬಡ ರೈತರನ್ನು ಈ ವ್ಯವಹಾರದ ಮೂಲಕ ಶೋಷಿಸುವುದನ್ನು ತಪ್ಪಿಸುವಲ್ಲಿ ಈ ಸಂಸ್ಥೆಗಳು ಮಹತ್ವದ ಪಾತ್ರವನ್ನು ವಹಿಸುವವು. ಕರ್ನಾಟಕದಲ್ಲಿ ಬೇಸಾಯಗಾರನ ಕುಟುಂಬದ ಸರಾಸರಿ ಸಾಲದ ಹೊರೆ ೧೯೭೦–೭೧ರಲ್ಲಿ ರೂ. ೯೪೩ ಎಂದು ಅಂದಾಜು ಮಾಡಲಾಗಿತ್ತು.

## ಕ್ಷೀಣಿಸುತ್ತಿರುವ ದವಸಭಂಡಾರಗಳು

ಇತ್ತೀಚಿನ ವರ್ಷಗಳಲ್ಲಿ ಕೇವಲ ಕೊಡಗು ಜಿಲ್ಲೆಯನ್ನು ಬಿಟ್ಟರೆ ನಮ್ಮ ರಾಜ್ಯದ ಉಳಿದ ಯಾವದೇ ಜಿಲ್ಲೆಯಲ್ಲೂ ದವಸದ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತಿಲ್ಲ ಎಂದು ಇಲಾಖೆಯ ವರದಿಯಿಂದ ತಿಳಿದುಬರುವುದು. ಈ ಸಂಸ್ಥೆಗಳಲ್ಲಿ ತಮ್ಮ ಅಸ್ತಿತ್ವವನ್ನು ಕಳೆದು ಕೊಳ್ಳಲು ಇರುವ ಪ್ರಮುಖ ಕಾರಣಗಳಲ್ಲಿ ವ್ಯಾಪಕವಾದ ಹಣದ ಬಳಕೆ, ಆಹಾರ ಬೆಳೆಗಳಿಂದ ಆರ್ಥಿಕ ಬೆಳೆಗಳತ್ತ ಹೆಚ್ಚುತ್ತಿರುವ ಒಲವು, ಆಹಾರ ಮತ್ತು ಆರ್ಥಿಕ ಬೆಳೆಗಳ ಬೆಲೆಯಲ್ಲಿರುವ ಅತಿಹೆಚ್ಚಿನ

ವ್ಯತ್ಯಾಸ, ಬದಲಾವಣೆಯನ್ನು ಹೊಂದುತ್ತಿರುವ ವ್ಯವಸಾಯ ಕ್ರಮ ಮುಂತಾದವುಗಳು ಎಂದು ಹೇಳ ಬಹುದು. ಹಲವಾರು ವರ್ಷಗಳ ಆಡಳಿತ ವರದಿಯನ್ನು ಗಮನಿಸಿದರೆ ೧೯೬೧ರ ನಂತರದ ದಶಕಗಳಲ್ಲಿ ಈ ಸಂಸ್ಥೆಗಳ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಕಡಿಮೆ ಯಾಗಿರುವುದು ಕಂಡು ಬರುತ್ತದೆ. ೧೯೬೧ರಲ್ಲಿ ನಮ್ಮ ರಾಜ್ಯದಲ್ಲಿದ್ದ ಒಟ್ಟು ಸಹಕಾರಿ ಸಂಘಗಳ ಸಂಖ್ಯೆ ೧೪೯೫೪ ಅವುಗಳಲ್ಲಿ ದವಸದ ಬ್ಯಾಂಕುಗಳಸಂಖ್ಯೆ ೧೦೨೭ ಆಗಿತ್ತು ಮುಂದಿನ ದಶಕದಲ್ಲಿ (೧೯೭೧), ರಾಜ್ಯದ ಒಟ್ಟು ಸಹಕಾರಿ ಸಂಘಗಳ ಸಂಖ್ಯೆ ೧೯೪೩೭ ಆಗಿದ್ದರೆ ಅವುಗಳಲ್ಲಿ ದವಸ ಭಂಡಾರಗಳ ಸಂಖ್ಯೆ ಕೇವಲ ೮೫೧ ಆಗಿತ್ತು. ೧೯೮೧ರಲ್ಲಿ ರಾಜ್ಯದ ಒಟ್ಟು ಸಹಕಾರಿ ಸಂಘಗಳ ಸಂಖ್ಯೆ ೨೩೧೫೯ ಆಗದ್ದರೆ ದವಸಬ್ಯಾಂಕುಗಳ ಸಂಖ್ಯೆ ೮೪೪ ಕ್ಕೆ ಇಳಿದಿತ್ತು. ೧೯೮೭ ರಲ್ಲಿ ಇದ್ದ ರಾಜ್ಯದ ಸುಮಾರು ೨೫,೦೦೦ ಸಹಕಾರಿ ಸಂಸ್ಥೆಗಳಲ್ಲಿ ಸಕ್ರಿಯವಾಗಿದ್ದ ದವಸ ಭಂಡಾರಗಳ ಸಂಖ್ಯೆ ಕೇವಲ ೧೬೪ ಎಂದು ವರದಿಯಾಗಿದೆ.

೧೯೬೪ರ ಆಡಳಿತ ವರದಿ ತಿಳಿಸುವಂತೆ ಸದರಿ ವರ್ಷದ ಜೂನ್ ೩೦ ರಂದು ನಮ್ಮ ರಾಜ್ಯದಲ್ಲಿದ್ದ ಗ್ರೇನ್ಸ್‌ಬ್ಯಾಂಕುಗಳ ಸಂಖ್ಯೆ ೮೯೦ ಆಗಿದ್ದರೆ, ಅವುಗಳ ಸದಸ್ಯರ ಸಂಖ್ಯೆ, ಷೇರು ಬಂಡವಾಳ ಅನುಕ್ರಮವಾಗಿ ೬೪,೪೯೩ ಮತ್ತು ರೂ ೧೭.೫೮ ಲಕ್ಷ ಎಂದು ತಿಳಿದು ಬರುವುದು. ಈ ಸಂಸ್ಥೆಗಳು ಸದಸ್ಯರಿಂದ ಸಂಗ್ರಹಿಸಿದ ಮತ್ತು ಸಾಲದ ರೂಪದಲ್ಲಿ ನೀಡಿದ ಧಾನ್ಯಗಳ ಮೌಲ್ಯ, ರೂಗಳಲ್ಲಿ ಅನುಕ್ರಮವಾಗಿ ರೂ ೧.೦೮ ಲಕ್ಷ ಮತ್ತು ರೂ ೧೦.೫೨ ಲಕ್ಷ ಎಂದು ವರದಿ ತಿಳಿಸುವುದು. ಈ ಸಂಸ್ಥೆಗಳಲ್ಲಿ, ಹಲವು ಗಳಿಸಿದ ಒಟ್ಟುಲಾಭ ರೂ ಲೆಖ್ಖದಲ್ಲಿ ೧.೪೨ ಲಕ್ಷ ಆಗಿತ್ತು. ಸದರಿ ವರ್ಷದ ೮೯೦ ಸಂಘಗಳಲ್ಲಿ ಕೇವಲ ೧೪೯ ಸಕ್ರಿಯವಾಗಿದ್ದರೆ ಉಳಿದ ೭೪೧ ಸ್ಥಗಿತಗೊಂಡಿದ್ದವು ಎಂದು ವರದಿಯಾಗಿದೆ.

ಇತ್ತೀಚಿನ ವರದಿ ತಿಳಿಸುವಂತೆ ೧೯೭೬ರಲ್ಲಿ ನಮ್ಮ ರಾಜ್ಯದಲ್ಲಿ ನೊಂದಾಯಿಸಲ್ಪಟ್ಟ ಗ್ರೇನ್ಸ್‌ಬ್ಯಾಂಕುಗಳ ಸಂಖ್ಯೆ ೮೪೭ ಆಗಿದ್ದರೆ, ಅವುಗಳ ಸದಸ್ಯತ್ವ ೬೪೯೧೩. ಷೇರು ಬಂಡವಾಳ ರೂ ೨೭.೨೬ ಲಕ್ಷ. ಸಂಗ್ರಹಿಸಿದ ಮತ್ತು ಸಾಲನೀಡಿದ ಧಾನ್ಯದ ಮೌಲ್ಯ ರೂಗಳಲ್ಲಿ ಅನುಕ್ರಮವಾಗಿ ರೂ. ೧.೯೧ ಲಕ್ಷ ಮತ್ತು ರೂ ೩೬.೧೪ ಲಕ್ಷ ಎಂದು ವರದಿ ಯಾಗಿದೆ. ಸದರಿ ವರ್ಷದಲ್ಲಿ ಈ ಸಂಸ್ಥೆಗಳಿಗೆ ಸದಸ್ಯರಿಂದ ಬರಬೇಕಾದ ಬಾಕಿ ಮೌಲ್ಯ ರೂ ೫೨.೦೭ ಲಕ್ಷ ಎಂದು ತಿಳಿದು ಬರುವುದು. ಈ ಸಂಸ್ಥೆಗಳಲ್ಲಿ ಕೇವಲ ೧೧೬ ಸಂಸ್ಥೆಗಳು ಗಳಿಸಿದ್ದ ಲಾಭ ರೂ ೪.೬೯ ಲಕ್ಷ ಆಗಿದ್ದರೆ ೧೯ ಸಂಸ್ಥೆಗಳು ಅನುಭವಿಸಿದ ನಷ್ಟದ ಮೊತ್ತ ರೂ ೫೩,೦೦೦ ಎಂದು ವರದಿಯಾಗಿದೆ. (ಈ ಬಗೆಯ ಸಹಕಾರಿಸಂಸ್ಥೆಗಳನ್ನು ಕುರಿತಂತೆ ಪ್ರತ್ಯೇಕ ವಾದ ವಿಶ್ಲೇಷಣೆ ಮುಂದಿನ ಆಡಳಿತ ವರದಿಗಳಲ್ಲಿ ಲಭ್ಯ ಇರುವುದಿಲ್ಲ. ಇತ್ತೀಚಿನ ವರದಿಗಳಲ್ಲಿ ಇವುಗಳನ್ನು ವ್ಯವ ಸಾಯ ಪತ್ತಿನ ಸಹಕಾರಿಸಂಘಟನೆಗಳ ಗುಂಪಿಗೆ ಸೇರಿಸಲಾಗಿದೆ).

**ಕೊಡಗಿನ ವೈಶಿಷ್ಟ ಪೂರ್ಣ ದವಸ ಭಂಡಾರಗಳು**

ಕೊಡಗು ಕಿತ್ತಳೆ, ಕಾಫಿ, ಏಲಕ್ಕಿ ಭತ್ತಕ್ಕೆ ಹೆಸರಾದಂತೆ ದವಸ ಭಂಡಾರಗಳಿಗೂ ಹೆಸರಾಗಿದೆ. ಇವುಗಳು ಕೊಡಗಿನಾದ್ಯಂತ "ಜಿ. ಬಿ"ಗಳೆಂದು ಚಿರಪರಿಚಿತ. ರಾಜ್ಯದ ಇತರೇ ಜಿಲ್ಲೆಗಳಲ್ಲಿ ಅವಸಾನದ ಅಂಚಿನಲ್ಲಿ ರುವ ಅಥವಾ ಪೂರ್ತಿಯಾಗಿ ನಿಸ್ತೇಜನಗೊಂಡಿರುವ ದವಸ ಭಂಡಾರಗಳು ಈ ಪುಟ್ಟ ಜಿಲ್ಲೆಯಲ್ಲಿ ಮಾತ್ರ ಇನ್ನು ಜೀವಂತವಾಗಿರುವುದು ಈ ಜಿಲ್ಲೆಯ ಸಹಕಾರಿ ಚಳುವಳಿಯ ಮಹತ್ವದ ಕೊಡುಗೆ ಎಂದು ಹೇಳ ಬಹುದು. ೧೯೪೯ ರಲ್ಲಿ ಕೊಡಗಿನಲ್ಲಿ ೮೪ ದವಸ ಭಂಡಾರ ಗಳಿದ್ದವು, ೧೯೫೫-೫೬ರಲ್ಲಿ ಅವುಗಳ ಸಂಖ್ಯೆ ೧೦೪ಕ್ಕೆ ಹೆಚ್ಚಳಗೊಂಡು ೧೦೯೭೩ ಸದಸ್ಯ ಬಲವನ್ನು ಹೊಂದಿದ್ದವು. ಸದರಿ ವರ್ಷ ೩೩,೦೬೫ ಬಟ್ಟಿಗಳಷ್ಟು ಭತ್ತವನ್ನು ಸಾಲ ನೀಡಿದವು. ಜಿಲ್ಲೆಯಲ್ಲಿನ೧೯೯೨ರ ಒಟ್ಟು ಸಹಕಾರಿ ಸಂಘಗಳಲ್ಲಿ '೪೬೩ 'ಇವ್ರಗಳದೇ ಬಹು ದೊಡ್ಡ ಸಂಖ್ಯೆ (೧೨೮). ಇವುಗಳಲ್ಲಿ ಅರ್ಧಕ್ಕಿಂತ ಹೆಚ್ಚು(೭೪)ಮಡಕೇರಿ ತಾಲ್ಲೂಕಿನಲ್ಲಿ ಇದ್ದರೆ, ವೀರರಾಜಪೇಟೆ ತಾಲ್ಲೂಕಿನಲ್ಲಿ ೩೮ ಮತ್ತು ಸೋಮವಾರ ಪೇಟೆಯಲ್ಲಿ ಇಂತಹ ೧೬ ಸಂಘಗಳಿವೆ. ಜಿಲ್ಲೆಯ ಒಟ್ಟುಸಂಘಗಳಲ್ಲಿ ಕೇವಲ ೫ ನಿಶ್ಚೇತನ ಗೊಂಡಿದ್ದರೆ ಮೂರು ವಿಸರ್ಜನಾ ಹಂತದಲ್ಲಿವೆ ಎಂದು ವರದಿ ಯಾಗಿದೆ. ಈ ಜಿಲ್ಲೆಯಲ್ಲಿ ದವಸ ಭಂಡಾರಗಳು ಮೊದಲಿಗೆ ಪ್ರಾರಂಭವಾದದ್ದು

೧೯೧೮ ರಲ್ಲಿ (ಭಾಗಮಂಡಲ ತಲಕಾವೇರಿಯ ಉಗಮ ಸ್ಥಾನದಲ್ಲಿ) ಇದೇ ಇಂದಿನ ನಮ್ಮ ರಾಜ್ಯದ ಪ್ರಥಮ ದವಸ ಭಂಡಾರ ಎಂದು ತೋರುವುದು. ಒಂದು ಕಾಲಕ್ಕೆ ಅಂದರೆ ೧೮೮೦ರ ವರದಿ ತಿಳಿಸುವಂತೆ ಶೇ ೨೫೦ ರಿಂದ ೩೦೦ರ ವರಗೆ ಹೆಚ್ಚುವರಿ ಭತ್ತವನ್ನು ಬಡ್ಡಿಯ ರೂಪದಲ್ಲಿ ವಸೂಲಿ ಮಾಡುತ್ತಿದ್ದ ಸ್ಥಳದಲ್ಲಿ ಇಂದು ಈ ಸಂಘಗಳು ವಿಧಿಸುತ್ತಿರುವ ಬಡ್ಡಿದರ ಕೇವಲ ಶೇ ೨೦ ರಿಂದ ೨೫. ಇಂದು (೧೯೯೨) ಜಿಲ್ಲೆಯ ೧೨೮ ದವಸ ಭಂಡಾರಗಳು ಹೊಂದಿರುವ ಸದಸ್ಯರ ಸಂಖ್ಯೆ ೨೩,೦೧೪ ಆಗಿದ್ದರೆ ಹಣದ ಲೆಖ್ಖದಲ್ಲಿ ಷೇರು ಬಂಡವಾಳ ರೂ ೧೨೦.೫೯ ಲಕ್ಷ, ಸಾಲನೀಡಿದ ಭತ್ತದ ಬೆಲೆ ರೂ ೧೯.೬೨ ಲಕ್ಷ, ಲಾಭ ಗಳಿಸಿದ ಸಂಸ್ಥೆಗಳ ಸಂಖ್ಯೆ ೮೬ ಎಂದು ವರದಿಯಾಗಿದೆ. ದವಸ ಭಂಡಾರಗಳ ಕಾರ್ಯವಿಧಾನದಲ್ಲಿ ಮತ್ತು ಲೆಖ್ಖಾಚಾರದಲ್ಲಿ ಪ್ರತಿ ಒಂದನ್ನೂ ಭತ್ತದ ರೂಪದಲ್ಲಿ ಮಾಪನ ಮಾಡಿ ವ್ಯವಹರಿಸಲಾಗುವುದು. ಪ್ರತಿಯೊಂದು ಪಾಲು (ಷೇರು) ಬಂಡವಾಳವನ್ನು ಸ್ಥಳೀಯ ಒಂದು ಬಟ್ಟಿ ಭತ್ತಕ್ಕೆ (ಲಂಸೇರು) ಸಮಾನವಾಗಿರುವದು. ಈ ಸಂಸ್ಥೆಗಳು ಸಾಮಾನ್ಯವಾಗಿ ಪ್ರತೀ ವರ್ಷದ ಜೂನ್‌ದಿಂದ–ಸೆಪ್ಟಂಬರ್ ಅವಧಿಯಲ್ಲಿ ಸದಸ್ಯರಿಗೆ ಧಾನ್ಯರೂಪದಲ್ಲಿ ಸಾಲನೀಡುವವು. ಪ್ರತಿ ಸದಸ್ಯನು ಇನ್ನೊಬ್ಬ ಸದಸ್ಯನ ಜಾಮೀನಿನ ಮೇಲೆ ನಿಗದಿತವಾದ ಸಾಲವನ್ನು ಪಾಲು ಬಂಡವಾಳಕ್ಕೆ ಅನುಗುಣವಾದ ಪ್ರಮಾಣದಲ್ಲಿ ಪಡೆಯಬಹುದು. ಪಡೆದ ಸಾಲವನ್ನು ಸುಗ್ಗಿಯ ನಂತರ ಶೇ ೨೦–೨೫ರ ಬಡ್ಡಿಯೊಂದಿಗೆ ಹಿಂದಕ್ಕೆ ಕಟ್ಟಬೇಕು. ಯಾವದೇ ಸಂಧರ್ಭದಲ್ಲಿ ಸದಸ್ಯರು ಭತ್ತದ ರೂಪದಲ್ಲಿ ಅಸಲು ಅಥವಾ ಬಡ್ಡಿಯನ್ನು ಮರುಪಾವತಿ ಮಾಡಲು ಅಶಕ್ತವಾದರೆ ಪ್ರಚಲಿತ ಇರುವ ಭತ್ತದ ಮಾರುಕಟ್ಟೆಯ ದರದಲ್ಲೂ ಹಣದ ರೂಪದಲ್ಲಿ ಸಾಲವನ್ನು ಮರುಪಾವತಿ ಮಾಡಲು ಅವಕಾಶವಿರುವುದು. ಸುಗ್ಗಿಯನಂತರ ಜನವರಿಯಿಂದ ಏಪ್ರಿಲ್ ವರೆಗೆ ಸಾಲದ ವಸೂಲಾತಿಯಕಾಲ. ಪ್ರತೀ ವರ್ಷ ಸಾಲ ನೀಡಿ ಹೆಚ್ಚಾಗಿ ಉಳಿದ ಭತ್ತವನ್ನು, ಡಿಸೆಂಬರ್ ಕೊನೆಯಲ್ಲಿ ಮಾರುಕಟ್ಟೆಯ ದರದಲ್ಲಿ ಮಾರಾಟ ಮಾಡಲಾಗುವುದು. ಪ್ರತಿ ಒಂದು ಸಂಘವು ಭತ್ತವನ್ನು ಕೆಡದಂತೆ ಸುರಕ್ಷಿತವಾಗಿ ಇಡಲು ಸುಸಜ್ಜಿತವಾದ ಮರದ ಖಣಜಗಳನ್ನು ಹೊಂದಿರುವುವು. ಸಾಮಾನ್ಯವಾಗಿ ಭತ್ತ ಬೆಳೆಯುವ ಭೂಮಿಯನ್ನು ಹೊಂದಿರುವ ಗಂಡಸರನ್ನು ಮಾತ್ರ ಸಂಘದ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.

ಈ ಸಂಘಗಳ ಇನ್ನೊಂದು ವೈಶಿಷ್ಟವೆಂದರೆ ಸಂಘಗಳು ತಾವು ಗಳಿಸಿದ ಲಾಭಾಂಶವನ್ನು ಸದಸ್ಯರಿಗೆ ಡಿವಿಡೆಂಡ್ ರೂಪದಲ್ಲಿ ಹಂಚದೇ ಶೇಖರಿಸಿಇಟ್ಟು ಸದಸ್ಯರ ಮರಣ ಸಂಭವಿಸಿದಾಗ ಅಂತಹ ಕುಟುಂಬಕ್ಕೆ ಉಚಿತವಾಗಿ ಭತ್ತದ ರೂಪದಲ್ಲೂ ಮರಣೋತ್ತದನಿಧಿಯನ್ನು ನೀಡಲಾಗುವುದು. ಈ ವ್ಯವಸ್ಥೆಯು ಅನೇಕ ಬಡ ಕುಟುಂಬಗಳಿಗೆ ತುಂಬಾ ಸಹಕಾರಿಯಾಗಿದೆ. ಈ ವ್ಯವಸ್ಥೆಯು ಒಂದುರೀತಿಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಸಾಮಾಜಿಕ ಜೀವನ ವಿಮೆಯ ಕಾರ್ಯವನ್ನು ಮಾಡುತ್ತಿರುವುದು.ಅನೇಕ ಸಂದರ್ಭಗಳಲ್ಲಿ ತಮ್ಮದೇ ಆದ ವಿಮೆ ವ್ಯವಹಾರವನ್ನು ಭತ್ತದ ರೂಪದಲ್ಲಿ ಮಾಡುತ್ತಿವೆ. ಪ್ರಾರಂಭದಲ್ಲಿಯೇಸದಸ್ಯರು ಮರಣೋತ್ತರ ನಿಧಿಗೆವಂತಿಗೆ ಪಾಲುನ್ನು ಬಂಡವಾಳದೊಂದಿಗೆ ನೀಡಬೇಕಾಗುವುದು. ಬಹುಪಾಲು ಸಂಘಗಳು ಇತರೇ ನಗರ ಸಹಕಾರಿ ಬ್ಯಾಂಕುಗಳು ತಮ್ಮ ಲಾಭಾಂಶಗಳಲ್ಲಿ ಒಂದು ಭಾಗವನ್ನು ಸದಸ್ಯರ ಕಲ್ಯಾಣನಿಧಿ, ವಿದ್ಯಾಭ್ಯಾಸ ನಿಧಿ ಮುಂತಾದಜನೋಪಕಾರಿ ಕಾರ್ಯಗಳಿಗೆ ವಿನಿಯೋಗಿಸುವಂತೆ ಈ ಸಂಸ್ಥೆಗಳೂ ಸಹ ತಮ್ಮ ಲಾಭಾಂಶಗಳನ್ನು ವಿನಿಯೋಗಿಸುತ್ತಿವೆ. ಇತರೇ ಸಹಕಾರಿ ಸಂಸ್ಥೆಗಳು ತಮ್ಮದೇ ಆದ ಅನೇಕ ಸಮಸ್ಯೆಗಳಿಂದ ಕೂಡಿರುವಂತೆ ಈ ಸಂಸ್ಥೆಗಳೂ ತಮ್ಮದೇ ಆದ ಸಮಸ್ಯೆಗಳಿಂದ ಕೂಡಿವೆ. ಅವುಗಳಲ್ಲಿ ಬಹುಮುಖ್ಯವಾದುದು ಸದಸ್ಯರಿಂದ ಬರಬೇಕಾದ ಸುಸ್ತಿ ಸಾಲ ಮುಂತಾದವುಗಳು.

ವೇಮಗಲ್ ಸೋಮಶೇಖರ*

# ಬೆಂಗಳೂರು ವಸ್ತು ಸಂಗ್ರಹಾಲಯದಲ್ಲಿದ್ದ ಗ್ರಂಥ ಭಂಡಾರ

ಮದರಾಸಿನಲ್ಲಿ ವಸ್ತು ಸಂಗ್ರಹಾಲಯುವನ್ನು ೧೮೫೧ರಲ್ಲಿ ಸ್ಥಾಪಿಸಿದ ಎಡ್ವರ್ಡ್ ಗ್ರೀನ್ ಬೆಲ್‌ಫರ್ ಅವರು ಬೆಂಗಳೂರಿಗೆ ೧೮೬೧ರಲ್ಲಿ ವರ್ಗವಾಗಿ ಬಂದು ನಂತರ ಇಲ್ಲಿಯೂ ಒಂದು ವಸ್ತು ಸಂಗ್ರಹಾಲಯುವನ್ನು ಪ್ರಾರಂಭಿಸಬೇಕೆಂಬ ಉದ್ದೇಶದಿಂದ ಅವರು ೧೮೬೩ರಿಂದ ೧೮೬೫ರವರೆವಿಗೆ ಭಾರತ ದೇಶದ ಎಲ್ಲಾ ಮೂಲೆಗಳಿಂದ ಅನೇಕ ಅಪೂರ್ವವಾದಂತಹ ವಸ್ತುಗಳನ್ನು ಶೇಖರಿಸಿದರು. ಇವುಗಳಲ್ಲಿ ನೂರಾರು ಅಮೂಲ್ಯ ಗ್ರಂಥಗಳೂ ಇದ್ದವು. ಈ ಎಲ್ಲಾ ವಸ್ತುಗಳನ್ನು ೧೮-೮-೧೮೬೫ ರಂದು ಪ್ರಾರಂಭವಾದ ವಸ್ತು ಸಂಗ್ರಹಾಲಯದಲ್ಲಿ ಗ್ರಂಥ ಭಂಡಾರದ ವಿಭಾಗವನ್ನು ಪ್ರತ್ಯೇಕವಾಗಿ ಪ್ರಾರಂಭಿಸಲಾಯಿತು. ಹಾಗೆಯೇ ಒಬ್ಬ ಗ್ರಂಥಪಾಲಕನನ್ನು ಮಾಹೆಯಾನ ವೇತನ ೧೫ ರೂಪಾಯಿಗಳೊಂದಿಗೆ ನೇಮಿಸಲಾಯಿತು. ಬೆಲ್‌ಫರ್ ಅವರು ವೃತ್ತಿಯಲ್ಲಿ ವೈದ್ಯರಾಗಿದ್ದರೂ ಪ್ರವೃತ್ತಿಯಲ್ಲಿ ಸಂಶೋಧಕರಾಗಿ, ಗ್ರಂಥಕರ್ತರಾಗಿ, ಸಮಾಜ ಸೇವಕರಾಗಿ ಹಾಗೂ ನಾನಾ ಭಾಷೆಗಳನ್ನು ತಿಳಿದ ಭಾಷಾ ತಜ್ಞರಾಗಿದ್ದರು. ಆದ ಕಾರಣದಿಂದ ಇವರು ಗ್ರಂಥಾಲಯದ ಬಗ್ಗೆ ಬಹಳ ಶ್ರದ್ಧೆ ವಹಿಸಿ ಭದ್ರ ಬುನಾದಿಯನ್ನು ಹಾಕಿದರು. ಪ್ರತಿ ವರ್ಷ ಪುಸ್ತಕಗಳನ್ನು ಕೊಂಡುಕೊಳ್ಳುವುದರ ಮೂಲಕ, ಸರ್ಕಾರಿ ಮತ್ತು ಸಾರ್ವಜನಿಕರಿಂದ ದಾನವಾಗಿ ಪಡೆಯುವುದರ ಮೂಲಕ, ಪುಸ್ತಕ ಭಂಡಾರವನ್ನು ಹೆಚ್ಚಿಸುತ್ತಾ ೧೮೭೧ರ ವೇಳೆಗೆ ೩೯೮ ಪುಸ್ತಕಗಳನ್ನು ಸಂಗ್ರಹಿಸಿದ್ದರು.

೧೮೭೭ರ ನವೆಂಬರ್‌ನಲ್ಲಿ ಕಬ್ಬನ್ ಉದ್ಯಾನವನದಲ್ಲಿ ಪ್ರತ್ಯೇಕವಾಗಿ ವಸ್ತು ಸಂಗ್ರಹಾಲಯಕ್ಕಾಗಿಯೇ ನಿರ್ಮಿಸಿದ ಕಟ್ಟಡಕ್ಕೆ ದಂಡಿನ ಪ್ರದೇಶದಲ್ಲಿದ್ದ ಈ ವಸ್ತು ಸಂಗ್ರಹಾಲಯುವನ್ನು ವರ್ಗಾಯಿಸಿದಾಗ ಗ್ರಂಥಾಲಯ ವಿಭಾಗವನ್ನು ಪಬ್ಲಿಕ್ ರೀಡಿಂಗ್ ರೂಮ್ ಆಗಿ ಪರಿವರ್ತಿಸಲಾಯಿತು. ಬೆಂಗಳೂರು ನಗರ ಮತ್ತು ದಂಡು ಪ್ರದೇಶಗಳ ಮಧ್ಯಭಾಗದಲ್ಲಿ ಈ ಕಟ್ಟಡವು ಇದ್ದುದರಿಂದ ಹೆಚ್ಚಿನ ಜನರು ಈ ಗ್ರಂಥಾಲಯಕ್ಕೆ ಬರತೊಡಗಿದರು. ಈ ವೇಳೆಗೆ ೫೮೯ ಪುಸ್ತಕಗಳು, ಅನೇಕ ನಿಯತಕಾಲಿಕೆಗಳು, ಸರ್ಕಾರಿ ವರದಿಗಳು, ಇತ್ಯಾದಿಗಳು ಶೇಖರವಾಗಿತ್ತು.

೧೮೮೭ರಲ್ಲಿ ಈ ಗ್ರಂಥ ಭಂಡಾರಕ್ಕಾಗಿಯೇ ಪ್ರತ್ಯೇಕವಾಗಿ ಸಂಗ್ರಹಾಲಯದ ಪೂರ್ವ ದಿಕ್ಕಿನ ಅಂದರೆ ಬಲಭಾಗದ ವಿಂಗ್ ರೂಮನ್ನು ಏರ್ಪಾಟು ಮಾಡಲಾಯಿತು. ೧೮೮೮ರಲ್ಲಿ ಮದರಾಸ್ ಸೆಂಟ್ರಲ್ ಮ್ಯೂಸಿಯಂ ಲೈಬ್ರರಿಯ ಸೂಪರಿಂಟೆಂಡೆಂಟ್ ಆದ ಡಾ|| ಇ. ಥರ್‌ಸ್ಟನ್ ಅವರ ಮಾರ್ಗದರ್ಶನದಿಂದ ಅಲ್ಲಿನ ಗ್ರಂಥಾಲಯದ ವ್ಯವಸ್ಥಾಕ್ರಮವನ್ನು ಇಲ್ಲಿಯೂ ಅಳವಡಿಸಿಕೊಳ್ಳಲಾಯಿತಲ್ಲದೆ, ಅಧ್ಯಯನ ಮತ್ತು ವಾಚನ ಮಾಡಲು ಬರುವವರಿಗಾಗಿ ಸುವ್ಯವಸ್ಥಿತ

* ೩೭೦, 'ದೀಪ' ಉನೆಯ ಅಡ್ಡರಸ್ತೆ, ಲಕ್ಷ್ಮೀಪುರ, ಕೆಂಪೇಗೌಡನಗರ, ಬೆಂಗಳೂರು-೫೬೦ ೦೧೯

ಏರ್ಪಾಟು ಮಾಡಿ ಒಂದು ಉತ್ತಮ ರೆಫರೆನ್ಸ್ ಲೈಬ್ರರಿ ಯಾಗಿ ಮಾರ್ಪಾಟು ಮಾಡಲಾಯಿತು. ಈ ವೇಳೆಗೆ ಇದ್ದ ಪುಸ್ತಕಗಳ ಸಂಖೆ ೭೦೨.

೧೮೮೯ರಲ್ಲಿ ಮೈಸೂರು ವರ್ನಾಕ್ಯುಲರ್ ಪ್ರೆಸ್‌ನ ಸೂಪರಿಂಟೆಂಡೆಂಟ್ ಆಗಿದ್ದ ಎ. ನರಸಿಂಹಯ್ಯಂಗಾರ್ ಅವರು ೨೩ ಕನ್ನಡ ಪುಸ್ತಕಗಳನ್ನು ಈ ಗ್ರಂಥ ಭಂಡಾರಕ್ಕೆ ದಾನವಾಗಿ ನೀಡಿದರು. ಮೈಸೂರಿನ ಮಾಜಿ ರೆಸಿಡೆಂಟ್ ಹಾಗೂ ಪ್ರಸಿದ್ಧ ಪ್ರಾಣಿ ಶಾಸ್ತ್ರಜ್ಞ ರಾಗಿದ್ದ ಕರ್ನಲ್ ಸರ್. ಆಲಿವರ್ ಸೆಂಟ್ ಜಾನ್ ಅವರು ೧೮೯೧ ರಲ್ಲಿ ತಮ್ಮ ಸ್ವಂತ ಸಂಗ್ರಹದಲ್ಲಿದ್ದ ಲಂಡನ್ ಜೂಆಲಜಿಕಲ್ ಸೊಸೈಟಿಯ ಕಾರ್ಯಕಲಾಪ ಗಳ ವರದಿಗಳನ್ನು ಮತ್ತು ಇತರೆ ಅಮೂಲ್ಯವಾದ ಪ್ರಾಣಿಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಇಲ್ಲಿಗೆ ದಾನವಾಗಿ ನೀಡಿದರು. ಇದೇ ಸಮಯದಲ್ಲಿ ಸರಕಾರವು ವಿಶೇಷ ಧನಸಹಾಯವೆಂದು ೪೧೫ ರೂಪಾಯಿಗಳನ್ನು ನೀಡಿತು. ಈ ಹಣದಿಂದ Watt's Dictionary of Economic Products of India ಎಂಬ ಅಮೂಲ್ಯ ವಾದ ಸಂಪುಟವನ್ನು ಮತ್ತು ಇತರೆ ಸಂಪುಟಗಳನ್ನು ಖರೀದಿಸಲಾಯಿತು.

೧೮೯೪ ರಿಂದ ಪ್ರತಿ ವರ್ಷ ಹೆಚ್ಚಿನ ಹಣವು ಗ್ರಂಥ ಭಂಡಾರಕ್ಕೆ ಒದಗುತ್ತಾ ಬಂದಿತು. ೧೮೯೮ರಲ್ಲಿ ವಸ್ತು ಸಂಗ್ರಹಾಲಯದ ಕ್ಯುರೇಟರ್ ಆಗಿದ್ದ ಬಿ. ಶಾಂತಪ್ಪ ಚೆಟ್ಟಿಯವರು ಈ ಗ್ರಂಥಾಲಯ ಸಹಾಯದಿಂದ A Hand book on the uses of Country and Bazaar Medicines of India ಎಂಬ ಔಷಧಿಗಳ ಬಗೆಗಿನ ಪುಸ್ತಕವನ್ನು ಬರೆದು ವಸ್ತು ಸಂಗ್ರಹಾಲಯದಿಂದಲೇ ಪ್ರಕಟಿಸಿದರು. ಈ ಪುಸ್ತಕ ದಿಂದ ಸಾರ್ವಜನಿಕರಿಗೆ ಯಾವ ಕಾಯಿಲೆಗೆ ಯಾವ ಔಷಧವನ್ನು ಮನೆಯಲ್ಲೇ ಮಾಡಿಕೊಳ್ಳಬಹುದು ಎಂಬುದನ್ನು ತಿಳಿಯಲು ಬಹಳ ಅನುಕೂಲವಾಯಿತು. ೧೮೯೯ರಲ್ಲಿ ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ Evening Mail ಎಂಬ ಪತ್ರಿಕೆಯನ್ನು ಆ ಪತ್ರಿಕೆಯ ಮಾಲೀಕರು ಉಚಿತವಾಗಿ ಸರಬರಾಜು ಮಾಡಲು ಪ್ರಾರಂಭಿಸಿದರು.

ವಸ್ತು ಸಂಗ್ರಹಾಲಯದ ಮೇಲ್ವಿಚಾರಕರಾಗಿದ್ದ ಜೆ. ಕ್ಯಾಮರಾನ್ ಅವರು ೧೯೦೦ರಲ್ಲಿ ಬಾಂಬೆಯ ನ್ಯಾಚುರಲ್ ಹಿಸ್ಟ್ರಿ ಸೊಸೈಟಿಯ ಸದಸ್ಯರಾಗಿ ನೇಮಕ ಗೊಂಡಾಗ ಆ ಸೊಸೈಟಿಯಿಂದ ಪ್ರಕಟವಾಗುತ್ತಿದ್ದ ಎಲ್ಲಾ ಪುಸ್ತಕಗಳನ್ನೂ ಅರ್ಧ ಬೆಲೆಗೆ ಈ ಗ್ರಂಥಾಲಯ ಕ್ಕೋಸ್ಕರ ತರಿಸಿಕೊಂಡರು. ೧೯೧೦ರ ವರೆವಿಗೂ ಈ ಗ್ರಂಥ ಭಂಡಾರವು ಸಸ್ಯಶಾಸ್ತ್ರ, ಭೂಗರ್ಭಶಾಸ್ತ್ರ, ಪ್ರಾಣಿಶಾಸ್ತ್ರ ಮತ್ತು ಇತಿಹಾಸ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ತುಂಬಾ ಉಪಯುಕ್ತ ಕೇಂದ್ರ ವಾಗಿದ್ದಿತು. ೧೯೧೪ರ ವೇಳೆಗೆ ಈ ಗ್ರಂಥಾಲಯದಲ್ಲಿ ೧೭೩೧ ಪುಸ್ತಕಗಳು ಇದ್ದವು.

ಕಬ್ಬನ್ ಉದ್ಯಾನವನದಲ್ಲಿನ ಶೇಷಾದ್ರಿ ಅಯ್ಯರ್ ಮೆಮೋರಿಯಲ್ ಹಾಲ್‌ನಲ್ಲಿ ದಿನಾಂಕ ೧-೫-೧೯೧೫ ರಂದು ಸಾರ್ವಜನಿಕ ಗ್ರಂಥಾಲಯ ಪ್ರಾರಂಭಿಸಲ್ಪಟ್ಟಾಗ ಇಲ್ಲಿನ ಕೆಲವು ಪುಸ್ತಕಗಳನ್ನು ಅಲ್ಲಿಗೆ ವರ್ಗಾಯಿಸ ಲಾಯಿತು. ಅನಂತರ ೨೫-೧೧-೧೯೨೪ ರಂದು ೬೦ ಪುಸ್ತಕಗಳನ್ನು ಮಿಥಿಕ್ ಸೊಸೈಟಿಗೆ ವರ್ಗಾಯಿಸ ಲಾಯಿತು. ೧೯೨೬ರಲ್ಲಿ ಲೆಫ್ಟಿನೆಂಟ್ ಕೋಲ್ ಬ್ರೂಕ್ ಅವರು ಬರೆದ Twelve views of places in Mysore ಎಂಬ ಪುಸ್ತಕವನ್ನು ಬೆಂಗಾಲ–ನಾಗಪುರ್ ರೈಲ್ವೆಯ A.W. Hawkins ಅವರು ದಾನವಾಗಿ ನೀಡಿದರು.

೧೯೨೮ರಲ್ಲಿ ಡಾ|| ಎಮ್. ಎಚ್. ಕೃಷ್ಣ ಅಯ್ಯಂಗಾರ್ ಅವರು ಇಲ್ಲಿನ ನಾಣ್ಯ ಶಾಸ್ತ್ರಕ್ಕೆ ಸಂಬಂಧಪಟ್ಟ ಎಲ್ಲಾ ಪುಸ್ತಕಗಳನ್ನು ನಾಣ್ಯಗಳ ಪಟ್ಟಿಯನ್ನು ಸಿದ್ಧಪಡಿಸಲು ಉಪಯೋಗಿಸಿ ಕೊಂಡರು.

ಪುನಃ ಎರಡನೆಯ ಬಾರಿ ಅಂದರೆ ೧೯೩೨ರಲ್ಲಿ ನಾಣ್ಯಶಾಸ್ತ್ರ ಮತ್ತು ಚರಿತ್ರೆಗೆ ಸಂಬಂಧಿಸಿದ ಹಲವಾರ ಪುಸ್ತಕಗಳನ್ನು ಮಿಥಿಕ್ ಸೊಸೈಟಿಗೂ ಇನ್ನೂ ಕೆಲವು ಪುಸ್ತಕಗಳನ್ನು ವಿಶ್ವವಿದ್ಯಾನಿಲಯ ಮತ್ತು ಲಾಲ್ ಬಾಗ್‌ನ ಗ್ರಂಥ ಭಂಡಾರಗಳಿಗೂ ವರ್ಗಾಯಿಸ ಲಾಯಿತು.

ವಸ್ತುಸಂಗ್ರಹಾಲಯದ ಈ ಗ್ರಂಥ ಭಂಡಾರವು ೧೮೮೦ ರಿಂದ ೧೯೩೦ರ ವರೆವಿಗೂ ಬೆಂಗಳೂರು ನಗರ ಮತ್ತು ದಂಡು ಪ್ರದೇಶಕ್ಕೆ ಉತ್ತಮ ರೆಫರೆನ್ಸ್ ಲೈಬ್ರರಿಯಾಗಿತ್ತು.

## ಗ್ರಂಥ ಋಣ :


1) 1885 to 1935 Mysore Administration Annual Report
2) 1887 to 1935 Annual Report on the Mysore Govt. Museum.
3) Madras Government Museum Bulletins, Anthropology 1897 to 1899.

# Summaries of Papers

## Bannerghatta : A Survey from the Past to the Present

*—Dr. Devara Kondareddy*

Sixteen km. away from Bangalore is Bannerghatta which has a hill range with an early Vijayanagara temple of Champakadhama Swamy or Damodara Perumal (as mentioned in inscription) on a hill edge. The original temple can be assigned to the Hoysalas and its *gopura* and steps are of Vijayanagara times, engraved from live rock. To the right of the road are the 11th Century herostones, and on the Sampigehalli road are three tanks, and in the said village there is a megalithic tomb. On the hill behind the temple, on way to Shanubhoganahalli there are many ruined stone age tombs. Here, *via* the Suvarnamukhi Teertha, a footpath leads to Bhutenahalli, and atop the hill is the Narasimhaswamy temple, one more incomplete temple and a lamp post to the south of which is a stone age *mantapa* covered with huge monolithic slab. There are many big and small stone heaps all round, some raised by using parts of old monuments ; farther is a seven circled fort, formed by joining sized stones. The Suvarnamukhi Teertha is a pond which must have been the focal point of a huge old settlement, and the steps of the pond are made of parts of a monument of the days of Chikkadevaraya of Mysore.

The tombs around Bannerghatta are of the megalithic age, and the capstone of the one in Sampigehalli is 50 Cm thick and 4 m x 5.50 m in its dimensions. Many more such huge slabs, which were once capstones, and more such tombs are seen around. The tombs on way to Bhutenahalli have rectangular interior, and are shaped like a tub, and the slab at the east has an opening. Some pillar like stones, with a bend resembling a snake are seen around these tombs and these stones are worshipped even today. In between the Champakadhama temple and Bhutenahally, at a length of three kms on the hill there are certain strange stone structure of uniform shape and varying sizes. each with three stone pillars and a triangular capstone. They may be memorials of the deceased.

The seven–circled fort has its resembling structures at Dodda Siddavvanahalli in Chitradurga and at Hampi. They can be some *tantric* formations connected with some rituals to secure boons or evercome hardships or misery. This place must have

